# ಮೋಳಿಗೆಯ ಮಾರಯ್ಯ

ಮತ್ತು

# ರಾಣಿ ಮಹಾದೇವಿಯವರ

# ವಚನಗಳು



ಸಂಶೋಧಕರು :

**ಚೆನ್ನಪ್ಪನವರು ಉತ್ತಂಗಿ** — ಬಾಸೆಲ್ ಮಿಶನ್, ಧಾರವಾಡ

**ಸಂ. ಶಿ. ಭೂಸನೂರಮಠ, ಎಂ.ಎ.** — ಲಿಂಗರಾಜ ಕಾಲೇಜ, ಬೆಳಗಾಂವ

ಪ್ರಕಾಶಕರು :

**ವೀರಭದ್ರಪ್ಪ ಹಾಲಬಾವಿ**

ನಿವೃತ್ತ ೧ನೆಯ ವರ್ಗ ನ್ಯಾಯಾಧೀಶ,

ಕಲ್ಯಾಣಪುರ, ಧಾರವಾಡ

೧೯೫೦

ಬೆಲೆ : ಸಾದಾ ಪ್ರತಿ ೪ ರೂ. ಸುಂದರ ಪ್ರತಿ ೬ ರೂ.

# ಪರಿವಿಡಿ



# ಪ್ರಕಾಶಕರ ಮೊದಲ್ಮಾತು

ಕನ್ನಡ ವಾಙ್ಮಯದಲ್ಲಿ ವಚನ ಸಾಹಿತ್ಯದ ಉಗಮವು ೧೨ನೆಯ ಶತಮಾನಕ್ಕಿಂತ ಮುಂಚೆ ಆಗಿರಬಹುದೆಂದು ಕಂಡರೂ ಈ ಬಗ್ಗೆ ಇನ್ನೂ ಹೆಚ್ಚು ಶೋಧವಾಗಬೇಕಾಗಿದೆ. ಸ್ಥೂಲಮಾನದಿಂದ ಈ ಉಗಮದ ಕಾಲವು ೧೨ನೆಯ ಶತಮಾನದ ಮಧ್ಯದಲ್ಲಿ, ಅಂದರೆ ಬಸವಣ್ಣನವರು ಕಲ್ಯಾಣದಲ್ಲಿ ಮಂತ್ರಿಪದಕ್ಕೆ ಬಂದ ಮೇಲೆ ಆರಂಭವಾಯಿತೆನ್ನಬಹುದು. ಸ್ವಲ್ಪಾವಧಿಯಲ್ಲಿಯೇ ಈ ಸಾಹಿತ್ಯವೃಕ್ಷವು ಬೆಳೆದು ಹೂವು ಕಾಯಾಗಿ ಅನುಭವಮಂಟಪದಲ್ಲಿ ಹಣ್ಣಾಗಿ ಪರಿಣಮಿಸಿತು. ಇದರಿಂದ ಕನ್ನಡ ವಾಙ್ಮಯದಲ್ಲಿ ಒಂದು ಹೊಸ ಚೈತನ್ಯ ಮತ್ತು ಕ್ರಾಂತಿಯುಂಟಾಯಿತು. ದುರ್ದೈವದಿಂದ ಈ ಕ್ರಾಂತಿಯ ನಂತರ ಸುಮಾರು ಹತ್ತು ವರ್ಷಗಳಲ್ಲಿಯೇ ಇನ್ನೊಂದು ಬೇರೆ ಸ್ವರೂಪದ ಕ್ರಾಂತಿಯುಂಟಾಯಿತು. ಮೊದಲನೆಯದು ರಚನಾತ್ಮಕ ಮತ್ತು ಸಾಂಸ್ಕೃತಿಕವಾದರೆ ಎರಡನೆಯದು ವಿನಾಶಕ ಮತ್ತು ರಾಜಕೀಯವಾಗಿತ್ತು. ಈ ಎರಡನೆಯ ಕ್ರಾಂತಿಯ ಪರಿಣಾಮವಾಗಿ ಕಲ್ಯಾಣದಲ್ಲಿ ನೆರೆದ ಶರಣರೆಲ್ಲ ತಮ್ಮ ತಮ್ಮ ಕಟ್ಟಕಡೆಯ ನಿಲುವನ್ನು ಕಾಣಲಿಕ್ಕೆ ಚದರಿ ಹೋಗಬೇಕಾಯಿತು.

ಮುಂದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ, ಅಂದರೆ ೧೫ನೆಯ ಶತಮಾನದಲ್ಲಿ ಈ ಸಾಹಿತ್ಯದ ಪುನರುಜ್ಜೀವನವಾಯಿತು. ಮಧ್ಯಕಾಲದಲ್ಲಿ ಇದರ ಪ್ರಗತಿಯು ಬಹಿರಂಗವಾಗಿ ಕಾಣದಿದ್ದರೂ ಅಂತರಂಗದಲ್ಲಿಯೇ ಸೂಕ್ಷ್ಮವಾಗಿ ನಡೆದಿರಬಹುದೆಂದು ಹೇಳಬಹುದು. ಪ್ರೌಢದೇವರಾಯನ ಕಾಲದಲ್ಲಿ ನೂರೊಂದು ವಿರಕ್ತರು ಕಲೆತು ಹಿಂದಿನ ವಚನಸಾಹಿತ್ಯವನ್ನು ಬೇರೆ ಬೇರೆ ರೀತಿಯಿಂದ ಕ್ರಮಪಡಿಸುವದಲ್ಲದೆ, ಅದರ ಅಭಿವೃದ್ಧಿಯನ್ನೂ ಮಾಡಿದರು. ಕೆಲವರು ಒಬ್ಬೊಬ್ಬ ವಚನಕಾರನ ವಚನಗಳನ್ನು ಒತ್ತಟ್ಟಿಗೆ ಕೂಡಿಸಿದರು. ಕೆಲವರು ವಚನಗಳಿಗೆ ಟೀಕೆಗಳನ್ನು ಬರೆದರು. ಕೆಲವರು ಅವುಗಳನ್ನು ಸ್ಥಲಕಟ್ಟುಗಳಂತೆ ವ್ಯವಸ್ಥೆಗೊಳಿಸಿದರು. ಬೇರೆ ಕೆಲವರು ಪುರಾತನ ವಚನ ಸಂಗ್ರಹವೆಂಬ ಹೆಸರಿನಿಂದ ಅನೇಕ ವಚನಕಾರರ ವಚನಗಳನ್ನು ಒತ್ತಟ್ಟಿಗೆ ಸೇರಿಸಿದರು. ವಿಜಯನಗರ ಸಾಮ್ರಾಜ್ಯವು

ತಾಳೀಕೋಟಿಯ ಕಾಳಗದಿಂದ ಕುಂಠಿತವಾದರೂ ೧೭ನೆಯ ಶತಮಾನದ ಅಂತ್ಯದ ವರೆಗೆ ಈ ತರದ ವ್ಯವಸ್ಥೆಯೂ ವಚನ ವಾಙ್ಮಯದ ಅಭಿವೃದ್ಧಿಯೂ ಅವ್ಯಾಹತವಾಗಿ ಸಾಗಿದಂತೆ ಕಾಣುತ್ತದೆ. ಈ ಶತಮಾನದ ಅಂತ್ಯದಲ್ಲಿ ಶ್ರೀ ಷಣ್ಮುಖಸ್ವಾಮಿಗಳಿಂದ ರಚಿತವಾಗಿರುವ ಅಖಂಡೇಶ್ವರ ವಚನಗಳೇ ಇದಕ್ಕೆ ಸಾಕ್ಷಿ. ಆಗಿನ ಕರ್ನಾಟಕದ ಎಲ್ಲ ಭಾಗಗಳಲ್ಲಿ ಸ್ಥಾಪಿತವಾಗಿರುವ ಮಠಗಳಲ್ಲಿ ಈ ಸಾಹಿತ್ಯದ ಪ್ರವಚನವೂ ಚರ್ಚೆಯೂ ನಡೆಯುತ್ತಲೇ ಇದ್ದವು.

ಹಿಂದು (ಆರ್ಯ-ದ್ರಾವಿಡ) ಸಂಸ್ಕೃತಿಯ ವಿರುದ್ಧ ಕ್ರಿಸ್ತ ಶಕದ ಮುಂಚೆ ೬ನೆಯ ಶತಮಾನದಲ್ಲಿ ಬೌದ್ಧ ಧರ್ಮವು ಕೈಯೆತ್ತಿದರೂ ಈ ಸಂಸ್ಕೃತಿಯು ವರ್ಣಾಶ್ರಮ ಪದ್ಧತಿಯ ಪ್ರಭಾವದಿಂದ ಇದು ವರೆಗೆ ಅಚ್ಚಳಿಯದೆ ಉಳಿದಿರುವದೆಂದು ಎಷ್ಟೋ ವಿದ್ವಾಂಸರ ಮತವಿದೆ. ಬೌದ್ಧ ಧರ್ಮದಲ್ಲಿರುವ ಕೆಲವು ನ್ಯೂನತೆಗಳಿಂದ ಅದರ ಪ್ರಭಾವವು ಹಿಂದು ಸಂಸ್ಕೃತಿಯ ಮೇಲೆ ಶಾಶ್ವತವಾಗಿ ಉಳಿಯಲಿಲ್ಲ. ಬೌದ್ಧಧರ್ಮದ ತರುವಾಯ ಈ ಸಂಸ್ಕೃತಿಯ ವಿರುದ್ಧವಾಗಿ ನಿಂತಿರುವದು ಲಿಂಗಾಯತ (ವೀರಶೈವ) ವಚನ ಸಾಹಿತ್ಯ ಸಂಸ್ಕೃತಿಯು. ಬಸವಣ್ಣನವರ ಕಾಲದಲ್ಲಿ ಈ ಸಂಸ್ಕೃತಿಯು ದಕ್ಷಿಣದ ಕಡೆ ಮೈಸೂರು, ಪೂರ್ವದ ಕಡೆ ಆಂಧ್ರ, ಪಶ್ಚಿಮದ ಕಡೆ ಸೌರಾಷ್ಟ್ರ, ಮತ್ತು ಉತ್ತರದ ಕಡೆ ಕಾಶ್ಮೀರದ ಮೇರೆಯಲ್ಲಿರುವ ಸವಾಲಕ್ಷ (ಸಪಾದಲಕ್ಷ) ದ ವರೆಗೆ ಹಬ್ಬಿ ಈ ಪ್ರಾಂತಗಳಿಂದ ಎಷ್ಟೋ ಜನರನ್ನು ಬರಮಾಡಿಕೊಂಡು ತನ್ನ ಅನುಯಾಯಿಗಳನ್ನಾಗಿ ಮಾಡಿಕೊಂಡಿತು.

ರಾಜಕೀಯ ದೃಷ್ಟಿಯಿಂದ ಕರ್ನಾಟಕದ ವರ್ಚಸ್ಸು ಪೂರ್ವಕಾಲದಲ್ಲಿ ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿ ಹಬ್ಬಿದ್ದರೂ ಬರಬರುತ್ತ ಸುತ್ತಲಿನ ರಾಜ್ಯಗಳ ಮತ್ತು ವಿಶೇಷವಾಗಿ ಮುಸಲ್ಮಾನರ ದಾಳಿಗಳಿಂದ ಈ ವರ್ಚಸ್ಸು ಕಡಿಮೆಯಾಗುತ್ತ ಬಂದು ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಕರ್ನಾಟಕದ ವರ್ಚಸ್ಸಿನ ಕ್ಷೇತ್ರವು ಸಂಕುಚಿತವಾಗಿ ಈಗಿನ ಪ್ರಮಾಣಕ್ಕೆ ಬಂದು ನಿಂತಿರುತ್ತದೆ. ವಚನ ಸಾಹಿತ್ಯ ಸಂಸ್ಕೃತಿಯ ಪಾಡು ಸಹ ಇದೇ ರೀತಿಯಾಗಿರುತ್ತದೆ. ಹಿಂದು ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ಉದಯವಾದ ವಿಜಯನಗರ ಸಾಮ್ರಾಜ್ಯದ ಅವನತಿಯ ತರುವಾಯ

ಇವನ್ನು ಕಾಪಾಡುವ ಹೊಣೆಯು ಮರಾಟರ ರಾಜ್ಯದ ಮೇಲೆ ಬಂತು. ಈ ಕಾಲದಲ್ಲಿ ಮತ್ತು ಈ ರಾಜ್ಯಾಡಳಿತೆಯನ್ನು ನಡೆಯಿಸಿದ ಪೇಶ್ವೆಯರ ಕಾಲದಲ್ಲಿ ವರ್ಣಾಶ್ರಮಧರ್ಮಪದ್ಧತಿಯ ಪ್ರಭಾವವು ಹೆಚ್ಚಾಗಹತ್ತಿತು. ಇದೇ ಪ್ರಕಾರ ಮೈಸೂರ ರಾಜ್ಯದಲ್ಲಿಯೂ ನಡೆಯಿತು. ಲಿಂಗಾಯತ ಸಮಾಜದಲ್ಲಿಯು ಕೆಲವು ವರ್ಗದವರು ಸಹ ಈ ಪ್ರಭಾವಕ್ಕೆ ಬಲಿಬಿದ್ದರು. ಇದರಿಂದ ವಚನ ಸಾಹಿತ್ಯದ ಬೆಳವಣಿಗೆಯು ಕುಂಠಿತವಾದುದಲ್ಲದೆ ಅದರ ಅಭ್ಯಾಸವು ಸಹ ೧೮ನೆಯ ಶತಮಾನದ ಆರಂಭದಿಂದ ಕಡಿಮೆಯಾಗುತ್ತ ಬಂತು ಮುಂದೆ ೧೯ನೆಯ ಶತಮಾನದ ಆರಂಭದಲ್ಲಿ ಬ್ರಿಟಿಶರ ಆಡಳಿತೆಯು ಆರಂಭವಾದ ಮೇಲೆ ಸಹ ವರ್ಣಾಶ್ರಮಧರ್ಮಪದ್ಧತಿಯನ್ನು ಅವಲಂಬಿಸುವ ವರ್ಗಗಳ ವರ್ಚಸ್ಸು ಮೊದಲಿನಂತೆಯೇ ನಡೆದುದರಿಂದ ೧೯ನೆಯ ಶತಮಾನದ ಅಂತ್ಯಕಾಲದಲ್ಲಿ ವಚನಸಾಹಿತ್ಯದ ಅಭ್ಯಾಸವು ಬಹುತರ ನಿಂತು ಹೋಯಿತೆನ್ನಬಹುದು. ಲಿಂಗಾಯತರಲ್ಲಿ ಕೆಲವರು ವೈದಿಕ ಸಾಂಪ್ರದಾಯವನ್ನೇ ಆಚರಣೆಯಲ್ಲಿ ತರಹತ್ತಿದರು. ಕೆಲವರು ತಾವು ಲಿಂಗೀ ಬ್ರಾಹ್ಮಣರೆಂದು ಕರೆದುಕೊಳ್ಳಹತ್ತಿದರು. ಮತ್ತೆ ಕೆಲವರು ಲಿಂಗಾಯತರಲ್ಲಿ ಸಹ ಚಾತುರ್ವರ್ಣ್ಯವನ್ನು ಕಲ್ಪಿಸಹತ್ತಿದರು.

ಜಂಗಮರಲ್ಲಿ ವಿರಕ್ತರು ಭಕ್ತರಲ್ಲಿ ಕೆಲವು ಶರಣರು ಮಾತ್ರ ವಚನ ಸಾಹಿತ್ಯ ಸಂಸ್ಕೃತಿಯ ಪರಂಪರೆಯನ್ನು ಕಾಯ್ದುಕೊಂಡು ಬಂದರು. ಆದರೆ ಈ ಪರಂಪರೆಯು ಇವರ ಗುಂಪಿನೊಳಗಷ್ಟೇ ಉಳಿಯಿತು. ಯಾಕೆಂದರೆ ಉಳಿದವರು ಇದನ್ನನುಸರಿಸಲಿಕ್ಕೆ ಅನರ್ಹರೆಂದು ಇವರು ತಿಳಿದರೇನೋ! ಹಾಗೆ ತಿಳಿಯದಿದ್ದರೂ ನಿಜವಾಗಿ ಸಾಮಾನ್ಯ ಜನರಿಗೆ ಇದನ್ನನುಸರಿಸುವದು ಬಹಳಕಠಿಣ. ಮೇಲಾಗಿ ಈ ಸಾಹಿತ್ಯವು ಹಸ್ತಲಿಖಿತ ಪ್ರತಿಗಳಲ್ಲಿಯೇ ಇರುವದರಿಂದ ಸಾಮಾನ್ಯ ಜನರಿಗೆ ಇಂಥವುಗಳನ್ನು ಓದುವದು ಸಹ ಕಷ್ಟತರವಾಯಿತು. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಬಳ್ಳಾರಿಯ ಅಚ್ಚುಕೂಟದವರು ಕನ್ನಡ ಸಾಹಿತ್ಯದ ಕೆಲವು ಭಾಗಗಳನ್ನು ಪ್ರಕಟಪಡಿಸುವ ಕಾರ್ಯವನ್ನು ಕೈಕೊಂಡು ಕೆಲವು ವಚನ ಗ್ರಂಥಗಳನ್ನೂ ಪ್ರಕಟಪಡಿಸಿದರು. ಆದರೆ ಇದರ ಉಪಯೋಗವು ವಿಶೇಷವಾಗಲಿಲ್ಲ. ಮುಂದೆ ಲಿಂಗಾಯತ ಸಮಾಜದ ಅಥವಾ ಕರ್ನಾಟಕದ ಸುದೈವದಿಂದ ಈ

ಶತಮಾನದ ಪ್ರಥಮ ಪಾದದಲ್ಲಿ ಇದಕ್ಕೆ ಪುನಃ ಜೀವ ಕಳೆ ತುಂಬಹತ್ತಿತು. ೧೯೨೫ರ ಸುಮಾರಕ್ಕೆ ಈಗ ವಿಜಾಪುರದಲ್ಲಿ ವಾಸವಾಗಿರುವ ರಾವ ಬಹಾದ್ದೂರ ಹಳಕಟ್ಟಿ ಫಕೀರಪ್ಪನವರು ಈ ಸಾಹಿತ್ಯವನ್ನು ಅಚ್ಚು ಹಾಕಿಸಿ ಪ್ರಕಟಪಡಿಸುವ ಕಾರ್ಯವನ್ನು ಮನದಂದು ಆರಂಭಿಸಿ ತಮ್ಮ ಕಷ್ಟ ನಷ್ಟಗಳನ್ನು ಗಣನೆಗೆ ತಾರದೆ ಅದನ್ನು ಅವ್ಯಾಹತವಾಗಿ ಇನ್ನೂ ನಡೆಯಿಸಿಕೊಂಡು ಬಂದಿದ್ದಾರೆ. ಇವರು ಮೂಲ ವಚನಗಳನ್ನು ಪ್ರಕಟಿಸುವದಷ್ಟೇ ಅಲ್ಲದೆ ಬೇರೆ ಬೇರೆ ವಿಷಯಗಳ ಮೇಲಿನ ವಚನಗಳನ್ನು ಸಂಗ್ರಹಿಸಿ ಪ್ರಕಟಿಗೊಳಿಸುತ್ತಲೂ ಇದ್ದಾರೆ. ಇದಲ್ಲದೆ ಬಸವಣ್ಣ ಮೊದಲಾದ ಶರಣರ ಚರಿತ್ರೆಗಳನ್ನು ಹೊರಪಡಿಸ ಹತ್ತಿದ್ದಾರೆ. ಇದರಿಂದ ಲಿಂಗಾಯತ ಸಮಾಜದಲ್ಲಿಯಲ್ಲದೆ ಇತರ ಸಮಾಜದಲ್ಲಿಯೂ ಈ ಸಾಹಿತ್ಯದ ಅಭ್ಯಾಸ ಮಾಡುವ ಅಭಿರುಚಿಯು ಹುಟ್ಟಿ ಅವರಲ್ಲಿ ಕೆಲವರು ಈ ಸಾಹಿತ್ಯದ ವಿಮರ್ಶಾತ್ಮಕ ಗ್ರಂಥಗಳನ್ನು ಹೊರಡಿಸಿರುವರು. ರಾ. ಬ. ಹಳಕಟ್ಟಿಯವರು ನಿಃಸ್ವಾರ್ಥ ಬುದ್ಧಿಯಿಂದ ಈ ರೀತಿ ವಚನ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ ಎಲ್ಲ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುವರು.

ವಚನ ಸಾಹಿತ್ಯದ ವಿಸ್ತಾರವು ಅಪಾರವಾದುದು. ಅದರ ಬಹುಭಾಗವು ಅನೇಕ ರೀತಿಗಳಿಂದ ನಾಶವಾಗಿ ಹೋಗಿದೆ. ಈಗ ಉಳಿದಿರುವ ಭಾಗದಲ್ಲಿ ನಾಲ್ಕರಲ್ಲಿ ಒಂದಂಶವಾದರೂ ಪ್ರಕಾಶಕ್ಕೆ ಬಂದಿರುವದೆಂಬುದು ಸಂಶಯಾತ್ಮಕ. ಇದು ಸಹ ಸಂಪೂರ್ಣ ಸಂಶೋಧನವಾಗಿ ಪ್ರಕಟಿತವಾಗಿರುವದಿಲ್ಲ. ಒಂದು ನಿರ್ದಿಷ್ಟ ವಿಷಯದ ಮೇಲೆ ಸಂಪೂರ್ಣವಾಗಿ ಬರೆದ ಪುರಾತನ ಗ್ರಂಥವನ್ನು ಸಂಶೋಧನ ಮಾಡಿ ಪ್ರಸಿದ್ಧ ಪಡಿಸುವದು ದುಸ್ತರವಾಗಿರುವಾಗ ಸಾಗರೋಪಾದಿಯಲ್ಲಿ ವಿಸ್ತಾರವಾದ ವಚನಸಾಹಿತ್ಯದಲ್ಲಿ ಒಬ್ಬೊಬ್ಬ ವಚನಕಾರನ ವಚನಗಳನ್ನೆಲ್ಲ ಆಯ್ದುಕೊಂಡು ಸಂಶೋಧಿಸಿ ಪ್ರಸಿದ್ಧಪಡಿಸುವದು ಎಷ್ಟು ಪ್ರಯಾಸದ್ದೆಂಬುದು ಈ ಗ್ರಂಥದ ಮುನ್ನುಡಿಯನ್ನು ಓದಿದರೆ ಸಹಜ ಕಾಣುವಂತಿದೆ. ೧೫ನೆಯ ಶತಮಾನದಲ್ಲಿ ಕೆಲವು ವಚನಕಾರರ ವಚನಗಳನ್ನು ಒತ್ತಟ್ಟಿಗೆ ಕೂಡಿಸುವ ಪ್ರಯತ್ನವು ಸಹ ಸಂಪೂರ್ಣವಾಗಿ ಸಫಲವಾದಂತೆ ತೋರುವದಿಲ್ಲ.

ಈಗ ಈ ದಿಶೆಯಲ್ಲಿ ಮೊದಲು ಪ್ರಯತ್ನಪಟ್ಟವರೆಂದರೆ ದಾವಣಗೇರಿಯ

ವಿರಕ್ತ ಮಠದ ಶ್ರೀ. ನಿ. ಪ್ರ. ಪ್ರಭುಸ್ವಾಮಿಗಳು. ಇವರು ಅಖಂಡೇಶ್ವರ ವಚನಗಳನ್ನು ಪರಿಶೋಧಿಸಿ ಸಿದ್ಧಪಡಿಸಿರುವದು ಧಾರವಾಡದ ಮುರುಘಾ ಮಠದ ಶ್ರೀ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು ಹೊರಡಿಸಿದ ಶ್ರೀ ಬಾಲ ಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ೧೯೪೪ನೆಯ ಇಸ್ವಿಯಲ್ಲಿ ಪ್ರಕಾಶವಾಗಿದೆ. ಇದೇ ಪ್ರಕಾರ ಬಸವಣ್ಣನವರ ವಚನ ಗ್ರಂಥವು ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯವರಿಂದ ಅಲ್ಪಾವಧಿಯಲ್ಲಿಯೇ ಪ್ರಕಟವಾಗುವದರಲ್ಲಿದೆ.

ಇದೇ ದಿಶೆಯಲ್ಲಿ ಪ್ರಯತ್ನ ನಡೆಯಬೇಕೆಂದು ಯೋಚಿಸಿ ಇದನ್ನು ನಿರ್ವಹಿಸುವ ಯೋಗ್ಯತೆಯುಳ್ಳವರಾದ ಶ್ರೀಮಾನ್ ಉತ್ತಂಗಿ ಚೆನ್ನಪ್ಪನವರನ್ನು ಕೇಳಲಾಗಿ ಅವರು ಸಂತೋಷದಿಂದ ತಾವು ಈ ಕಾರ್ಯವನ್ನು ಕೈಕೊಳ್ಳುವದಕ್ಕೆ ಮುಂದೆ ಬಂದರು. ಇವರು ಕನ್ನಡ ಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿ ಸರ್ವಜ್ಞನ ವಚನಗಳನ್ನು ಸಂಗ್ರಹಿಸಿ ಸಂಶೋಧಿಸಿ ಪ್ರಕಟಗೊಳಿಸಿ ಕನ್ನಡಿಗರಿಗೆಲ್ಲ ಈ ಮೊದಲೇ ವಿಶೇಷ ಪರಿಚಿತರಾಗಿದ್ದಾರೆ. ಪರಧರ್ಮೀಯರಾದರೂ ವಚನ ಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿ ಅದರಲ್ಲಿ ಸಹ ನಿಷ್ಣಾತರಾಗಿದ್ದಾರೆ. ಕಾಶ್ಮೀರದ ಮೇರೆಯಲ್ಲಿರುವ ಸಪಾಲಕ್ಷ ಪ್ರಾಂತದ ಉಲ್ಲೇಖವನ್ನು ಮೇಲೆ ಮಾಡಿದೆಯಷ್ಟೇ. ಇದರ ಭೂಪಾಲನಾದ ಮಹಾದೇವರಾಜನೆಂಬವನು ಬಸವಣ್ಣನ ಕೀರ್ತಿಯನ್ನು ಕೇಳಿ ತನ್ನ ರಾಜ್ಯವೈಭವವನ್ನು ತೊರೆದು ಹೆಂಡತಿಸಮೇತನಾಗಿ ಕಲ್ಯಾಣಕ್ಕೆ ಬಂದು ಲಿಂಗಧಾರಿಯಾಗಿ ಕಟ್ಟಿಗೆಯ ಹೊರೆಯನ್ನು ತಂದು ಮಾರುವ ಕಾಯಕವನ್ನು ಕೈಕೊಂಡು ಜಂಗಮದಾಸೋಹವನ್ನು ಮಾಡುತ್ತ ಅಲ್ಲಿಯೇ ಲಿಂಗೈಕ್ಯನಾದನು. ಸಪಾಲಕ್ಷ ಪ್ರಾಂತವೆತ್ತ ! ಕಲ್ಯಾಣವೆತ್ತ ! ಅಲ್ಲಿಂದ ಬಂದು ಶರಣ ಜೀವನವನ್ನು ಸಾಗಿಸಿ ಕನ್ನಡದಲ್ಲಿ ವಚನಗಳನ್ನು ರಚಿಸಿರುವದು ಆಶ್ಚರ್ಯವಲ್ಲವೇ ? ಇವನ ಈವರೆಗೆ ದೊರೆತ ವಚನಗಳ ಸಂಖ್ಯೆಯು ಎಂಟುನೂರರ ಮೇಲ್ಪಟ್ಟಿದೆ. ಇವನ ಹೆಂಡತಿಯಾದ ರಾಣಿ ಮಹಾದೇವಿಯ ವಚನಗಳ ಸಂಖ್ಯೆಯು ಎಪ್ಪತ್ತಕ್ಕೆ ಸಮೀಪಿಸಿದೆ. ಇವರ ವಚನಗಳನ್ನೇ ಸಂಶೋಧಿಸಬೇಕೆಂಬ ಇಚ್ಛೆಯನ್ನು ಶ್ರೀ ಚೆನ್ನಪ್ಪನವರು ತೋರಿಸಿದ್ದರಿಂದ ಅವರಿಗೆ ಈ ಕಾರ್ಯವನ್ನು ಒಪ್ಪಿಸಲಾಯಿತು. ಇದನ್ನು ಮಾಡುವಲ್ಲಿ ಅವರು

ಎಷ್ಟು ಕಷ್ಟ ಪಟ್ಟಿರಬಹುದೆಂಬುದು ಅವರ ಮುನ್ನುಡಿಯಿಂದ ವ್ಯಕ್ತವಾಗುತ್ತದೆ. ಅವರಿಗೆ ಎಲ್ಲ ಕನ್ನಡಿಗರ ಪರವಾಗಿ ಧನ್ಯವಾದಗಳು.

ಇದರ ಪ್ರಸ್ತಾವನೆಯನ್ನು ಬರೆದವರು ಶ್ರೀಮಾನ್ ಭೂಸನೂರಮಠ ಸಂಗಯ್ಯನವರು. ಇವರು ಕೆಲಕಾಲ ಧಾರವಾಡ ಕರ್ನಾಟಕ ಕಾಲೇಜದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಅನಂತರ ಇದುವರೆಗೆ ಬೆಳಗಾಂವಿ ಲಿಂಗರಾಜ ಕಾಲೇಜದಲ್ಲಿ ಅದೇ ಕೆಲಸದಲ್ಲಿ ಇರುವರು. ಈ ಗ್ರಂಥದಲ್ಲಿ ಮೂಲವಚನಗಳ ಸಂಖ್ಯೆಯು ದೊಡ್ಡದಿದ್ದರೂ ಆ ಪ್ರಮಾಣದಿಂದ ಪ್ರಸ್ತಾವನೆಯು ಬಹಳ ವಿಸ್ತಾರವಾಗಿ ಕಾಣಬಹುದು. ಆದರೆ ಅದನ್ನು ಓದುತ್ತ **ಹೋದಹಾಗೆ ಬೇಸರವಾಗದೆ** ಕುತೂಹಲವೇ ಹೆಚ್ಚುತ್ತ ಹೋಗುತ್ತದೆ. ಇದರಲ್ಲಿ 'ವಚನ' ಶಬ್ದದ ನಿಜವಾದ ಅರ್ಥ, ಬಸವಣ್ಣನವರ ಕಾಲದಲ್ಲಿ ಶರಣರ ಜೀವನದ ರೀತಿ, ಮೋಳಿಗೆ ಮಾರಯ್ಯನ ಜೀವನ ಚರಿತ್ರೆಯ ವಿಮರ್ಶೆ, ಅವನ ಪೂರ್ವಾಶ್ರಮದ ಸ್ಥಾನ ಮೊದಲಾದ ವಿಷಯಗಳನ್ನು ಸಂಶೋಧಿಸಿ ಒಳ್ಳೇ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇದನ್ನು ಓದುವದೆಂದರೆ ಒಂದು ರುಚಿಕರವಾದ ರಸದೂಟವೆನಿಸುತ್ತದೆ. ತಮ್ಮ ನಿತ್ಯದ ಕಾರ್ಯದೊಳಗೆ ವೇಳೆಯನ್ನು ಸಾಧಿಸಿ ಇಂಥ ಪ್ರಸ್ತಾವನೆಯನ್ನು ಬರೆದು ಕೊಟ್ಟಿದ್ದಕ್ಕೆ ಕನ್ನಡಿಗರೆಲ್ಲ ಅವರಿಗೆ ಋಣಿಯಾಗಬೇಕು.

ಮುಂಬಯಿ ವಿಶ್ವವಿದ್ಯಾಲಯದ ಅಧಿಕಾರಿಗಳು ಈ ಗ್ರಂಥಕ್ಕೆ ಮನ್ನಣೆಯಿತ್ತು ಯೋಗ್ಯ ಧನಸಹಾಯ ನೀಡಿದ್ದಕ್ಕಾಗಿ ನಾವು ಅವರ ಉಪಕಾರವನ್ನು ಮರೆಯಲಾರೆವು.

ಈ ಗ್ರಂಥದಲ್ಲಿ ಸೇರಿಸಿದ ಮೋಳಿಗೆಯ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯಮ್ಮನ ಚಿತ್ರವನ್ನು ಬರೆದುಕೊಟ್ಟದ್ದಕ್ಕೆ ಶ್ರೀಮಾನ್ ಗದುಗಿನ ಚೆಟ್ಟಿ ಮುರಿಗೆಪ್ಪನವರಿಗೂ ಮತ್ತು ಇದನ್ನು ಪ್ರಕಟಿಸಲಿಕ್ಕೆ ಅನುಕೂಲ ಮಾಡಿಕೊಟ್ಟ ಧಾರವಾಡದ ತೋಂಟದಾರ್ಯ ಅಚ್ಚುಕೂಟದವರಿಗೂ ನಮ್ಮ ಶುಭಾಶಯಗಳು.

ಈ ಗ್ರಂಥಕ್ಕೆ ಸಾರ್ವಜನಿಕ ಪ್ರೋತ್ಸಾಹ ದೊರೆತರೆ ಇದೇ ರೀತಿ ಎರಡನೇ ವಚನ ಗ್ರಂಥಗಳನ್ನು ಹೊರಗೆಡಹುವ ಬಲವಾದ ಹಂಬಲವಿದೆ.

**ವೀರಭದ್ರಪ್ಪ ಹಾಲಬಾವಿ**

# ಮುನ್ನುಡಿ

ವಚನ ಸಾಹಿತ್ಯದಲ್ಲಿ ಶ್ರೀಮಾನ್ ಹಳಕಟ್ಟಿಯವರು ಪ್ರಾರಂಭಿಸಿದ ಕಾರ್ಯವನ್ನು ಯಾವುದೊಂದು ರೀತಿಯಿಂದ ಮುಂದುವರಿಸಿದರೆ ಅವರ ಉದ್ದೇಶವನ್ನೇ ನೆರವೇರಿಸಿದಂತಾಗುತ್ತದೆಂಬ ಉತ್ಕಟ ಭಾವನೆಯುಂಟಾದುದೇ ಮೋಳಿಗೆ ಮಾರಯ್ಯನ ವಚನಗಳು ಹೊರಬೀಳುವದಕ್ಕೆ ಕಾರಣ. ಅನೇಕ ವರ್ಷಗಳಿಂದ ಕಲೆ ಹಾಕುತ್ತ ಬಂದ ನನ್ನ ತಾಳದೋಲೆಯ ಸಂಗ್ರಹದಲ್ಲಿ ಮೋಳಿಗೆಯ ಮಾರಯ್ಯನ ೫೧೫ ವಚನಗಳುಳ್ಳ ಒಂದು ಕೈ ಬರಹದ ಪ್ರತಿಯು ಇದ್ದುದರಿಂದಲೂ ಶ್ರೀಮಾನ್ ಹಳಕಟ್ಟಿಯವರು ಶಿವಾನುಭವದಲ್ಲಿ ಆ ಶಿವಶರಣನ ೪೨ ವಚನಗಳನ್ನು ಮಾತ್ರ ಮುದ್ರಿಸಿ ಕಾರಣಾಂತರಗಳಿಂದ ಅದನ್ನು ಅಲ್ಲಿಗೆ ನಿಲ್ಲಿಸಿ ಬಿಟ್ಟುದರಿಂದಲೂ ಈ ಕಾರ್ಯಕ್ಕೆ ಕೈ ಹಚ್ಚುವದು ಬಹು ಯುಕ್ತವೆಂದು ತೋರಿತು. ಈ ನನ್ನ ವಿಚಾರವನ್ನು ಸಬ್‌ಜಜ್ಜು ಕೆಲಸದಿಂದ ನಿವೃತ್ತರಾದನಂತರ ಕೆಲವು ವರ್ಷಗಳ ವರೆಗೆ ಲಿಂಗಾಯತ ಸಾಹಿತ್ಯ ಸಮಿತಿಯ ಸದಸ್ಯರಾಗಿದ್ದುಕೊಂಡು ಅನೇಕ ವೀರಶೈವ ಗ್ರಂಥಗಳನ್ನು ಪ್ರಕಟಿಸಿರುವ ಶ್ರೀಮಾನ್ ಹಾಲಬಾವಿ ವೀರಭದ್ರಪ್ಪನವರ ಮುಂದಿಡಲು 'ಅವರು ಸಂತೋಷದಿಂದ ಇದಕ್ಕೆ ತಮ್ಮ ಸಮ್ಮತಿ ಕೊಟ್ಟದ್ದಲ್ಲದೆ ಗ್ರಂಥವು ತಯಾರಾದ! ನಂತರ ಅದನ್ನು ಅಚ್ಚು ಹಾಕಿಸುವದಕ್ಕೂ ಒಪ್ಪಿಕೊಂಡರು. ಇದು ಮಾತ್ರವಲ್ಲದೆ ಕಾರ್ಯವು ಶೀಘ್ರವಾಗಿ ಪ್ರಾರಂಭವಾಗುವಂತೆ ತಿಂಗಳೊಂದಕ್ಕೆ ಇಂತಿಷ್ಟು ಸಂಬಳವೆಂದು ಗೊತ್ತುಮಾಡಿ ಒಬ್ಬ ಬರೆಯುವವನನ್ನು ನನ್ನ ವಶಕ್ಕೆ ಕೊಟ್ಟರು. ಲೇಖಕನೂ ನಾನೂ ಕೂಡಿಕೊಂಡು ದಿನಾಲು ಆರು ತಾಸಿನಂತೆ ಕೆಲಸ ಮಾಡಿದರೆ ಕೈ ಬರೆಹದ ಕೃತಿಯು ಅಚ್ಚಿಗೆ ಸಿದ್ಧವಾಗುವದಕ್ಕೆ ಸುಮಾರು ಒಂದುವರೆ ವರ್ಷ ಬೇಕಾಯಿತು. ಈ ವಚನ ಗ್ರಂಥವನ್ನು ಸಂಪೂರ್ಣಸಂಗ್ರಹ, ಶುದ್ಧೀಕರಣ, ಸಂಶೋಧನ, ಹೀಗೆ ಮೂರು ದೃಷ್ಟಿಕೋನಗಳನ್ನಿಟ್ಟುಕೊಂಡು ಸಿದ್ಧಪಡಿಸಿದ್ದಾಗಿದೆ. ಮೋಳಿಗೆ ಮಾರಯ್ಯನ ಹಾಗೂ ಅವನ ರಾಣಿ ಮಹದೇವಿಯ ವಚನಗಳ ಸಂಕಲನವನ್ನು ಸಾಧ್ಯವಿದ್ದಮಟ್ಟಿಗೆ ಸಂಪೂರ್ಣಸ್ಥಿತಿಗೆ ತರುವ ಉದ್ದೇಶದಿಂದ ನನ್ನಲ್ಲಿದ್ದ ೫೧೫ ವಚನಗಳ ಪ್ರತಿಯನ್ನೇ ಮೂಲಾಧಾರವಾಗಿಟ್ಟು

ಕೊಂಡು ಉಳಿದ ವಚನಗಳನ್ನು ಎಲ್ಲ ಪುರಾತನರ ವಚನ, ಅಖಿಲ ಪುರಾತನರ ಬೆಡಗಿನ ವಚನ, ಬೆಡಗಿನ ವಚನಗಳ ಟೀಕೆ ಮುಂತಾದ ತಾಳದೋಲೆಯ ಪ್ರತಿಗಳಿಂದಲೂ ಚನ್ನಂಜದೇವರು ಸಂಗ್ರಹಿಸಿದ ಸಿಜಾಚರಣೆಯ ವಚನ, ಲಿಂಗಲೀಲಾವಿಲಾಸ ಚಾರಿತ್ರ, ಗಣಭಾಷ್ಯ ರತ್ನಮಾಲೆ ಮುಂತಾದ ಕೈಬರೆಹದ ಪ್ರತಿಗಳಿಂದಲೂ ಶ್ರೀಮಾನ್ ಹಳಕಟ್ಟಿಯವರ ಶಿವಾನುಭವಪತ್ರಿಕೆ ಹಾಗೂ ಅವರ ವಚನಶಾಸ್ತ್ರಭಾಗ ೧, ೨, ೩, ಶ್ರೀಮಾನ್, ನರಸಿಂಹಾಚಾರ್ಯರ ಕವಿಚರಿತೆ ಭಾಗ ೧, ೨, ೩ ಮುಂತಾದ ಮುದ್ರಣ ಗ್ರಂಥಗಳಿಂದಲೂ ಸಂಗ್ರಹಿಸಿದ್ದಾಗಿದೆ. ಒಮ್ಮೆ ಬಂದ ವಚನವು ಪುನರಾವರ್ತಿಸಿದರೆ ಅದನ್ನು ಕಂಡು ಹಿಡಿಯುವದಕ್ಕೋಸ್ಕರ ವಚನಾರಂಭಕೋಶವೊಂದನ್ನು ಗ್ರಂಥಾಂತ್ಯದಲ್ಲಿ ಸೇರಿಸಲಾಗಿದೆ.

ಸಂಗ್ರಹಕಾರ್ಯವು ತೀರಿದನಂತರ ಅದನ್ನು ಷಟ್ಸ್ಥಲಾನುಸಾರವಾಗಿ ವರ್ಗೀಕರಿಸಬೇಕೆಂಬ ಯೋಜನೆಯುಂಟಾಯಿತು. ಹೀಗಾಗಿ ರಾಣಿ ಮಹದೇವಿಯ ವಚನಗಳನ್ನುಳಿದು ಮೋಳಿಗೆಯ ಮಾರಯ್ಯನ ವಚನಗಳನ್ನಷ್ಟೆ ಷಟ್ಸ್ಥಲ, ಅಷ್ಟಾವರಣ, ವಾಗದ್ವೈತ ಹೀಗೆ ಮೂರು ವಿಧವಾಗಿ ವಿಭಾಗಿಸಲಾಗಿದೆ. ಈ ಕಾರ್ಯದಲ್ಲಿ ಲಿಂಗರಾಜ ಕಾಲೇಜಿನ ಕನ್ನಡ ಅಧ್ಯಾಪಕರಾಗಿರುವ ಪ್ರೊ. ಭೂಸನೂರಮಠ ಇವರು ವಿಶೇಷ ಸಹಾಯ ಮಾಡಿರುವರು. ವಚನಗಳು ಬಹುಮುಖವಾಗಿದ್ದು ಅವುಗಳನ್ನು ಸ್ಥಲಕಟ್ಟಿಗನುಸಾರವಾಗಿ ವರ್ಗೀಕರಿಸುವದು ಬಹು ಪ್ರಯಾಸದ ಕೆಲಸವಾಗಿರುವದರಿಂದ ಅವುಗಳನ್ನು ಬೇರೆ ದೃಷ್ಟಿಯಿಂದ ನೋಡುವವರು ಸಹಜವಾಗಿ ಭಿನ್ನಾಭಿಪ್ರಾಯಪಡಬಹುದಾಗಿದ್ದರೂ ಓದುಗರಿಗೆ ವಚಗಳನ್ನು ಗ್ರಹಿಸಿಕೊಳ್ಳುವದರಲ್ಲಿ ಯಾವದೊಂದು ರೀತಿಯಿಂದ ಸಹಾಯವಾಗಲೆಂದು ಈ ತರದ ಯೋಜನೆಯನ್ನು ಮಾಡಿದ್ದಾಗಿದೆ. ಆದರೆ ಈ ಕ್ರಮವು ಮೂಲಪ್ರತಿಗಳಲ್ಲಿರುವದಿಲ್ಲ. ಬೆಡಗಿನ ವಚನಗಳೆಲ್ಲವೂ ಕೊನೆಗೆ ಕೂಡೋಣವಾಗಿದ್ದು ಅವುಗಳಲ್ಲಿ ಎಷ್ಟು ವಚನಗಳಿಗೆ ಟೀಕೆಯು ಲಭ್ಯವೋ ಅಷ್ಟು ವಚನಗಳನ್ನು ಟೀಕಾ ಸಹಿತವಾಗಿ ಕೊಟ್ಟಿದೆ. ಹೇಗಾದರೂ ಈ ಕೃತಿಯಲ್ಲಿ ಮಾರಯ್ಯನ ವಚನಗಳು ೮೧೯, ಅವನ ರಾಣಿಯ ವಚನಗಳು ೬೯, ಅಂತೂ ೮೮೮ ವಚನಗಳು ಸಂಗ್ರಹವಾಗಿವೆ.

ಈ ಪ್ರಕಾರ ಮುಕ್ಕಾಲು ಪಾಲು ಕೆಲಸವು ಆರು ತಿಂಗಳಲ್ಲಿ ತೀರಿದರೂ ಉಳಿದ ಕಾಲುಭಾಗ ಕೆಲಸವನ್ನು ಮುಗಿಸುವದಕ್ಕೆ ಒಂದು ವರ್ಷ ಬೇಕಾಯಿತು. ಅಂದರೆ ಸಂಗ್ರಹ ಕಾರ್ಯಕ್ಕೆ ಆರು ತಿಂಗಳು ಹಿಡಿದರೆ ಶುದ್ಧೀಕರಣಕ್ಕೆ ಒಂದು ವರ್ಷ ಬೇಕಾಯಿತೆಂದು ಹೇಳಬಹುದು. ಹೀಗಾಗುವದಕ್ಕೆ ನನ್ನಲ್ಲಿದ್ದ ೫೧೫ ವಚನಗಳ ಪ್ರತಿಯು ಬಹು ಅಶುದ್ಧವಾಗಿದ್ದುದೇ ಮುಖ್ಯ ಕಾರಣ. ಇದರಲ್ಲಿದ್ದ ಬರೆಹ ದೋಷಗಳನ್ನು ಬೇರೆ ಬೇರೆ ಪ್ರತಿಗಳನ್ನು ನೋಡಿಕೊಂಡು ತಿದ್ದಲಾಗಿದೆ. ಈ ಕಾರ್ಯದಲ್ಲಿ ತಾಳದೋಲೆಯ ಗ್ರಂಥಗಳಿಂದ ವಿಶೇಷ ಸಹಾಯುವಾಗಿದ್ದು ಅವುಗಳಲ್ಲಿ ದೊರೆಯುವ ಪಾಠಾಂತರಗಳನ್ನು ಗ್ರಂಥದ ಅಡಿಯಲ್ಲಿ ಕೊಟ್ಟಿದ್ದೇವೆ. ಪಾಠಾಂತರಗಳನ್ನು ನಿಶ್ಚಯಿಸುವುದರಲ್ಲಿ ಅನೇಕ ಪ್ರತಿಗಳನ್ನು ನೋಡಬೇಕಾಗಿದ್ದು ಈ ಕಾರ್ಯದಲ್ಲಿ ಶ್ರೀಮಾನ್ ಹಾಲಬಾವಿಯವರು ವಿಶೇಷ ಸಹಾಯ ಮಾಡಿದ್ದಾರೆ. ಅವರು ಈ ಕಾರ್ಯದಲ್ಲಿ ನೆರವಾಗದಿದ್ದರೆ ಅದು ಒಂದು ವೇಳೆ ಇನ್ನೂ ತಡವಾಗಿ ಹೊರಡುತ್ತಿತ್ತೇನೋ ? ಹೇಗೆಯೇ ಇರಲಿ ನಮ್ಮ ಪ್ರತಿಯಲ್ಲಿ ಮಾತ್ರ ದೊರೆತು ಇತರ ಪ್ರತಿಗಳಲ್ಲಿ ದೊರೆಯದೆ ಇದ್ದ ವಚನಗಳನ್ನು ಅಲ್ಲಲ್ಲಿ ತಿದ್ದಿ ಸರಿಪಡಿಸಲಾಗಿದೆ. ಬರೆಹ ದೋಷದಿಂದ ಅರ್ಥವಾಗದಿರುವ ಶಬ್ದಗಳನ್ನು ಮಾತ್ರ ಔಚಿತ್ಯಕ್ಕನುಸಾರವಾಗಿ ತಿದ್ದಿಕೊಳ್ಳಲಾಗಿದೆ. ಹೀಗಾಗಿ ಈ ಆವೃತ್ತಿಯಲ್ಲಿ ಇನ್ನೂ ದೋಷಗಳು ಉಳಿದಿರುವದು ಸಹಜವಾಗಿದ್ದರೂ ಮೋಳಿಗೆ ಮಾರಯ್ಯನ ವಚನಗಳ ಶುದ್ಧವಾದ ಪ್ರತಿಯು ದೊರೆತರೆ ಇವೆಲ್ಲವುಗಳನ್ನು ಎರಡನೆಯ ಆವೃತ್ತಿಯಲ್ಲಿ ತಿದ್ದಿ ಸರಿಪಡಿಸಬಹುದು. ಗ್ರಂಥದ ಕೊನೆಯಲ್ಲಿ ಅರ್ಥಕೋಶವು ಕೂಡೋಣವಾಗಿದ್ದು ಅದರಲ್ಲಿ ಬರುವ ಕೆಲವು ಶಬ್ದಗಳಿಗೆ ಕಿಟೆಲ್ ನಿಘಂಟಿನಲ್ಲಿ ಸರಿಯಾದ ಅರ್ಥವು ದೊರೆಯದಿರುವದರಿಂದ ಸಂದರ್ಭಾನುಸಾರವಾಗಿ ಅರ್ಥವಿಸಲಾಗಿದೆ. ವಚನಶಾಸ್ತ್ರದ ಸಂಶೋಧನ ಕಾರ್ಯವು ಸಂಪೂರ್ಣತೆಗೆ ಮುಟ್ಟಿದಂತೆ ಇಂತಹ ಶಬ್ದಗಳಿಗೆ ಸರಿಯಾದ ಅರ್ಥವು ಹಿಂದಿನಿಂದ ಸ್ಪಷ್ಟವಾಗಬಹುದು. ಹೇಗಾದರೂ ಮಾರಯ್ಯನ ಈ ವಚನ ಗ್ರಂಥವನ್ನು ಸಂಪೂರ್ಣ ಸಂಗ್ರಹಕ್ಕಾಗಿ ಒಮ್ಮೆ, ವರ್ಗೀಕರಣಕ್ಕಾಗಿ ಇನ್ನೊಮ್ಮೆ, ಶುದ್ಧೀಕರಣಕ್ಕಾಗಿ ಮತ್ತೊಮ್ಮೆ, ಶುದ್ಧ ಪ್ರತಿಗಾಗಿ ತಿರುಗೊಮ್ಮೆ ಹೀಗೆ ನಾಲ್ಕು ಸಲ ಪ್ರತಿಮಾಡಬೇಕಾಯಿತು.

ಗ್ರಂಥವು ಅಚ್ಚಿಗೆ ಸಿದ್ಧವಾಗುವದಕ್ಕೆ ಸುಮಾರು ಒಂದುವರೆ ವರ್ಷ ಹಿಡಿದಂತೆ ಮುದ್ರಣವಾಗುವದಕ್ಕೂ ಅಷ್ಟೇ ಸಮಯ ಹಿಡಿಯಿತು. ವಚನಗಳ ಮುದ್ರಣ ಕಾರ್ಯವು ಒಂದುವರೆ ವರ್ಷದಲ್ಲಿ ಮುಗಿದರೂ ಅದರಲ್ಲಿ ಸೇರಿಸಬೇಕಾಗಿದ್ದ ಪ್ರಸ್ತಾವನೆಯು ಬರೆದು ಬರುವದಕ್ಕೆ ತಿರುಗಿ ಒಂದುವರೆ ವರ್ಷ ತಡವಾಯಿತು. ಹೀಗೆ ೧೯೪೪ರಲ್ಲಿ ಪ್ರಾರಂಭವಾದ ಕಾರ್ಯವು ಮುಗಿಯುವದಕ್ಕೆ ಸುಮಾರು ಆರು ವರ್ಷ ಬೇಕಾದವು. ಈ ಕಾರ್ಯಕ್ಕೆ ಇಷ್ಟು ವಿಘ್ನಗಳುಂಟಾಗದಿದ್ದರೆ ಈ ಗ್ರಂಥವು ಮೂರು ವರ್ಷಗಳ ಪೂರ್ವದಲ್ಲಿಯೇ ಓದುಗರ ಕೈಯಲ್ಲಿರುತ್ತಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು. ಮೋಳಿಗೆಯ ಮಾರಯ್ಯನ ಸಂಬಂಧವಾಗಿ ಯಥಾರ್ಥವಾದ ಇತಿಹಾಸವು ಬೆಳಕಿಗೆ ಬರುವಂತೆ ಪ್ರೊ. ಭೂಸನೂರಮಠ ಇವರು ಅನೇಕ ಗ್ರಂಥಗಳನ್ನು ಪರಿಶೋಧಿಸಿ, ಶ್ರಮವಹಿಸಿ, ಸುದೀರ್ಘವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಮೋಳಿಗೆಯ ಮಾರಯ್ಯನ ಶಬ್ದ, ಶೈಲಿ, ವ್ಯಾಕರಣ, ವಿಚಾರಸರಣೆ ಮುಂತಾದವುಗಳಲ್ಲಿ ವೈಯಕ್ತಿಕ ವೈಶಿಷ್ಟ್ಯವಿದ್ದು, ಈ ಎಲ್ಲ ವಿಷಯಗಳು ಅವರ ಪ್ರಸ್ತಾವನೆಯಲ್ಲಿ ಬಂದಿರುವದರಿಂದ ಅವುಗಳನ್ನು ಇಲ್ಲಿ ಲೋಪಿಸಲಾಗಿದೆ. ಇದರಲ್ಲಿ ಕಂಡುಬರುವ ಎಲ್ಲ ದೋಷಗಳನ್ನು ಸಾಧ್ಯವಿದ್ದಮಟ್ಟಿಗೆ ಎರಡನೇ ಆವೃತ್ತಿಯಲ್ಲಿ ತಿದ್ದಿ ಸರಿಪಡಿಸಲಾಗುವದು. ಮೋಳಿಗೆಯ ಮಾರಯ್ಯನ ವಚನಗಳಂತೆ ಇತರ ವಚನಕಾರರ ಗ್ರಂಥಗಳೂ ಸಂಶೋಧಿತವಾಗಿ ಸಂಸ್ಕರಿಸಲ್ಪಟ್ಟು ಬೇಗನೆ ಕನ್ನಡಿಗರ ಮನೆಯನ್ನು ಪ್ರವೇಶಿಸಲೆಂದು ನನ್ನ ಹೆಬ್ಬಯಕೆ.

೯—೫—೫೦ ಚೆನ್ನಪ್ಪ ಉತ್ತಂಗಿ

# ಗ್ರಂಥ ಶುದ್ಧೀಕರಣಕ್ಕೆ ಆಧಾರವಾಗಿರುವ ಪ್ರತಿಗಳು

## ತಾಳದೋಲೆಯ ಪ್ರತಿಗಳು

**(ಅ) ಅಖಿಲ ಪುರಾತನರ ವಚನ**

ಇದು ಎಕ್ಕುಂಡಿಯ ಮಠದಲ್ಲಿ ದೊರೆತಿದ್ದು ಇದರಲ್ಲಿ ಮೂರುಸಾವಿರ ವಚನಗಳಿವೆ. ಇವುಗಳಲ್ಲಿ ದೊರೆಯುವ ಮೋಳಿಗೆಯ ಮಾರಯ್ಯನ ವಚನಗಳು ೨೩೦, ಮಹದೇವಿಯ ವಚನಗಳು ೩೬.

**(ಬ) ಅಖಿಲ ಪುರಾತನರ ವಚನ**

ಇದು ಸಹ ಎಕ್ಕುಂಡಿಯ ಮಠದಲ್ಲಿ ದೊರೆತದ್ದು. ಇದರಲ್ಲಿ ೩೧೮ ವಚನಗಳಿವೆ. ರಾಣಿಯ ವಚನಗಳು ೩೨.

**(ಕ) ಎಲ್ಲ ಪುರಾತನರ ವಚನ**

ಇದು ಹುಬ್ಬಳ್ಳಿಯ ಮೂರುಸಾವಿರ ಮಠದಿಂದ ದೊರೆತಿದ್ದು ಇದರಲ್ಲಿ ೨೦೦೦ ವಚನಗಳಿವೆ. ಇವುಗಳಲ್ಲಿರುವ ಮೋಳಿಗೆಯ ಮಾರಯ್ಯನ ವಚನಗಳು ೧೩೬, ಮಹದೇವಿಯ ವಚನಗಳು ೧೬.

**(ಡ) ಬೆಡಗಿನ ವಚನ ಸಂಗ್ರಹ**

ಇದರಲ್ಲಿ ದೊರೆಯುವ ಮೋಳಿಗೆಯ ಮಾರಯ್ಯನ ಬೆಡಗಿನ ವಚನಗಳು ೧೬೫. ಇದು ಶಿವಯೋಗ ಮಂದಿರದಿಂದ ದೊರೆತದ್ದು.

**(ಇ) ಬೆಡಗಿನ ವಚನಗಳ ಟೀಕೆ**

ಇದು ಸಹ ಶಿವಯೋಗ ಮಂದಿರದಿಂದ ದೊರೆತದ್ದು. ಇದರಲ್ಲಿರುವ ಟೀಕಾ ವಚನಗಳು ೬೦.

## ಕೈ ಬರೆಹದ ಪ್ರತಿಗಳು

**(ಗ) ಮೋಳಿಗೆಯ ಮಾರಯ್ಯನ ವಚನಗಳು**

ಇದೇ ನಮ್ಮ ಸಂಗ್ರಹದಲ್ಲಿ ಇದ್ದ ಪ್ರತಿ. ಇದೊಂದು ಸ್ವತಂತ್ರ ಸಂಗ್ರಹವಾಗಿದ್ದು ಇದರಲ್ಲಿ ಉಳಿದ ಎಲ್ಲ ಪ್ರತಿಗಳಿಗಿಂತ ಹೆಚ್ಚು ವಚನಗಳು ದೊರೆಯುತ್ತಿದ್ದರೂ ಅನೇಕ ಹಸ್ತದೋಷಗಳಿರುವದರಿಂದ ಬಹು ಅಶುದ್ಧ ವಾಗಿದೆ. ಇದರಲ್ಲಿರುವ ವಚನಗಳು ೫೧೫.

**(ಜ) ಮೋಳಿಗೆಯ ಮಾರಯ್ಯನ ವಚನಗಳು**

ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣಿಕ ಇವರಿಂದ ದೊರೆತದ್ದು. ಇದರಲ್ಲಿ ೧೨೫ ವಚನಗಳು ಮಾತ್ರ ಇವೆ.

**(ಚ) ಚೆನ್ನಂಜದೇವರು ಸಂಗ್ರಹಿಸಿದ ನಿಜಾಚರಣೆಯ ವಚನಗಳು**

ಇದು ಬೈಲಹೊಂಗಲದ ಮುಗಿ ಭಾವೆಪ್ಪನವರಿಂದ ದೊರೆತಿದ್ದು ಇದರಲ್ಲಿ ಒಂದೆರಡು ಹೊಸ ವಚನಗಳಿವೆ.

**(ಲ) ಗಣಭಾಷ್ಯ ರತ್ನಮಾಲೆ**

ಶ್ರೀಮಾನ್ ವೀರಭದ್ರಪ್ಪ ಕೊಪ್ಪಳ ಲಿಂಗಾಯತ ಹಾಯಸ್ಕೂಲ ಪ್ರಿನ್ಸಿಪಾಲ ಇವರಿಂದ ದೊರೆತ ಕೈ ಬರೆಹದ ಪ್ರತಿ. (ಇದೀಗ ಅಚ್ಚಾಗಿದೆ.)

## ಮುದ್ರಣದ ಪ್ರತಿಗಳು

**(ಶ) ಶೂನ್ಯ ಸಂಪಾದನೆ** (ಹಳಕಟ್ಟಿಯವರ ಮುದ್ರಣ)

**(ಹ) ವಚನಶಾಸ್ತ್ರ ಭಾಗ ೧-೩** ,,

**(ರ) ಶಿವಾನುಭವ ಮಾಸಿಕ**

ಇವರಲ್ಲಿ ದೊರೆಯುವ ಮೋಳಿಗೆಯ ಮಾರಯ್ಯನ ವಚನಗಳು ೪೨.

# ಪ್ರಸ್ತಾವನೆ

## ೧

## ಮಾತೆಂಬುದು ಜ್ಯೋತಿರ್ಲಿಂಗ

ವಚನಸಾಹಿತ್ಯವನ್ನು ಓದಿ ಅದರ ಸಾರ ಸಾರಾಯವನ್ನು ಅರಿವು ಅನುಭವಿಸಬೇಕಾದರೆ ಭಾವ ಬತ್ತಲೆಯಾಗಿರಬೇಕು, ಸುತ್ತಿ ಸುಳಿವ ಮನದ ಮರ್ಕಟತನವಳಿದು ಪರಮಾರ್ಥವನ್ನು ತಿಳಿಯಬೇಕೆಂಬ ಹಂಬಲ ಬಲವಾಗಿರಬೇಕು. ತನುವೂ ತನ್ನ ಅವಗುಣವನ್ನಳಿದು ಸತ್ಯ ತತ್ವವನ್ನು ತನ್ನಲ್ಲಿ ಶಾಶ್ವತವಾಗಿ ನೆಲೆಗೊಳಿಸಬೇಕೆಂಬ ತವಕದಲ್ಲಿರಬೇಕು. ಶರಣರ ಕಣ್ಣು ಕಂಡಂತೆ ವಚನ ಸಾಹಿತ್ಯ ಸತ್ಯಜ್ಞಾನದ ಸಾಗರ, ನಿತ್ಯಾನಂದದ ನೆಲೆ, ಮೋಕ್ಷದ ಬೀಡು, ಪ್ರಜ್ವಲಿಸುವ ಲಿಂಗದ ನಾಡು. ಅಂತೆಯೇ ಭಾವದಲ್ಲಿ ಭ್ರಮೆ ತುಂಬಿ ಮನದಲ್ಲಿ ವಿಷಯ ತುಂಬಿ ತನುವಿನಲ್ಲಿ ಹುಸಿ ತುಂಬಿದ ಕತ್ತಲೆಯ ಕಣ್ಣಿಗೆ ಸತ್ಯದ ತಿಳಿಬೆಳಗು ಕಾಣುವುದು ಅಸಾಧ್ಯವೆಂದೇ ಹೇಳಬೇಕು. ಅಲ್ಪ ಸ್ವಲ್ಪ ಕಂಡಂತೆ ತೋರಿದರೂ ಅದು ಹುಸಿ ಬೆಳಗಲ್ಲದೆ ನಿಜದ ಬೆಳಗಲ್ಲವೆಂಬುದು ನಿರ್ಧರ. ಏಕೆಂದರೆ ಸತ್ಯಾರ್ಥಕ್ಕೂ ಮಿಥ್ಯಾದೃಷ್ಟಿಗೂ ಸಖ್ಯವಾಗುವ ಸಂಭವ ಈ ಲೋಕದಲ್ಲಂತೂ ಇದ್ದಂತೆ ತೋರುವುದಿಲ್ಲ! ಸತ್ಯಜ್ಞಾನವನ್ನು ಕಾಣಬೇಕಿದ್ದರೆ ಸತ್ಯದೃಷ್ಟಿ ಬೇಕು. ಸತ್ಯಾನುಭೂತಿಯನ್ನು ಬೇಡುತ್ತಿದ್ದರೆ ಸತ್ಯತತ್ವ ತಾನಾಗುತ್ತಿರಬೇಕು. ಅಂತೆಯೇ ಸತ್ಯಶರಣರಿಗಲ್ಲದೆ, ತತ್ವಜಿಜ್ಞಾಸುಗಳಿಗಲ್ಲದೆ ಸ್ಫಟಿಕದ ಘಟದೊಳಹೊರಗೆ ಬೆಳಗುತ್ತಿರುವ ಕಾಂತಿಯಂತೆ ವಚನ ಸಾಹಿತ್ಯದಲ್ಲಿ ತುಂಬಿ ಸೂಸುತ್ತಿರುವ ಪ್ರಜ್ವಲಿಸುತ್ತಿರುವ ಆತ್ಮಜ್ಯೋತಿ ಸಾಧ್ಯವಾಗದು, ವೇದ್ಯವಾಗದು.

'ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು....' ಅದರಂತೆ ವಚನವ ಮಾಡುವರೆ ಸ್ವಾನುಭಾವವೇ ಮೊದಲು, ಅದೇ ಮೂಲಾಧಾರ, ಅದೇ ಮೂಲ ದ್ರವ್ಯವೆಂದು ಹೇಳಬಹುದು. ಇಂದ್ರಿಯ ಮುಖದಲ್ಲಿ ಬಾಹ್ಯಪ್ರಪಂಚದ ಅನುಭವವನ್ನು ಪಡೆಯಬಹುದು.

ಆದರೆ ಈ ಅನುಭವ ಸತ್ಯಾನುಭವ ಇಲ್ಲವೆ ಪ್ರತ್ಯಕ್ಷಾನುಭವವಲ್ಲವೆಂಬುದು ಸ್ಪಷ್ಟ. ಅಂತೆಯೇ ಇಂತಹ ಪರೋಕ್ಷಾನುಭವದಿಂದ ಹುಟ್ಟುವ ಜ್ಞಾನ ಸಂಭವ ಜ್ಞಾನವಾಗಬಹುದಲ್ಲದೆ ಸತ್ಯಜ್ಞಾನವೆಂದಿಗೂ ಆಗಲಾರದು. ಆದರೆ ಸ್ವಾನುಭಾವದ ಮಾತು ಹಾಗಲ್ಲ. ಅದು ಹೊರಗಣ್ಣನ್ನು ಮುಚ್ಚಿ ಒಳಗಣ್ಣು ತೆರೆದು ತನ್ನ ನಿಜವ ತಾನು ನೋಡುತ್ತದೆ. ಹೊರಗೆ ಹುಡುಕುತ್ತ ಹೋದರೆ ಎಲ್ಲಿಯೂ ದೊರೆಯದ ತನ್ನ ನಿಜ ತನಗೆ ಕರತಲದ ಆಮಲಕವಾಗುತ್ತದೆ. ಈ ನಿಜವನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಶರಣರು 'ಇಲ್ಲಿ ಐದಾನೆ ನೋಡಿರೇ ಶಿವದೇವನು, ಇಲ್ಲಿ ಐದಾನೆ ನೋಡಿರೇ ಮಹಾದೇವನು....' ಎಂದು ಹೇಳಿದ್ದಾರೆ. 'ಯುರೇಕಾ ಯುರೇಕಾ' ಎಂದು ಆರ್ಕಿಮೆಡಿಸ್‌ನು ತನಗೆ ತೋರಿದ ತತ್ವವನ್ನು ಆನಂದದಿಂದ ಉದ್‌ಘೋಷಿಸಿದಂತೆ ಶರಣರು ಅಸಾಧ್ಯವನ್ನು ಸಾಧಿಸಿ ಆನಂದದಿಂದ ಆ ತತ್ವವನ್ನು ಪ್ರಕಟಗೊಳಿಸಿದ್ದಾರೆ. ಇಂತಹ ಸ್ವಾನುಭಾವಿಗಳೇ ಒಳಗಣ ಆತ್ಮಜ್ಯೋತಿಯನ್ನು ಬೆಳಗಬಲ್ಲರಲ್ಲದೆ ಇದಿರಿಟ್ಟು ನೋಡುವ ಭಿನ್ನಜ್ಞಾನಿಗಳಿಗೆ ತಾನೆಂಬುದು, ತನ್ನ ನಿಜವೆಂಬುದು ಎಂದಿಗೂ ಕತ್ತಲೆಯೇ. ಪರಮ ಸತ್ಯವನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಶರಣರ ನುಡಿಗಡಣದಲ್ಲಿ ಈ ಅನುಭವವೆಂಬ ಅಮೃತವು ತುಂಬಿ ಹೊರಸೂಸುವಂತಿದೆ. ಈ ಸ್ವಾನುಭಾವ ಸುಧಾ ಸಾಗರದ ಗಾಂಭೀರ್ಯದಲ್ಲೆಲ್ಲ ಆತ್ಮಜ್ಯೋತಿಯ ಪ್ರಸನ್ನ ಪ್ರಭೆ ನಿಚ್ಚಳವಾಗಿ ಬೆಳಗುತ್ತಿವೆ. ಇಂತಹ ಬೆಳಗನೊಳಕೊಂಡ ವಚನ ಸಾಹಿತ್ಯದ ಸುಧಾಸಾರ ದೊರೆಯಬೇಕೆಂದಿದ್ದರೆ ಅದರ ರುಚಿಯನ್ನು ಗುರುತಿಸಬಲ್ಲ ನಾಲಗೆ ನಮ್ಮದಾಗ ಬೇಡವೇ ? ಹಗಲಿರುಳು ವಿಷಯದ ರಸವನ್ನೇ ತಿಂದು ತೇಗುತ್ತಿರುವ ನಾಲಗೆಗೆ ನಿರ್ವಿಷಯದ ಅನಿರ್ವಚನೀಯ ಸುಖಸಾರ ಸೊಗಸುವದೆಂತು? ನಾಯಿಗೆ ನಾರಿವಾಣವಪ್ಪುದೇ? ಗೂಗೆಗೆ ಬೆಳಗಪ್ಪುದೇ? ಈ ಮಾತನ್ನು ಚೆನ್ನಾಗಿ ಬಲ್ಲ ಪ್ರಭುದೇವರು :

> **ಪರವನರಿದ ಸತ್ ಪುರುಷರ ಸಂಗದಿಂದ ಶಿವಯೋಗದ ವಚನಾಮೃತವನು ಸದ್‌ಭಕ್ತಿಯುಳ್ಳ ಮಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ, ಮನೋಮುಖದಲ್ಲಿ ಹಾರೈಸಿ, ತೃಪ್ತಿಮುಖದಲ್ಲಿ ಸಂತೋಷವನೈದ ಬಲ್ಲಡೆ ಆ ಸುಖವು ಪರಿಣಾಮವನೊಡಗೂಡುವದು. ಹೀಗಲ್ಲದೆ ಸಂಸಾರ ವಿಷಯ ರಸವ ತನ್ನ ಹೃದಯ ಕೂಪದಲ್ಲಿ ತುಂಬಿಕೊಂಡಿಪ್ಪ**

> ಜೀವರುಗಳ ಕಾಯದಲ್ಲಿ ವಚನಾಮೃತವ ತುಂಬಿದಡೆ ಭಿನ್ನಘಟದಲ್ಲಿ ಉದಕವ ಹೊಯಿದಂತೆ ಕಾಣಾ ಗುಹೇಶ್ವರಾ.
>
> ವ. ಶಾ. ಸಾ., ಭಾ. ೮, ಪು. ೧೫೧

ಎಂದು ಹೇಳಿದ್ದಾರೆ. 'ಭವದುಃಖಿಗಳಿಗೆ ನಮ್ಮ ಶರಣರನುಭಾವ ವೇದ್ಯವಾಗದು' ಎಂದು ಬಸವಣ್ಣನವರೂ ನುಡಿದಿದ್ದಾರೆ.

ತನ್ನ ನಿಜದಲ್ಲಿ ತಾನೆಚ್ಚತ್ತು ತಾನು ಬೆಳಗಾದರೆ ವಿಶ್ವ ಬ್ರಹ್ಮಾಂಡವೆಲ್ಲ ಬೆಳಗಬಲ್ಲುದು. ತನ್ನ ನಿಜ ಮಲಗಿ ನಿದ್ದೆ ಹೋಗಿದ್ದರೆ ಸುತ್ತೆಲ್ಲ ಕತ್ತಲೆಯೆ! ತನ್ನ ತಾನರಿದರೆ ತಾನೇ ಪರತತ್ವ. ತನ್ನ ತಾ ಮರೆದರೆ ತಾನೇ ಭವ ಬಂಧನದಲ್ಲಿ ಸಿಕ್ಕ ಜೀವಾತ್ಮ. ಅಂತೆಯೇ ವಚನಕಾರರು ಮೇಲಿಂದ ಮೇಲೆ ಹೇಳುವುದು 'ಮರೆದು ಮಾನವನಾದ, ಅರಿದು ಶರಣನಾದ' ಎಂದು. ಈ ಮರವೆಯ ಮಾಯಾಸಕೀಲವೆಲ್ಲಿ? ಈ ಬಿಚ್ಚಬಾರದ ಕೀಲವನ್ನು ಬಿಚ್ಚಬಲ್ಲವರಾರು? ಈ ಕೀಲವನ್ನು ಹಾಕಿದವರಾದರೂ ಯಾರು? ಎಂಬ ಪ್ರಶ್ನೆಗೆ ಶರಣರು ಏಕ ಕಂಠದಿಂದ ಹೇಳುವ ಉತ್ತರ ಒಂದೇ. ತೆರಣಿಯ ಹುಳು ತನ್ನ ದೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ ಮರವೆಗೂ ಮಾನವನಿಗೂ ಬಿದ್ದ ಗಂಟು ತನ್ನ ನೇಹದ ಗಂಟೇ. ಈ ಗಂಟನ್ನು ಬಿಚ್ಚಬೇಕಾದರೆ ತಾನೇ ಬಿಚ್ಚಿಕೊಳ್ಳಬೇಕಲ್ಲದೆ ಬೇರೆ ಗತಿಯಿಲ್ಲ. ವಚನಕಾರರ ದೃಷ್ಟಿಯಲ್ಲಿ ವಿಶ್ವಕ್ಕೆಲ್ಲ ತನ್ನ ಕಾಯವೇ ಬೀಗ:

> ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮನಾಗಿ ಅರಿವೇ ಕೈಯಾಗಿ ಸ್ವಸ್ಥ ಘಟಕ್ಕೆ ಸ್ವಸ್ಥ ಕೈಗಳಿಂದ ಸಿಕ್ಕು ಹರಿವುದಲ್ಲದೆ ಮತ್ತೊಂದು ಕೈಯಿಕ್ಕಿ ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು?
>
> ಶೋ. ಮಾ. ವ. ೩೦., ಪು. ೯

ಬೆಳಗಿನ ಕೈಯಲ್ಲಿ ಕತ್ತಲೆ ತಾನಾಗಿ ಬಿಟ್ಟಂತೆ ಅರಿವಿನ ಕೈಯಲ್ಲಿ ಮರವೆ ತಾನಾಗಿ ಮಾಯವಾಗುವುದು. ಮರವೆ ಮಾಯವಾಗಿ ಅರಿವು ತಾನಾಗಿ ಬೆಳಗಿದರೆ ಆ ಆತ್ಮಜ್ಯೋತಿಯ ಬೆಳಗಿನಲ್ಲಿ, ಆ ಸುಜ್ಞಾನದ ಪ್ರಜ್ವಲಿಸುವ ಪ್ರಭೆಯಲ್ಲಿ ಭಾವ ಬೆಳಗಿ ನಿರ್ಭಾವವಾಗುತ್ತದೆ, ಮನ ಮಹವನಿಂಬುಗೊಂಡು ಉನ್ಮನವಾಗುತ್ತದೆ, ಅಂಗ ವಿಕಾರವೆಲ್ಲ ಸುಟ್ಟು ನಿರಂಗವಾಗುತ್ತದೆ. ಇಂತಹ ಶರಣನ ಅಂಗ ಲಿಂಗ, ಮನ ಲಿಂಗ, ಭಾವ

ಲಿಂಗ, ಅಂತರಂಗ ಬಹಿರಂಗವೆಲ್ಲ ಲಿಂಗ. 'ಜ್ಯೋತಿರ್ಮಯಲಿಂಗವ ಮುಟ್ಟಿದಾತ ಕೇವಲ ಜ್ಯೋತಿರ್ಮಯಲಿಂಗ.' ಲಿಂಗವೆಂದರೆ ಏನೋ ಎಂದು ಬೆದರಬೇಕಿಲ್ಲ. ಬೆಳಗಿನೊಳಗಣ ಬೆಳಗು ಮಹಾ ಬೆಳಗು ಲಿಂಗ. ಇಂತಹ ಲಿಂಗದ ಪ್ರಭೆಯಿಂದ ಪ್ರಜ್ವಲಿಸುವ ಶರಣರ ದೃಷ್ಟಿಗೆ ವಿಶ್ವಬ್ರಹ್ಮಾಂಡದ ನಿಜಸ್ವರೂಪದ ಸಾಕ್ಷಾತ್ಕಾರ ತಾನಾಗಿಯೇ ಆಗುತ್ತದೆ. ಅಂತೆಯೇ ವಚನಕಾರರು ಒತ್ತಿ ಹೇಳುವುದು 'ನಿನ್ನ ನೀ ತಿಳಿ' ಎಂದು. ತನ್ನ ನಿಜ ವಿಶ್ವದ ನಿಜ ಒಂದೆಂಬ ಮೇಲೆ ತನ್ನ ಆಳದಲ್ಲಿ ವಿಶ್ವದ ಆಳ ತಿಳಿಯದಿರಲೆಂತು?

> ...ಘನ ಗಂಭೀರ ಮಹಾವಾರುಧಿಯಲ್ಲಿ ವಿಶ್ವವನರಿದು ನೋಡಲು
> ಚಿಮ್ಮಲಿಗೆಯ ಚೆನ್ನರಾಮನೆಂಬಲಿಂಗ ಬೇರಿಲ್ಲ.
>
> ಚಂ. ವ. ೧

ಅಂತೆಯೇ ಶರಣಮಾರ್ಗದ ಪ್ರಕರಣ ಪ್ರಾರಂಭವಾಗುವುದು ತನ್ನಿಂದ. ಇಲ್ಲಿ ವೇದ ಶಾಸ್ತ್ರ ಸೂತ್ರ ಭಾಷ್ಯಾದಿಗಳಿಗೂ ಶರಣರಿಗೂ ಇರುವ ಭೇದ ಒಮ್ಮೆಲೆ ಒಡೆದು ಮೂಡುತ್ತದೆ. ವೇದಶಾಸ್ತ್ರಾದಿಗಳಲ್ಲಿ ಬ್ರಹ್ಮವೇ ಪ್ರಥಮ ಪ್ರಕರಣವಾಗುತ್ತದೆ. ಶರಣರಿಗೆ ಪಿಂಡಸ್ಥಲ ಮೊದಲು. ವೈದಿಕ ಸಾಂಪ್ರದಾಯಕ್ಕೆ 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಸೂತ್ರ ಮೊದಲು. ನಿಜವು ಎಲ್ಲರ ಕೈಗೆ ನಿಲುಕಲೆಂಬ ಭಾವನೆಯಿಂದಲೇನೋ ಶರಣರು

> ನಿಮ್ಮಲ್ಲಿ ನೀವು ತಿಳಿದು ನೋಡಿರೆ ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿಯೇ ತದ್ಗತವಾಗಿದೆ. ಅನ್ಯಭಾವವ ನೆನೆಯದೆ ತನ್ನೊಳಗೆ ತಾನೇ ಎಚ್ಚರವಿರಬಲ್ಲರೆ ತನ್ನಲ್ಲಿಯೇ ತನ್ಮಯ ಗುಹೇಶ್ವರ ಲಿಂಗವು.
>
> ಪ್ರ. ವ., ಪು. ೧೮೩

ಎಂದು ಹೇಳುವುದು. ಅಂತೆಯೇ ಬಸವಣ್ಣನವರು ಶರಣರನ್ನು 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರು' ಎಂದು ಹಾಡಿ ಹರಸಿದರು.

ತನ್ನಲ್ಲಿ ತಾನೆಚ್ಚತ್ತು ಕಂದೆರೆದು ನೋಡಿ ವಿಶ್ವವೇ ತಾನಾದ ನಿಬ್ಬೆರಗಿನಲ್ಲಿ ನಿಂದು, ಎಲ್ಲಿ ಇಣಿಕಿದರೂ, ತಿಣಿಕಿ ನೋಡಿದರೂ ತನ್ನನಗಲಲೆಡೆ ಇಲ್ಲ ಎಂದರಿದು ವಿಶ್ವದ ತಳ ಬುಡವೆಲ್ಲ ತಾನೇ, ವಿಶ್ವದಾಚೆ ಅತ್ತತ್ತ ತಾನೇ, ಎಡ ಬಲ ತಾನೇ, ಒಳ ಹೊರಗು ತಾನೇ ಎಂದು ಎಲ್ಲೆಲ್ಲಿ ನಿಶ್ಚಿಂತ ನಿವಾಸಿಯಾಗಿದ್ದುದೇ ಶರಣನ ಸುಜ್ಞಾನ. ಈ ಸುಜ್ಞಾನ ಸ್ವಾನು

ಭಾವದ ಸ್ವಾದು ರುಚಿ ಪರಮ ಪ್ರಕಾಶ. ಆದರೆ ವಚನ ಸಾಹಿತ್ಯದಲ್ಲಿ ಒಳ ಹೊರಗೆ ಬೆಳಗುವ ಈ ದಿವ್ಯ ಪ್ರಕಾಶವನ್ನು ನೋಡಿ ಪರಮಾನಂದದ ಪರಮಾಶ್ಚರ್ಯದಲ್ಲಿ ಕಣ್ಣು ಮುಚ್ಚಿ ಮುಂದೇನಿದೆ ಎಂದು ತಣ್ಣಗೆ ಕೂತು ಕೊಂಡರೆ ವಚನ ಸಾಹಿತ್ಯಕ್ಕೆ ಒಂದು ಬಗೆಯ ಅನ್ಯಾಯ ಮಾಡಿದಂತೆಯೇ! ಏಕೇದರೆ ಚೈತನ್ಯಪೂರ್ಣವಾದ ಸತ್‌ಕ್ರಿಯಾಶಕ್ತಿ ಸುಜ್ಞಾನಕ್ಕಿರದಿದ್ದರೆ ಅದೊಂದು ಮೇಲುಮಟ್ಟದ ಅಜ್ಞಾನವೇ ಆಗುವ ಸಂಭವವಿದೆ. ಈ ತೆರನಾದ ಅಜ್ಞಾನಕ್ಕೆ, ಅಪೂರ್ಣ ಜ್ಞಾನಕ್ಕೆ ವಚನ ಸಾಹಿತ್ಯದಲ್ಲಿ ಆಸುವಿಲ್ಲ. ಕ್ರಿಯೆಯಿಲ್ಲದ ಜ್ಞಾನ ಅಟ್ಟೆಯಿಲ್ಲದ ತಲೆಯಂತೆ, ಜ್ಞಾನವಿಲ್ಲದ ಕ್ರಿಯೆ ತಲೆಯಿಲ್ಲದ ಅಟ್ಟೆಯಂತೆ. ಅಟ್ಟೆಯಿಲ್ಲದ ತಲೆ ನಡೆದು ತನ್ನ ಗೊತ್ತನ್ನು ಮುಟ್ಟಬಲ್ಲುದೆ? ತಲೆಯಿಲ್ಲದ ಅಟ್ಟೆ ತನ್ನ ಹಾದಿಯನ್ನು ಕಂಡುಕೊಳ್ಳಬಲ್ಲುದೆ? ಒಂದನ್ನು ಬಿಟ್ಟೊಂದಕ್ಕೆ ಗತಿಯಿಲ್ಲ, ಮತ್ತೊಂದಕ್ಕೆ ಮತಿಯಿಲ್ಲ:

> ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯ. ಅದು ಹೇಗೆಂದಡೆ ದೇಹವಿಲ್ಲದ ಪ್ರಾಣಕ್ಕೆ ಆಶ್ರಯ ಉಂಟೇ ಅಯ್ಯ? ಆ ಪ್ರಾಣವಿಲ್ಲದ ಕಾಯಕ್ಕೆ ಚೈತನ್ಯ ಉಂಟೇ ಅಯ್ಯ? ಕ್ರಿಯೆಯಿಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ ಜ್ಞಾನವಿಲ್ಲದೆ ಕ್ರಿಯೆಗೆ ಆಶ್ರಯವಿಲ್ಲ. ಕ್ರಿಯಾಜ್ಞಾನಪ್ರಕಾಶವಿಲ್ಲದೆ ಲಿಂಗಕ್ಕಾಶ್ರಯವಿಲ್ಲ. ಇದು ಕಾರಣ ಜ್ಞಾನ ಕ್ರಿಯೋಪಚಾರಗಳಿರಬೇಕೆಂದನಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.
>
> ವ. ಶಾ. ಸಾ., ಭಾ. ೧ ಪು. ೪೯೪

ರತ್ನದ ಕಾಂತಿ ರತ್ನಶಿಲೆಯನಾಶ್ರಯಿಸಿ ಬೆಳಗುವಂತೆ ಸುಜ್ಞಾನದ ಪ್ರಭೆ ಸತ್‌ಕ್ರಿಯಾರೂಪ ಮೂರ್ತಿಯಾಗಿ ತೊಳಗಿ ಬೆಳಗುತ್ತದೆ. ದಿವ್ಯಜೀವನ ಪಥದಲ್ಲಿ ಆತ್ಮವೆಂಬ ಹಕ್ಕಿ ಹಾರುವುದು ಕ್ರಿಯಾಜ್ಞಾನಗಳೆಂಬ ಎರಡು ಪಕ್ಕಗಳಿಂದ. ಪಕ್ಕ ಒಂದೇ ಇದ್ದು, ಅದು ಎಷ್ಟೇ ಬಲವಾಗಿದ್ದರೂ ಹಕ್ಕಿ ಹಾರಲಿಲ್ಲ, ದಾರಿ ಸಾಗಲಿಲ್ಲ. ಆದ್ದರಿಂದಲೇ ವಚನ ಸಾಹಿತ್ಯದಲ್ಲಿ ಯಾವುದೇ ಮಾತು ಎಷ್ಟೇ ಮಹೋನ್ನತವಾದ ಜ್ಞಾನದಿಂದ ಪ್ರಜ್ವಲಿಸುತ್ತಿದ್ದರೂ, ಎಂತಹ ನಿರ್ವಿಶೇಷಾನಂದವನ್ನು ಕೊಡುವಂತಿದ್ದರೂ ಆ ಆನಂದಜ್ಯೋತಿ ಆ ಪ್ರಶಾಂತ ಪ್ರಭೆ, ನಿತ್ಯ ಚೈತನ್ಯಮಯವಾಗಿದೆ ಎಂಬುದು ಎಂದೂ ಮರೆಯಬಾರದ ಮಾತು. ಅಂತೆಯೇ ವಚನ ಸಾಹಿತ್ಯವನ್ನು ಓದುವಾಗ 'ಎಂತ ಚೆಂದ ಮಾತು? ಎಷ್ಟು ಹೊಳೆಯುತ್ತದೆ!' ಎಂದು ವಿಸ್ಮಯಸಾಗರದಲ್ಲಿ

ಮುಳುಗುವುದಕ್ಕಿಂತ 'ಶರಣರ ನುಡಿ ಚೆನ್ನ, ಅವರ ನಡೆ ಚೆನ್ನ, ಇದೆಂತೊ?' ಎಂದು ನಿಬ್ಬೆರಗು ಬಾಯಿ ಮುಚ್ಚಬೇಕು.

ಸ್ವಾನುಭಾವದ ಉದಯವೇ ಚೈತನ್ಯ ಪರಿಪೂರ್ಣವಾದ ಸುಜ್ಞಾನ ಪ್ರಭೆಗೆ ಮೂಲ. ಈ ಚೈತನ್ಯ ಪ್ರಭೆಯೇ ಸತ್‌ಕ್ರಿಯೆಗೆ, ಸದ್ವರ್ತನಕ್ಕೆ, ಸದಾಚಾರಕ್ಕೆ ಮೊದಲು. ದಿವ್ಯ ಜೀವನದಲ್ಲಿ ಸುಜ್ಞಾನ ಸತ್‌ಕ್ರಿಯೆಗಳು ಸಮನ್ವಯವಾಗಿ ಸಮರಸವಾಗಿ ಹರಿವಂತೆ ನಡೆ ಮತ್ತು ನುಡಿ ಇವೂ ಸಮರಸವಾಗಿಯೇ ಸಾಗುತ್ತವೆ. ಲಿಂಗ ಮುಂತಾಗಿ ನಡೆವ ಶರಣ ಜೀವನದಲ್ಲಿ ನುಡಿಯೂ ಲಿಂಗ ಮುಂತಾಗಿಯೇ ನುಡಿಯುತ್ತದೆ. ನುಡಿಯ ಸಾರ್ಥಕ್ಯ ನಡೆಯಲ್ಲಿ. ನುಡಿಯಂತೆ ನಡೆಯದಿದ್ದರೆ, ನಡೆಯಂತೆ ನುಡಿಯದಿದ್ದರೆ ದಿವ್ಯ ಜೀವನದಲ್ಲಿ ಅದೊಂದು ದೊಡ್ಡ ಕುಂದು, ತುಂಬಿ ಬಾರದ ಕೊರತೆ. ಅಂತಹ ಜೀವನ ಅಪಕ್ವ ಜೀವನ, ಅಪೂರ್ಣ ಜೀವನ. 'ನುಡಿಯಲ್ಲಿ ಭಕ್ತಿಯ ನಾಡಿ ನಡೆಯಲ್ಲಿಲ್ಲದಿರ್ದರೆ ಕಡೆ ಮುಟ್ಟ' ಎಂಬುದೇ ಶರಣರ ನಿರ್ಧರಸೂತ್ರ. ಇದೇ ಮಾತು 'ನುಡಿದಂತೆ ನಡೆ, ಇದೇ ಜನ್ಮ ಕಡೆ' ಎಂಬ ನಾಣ್ನುಡಿಯಲ್ಲಿಯೂ ಪ್ರತಿಫಲವಾಗಿದೆ. ಆದರೆ ಈ ಮಾತು ಸಾಮಾನ್ಯವಾಗಿ ಲೌಕಿಕ ಸಾಹಿತ್ಯಕ್ಕೆ ಸಮನ್ವಯವಾಗುವದಿಲ್ಲ. ಇಲ್ಲಿ ನಡೆನುಡಿಗಳ ಸಾಮರಸ್ಯದ ಅವಶ್ಯಕತೆ ಇಲ್ಲ. ಕವಿ ಕಾವ್ಯ ರಚಿಸಲಿ, ನಾಟಕಕಾರ ನಾಟಕ ಬರೆಯಲಿ, ಕತೆಗಾರ ಉತ್ತಮ ಕತೆ ಬರೆಯಲಿ, ಕವಿ ನಾಟಕಕಾರ ಇಲ್ಲವೆ ಕತೆಗಾರ ಇವರು ನಡೆ ನುಡಿಗಳ ಸಾಮರಸ್ಯದ ಸೂತ್ರದಿಂದ ಬದ್ಧರಲ್ಲ. ಇವರ ನಡೆ ನುಡಿ ಸಮರಸವಾಗಿದ್ದರೆ ಲೌಕಿಕ ಸಾಹಿತ್ಯವೂ ದಿವ್ಯ ಸಾಹಿತ್ಯವಾಗಿ ಬೆಳಗಬಹುದೇನೊ! ಆದರೆ ವಚನಕಾರರು ಈ ಪರಮ ಪವಿತ್ರವಾದ ನೀತಿಯ ಸೂತ್ರವನ್ನು ಎಂದೂ ಬಿಟ್ಟಿರುವಂತಿಲ್ಲ. ಅಂತೆಯೇ ವಚನ ಸಾಹಿತ್ಯದಲ್ಲಿ ಶರಣರ ಜೀವನ ಸರ್ವಸ್ವ ಇದ್ದಕ್ಕಿದ್ದಂತೆ ಪಡಿಮೂಡುತ್ತದೆ. ಜೀವನದ ಸಹಜ ಭಾವ ಸಾಹಿತ್ಯದಲ್ಲಿ ನೈಜವಾಗಿ ಒಡೆದು ಮೂಡುತ್ತದೆ. ಸಾಮಾನ್ಯವಾಗಿ ಜೀವನಕ್ಕೂ ಸಾಹಿತ್ಯಕ್ಕೂ ನಡುವಿರುವ ಆಳವಾದ ಅಗಳತ ಇಲ್ಲಿ ಬಾಯಿ ಮುಚ್ಚಿ ಮಾಯವಾಗುತ್ತದೆ. ನುಡಿಯಬಹುದು ಒಂದು ಕೋಟಿ ಕಾವ್ಯವನ್ನು ಆದರೆ ಒಮ್ಮೆಯಾದರೂ ನಡೆಯಬಹುದೇ ಕಾವ್ಯ ಜೀವನವನ್ನು? ಅಂತೆಯೇ ವಚನಕಾರರು ಹೇಳುವುದು: 'ಕವಿತ್ವ ಸಾಧಕರೆಲ್ಲ ಕಳವಳ ಹೋದರು,...' ಎಂದು.

ಲೌಕಿಕ ಸಾಹಿತ್ಯದ ಮಾತು ಎಂತೇ ಇರಲಿ, ಆ ಸಾಹಿತಿಗಳ ಜೀವನ ಹೇಗೇ ಇರಲಿ, ನಡೆ ನುಡಿಗಳ ಸಾಮರಸ್ಯ ಇಲ್ಲಿ ತೋರದಿದ್ದರೆ ಆ ಸಾಹಿತ್ಯವನ್ನು ಆ ಜೀವನವನ್ನು ಅಕ್ಷಮ್ಯವೆಂದು ಅಲ್ಲಗಳೆಯಬೇಕಿಲ್ಲ. ಈ ತರಹದ ನಿರ್ಬಂಧವನ್ನು ಹಾಕಿಕೊಂಡೂ ಇಲ್ಲ. ಅವು ಈ ನಿರ್ಬಂಧ ನಮಗಿದೆ ಎಂಬ ಆಡಂಬರವನ್ನೂ ಅವು ಮಾಡುವದಿಲ್ಲ. ಆದರೆ ಈ ತರಹದ ಕಟ್ಟು ನಿಟ್ಟು ತತ್ವಜ್ಞಾನಕ್ಕೆ ಬೇಡವೇ? ಬ್ರಹ್ಮಜ್ಞಾನಿಗಳೆಂದು ಹೇಳಿಕೊಂಡು ಆ ಪರಮ ಜ್ಞಾನಕ್ಕೆ ವಿಪರೀತವಾದ ಆಚರಣೆ ತೋರಿದರೆ ಮುಂದೇನು? ನಡೆಯಲ್ಲಿ ಒಡಮೂಡದ ಬ್ರಹ್ಮ ನುಡಿಯಲ್ಲಿ ತಾನೇಕೆ? ಇಂತಹ ವಾಗದ್ವೈತಿಗಳು ಜಿವ್ಹಾ ಲಂಪಟಕ್ಕಾಗಿ, ಜಿವ್ಹೆಯ ಕೊನೆಯಲ್ಲಿ ನುಡಿವರಲ್ಲದೆ ಇವರ ಜ್ಞಾನವೇ ಗಟ್ಟಿಗೊಂಡು ನುಡಿಯಾಗಿಲ್ಲ. ಇಂತಹ ನುಡಿ ಮಾತಿನ ಮಾಲೆ, ಬುದ್ಧಿಯ ಜಾಲ, 'ಬಾಯ ಬ್ರಹ್ಮವ ನುಡಿದನುಭವವಿಲ್ಲದ ಮಾಯಾ ಮೋಹಿಗೆ ಮೋಕ್ಷವೆಂದೆಂದಿಗಹುದೇ?' ಬ್ರಹ್ಮ ನಾನೆಂದು ಭ್ರಮೆಗೊಂಡರಲ್ಲದೆ ಅವರಿಗೆ ನಿಜಜ್ಞಾನವಳವಡಲಿಲ್ಲ. ನಿಜ ಜ್ಞಾನವಿಲ್ಲದ ಮಾತೆಲ್ಲ ಕತ್ತಲೆ. ಈ ಮಾತಿನ ಕತ್ತಲೆಯಲ್ಲಿ ಮರೆದು ತಿರುಗುವ ವಾಗದ್ವೈತಿಗಳನ್ನು ಶರಣರು ಮೇಲಿಂದ ಮೇಲೆ ಖಂಡಿಸುವರಲ್ಲದೆ 'ವಾಗದ್ವೈತ ನಿರಸನ' ವೆಂಬ ಒಂದು ಸ್ಥಲವನ್ನೇ ಹೇಳಿದ್ದಾರೆ. ನಡೆವ ಶಕ್ತಿ ನುಡಿಗಿರದಿದ್ದರೆ ಆ ವ್ಯರ್ಥ ನುಡಿಯೇಕೆ? 'ಸತ್ವಕ್ಕೆ ತಕ್ಕ ಹೊರೆಯಲ್ಲದೆ ಮತ್ತೀದ ಮಾತಂಗವ ಹೊರಬಹುದೇ?' ತಲೆಗೆ ತಿಳಿದಂತೆ, ಬಾಯಿಗೆ ಬಂದಂತೆ, ನುಡಿವುದಾದರೆ ಒಂದು ಕೋಟಿ ನುಡಿಯಬಹುದು:

> 'ನುಡಿಯಬಹುದು ಒಂದು ಕೋಟಿ ವೇಳೆ ಅದ್ವೈತವನು, ನಡೆಯ
> ಬಹುದೇ ಸದ್ಭಕ್ತ ಸದಾಚಾರವನು ಒಮ್ಮೆ ನಿರ್ಧಾರವಾಗಿ?'
> 'ವಿಷಯದಲ್ಲಿ ದುರ್ಗ ಇಲ್ಲವೆಯ ನುಡಿವ ಹಿರಿಯರಿಗೆ ಲಿಂಗದ ಮಾತೇಕೊ?'

ವಿಷಯ ಸುಖದಲ್ಲಿ ಲೋಲಾಡುವ ತನು ಮನ ಭಾವದಲ್ಲಿ ಸಚ್ಚಿದಾನಂದ ನೆಲೆಯಾಗಿ ನಿಲ್ಲಬಹುದೇ? ವಿಷಯದ ಮಾಲಿನ್ಯದಲ್ಲಿ ನಿತ್ಯನಿರಂಜನ ಲಿಂಗ ಬೆಳಗಬಲ್ಲುದೇ? "ಸೋಹಂ" "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ತತ್ವ ದಿಟವಾದರೆ, ತನು ಮನ ಭಾವವೆಲ್ಲ ಬ್ರಹ್ಮವಾಗಿದ್ದರೆ ಇವರ ಪ್ರವೃತ್ತಿ ವಿಷಯದೆಡೆಗೇಕೆ? ವಿಷಯ ಸುಖದಡಿಯಾಳಾಗಿ ಹುಸಿ ವೇಷವನ್ನು ಹೊತ್ತು ಬಾಯ ಬ್ರಹ್ಮವನ್ನು ನುಡಿವವರು ಇಹದಲ್ಲಿಯೂ ಸಲ್ಲಲಿಲ್ಲ, ಪರದಲ್ಲಿಯೂ ಸಲ್ಲಲಿಲ್ಲ. ಇಂಥವರ

ನುಡಿ-ಕಿಡಿಯಾಗಿರಬಹುದು. ತತ್ವ ಘನವಾಗಿರಬಹುದು, ಲೋಕದ ಮಾನವರು ಮೆಚ್ಚಿ ತಲೆದೂಗಬಹುದು. ಆದರೆ ಇದೆಲ್ಲ ಏನು ಬಾತೆ?

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ?
ಬ. ವ., ಪು. ೧೨೨

ಶರಣರು ಎಂದಿಗೂ ನುಡಿಯಲ್ಲಿ ನಡೆಯನ್ನು ಪೂರೈಸಿದ್ದಾರೆ. ನಡೆಯನ್ನೇ ನುಡಿದಿದ್ದಾರೆ. ಅಂತೆಯೇ ಅವರ ನುಡಿ ಅವರ ಬಾಳಿನ ಕೈಪಿಡಿ, ತೊಳಗಿ ಬೆಳಗುವ ಅವರಂತರಂಗದ ಬೆಳಗುಗನ್ನಡಿ. ಅವರು ನುಡಿದುದೆಲ್ಲ ಲಿಂಗ. ನಡೆದುದು ಅದೂ ಲಿಂಗ. ತನ್ನ ತಾನರಿದು ನುಡಿದುದೆಲ್ಲ ಪರತತ್ವ, ನಡೆದುವೆಲ್ಲ ಪರಮ ಪಥ. ಅಂತೆಯೇ ಮಾತೆಂಬುದು ಜ್ಯೋತಿರ್ಲಿಂಗ. ವಚನ ಸಾಹಿತ್ಯವನ್ನು ಓದುವಾಗ ಈ ಮಾತನ್ನೆಂದಿಗೂ ಮರೆಯಕೂಡದು. ಇದರ ಮರಹು ಮನದಲ್ಲಿದ್ದರೆ ವಚನ ಸಾಹಿತ್ಯದಲ್ಲಿ ಗೌಪ್ಯವಾಗಿ ಹುದುಗಿರುವ ಜ್ಯೋತಿರ್ಲಿಂಗದ ಸಾಕ್ಷಾತ್ಕಾರವಾಗಲಿಲ್ಲ, ವಚನ ಸಾಹಿತ್ಯದ ನಿಜದ ನೆಲೆ ನಮಗೆ ಹತ್ತಲಿಲ್ಲ.

'ಉತ್ತಮದ ತೃಣ ಮೊದಲಾದುವೆಲ್ಲವು ಜ್ಯೋತಿಯ ಮುಟ್ಟಿ ಜ್ಯೋತಿಯಪ್ಪುವು ಕೇಳಿರೇ.' ಆದರಂತೆ ಲಿಂಗಜ್ಯೋತಿಯನ್ನು ಮುಟ್ಟಿದ ಶರಣರ ಮಾತೆಲ್ಲ ಜ್ಯೋತಿಯಾಗಿ ಬೆಳಗುತ್ತಿದೆ. ಇಂತಹ ಮಾತು ತನ್ನ ಪೂರ್ವಾಶ್ರಯವನ್ನು ಕಳೆದು ಪುನರ್ಜಾತವಾಗಿದೆ. ಅಂತೆಯೇ ಶರಣರ ಮಾತು ಒಂದು ಮಾತಲ್ಲ. "ಒಂದು ಮಾತೆನ್ನಬಹುದೇ ಶಬ್ದಸಾರಾಯವನು?" ಇದೇ ವಿಚಾರವನ್ನು ಸಿದ್ಧರಾಮಯ್ಯನವರು ಸ್ಪಷ್ಟವಾಗಿ ಕೆಳಗಿನ ವಚನದಲ್ಲಿ ಹೇಳಿದ್ದಾರೆ:

ವಚನಾನುಭವ ವಾಗ್ರಚನೆಯಲ್ಲ ಮನವೆ! ವಚನಾನುಭವ ವಚೋನ ಎಂಬುದದು ಶ್ರುತಿಸಿದ್ಧ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.
ಸಿ. ವ. ೪೪೩, ಪು. ೭೬

ಶರಣರ ವಚನ ಎಂದರೆ ಮಾತು ಅಲ್ಲ ಎಂಬುದೇ ವಚನಕ್ಕೆ ನಿರ್ವಚನ. ಮಾತಲ್ಲದಿದ್ದರೆ ಮತ್ತೇನು ಎಂದು ಕೇಳಿದರೆ ಶರಣರ ಮಾತಿನಲ್ಲಿ 'ಮರವೆಯ

ಮಾಯೆಯಿಲ್ಲ, ನಿಜದರುವಿನ ತಿರುಳಿದೆ' ಎಂಬುದೇ ಶರಣರ ಉತ್ತರ. ತನ್ನ ತಾನರಿದರೆ ನುಡಿಯೆಲ್ಲ ಪರತತ್ವವಲ್ಲವೇ? ತನ್ನ ತಾ ಮರೆದರೆ ನುಡಿಯೆಲ್ಲ ಮಾಯೆಯಲ್ಲವೇ? ಎಂಬುದೇ ಶರಣರ ಆತ್ಮವಿಶ್ವಾಸ. ಶರಣರ ನುಡಿಗಡಣವಾದ ವಚನ ಸಾಹಿತ್ಯದಲ್ಲಿ ಹೊರಗಣ ಹೊದಿಕೆಯಾದ ಶಬ್ದವನ್ನೆತ್ತಿದರೆ ತೋರುವುದೇನು? ಮತ್ತೇನು? ಲಿಂಗ ಸಾರಾಯರಾದ ಶರಣರ ಸರ್ವಾಂಗದಲ್ಲಿ ತುಂಬಿ ತುಳುಕುತ್ತಿರುವ ಸ್ವಯಂಜ್ಯೋತಿ ಲಿಂಗ. ತಿಳಿದುಪ್ಪ ಹೆರೆದುಪ್ಪವಾದಂತೆ ಈ ಸ್ವಯಂಜ್ಯೋತಿ ಲಿಂಗವೇ ಗಟ್ಟಿಗೊಂಡು ಗುರುಲಿಂಗಕ್ಕೆ ಅಂಗವಾದ ನಾಲಗೆಯಲ್ಲಿ ಮಾತಾಗಿ ರೂಹುಗೊಂಡಿದೆಯಲ್ಲದೆ ಬೇರಲ್ಲ. ಶರಣರ ಮನದ ಕೊನೆಯನೆತ್ತಿದರೆ ಲಿಂಗವ ಗೊಂಚಲನ್ನು ಕಾಣಬಹುದೆಂತೋ ಅಂತೆ ಶರಣರ ನುಡಿಗಡಣದ ಬೆಡಗು ಬಿನ್ನಾಣವನ್ನೆತ್ತಿದರೆ ಲಿಂಗದ ಗೊಂಚಲೇ ಕಾಣಬಹುದಲ್ಲವೇ? 'ಬಹುದೆಂ'ಬ ಸಂದೇಹ ಬೇಡವೆಂದು ಎಚ್ಚರ ಕೊಟ್ಟಿದ್ದಾರೆ ಬಸವಣ್ಣನವರು:

> ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದಲ್ಲದೆ ಮತ್ತೆಲ್ಲಿಯೂ ಕಾಣಬಾರದು. ಭಕ್ತದೇಹಿಕ ದೇವ ಅನಿಮಿಷನಾಗಿ ಕೂಡಲಸಂಗಮದೇವ ಭಕ್ತರ ನುಡಿಯ ನಡುವೆ ರಾಶಿಯಾಗಿಪ್ಪನು. ಬ. ವ., ಪು. ೨೬

ಲಿಂಗಲೀಲಾವಿಲಾಸಚಾರಿತ್ರದಲ್ಲಿ ಈ ವಚನದ ತಾತ್ಪರ್ಯಾರ್ಥವನ್ನು ಕಲ್ಲುಮಠದ ಪ್ರಭುದೇವರು ಹೀಗೆ ಹೇಳುತ್ತಾರೆ:

> ತೆಱಹು ಮಱಹುಗಳಿಲ್ಲದೆ ಅಖಂಡ ಜ್ಞಾನದೃಕ್ಕುಳ್ಳ ಲಿಂಗವು ಭಕ್ತನ ಸರ್ವಾಂಗದಲ್ಲಿ ಪರಿಪೂರ್ಣನಾಗಿಪ್ಪನು. ಅಂತು ಭಕ್ತನು ಸರ್ವಾಂಗಲಿಂಗಮಯವಾಗಿಪ್ಪನಾಗಿ ಆ ಸದ್‌ಭಕ್ತನು ತಾನನುಭವಿಸುತ್ತಿರ್ದ ಲಿಂಗಾನುಭಾವ ವರ್ತನೆಯ ನುಡಿಯಲು ಆ ನುಡಿದ ವಚನಂಗಳೆಲ್ಲ ಲಿಂಗದ ಸಮ್ಯಜ್ಞಾನಪ್ರಕಾಶ. ಅಂತಪ್ಪ ಸಮ್ಯಜ್ಞಾನ ಪ್ರಕಾಶವೆಲ್ಲ ಲಿಂಗವೆಯಾಗಿಪ್ಪ ಕಾರಣ ಸದ್‌ಭಕ್ತರು ನುಡಿದ ವಚನ ಪ್ರಮಾಣಂಗಳಿಂದ ಆಱಾದಾತಂಗೆ ಲಿಂಗಪದವು ಸಾಧ್ಯವಹುದಲ್ಲದೆ ಮಿಕ್ಕಿನ ವೇದಾಗಮಂಗಳಿಂದ ಸಾಧಿಸಿದೆನೆಂಬವರಿಗೆ ಲಿಂಗವು ಸಾಧ್ಯವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.
>
> ಲಿಂ. ಲೀ. ವಿ. ಚಾ.

ನಿಜದ ನಿಲವನರಿಯ ಬೇಕಾದರೆ, ನಿಜಸುಖದ ಸಾಗರದಲ್ಲಿ ನಲಿದಾಡಬೇಕಾದರೆ, ಶಿವಾನುಭಾವಿಗಳಾದ ಲಿಂಗಸುಖದ ಸುಗ್ಗಿಯೊಳಗೆ

ಓಲಾಡುತ್ತಿರುವ ಶರಣರ ನುಡಿಗಡಣದಲ್ಲಿ ಹೊಳೆ ಹೊಳೆವ ಬೆಳಗನರಿದು ಅನುಭವಿಸಬೇಕಲ್ಲದೆ ವೇದ ಆಗಮ ಪುರಾಣ ಶಾಸ್ತ್ರ ಮೊದಲಾದವನ್ನೋದಿದರೆ ತನ್ನ ನಿಜವ ತಾನೆಂದಿಗೂ ಅರಿಯಬಾರದೆಂಬುದು ಶರಣರ ಸ್ಪಷ್ಟ ಅಭಿಪ್ರಾಯ. ಈ ಅಭಿಪ್ರಾಯ ನಿಷ್ಠುರವಾಗಿ ತೋರಿದರೂ ಇದರಲ್ಲಿ ಸತ್ಯಾಂಶ ಬಹಳದೆ. ವೇದಾಗಮಾದಿಗಳನ್ನೋದುವುದೇತಕ್ಕೆ ? ತನ್ನ ನಿಜವನರಿವುದಕ್ಕಲ್ಲವೇ ? ಈ ನಿಜದ ನಿಲವನ್ನು ವೇದಾಗಮಾದಿಗಳು ಭೇದಿಸಿವೆಯೇ ಸಾಧಿಸಿವೆಯೇ ? ವೇದಾಗಮಗಳನ್ನೋದಿದವರು ಲಿಂಗವನ್ನು ಒಲಿಸಿದುದುಂಟೇ ? ನಿಜದ ನೆಲೆಯನ್ನು ಕಂಡುದುಂಟೇ ?

ವೇದವನೋದಿದವರು ಲಿಂಗವನೊಲಿಸಿದುದ ತೋರಿರೋ ?

ಎಂದು ಬಸವಣ್ಣನವರು ಆರ್ಭಟಿಸಿ ಕೇಳುತ್ತಾರೆ. ವೇದ ಶಾಸ್ತ್ರಾಗಮಗಳು ಮಾತಿನ ಮಥನ, ಶಬ್ದ ಜಾಲ, ಗೆಲ್ಲ ಸೋಲಕ್ಕೆ ಹೋರುವ ಗೆಲ್ಲಗೂಳಿತನ. ಮಾತಿಗೆ ಮಾತು ಕಲಿತು, ನುಡಿಗೆ ನುಡಿಯ ಕಲಿತು, ಮಾತಿನಲ್ಲಿ ಮಾಯಾಜಾಲವ ಹೆಣೆಯಬಹುದಲ್ಲದೆ ಜ್ಞಾನದ ನೆಲೆಯ ತೆಗೆದಿರಿಸಬಹುದೇ ತರ್ಕ ಶಾಸ್ತ್ರಗಳು? ಆಗಮಗಳು ಆಚಾರವನ್ನು ಹೇಳಬಹುದಲ್ಲದೆ ಅಂತರಂಗದ ಆಗಮಮೂರ್ತಿಯನವೆತ್ತ ಬಲ್ಲವು? ನಿಜದ ನಿಲವು ಬಯಲೊಳಗಣ ಬಯಲು ಮಹಾಬಯಲು, ಬೆಳಗಿನೊಳಗಣ ಬೆಳಗು ಮಹಾ ಬೆಳಗು ಅದು 'ಅಣೋರಣೀಯಾನ್ ಮಹತೋ ಮಹೀಯಾನ್.' ಬಯಲೇ ಸೆಜ್ಜೆಯಾಗಿ ಬೆಳಗುವ ನಿರಾಳಲಿಂಗದ ನಿಲವನ್ನು ವೇದ ವೇಧಿಸಲಿಲ್ಲ, ಶಾಸ್ತ್ರ ಸಾಧಿಸಲಿಲ್ಲ, ಪುರಾಣ ಪೂರೈಸಲಿಲ್ಲ.

> ವೇದಂಗಳು ನಿಜವ ಬಲ್ಲಡೆ, ವೇದಜ್ಞರು ಮರೆಯಲೊಲ್ಲದೆ ಚೆನ್ನಯ್ಯ ಕಕ್ಕಯ್ಯಂಗಳು ಮರೆಯಲೇಕೆ? ಶಾಸ್ತ್ರಂಗಳು ಸತ್ಯವ ನುಡಿದರೆ ಶಾಸ್ತ್ರಂಗಳ ಮಾತಿಗೆ ಹೇಸಿ ಕಿರಾತಬೊಮ್ಮಯ್ಯ ಕಣ್ಣಪ್ಪಗಳು ಮರೆಯಲೇಕೆ ? ಆಗಮವೇ ಆಚಾರವನರಿದೊಡೆ ಆಗಮವರಿಯಲಿಕ್ಕೆ ಕೆಂಭಾವಿ ಭೋಗಣ್ಣನ ಬೆನ್ನಲುರುಳುತ್ತ ಹೋಗಲೇಕೆ ? ವೇದ ಶಾಸ್ತ್ರಾಗಮ ಪುರಾಣಂಗಳು ಶಿವನಾದಿ ಅಂತ್ಯವನರಿದಡೆ ಸಾಮವೇದಿಗಳು ಶ್ವಪಚಯ್ಯಂಗೆ ಶಿಷ್ಯರಾಗಲೇಕೆ ? ವಾದಿಸದಿರೋ ಪ್ರತಿವಾದಿ ನೀನಂತರಂಗವನರಿಯದೆ. ಅಭೇದ್ಯವು ಘನಕ್ಕೆ ಘನ ಶಂಭು ಸೊಡ್ಡಳ.
>
> ವ. ಶಾ. ಸಾ., ಭಾ. ೨ ಪು. ೧೩೫

ವೇದಾಗಮ ಪುರಾಣಾದಿಗಳಲ್ಲಿ ನಿಜದ ನೆಲೆಯನರಿಯಬಲ್ಲರೆ ವೇದಾದಿಗಳ ವಿದ್ಯೆಯಲ್ಲಿ ಅಪ್ರತಿಮ ಪಾಂಡಿತ್ಯವನ್ನು ಪಡೆದ ಸಾಮವೇದಿಗಳಂತಹ ವಿಪ್ರರು ಸತ್ಯತತ್ವದ ಹೊಲಬನರಿಯದೆ ಶ್ವಪಚಯ್ಯನಂತಹ ಹೊಲೆಯನನ್ನಾಶ್ರಯಿಸಲೇಕೆ? ಸತ್ಯಪಥವನ್ನು ಅವರಿಂದ ಅರಿಯಲೇಕೆ? ಆಲೈದು ನೋಡಿದರೆ ಪಂಡಿತರ ಸೊತ್ತು ಅವಿದ್ಯೆಯಲ್ಲದೆ ಆತ್ಮವಿದ್ಯೆಯಲ್ಲ. ಮುಂಡಕೋಪನಿಷತ್ತು ಹೇಳುವ ಅಪರಾವಿದ್ಯೆಯಲ್ಲದೆ ಪರಾವಿದ್ಯೆಯಲ್ಲ. ಇಂತಹ ಪಂಡಿತರು ನಾಮ ರೂಪ ಪ್ರಪಂಚದ 'ನಾನಾತ್ವ'ದ ಕತ್ತಲೆಯಲ್ಲಿ ತೊಳಲಿ ಬಳಲುತ್ತಿರುವರಲ್ಲದೆ ನಿತ್ಯ ನಿರಂಜನ ಜ್ಯೋತಿ ತಾವೆಂಬುದು ಇವರಿಗೆತ್ತ ಗೊತ್ತು?

> ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥
>
> ಕಠೋಪನಿಷತ್, ಪ್ರಥಮಾಧ್ಯಾಯ, ದ್ವಿತೀಯವಲ್ಲೀ ೫

ಅಜ್ಞಾನವೇ ತತ್ವಜ್ಞಾನವೆಂಬ ಭ್ರಮೆ ಹತ್ತಿರುವ ಇಂತಹ ಹಿರಿಯರು ಕೆಟ್ಟ ಕೇಡಿಗೆ ಕಡೆ ಮೊದಲಿಲ್ಲ. ಕಡೆಯಲ್ಲಿ ಕೇಡನ್ನೇ ತಂದೊಡ್ಡುವ ವೇದಾಗಮಾದಿಗಳನ್ನೋದುವುದಕ್ಕಿಂತ ಕೇಡಿಲ್ಲದ ಪದವಿಯನ್ನು ನೀಡುವ ಶರಣರ ವಚನವನ್ನರಿದು ಅನುಭವಿಸುವುದು ಲೇಸಲ್ಲವೆ? ವಾಙ್ಮನಕ್ಕಗೋಚರವಾದ ಪರಮ ಪರಂಜ್ಯೋತಿ ತತ್ವವನ್ನು ಕರಸ್ಥಲಕ್ಕೆ ತಂದವರು ಶರಣರು! ವೇದವು ಭೇದಿಸ ಬಾರದ 'ಅತ್ಯತಿಷ್ಠತ್ ದಶಾಂಗುಲಂ' ಎಂಬ ಮೀರಿದಘನವನ್ನು ಭೇದಿಸಿ ಕಂಡವರು ಶರಣರು! ಶಾಸ್ತ್ರವು ಸಾಧಿಸ ಬಾರದ 'ಸರ್ವಂ ಖಲ್ವಿದಂ ಬ್ರಹ್ಮ'ವನ್ನು ಅಗಲಲೆಡೆಯಿಲ್ಲದ 'ಗುಹೇಶ್ವರಲಿಂಗ'ವನ್ನು ಸಾಧಿಸಿದ ಅಸಾಧ್ಯರು ಶರಣರು! 'ವೇದನಾದಾತೀತ ತುರೀಯ ಪರಮಾನಂದ ನಿರವಯಪಟ್ ತ್ರಿಂಶತ್ ಪ್ರಭಾಪಟಲದ ಪ್ರಭೆಯ ಬೆಳಗಿದೆ ನೋಡಿರೆ' ಎಂದು ಸ್ವಯಂ ಭಾವದಲ್ಲಿ ನಿಂದು ಸ್ವಯಂಜ್ಯೋತಿಯಾಗಿ ತೊಳಗಿ ಬೆಳಗಿ ತೋರುವವರು ಶರಣರು! ಇಂತಹ ನಿಜ ನಿರಾಳ ವೇದಾಗಮಗಳ ಹವಣಲ್ಲ, ಶಾಸ್ತ್ರದ ಸುದ್ದಿಯಲ್ಲ, ಅದು ತರ್ಕಕ್ಕೆ ಅತರ್ಕ್ಯ, ಆಗಮಕ್ಕೆ ಅಗಮ್ಯ, ಅಗೋಚರ.

> ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡನಡುಗಿತ್ತು. ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯ ಲಿಂಗವೆಂದು ಸಾರುತ್ತೈದಾವೆ. ತರ್ಕ ತರ್ಕಿಸಲರಿಯದೆ ಅತರ್ಕ್ಯ ಲಿಂಗವೆಂದು ಮನಗೊಳ್ಳವು. ಆಗಮ ಆಗಮ್ಯಲಿಂಗವೆಂದು ಗಮಿಸಲರಿಯದೆ ಹೋದವು. ನರರು ಸುರರು ಅಂತುವ ಕಾಣರು. ನಮ್ಮ ಕೂಡಲಸಂಗಮದೇವನ ಪ್ರಮಾಣವ ಶರಣ ಬಲ್ಲ ಹೊ ಬ. ವ., ಪು. ೩

ವೇದವೇ ಭೇದಿಸಬಾರದ ಅಭೇದ್ಯವಸ್ತುವನ್ನು ವೇದವನೋದುವ ವಿಪ್ರರು ಭೇದಿಸುವುದೆಂತು? ಶಾಸ್ತ್ರವು ಸಾಧಿಸ ಬಾರದ ಅಸಾಧ್ಯ ವಸ್ತುವನ್ನು ಶಾಸ್ತ್ರಜ್ಞರು ಸಾಧಿಸುವುದೆಂತು? ಪುರಾಣವು ಪೂರೈಸಲರಿಯದ ಪರಿಪೂರ್ಣ ತತ್ವವನ್ನು ಪುರಾಣಪಾಠಕರು ಪೂರೈಸುವುದೆಂತು? ಆಗಮವು ಅಗಮ್ಯವೆಂದು ಕೈ ಕಟ್ಟಿಕೊಂಡು ಕುಳಿತಿರಲು ಆಗಮಜ್ಞರು ಹೊರಗೊಳಗೆ ಎಡೆದೆರಹಿಲ್ಲದೆ ಬೆಳಗುತ್ತಿರುವ ನಿರಾಳದ ಬೆಳಗನ್ನು ಕಾಂಬುದೆಂತು"?

> 'ವೇದಂಗಳು ನಿಮ್ಮ ಭೇದಿಸಿ ಕಂಡಿಹೆವೆಂದರೆ ಕಾಣಲರಿಯದೆ ಬಳಲಿ ಬೆಂಡಾಗಿ ಹೋದವು. ಶಾಸ್ತ್ರಂಗಳು ಸಾಧಿಸಿ ಕಂಡಿಹೆವೆಂದರೆ ಕಾಣಲರಿಯದೆ ಸಂದೇಹಕ್ಕೊಳಗಾಗಿ ಹೋದವು. ಆಗಮಂಗಳು ಅರಿಸಿ ಕಂಡಿಹೆವೆಂದರೆ ಕಾಣಲರಿಯದೆ ಮೂಗಾಗಿ ಹೋದವು. ಇಂತೀ ವೇದ ಶಾಸ್ತ್ರಾಗಮಂಗಳ ನೋಡಿ ನಿಮ್ಮ ಕಂಡಿಹೆವೆಂಬವರೆಲ್ಲ ಇನ್ನೆತ್ತ ಕಂಡಿಹರಯ್ಯ ಅಖಂಡೇಶ್ವರಾ? ವ. ಶಾ. ಸಾ., ಭಾ. ೧, ಪು. ೩೧೪

> ವೇದಾಗಮಂಗಳನೋದಿದ ಹಿರಿಯರೆಲ್ಲ ತಮ್ಮ ನಿಜವ ತಾವರಿಯದೆ ಕೆಟ್ಟರು. ತಮ್ಮ ಬುದ್ಧಿ ತಮ್ಮನೇ ತಿಂದಿತ್ತು. ನಿಮ್ಮನೆತ್ತ ಬಲ್ಲರು ಗುಹೇಶ್ವರಾ? ವ. ಶಾ. ಸಾ., ಪು. ೩೧೪

ನಿಜದ ನೆಲೆಯಾದ ನಿರಾಳಲಿಂಗ ವೇದಾಗಮಾದಿಗಳಿಗೆ, ಅವನ್ನೋದಿ ಬಲ್ಲೆವೆಂಬ ವಿದ್ಯಾಬಲವಂತರಿಗೆ ಸಿಲುಕಿಲ್ಲ, ಅದು ನಿಲುಕಿಲ್ಲ. ಇಷ್ಟೇ ಅಲ್ಲ, ವೇದಾಗಮಾದಿಗಳು ಹಾಡುವ ದೇವತೆಗಳಿಗೆ, ಅವರೊಡೆಯರಾದ ಹರಿಹರ ಬ್ರಹ್ಮರಿಗೂ ಆ ನಿಜದ ನಿರಾಳ ನಿಲುಕಿಲ್ಲ. ಹರಿಹರ ಬ್ರಹ್ಮಾದಿಗಳೂ ಮಾಯೆಯ ಮರವೆಯಲ್ಲಿ ಹುಟ್ಟಿ ಬೆಳೆದು ಹರಿದಾಡುವರಲ್ಲದೆ ಮಾಯೆಯನ್ನು ಮೀರಿದ ಘನವಸ್ತುವನ್ನು ಪರಮ ಪರಿಪೂರ್ಣ ಪರಂಜ್ಯೋತಿಯನ್ನು ಕಂಡುಂಡವರಲ್ಲ.

> ಹರಿ ಹೊಲಬನರಿಯ, ಬ್ರಹ್ಮ ಮುಂದನರಿಯ, ರುದ್ರ ಲೆಕ್ಕವ ಮರೆದು ಜಪವನೆಣಿಸುವ, ಈಶ್ವರ ಪವನಯೋಗದಲ್ಲಿ ಮಗ್ನನಾದ,

ಸದಾಶಿವನು ಭಾವದಲ್ಲಿ ಭ್ರಮಿತನಾದ. ಒಂದೊಡಲೊಳಗಣ ಬಾಲಕ
ರೈವರು ನಿಮ್ಮನೆತ್ತಬಲ್ಲರು ಗುಹೇಶ್ವರಾ ? ಪ್ರ ವ., ಪು. ೨೪೫

ಸುರರಾಗಲಿ ನರರಾಗಲಿ ವೇದಗಳಿರಲಿ ಷಡ್‌ದರ್ಶನಗಳಿರಲಿ, ಇವರು ನಿಜದ ನಿಲುಗಡೆಯನರಿಯರೆಂಬುದೇ ಶರಣರ ಸ್ಪಷ್ಟಾಭಿಪ್ರಾಯ. ಮಹಾವಾಕ್ಯವೆಂದು ಪರಿಪೂಜ್ಯವಾಗಿರುವ 'ತತ್ವಮಸಿ' ಗೂ ಪರಮ ಸತ್ಯಾರ್ಥದ ಅನುಭೂತಿಯ ಆಳ ಹತ್ತಿಲ್ಲವೆಂದು ಶರಣರ ಮತ. 'ತತ್ವಮಸಿ ವಾಕ್ಯಗಳೆಲ್ಲ ಹುಸಿಯಾಗಿ ಹೋದವು' ಎಂದು ಎಷ್ಟೋ ಸಲ ಶರಣರು ನುಡಿದುದುಂಟು. ದ್ವೈತಾದ್ವೈತಿಗಳೆಲ್ಲ ಹೊಲಬುದಪ್ಪಿ ಹೋದರು ಎಂದೂ ಅವರು ಹೇಳುವುದುಂಟು.

ನಿತ್ಯ ನಿರಂಜನ ತಾನೆಂದರಿಯದೆ ತತ್ವಮಸಿ ಎಂದು ಹೊರಗನೆ ಬಳಸಿ
ಸತ್ತರಲ್ಲ. ಜಗವೆಲ್ಲ ನಾಯ ಸಾವ ಸತ್ತರಲ್ಲ. ತಮ್ಮ ತಾವರಿಯದೆ
ಸತ್ತವರ ಹೆಸರ ಪತ್ರವನೋದಿದಡೆತ್ತಣ ಮುಕ್ತಿ ಗುಹೇಶ್ವರಾ ?
ಪ್ರ. ವ., ಪು. ೩೦೯

ಶರಣರ ಈ ಮತ ನಿಷ್ಠುರವಾಗಿ ತೋರಿದರೂ ನ್ಯಾಯನಿಷ್ಠುರವಾಗಿದೆ ಎಂದು ಹೇಳಬಹುದೇನೊ ! ಶರಣರ ಈ ವಿಚಾರಗಳನ್ನೆಲ್ಲ ಒಟ್ಟುಗೂಡಿಸಿ ಸ್ಪಷ್ಟವಾಗಿ ಮಧುರವಾಗಿ ಹಾಡಿದ್ದಾರೆ ನಿಜಾನಂದಯೋಗೀಶ್ವರಾದ ನಿಜಗುಣ ಶಿವಯೋಗಿಗಳು:

ಸುರ ನರೋರಗ ದನುಜ ಮನು ಮುನೀಶ್ವರ ತಳೆ ।
ವರ ಮಂತ್ರ ಶಾಸ್ತ್ರ ನಿಗಮಾಗಮ ಪುರಾಣ ॥
ದರುಶನ ಮತಾದಿಗಳು ಕಾಣದರಸುವ ತತ್ವ ।
ದಿರವಿದೆಂದೆನಗೆ ಕಣ್ಣಾರೆ ಕಾಣಿಸಿದ ॥

ಸತ್ಯತತ್ವವನ್ನು ಪ್ರತ್ಯಕ್ಷಾನುಭೂತಿಯಿಂದ ಸಾಕ್ಷಾತ್‌ಕಾರ ಮಾಡಿಕೊಂಡು ಸತ್‌ಶಿಷ್ಯನಿಗೆ ಆ ತತ್ವವನ್ನು ಕಣ್ಣಾರೆ ಕಾಣಿಸುವಾತನೇ ಸದ್‌ಗುರು. ಇಂತಹ ಶ್ರೀ ಗುರು ವಚನದಲ್ಲಿ ಇಂತಹ ಸದ್‌ಗುರುತತ್ವವನ್ನೊಳಕೊಂಡ ಶರಣರ ವಚನದಲ್ಲಿ ನಿರಾಳ ಲಿಂಗವು ಅವಿರಳವಾಗಿ ಬೆಳಗುತ್ತಿದೆಯಲ್ಲದೆ ವೇದಾಗಮಾದಿಗಳಲ್ಲಿ ಅದು ಬೆಳಗಲಿಲ್ಲ, ಓದಿದವರು ಅದನ್ನು ತಿಳಿಯಲಿಲ್ಲ.

ಈ ಶರಣ ಮಾರ್ಗವೆಂಬುದು ವೇದಾಗಮಂಗಳಿಗೆ ಅಗೋಚರ. ಮತ್ತೇ
ತಱಿಂದಱಿಯಬಹುದಯ್ಯ ಎಂದಡೆ ಗುರುವಚನದಿಂದಲಱಿಯತಕ್ಕುದು.

ಆ ಗುರು ವಚನಗಳಾವವಯ್ಯಾ ಎಂದಡೆ, ವೀರಶೈವ ಷಟ್‌ಸ್ಥಲ ಜ್ಞಾನಾಚಾರಿಯರಪ್ಪ ಪ್ರಭುದೇವರು ಚೆಂನಬಸವಣ್ಣ ಬಸವಣ್ಣ ಮಹಾದೇವಿಯಕ್ಕಗಳು ಮುಖ್ಯವಾದ ಶಿವಾನುಭಾವಿಗಳು ಶಿವಸುಖವನನುಭವಿಸಿ ತೃಪ್ತಿವಡೆದ ಸಂತುಷ್ಟಿ ನಿರ್ವಿಂದುರ್ಗ ವಾಙ್ಮನದಿಂದುಕ್ಕಿ ನುಡಿದ ನುಡಿಯೇ ಗುರವಚನ.

ಲಿಂಗಲೀಲಾವಿಲಾಸಚಾರಿತ್ರ

ಲಿಂಗಲೀಲಾವಿಲಾಸಚಾರಿತ್ರದಲ್ಲಿ ಕಲ್ಲುಮಠದ ಪ್ರಭುದೇವರು ಹೇಳಿದ ಈ ಗದ್ಯಭಾಗದಲ್ಲಿ ವಚನಸಾಹಿತ್ಯದ ಮೂಲ ಚೈತನ್ಯಶಕ್ತಿಯ ಪರಮ ರಹಸ್ಯವಿದೆ, ಶರಣರ ನುಡಿಗಡಣವನ್ನು ಹುಟ್ಟಿಸಿದ ಲಿಂಗರಸದ ಗಟ್ಟಿಯು ಒಳಗುಟ್ಟಿದೆ. ಶರಣರ ಮಾತಿನಲ್ಲಿ ಮರವೆಯ ಚಿತ್ರವಿರಬಹುದು ಅರಿವಿನ ಸ್ವರೂಪವಿರಬಹುದು. ಅವರು ಸುಖವನ್ನು ಹಾಡಿರಬಹುದು, ದುಃಖವನ್ನು ತೋಡಿಕೊಂಡಿರಬಹುದು. ಒಮ್ಮೆ ತನಿಸೊದೆಯು ಸೋನೆಯಾಗಿರಬಹುದು, ಒಮ್ಮೆ ಬೇವಿನ ಬಿಂದುವಾಗಿರಬಹುದು ಅವರ ಮಾತು. ಶರಣರು ಒಮ್ಮೆ ಹಲುಬಿ ಹಂಬಲಿಸಿರಬಹುದು, ಮತ್ತೊಮ್ಮೆ ರೊಚ್ಚಿಗೆದ್ದಿರಬಹುದು. ಒಮ್ಮೆ ಭಯ, ಮತ್ತೊಮ್ಮೆ ಹೇಯ, ಮಗುದೊಮ್ಮೆ ಧೈರ್ಯ, ಆತ್ಮವಿಶ್ವಾಸ. ಹೀಗೆ ಅನಂತ ಭಾವಗಳು ಅನೇಕ ಭಾವನೆಗಳು ಮೂಡಿರಬಹುದು ಅವರ ನುಡಿಗಡಲಲ್ಲಿ. ಆದರೆ ಇವೆಲ್ಲ ಭಾವ ಭಾವನೆ ಲಿಂಗಾಂಗ ಸಾಮರಸ್ಯವೆಂಬ ಪರಮಾನಂದಾಮೃತಸಾಗರದಲ್ಲಿ ಮೂಡಿ ಆಡುತ್ತಿವೆ ಎಂಬುದನ್ನು ನಾವೆಂದೂ ಮರೆಯಕೂಡದು. 'ಅಂಗದ ಮೇಲೆ ಲಿಂಗ ಸದಾ ಸನ್ನಿಹಿತವಾದ ಬಳಿಕ ಅನ್ಯವ ನುಡಿಯನಾ ಶರಣನು' ಎಂದು ಚೆನ್ನಬಸವಣ್ಣನವರು ಹೇಳುವಂತೆ ಲಿಂಗಮುಖದಲುದಯವಾಗುತ್ತಿರುವ, ಲಿಂಗಮುಖದಲ್ಲಿ ಉದಯವಾದ ಶರಣನ ಮಾತಿನಲ್ಲಿ, ಸಂಸಾರ ಚಕ್ರದಲ್ಲಿ ಸಿಕ್ಕು ತಿರುಗುತ್ತಿರುವ ಸಂಸಾರ ಜೀವಿಗಳು ಅನುಭವಿಸುವ ಸುಖದುಃಖಗಳ ಸೋಂಕಿಲ್ಲ. ಅಂಗ ಮುಂತಾಗಿ ನಡೆವವರಿಗೆ ಸುಖದುಃಖಗಳಿರಬಹುದಲ್ಲದೆ ಲಿಂಗ ಮುಂತಾಗಿ ನಡೆವವರಿಗೆ ಆ ತರಹದ ಸುಖದುಃಖಗಳೆಲ್ಲಿ? ಅಂಗ ಮುಂತಾಗಿ ನುಡಿವವರು ಸುಖದುಃಖಗಳ ಹಾಡನ್ನು ಹಾಡಿಕೊಳ್ಳಬಹುದಲ್ಲದೆ ಲಿಂಗ ಮುಂತಾಗಿ ನುಡಿವವರಿಗೆ ಅಂತಹ ಹಾಡೆಲ್ಲಿ?

ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದೆಂದಿಗೂ ಕಳೆಯಲಾರೆ!
ಎಂಬತ್ತುನಾಲ್ಕು ಲಕ್ಷ ಯೋನಿ ಎಂದರೆ ಇನ್ನೇವೆನಯ್ಯಾ? ನೊಂದೆನಯ್ಯಾ.

ನೊಂದೆನಯ್ಯಾ! ಮತ್ತೊಂದನರಿಯದ ಶಿಶು ಬೆಂದೆನಯ್ಯಾ! ಶಿವ ಶಿವ ಎನ್ನ ಕಂದ ನೀ ಬಾರೆಂದು ಕಂಬನಿಯ ತೊಡೆದು ಎತ್ತಿ ಎತ್ತಿ ಆನಂದ ಬಂದ ಕಣ್ದೆರೆ ಉಳಿಯುಮೇಶ್ವರ. ವ.ಶಾ.ಸಾ., ಭಾ. ೩ ಪು. ೩೫೬

ಬಡಪಶು ಪಂಕದಲ್ಲಿ ಬಿದ್ದರೆ ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೇ? ಶಿವ ಶಿವ, ಹೋದಹೆ ಹೋದಹೆನಯ್ಯ ನಿಮ್ಮ ಮನದೆತ್ತಲೆನ್ನ ತೆಗೆಯಯ್ಯ! ಪಶುವಾನು ಪಶುಪತಿ ನೀನು. ತುಡುಗುಣಿ ಎಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ, ನಿಮ್ಮ ಬಯ್ಯದಂತೆ ಮಾಡು ಕೂಡಲಸಂಗಮದೇವ! ಬ. ವ., ಪು. ೯

ಎಂಬಿಂತಹ ವಚನಗಳಲ್ಲಿ ಕರುಣರಸ ಕೋಡಿವರಿದಿರಬಹುದು. ಆದರೆ ಇದೆಂತಹ ಕರುಣರಸ? ಪರಮ ಕೃಪಾಸಾಗರವಾದ, ಪರಮ ಕಾರುಣ್ಯಪಯೋನಿಧಿಯಾದ ಪರಶಿವಲಿಂಗದತ್ತ ಹರಿದಿಲ್ಲವೇ ಕರುಣರಸದ ಈ ಹೆದ್ದೊರೆ? ಇಂತಹ ಕರುಣರಸವನ್ನೂ ಕಾವ್ಯದಲ್ಲಿ ಸಾಮಾನ್ಯವಾಗಿ ಚಿತ್ರಿತವಾದ ಕರುಣರಸವನ್ನೂ ಒಂದೆನ್ನಬಹುದೇ? ಶರಣರ ವಚನದಲ್ಲಿ ಹರಿವ ರಸ 'ರಸೋ ವೈ ಸಃ' ಎಂಬ ಲಿಂಗದ ಸಾರ ಸಾರಾಯ ರಸ. ಸಾಮಾನ್ಯವಾಗಿ ಕಾವ್ಯದಲ್ಲಿ ಹರಿವ ರಸ ಮಾನವನ ಮನೋಭಾವ ಕಾವುಗೊಂಡು ಕರಗಿದ ರಸ. ಅಂತೆಯೇ ತನು ಸಾರಾಯರು, ಮನ ಸಾರಾಯರು, ಭಾವ ಸಾರಾಯರು, ಅನುಪಮ ಸುಖ ಸಾರಾಯರು ಆದ ಶರಣರ ಸದುಹೃದಯವೆಂಬ ಬುಗ್ಗಿಯಿಂದ ಚಿಮ್ಮಿ ಪುಟನೆಗೆದು ತನಿರಸದುಕ್ಕಂದವಾಗಿ ಹೊರಹೊಮ್ಮುತ್ತಿರುವ ನುಡಿ ಪರಮಾನಂದದ ಕುಡಿ, ಅವರ ದುಃಖ ಪರಮಾನಂದವನ್ನು ಅಪ್ಪಿ ಆಲಿಂಗಿಸಲಿರುವ ಪರಮಸುಖ. ಶೆಲ್ಲಿಕವಿ ಹೇಳುವ 'Our sweetest songs are those that tell of our saddest thoughts' (ನಿರ್ಭರ ದುಃಖ ವಿಚಾರಗಳನ್ನು ಹೇಳುವ ಹಾಡುಗಳೇ ನಮ್ಮ ಬಲು ಸವಿಯಾದ ಹಾಡುಗಳು) ಎಂಬ ಹೇಳಿಕೆ ವಚನ ಭಾಂಡಾರಕ್ಕೆ, ಸ್ವಾನುಭಾವ ಸಾಹಿತ್ಯಕ್ಕೆ ಎಂದೂ ಅನ್ವಯವಾಗುವದಿಲ್ಲ. ಶೆಲ್ಲಿ ಮಹಾಕವಿ ಇದ್ದರೂ ಇರಬಹುದು, ಬಳ್ಳೀ ಸವಿಸವಿಯಾದ ಹಾಡನ್ನೂ ಹಾಡಿರಬಹುದು. ಆದರೆ ಆತನದು 'ಕವಿತ್ವ ಸಾಧಕರೆಲ್ಲ ಕಳವಳವೋದರು' ಎಂದು ಹೇಳುವಂತೆ ಕಳವಳದ ಜೀವನವಲ್ಲದೆ ಸ್ಥಿತಪ್ರಜ್ಞನ ಜೀವನವಲ್ಲ. ಅಂತೆಯೇ ಆತನು ಹೇಳುವ ವ್ಯಾಖ್ಯೆ ಸ್ಥಿತಪ್ರಜ್ಞರು ಒಪ್ಪಬೇಕಾದ ವ್ಯಾಖ್ಯೆಯಲ್ಲ.

ನಿಮ್ಮ ನೋಟವನಂತ ಸುಖ. ನಿಮ್ಮ ಕೂಟ ಪರಮ ಸುಖ. ಅಷ್ಟ ಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗಮ ದೇವ, ನಿಮ್ಮ ನೋಡಿ ನೋಡಿ ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಳೆ ಗಳು. ಬ. ವ. ೭೨

ಸೆಜ್ಜೆಯುಪ್ಪರಿಸಿ ಶಿವಲಿಂಗ ಕರಸ್ಥಲಕ್ಕೆಬರೆ ಪ್ರಜ್ವಲಿಸಿ ತೊಳಗಿ ಬೆಳಗು ತಿಹ ಕಾಂತಿಯಲ್ಲಿ ಜಜ್ಜರಿಸಿ, ತನು ಮನ ದೃಷ್ಟಿ ನಟ್ಟು ಲಿಂಗದಲ್ಲಿ ಜಜ್ಜರಿಸಿ, ಶಿವಸುಖದೊಳಗೋಲಾಡುತ್ತ ಸಜ್ಜನ ಸದ್‌ಭಕ್ತಿರತಿಯಾತನ ಕೂಡಾಡಿ ಲಜ್ಜೆಗೆಟ್ಟು ನಾ ನಿಮ್ಮ ನೆರೆವೆ ಚೆನ್ನಮಲ್ಲಿಕಾರ್ಜುನ. ವ. ಶಾ. ಸಾ., ಭಾ. ೧ ಪು. ೪೬೦

ಕಂಗಳ ನೋಟವು ಹೃದಯದ ಜ್ಞಾನ ಮನದಲ್ಲಿ ತಾ ಮಾತನಾಡುತ್ತಿದೆ ನಯ್ಯ. ಜೇನ ಮಳೆಗಳು ಕರೆದವು, ಅಮೃತದ ಕಳೆಗಳು ಸುರಿದವು. ಕೂಡಲ ಚೆನ್ನಸಂಗನೆಂಬ ರಸಸಾಗರದೊಳಗೋಲಾಡುತ್ತಿರ್ದೆನಯ್ಯ! ವ. ಶಾ. ಸಾ., ಭಾ. ೧ ಪು. ೪೬೦

'ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುವ,' 'ತನು ಮನ ದೃಷ್ಟಿ ನಟ್ಟು ಪ್ರಜ್ವಲಿಸಿ ತೊಳಗಿ ಬೆಳಗುತಿಹ ಲಿಂಗದಲ್ಲಿ ಜಜ್ಜರಿಸಿ ಶಿವಸುಖ ದೊಳಗೋಲಾಡುವ,' 'ಕೂಡಲ ಚೆನ್ನಸಂಗನೆಂಬ ರಸಸಾಗರದೊಳ ಗೋಲಾಡುವ' ಶರಣರ ಸುಖ ನಿಜಸುಖ, ನಿತ್ಯಸುಖ, ನಿರತಿಶಯಸುಖ, ನಿರ್ಭರ ತೃಪ್ತಿ, ಅವಿರಳಾನಂದ. 'ಅನಿಮಿತ್ತ ಬಾಂಧವ,' 'ಅನುಪಮಾನಂದಾಬ್ಧಿ' ಯಾದ ನಿಜಗುಣಶಿವಯೋಗಿಗಳು 'ಜೀವ ಪರಮಯೋಗದ ನಿಜವರಿದನು ಭವಿಯ' ಸರಿದೊರೆಯಿಲ್ಲದ ಈ ಸುಖದ ಸ್ವರೂಪವನ್ನು ಹೀಗೆ ಹಾಡಿದ್ದಾರೆ:

ಸಾಕೆನಿಸದ ಸವೆಯದ ಬೇರೊಂದನು ।
ಬೇಕೆನಿಸದ ಕಡೆಯೊಳು ತನ್ನ ।
ಜೋಕೆಗುಂದದ ನಿರುಪಮ ಶಂಭುಲಿಂಗದೊ ।
ಳೇಕಮೆನಿಪ ಸುಖವ್....

ರತಿ ಎಂಬ ಭಾವ ಶೃಂಗಾರರಸವಾಗುವುದು ಕಾವ್ಯಕ್ಕೆ ಶೃಂಗಾರ. ಆದರೆ ಲಿಂಗಾಂಗಸಮರಸಾತ್ಮಕವಾದ ಶರಣರ ರತಿ, ಲಿಂಗಸುಖರತಿ 'ಕೂಡಲ ಚೆನ್ನಸಂಗನೆಂಬ ರಸಸಾಗರ'ವಾಗುವುದು ದಿವ್ಯಕ್ಕೆ ಶೃಂಗಾರ. ಅಲ್ಲಿ ತೋರು ವುದು ಅಂಗಸುಖ, ಇಲ್ಲಿ ಅನುಭವಿಸುವುದು ಲಿಂಗಸುಖ. ಅಲ್ಲಿ ಉಕ್ಕುವುದು ಕಾವ್ಯರಸ, ಇಲ್ಲಿ ಹೊರಸೂಸುವುದು 'ರಸೋ ವೈ ಸಃ'ಎಂಬ ಸುಖ ದುಃಖಗಳ

ಪರಮಸಾರವಾದ ರಸಸಾಗರ. ಇಲ್ಲಿಯ ದುಃಖ ದುಃಖವಲ್ಲ, ಸುಖ ಸುಖವಲ್ಲ, ಸುಖದುಃಖಗಳ ಆಳವಾದ ಪರಮಾನಂದ. ಇಂತಹ ಪರಮಾನಂದ ವಾಙ್ಮನದಿಂದುಕ್ಕಿ ನುಡಿದ ಶರಣರ ನುಡಿಗಡಲೇ ವಚನಸಾಹಿತ್ಯ.

ಸುಖದುಃಖಗಳನ್ನು ಗರ್ಭೀಕರಿಸಿಕೊಂಡಿರುವ ಪರಮಾನಂದವನ್ನು ಶರಣರು ಹೇಳುವಂತೆ ಮೂರು ತೆರನೆಂದು ಹೇಳಬಹುದು. ಒಂದು ಅಂಗ ಸುಖ, ಮತ್ತೊಂದು ಲಿಂಗಸುಖ, ಮಗುದೊಂದು ಇವೆರಡನ್ನೂ ಒಳಕೊಳ್ಳುವ ಅಂಗ-ಲಿಂಗ-ಸಂಗ ಸುಖ. ಒಂದು ಅಂಗಸ್ಥಲದ ಸುಖ, ಮತ್ತೊಂದು ಲಿಂಗ ಸ್ಥಲದ ಸುಖ, ಕೊನೆಯದು ಮೀರಿದ ಸ್ಥಲದ ಸುಖ. ಅಂಗವು ಲಿಂಗಕ್ಕೇರುವುದು ಲಿಂಗಸುಖ, ಲಿಂಗವು ಅಂಗದಲ್ಲಿಳಿವುದು ಅಂಗಸುಖ, ಅಂಗಲಿಂಗದ ಕೂಟವೇ ಪರಮಸುಖ. ಅದೇ ಪರಮ ಪರಂಜ್ಯೋತಿಯಿಂದ ತೊಳಗಿ ಬೆಳಗುವ ಪರಮ ಜ್ಞಾನದಿಂದ ತುಂಬಿ ತುಳುಕುವ ಪರಮಾನಂದ. ಇಂತಹ ಪರಮಾನಂದವನ್ನು ನಿಜಾನುಭಾವಿಗಳು ಬಲ್ಲರಲ್ಲದೆ ಬೇರಿಲ್ಲ.

> ಅಂಗದಿಂದ ಲಿಂಗಸುಖ, ಲಿಂಗದಿಂದ ಅಂಗಸುಖ, ಅಂಗಲಿಂಗಸಂಗದಿಂದ ಪರಮಸುಖ ನೋಡಯ್ಯ. ಅಂಗಲಿಂಗಸಂಗಸುಖವನು ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನೇ ಬಲ್ಲ.
>
> ವ. ಶಾ. ಸಾ., ಭಾ. ೨ ಪು. ೪೧೨

ಅಂಗದಲ್ಲಿ ಲಿಂಗಕಳೆ ತುಂಬುತ್ತ ಹೋಗುವುದೇ ಅಂಗವು ಅನುಭವಿಸುವ ಲಿಂಗಸುಖ. ಲಿಂಗದಲ್ಲಿ ಅಂಗ ಕಳೆ ಬೆರೆದು ಬೇರಿಲ್ಲದಿರುವುದು ಲಿಂಗವು ಅನುಭವಿಸುವ ಅಂಗಸುಖ. ಅಂಗದ ಮೇಲೆ ಲಿಂಗವರತು ಲಿಂಗದಮೇಲೆ ಅಂಗವರತುದೇ ಸಮರಸಸುಖ.

> ಅಂಗಕಳೆ ಲಿಂಗದಲಿ ಲಿಂಗಕಳೆಯಂಗದಲಿ
> ಅಂಗಲಿಂಗವೆಂಬಾ ಉಭಯವಳಿದು
> ಮಂಗಳ ಮಹಾಜ್ಞಾನ ಬೆಳಗಿನ ಬೆಳಗಿನೊಳಗೆ
> ಕಂಗಳೇ ಪ್ರಾಣವಾಗಿರುತಿರ್ದನು ॥
>
> ಪರಮಯೋಗ ಮಂತ್ರಗೋಪ್ಯ, ಪು. ೨೪

ಎಂಬ ಪ್ರಭುದೇವರ ಮಂತ್ರಗೋಪ್ಯದ ಪರಮರಹಸ್ಯಾರ್ಥವುಳ್ಳ ಪದ್ಯಕ್ಕೆ ಕಲ್ಲುಮಠದ ಪ್ರಭುದೇವರು ಶಿವಜ್ಞಾನದರ್ಪಣದಂತೆ ವಚನಾರ್ಥವನ್ನು ಹೀಗೆ ಬರೆದಿದ್ದಾರೆ:—

> ಜೀವಾತ್ಮನೆ ಅಂಗ. ಈ ಜೀವಾತ್ಮನಲ್ಲಿರುವ ಶಿವಕಳೆಯನು ತೆಗೆದು ಗುರುವು ಕರಸ್ಥಲದಲ್ಲಿ ಇರಿಸಿದನು. ಹೀಗೆ ಇರಿಸಿದ ಕರಸ್ಥಲದ ಲಿಂಗದ

ಕಳೆಯನ್ನು ಜೀವಾತ್ಮನು ಜ್ಞಾನ ದೃಷ್ಟಿಯಿಂದ ನೋಡಿ ಭಾವಿಸಲು ಒಡನೆ ಲಿಂಗಕಳೆಯಿಂ ತುಂಬಿ ಭಿನ್ನವಿಲ್ಲದೆ ಜೀವನೆಲ್ಲಾ ಲಿಂಗಕಳಾರೂಪನೇ ಆಗಿ ಇರುತ್ತಿಹನು. ಹೀಗೆ ಅಂಗಲಿಂಗವೆಂಬ ಭಿನ್ನವು ತೋರದೆ ಅತ್ಯಂತ ಸುಖವಪ್ಪ ಮಹಾಲಿಂಗಪ್ರಕಾಶಮಯನಾಗಿ ಅಂಗಲಿಂಗವಾಗಿ ತೋರಿದ ಮಹಾಜ್ಞಾನದ ಬೆಳಗು ಒಂದೇ ಮಹಾಪ್ರಕಾಶದ ಜೆಳ ಗೆಂದು ತಿಳಿದು ಈ ಜ್ಞಾನ ದೃಷ್ಟಿಯಿಂದ ಹಿಂಗದೆ ಅನಿಮಿಷನಾಗಿ ನೋಡುತ್ತಿದ್ದು ಪ್ರಾಣಲಿಂಗಸ್ವರೂಪವಾಗಿ ಇರುತ್ತಿದ್ದನು.

ಪರಮಯೋಗ ಮಂತ್ರಗೋಪ್ಯ, ಪು. ೨೪

ಅಂತೆಯೇ ಲಿಂಗಸುಖ ಅಂಗಸುಖ ಮಹಾಲಿಂಗಪ್ರಕಾಶಮಯವಾದ ಪರಮಸುಖ ಇವುಗಳಿಗೆ ಸುಸ್ಪಷ್ಟವಾದ ಸ್ವರೂಪವನ್ನು ಕ್ರಮವಾಗಿ ಅಂಗಸ್ಥಲದ ವಚನಗಳಲ್ಲಿ, ಲಿಂಗಸ್ಥಲದ ವಚನಗಳಲ್ಲಿ 'ನಿಶ್ಶಬ್ದವೇ ಅನು ಭಾವ' ಎಂಬ ಸ್ಥಲಕುಲವನ್ನು ಮೀರಿದ ನಿಃಸ್ಥಲದ ವಚನಗಳಲ್ಲಿ ಕಾಣಬ ಹುದು ಮತ್ತು ಇಂತಹ ವಚನಗಳಲ್ಲಿ ಶರಣ ಜೀವನ ಅನುಕ್ರಮವಾಗಿ ಅಂಗ ಲೀಲೆಯಾಗಿ ಲಿಂಗಲೀಲೆಯಾಗಿ ಪರಮಲೀಲಾವಿಲಾಸವಾಗಿ ಪಡಿಮೂಡಿದೆ.

ಶರಣನು ಲಿಂಗದೆಡೆಗೆ ನಡೆವಾಗ ಆತನ ಜೀವನದಲ್ಲಿ ಅನೇಕ ಕುಂದು ಕೊರತೆ ತೋರಬಹುದು. ಅನಂತ ಕಷ್ಟ ನಷ್ಟ ಆತನನ್ನು ಮುತ್ತಿ ಹತ್ತಿ ಡಲು ಹವಣಿಸಬಹುದು. ವಿಷಯವೆಂಬ ಹೆದ್ದೊರೆ ಆತನ ಮನದಲ್ಲಿ ಹಾಯಬಾರದಂತೆ ಹರಿಯುತ್ತಿರಬಹುದು. ತನುವಿನಲ್ಲಿ ವಿಷಯವಿಕಾರ ವೆಂಬ ಬಿರುಗಾಳಿ ಹೊಡೆ ಹೊಡೆದು ಬೀಸುತ್ತಿರಬಹುದು ಮೋಹದ ಮೋಹರ ಮುಚ್ಚಿ ಕತ್ತಲೆಯನ್ನು ಕಾರುತ್ತಿರಬಹುದು. ಆದರೇನು "ಕರಿ ಘನ ಅಂಕುಶ ಕಿರಿದೆನ್ನ ಬಹುದೇ ? ಬಾರದಯ್ಯ. ಗಿರಿ ಘನ ವಜ್ರ ಕಿರಿದೆನ್ನ ಬಹುದೇ ? ಬಾರದಯ್ಯ ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ ? ಬಾರ ದಯ್ಯ. ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನ ಬಹುದೇ ? ಬಾರ ದಯ್ಯ ಕೂಡಲ ಸಂಗಮದೇವ " ಅಜ್ಞಾನದಿಂದ ತುಂಬಿದ ವಿಷಯ ಕೊಲ್ಲುವೆನೆಂದು ಕೆಳಗೆ ತುಳಿ ತುಳಿದು ಕೂಗುತ್ತಿರುವಾಗ 'ನೆನಹಿನಲ್ಲಿ ನಿಮ್ಮ ಮೂರುತಿ ತುಂಬಿದ' ಮನ ಬಿದ್ದರೂ ಎದ್ದು ಹಿಂಜರಿಯದೆ ಮುಂದೆ ಮುಂದೆ ನುಗ್ಗಿ 'ಕೊಂದರೂ ಶರಣೆಂಬುದು ಮಾಣೆ' ಎಂದು ನಡೆದಿರಲು, ಲಿಂಗಮೂರುತಿಯ ಮನ ಕರಗಿ ತಲೆಯ ಮೇಲೆ ಅಭಯ ಹಸ್ತವನ್ನು ಇಟ್ಟಾಗ ಅದೆಂತಹ ಆನಂದ ! ಇಂತಹ ಆನಂದ ಉಕ್ಕಿ ನುಡಿ

ದಾಗ ಆ ನುಡಿಯು ಸವಿಯೆಷ್ಟು ! ಮಗು ಕುಳಿಯಲ್ಲಿ ಬೀಳುವನೆಲ್ಲೋ, ಅಡವಿ ಪಾಲಾಗುವನೆಲ್ಲೋ , ಹುಲಿ ಕರಡಿಗಳ ಬಾಯ ತುತ್ತಾಗುವನೆಲ್ಲೋ , ವಿಷಯವೆಂಬ ಭೀಷಣ ವಿಷ ಸರ್ಪ ಕಚ್ಚುವದೆಲ್ಲೋ ಎಂದು ಲಿಂಗದೇವ ಭಕ್ತನ ಬೆಂಬತ್ತಿ ತಿರುಗುವಾಗ ಆತ ಅನುಭವಿಸುವ ಸುಖ ಎಂತಹ ಸುಖ ! ಕಂಡುಂಡ ಇಂತಹ ಸುಖ, ಈ ಆನಂದ ಉಕ್ಕಿ ನುಡಿದಾಗ ಆ ನುಡಿಯು ಸವಿಸುಖವೆಷ್ಟು ? ಅದನ್ನು ಬಲ್ಲವರಾರು?

> ಹುತ್ತು ಹೋರಿನೊಳಗೆ ಕೈಯಿಕ್ಕಿಹನೆನ್ನ ಶಿಶುವೆಂದು ಹೆತ್ತ ತಾಯಿ
> ಮಗನ ಬೆಂಬತ್ತಿ ಬಪ್ಪಂತೆ ಬಪ್ಪೆ. 'ಅಯ್ಯಾ' ಎಂದಡೆ 'ಓ....'ಎಂಬೆ
> ಅನ್ಯ ವಿಷಯಕೆನ್ನ ಹತ್ತಲೀಯದೆ ಎತ್ತೆತ್ತ ನೋಡಿದಡತ್ತತ್ತ ಸೊಡ್ಡಳ್
>
> ವ ಶಾ. ಸಾ., ಭಾ ೨ ಪು. ೩೮೩

ಲಿಂಗದೇವ ವಿಶ್ವಮಾತೆ ಮಗುವಿನ ಬೆಂಬಿಡದೆ ನಡೆದರೆ ಹುಸಿ ವಿಷಯ ಮೆಲ್ಲಗೆ ಮಾಯವಾಗುತ್ತದೆ. ಮರಹಿನ ತೆರೆ ಮೆಲ್ಲಗೆ ಸರಿಯುತ್ತದೆ. ಆ ಮೇಲೆ ಭಕ್ತ ಕಾಂಬುದೇನು ?

> ದೆಸೆ ದೆಸೆಯಲ್ಲಿ ನಿಮ್ಮನೇ ಕಾಂಬೆ. ಎದ್ದು ನೋಡಿ ನಿಮ್ಮನೇ ಕಾಂಬೆ.
> ಅಹೋ ರಾತ್ರಿ ನಿಮ್ಮ ಧ್ಯಾನದಲ್ಲಿರಿಸು ಮಹಾಲಿಂಗ ಕಲ್ಲೇಶ್ವರ.
>
> ವ. ಶಾ ಸಾ , ಭಾ. ೨ ಪು. ೩೭೫

ಭಕ್ತನ ಮನವೆಲ್ಲ ನೆನಹಾದಾಗ ವಿಷಯದ ಗರ್ಭದಲ್ಲಿ ಹುದುಗಿರುವ ಲಿಂಗ ಪ್ರಸಾದ 'ನೀಸೊಲಿದವರ ಕೊರಡು ಕೊನರು'ವಂತೆ ಕೊನರುತ್ತದೆ ಆ ಪ್ರಸನ್ನ ಪ್ರಸಾದದ ಸುಖ ಹೊರಗಿಂದ ಬಂದ ವಿಷಯ ಸುಖವಲ್ಲ, ಅಂಗದ ಕಳೆಯಲ್ಲಿರುವ ಲಿಂಗಸುಖ. ಪ್ರಜ್ವಲಿಸುವ ಪರಂಜ್ಯೋತಿಲಿಂಗದಲ್ಲಿ ಪರಿಪಕ್ವವಾದ ಭಕ್ತನ ಜೀವನ ಲಿಂಗಸುಖದ ಸುಗ್ಗಿಯಲ್ಲಿ ಓಲಾಡುತ್ತದೆ. ರಸಸಾಗರದಲ್ಲಿ ತೇಲಾಡುತ್ತದೆ.

> ಹೊರಗನೇ ಹಾರೈಸಿ ಹೊರಗಣ ಸದಾಚಾರ ಕ್ರಿಗಳ ಮಾಡುತ್ತಿರು
> ವಲ್ಲಿ, ಇದೆಲ್ಲಿಯು ಹೊರಗಣ ಸುಖವೆಂದು ವಿಚಾರ ಕಣ್ ದೆರೆದು ನೋಡಲು
> ಕನ್ನಡಿಯೊಳಗಣ ರೂಪು ತಾನೆಂದರಿವಂತೆ ಮೆಲ್ಲನೆ ಒಳಗಡಗಿತ್ತಯ್ಯಾ.
> ಲಿಂಗಸುಖದ ಸುಗ್ಗಿಯೊಳಗೆ ಎನ್ನ ಪ್ರಾಣ ಮನ ಕರಣಗಳು ಮೇರೆದಪ್ಪಿ
> ಸಮುದ್ರದೊಳಗೆ ಅದ್ದಿದಂತೆ ಆದೆನಯ್ಯಾ. ಮುಳುಗಿದೆನಯ್ಯಾ ಸ್ವಾನು
> ಭಾವವೆಂಬ ಗುರುವಿನ ಕರುಣದಲ್ಲಿ. ಇಂತಾದ ಬಳಿಕ ಕೂಡಲ ಚೆನ್ನ
> ಸಂಗಯ್ಯನೇ ಪ್ರಾಣವಾಗಿರ್ದೆನಯ್ಯಾ.
>
> ವ. ಶಾ. ಸಾ., ಭಾ. ೨ ಪು ೪೮೩

# ಬಸವಣ್ಣನವರ ಕಲ್ಯಾಣ

"ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಯಲ್ಲಿ' ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರಕಾಶ. ಆ ಬೆಳಗಿನೊಳಗೆ ಒಪ್ಪುತ್ತಿರ್ದರಯ್ಯಾ ಅಸಂಖ್ಯಾತ ಭಕ್ತಮಹಾಗಣಂಗಳು. ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತಕ್ಷೇತ್ರವೆಂಬುದು ಹುಸಿಯೇ? ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೇ? ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆನು ಕಾಣಾ ಸಿದ್ಧರಾಮಯ್ಯ."

ಪ್ರಭುಲಿಂಗಲೀಲೆ, ಗತಿ ೧೪ ಪು. ೧೭೦

ಕಲ್ಯಾಣ! ಬಸವಣ್ಣನವರ ಕಲ್ಯಾಣ!! ಹನ್ನೆರಡನೆಯ ಶತಮಾನದ ಗರ್ಭದಲ್ಲಿ ಮುಳುಗಿದ್ದರೂ ಆ ಗರ್ಭವನ್ನು ಭೇದಿಸಿ ಮೀರಿ ಮೆರೆವ ಕಲ್ಯಾಣ. ಶಿವಪ್ರಕಾಶವಲ್ಲಿ ಮೈತೊಳೆದುಕೊಂಡು ಸ್ವಚ್ಛವಾಗಿ ನಿಚ್ಚಳವಾಗಿ ತೊಳಗಿ ಬೆಳಗುವ ಕಲ್ಯಾಣ. ಮಹಾ ಘನಲಿಂಗದ ಪರಮಪ್ರಕಾಶದಲ್ಲಿ ಎಚ್ಚತ್ತು ಬಾಳಿ, ಬಾಳನ್ನು ಬೆಳಗಿ, ಬೆಳಗನುಟ್ಟು ಬಯಲಾಗಿ ಹೋದ ಶಿವಶರಣಗಣಂಗಳ ಶ್ರೀಪಾದ ಸೋಂಕಿದ ನೆಲ ಕಲ್ಯಾಣ, ಅವರ ಶ್ರೀಪಾದಂಗಳನ್ನು ತೊಳೆದು ಪಾದೋದಕವೆನಿಸಿದ ನೀರು ಕಲ್ಯಾಣ, ಪರಮಾನಂದರಸ ಒಸರುವ ಅವರ ದಿವ್ಯ ವಚನಗಳನ್ನು ಕಿವಿಯಾರೆ ಕೇಳಿದ ಅಲ್ಲಿಯ ಗಾಳಿ ಕಲ್ಯಾಣ, ತೆರಹಿಲ್ಲದ ಬಯಲಾದ ಶರಣರ ನವ್ಯವಾದ ಲಿಂಗಲೀಲಾವಿಲಾಸಕ್ಕೆ ತೆರಹುಗೊಟ್ಟ ಅಲ್ಲಿಯ ಬಯಲು ಕಲ್ಯಾಣ. ಇಂತು ಸರ್ವಮಂಗಳಮಯವಾಗಿ ಬೆಳಗುವ ಬಸವಣ್ಣನವರ ಕಲ್ಯಾಣವನ್ನು ಕಂಡ, ಕಾಣುವ, ಕಣ್ಣೆಲ್ಲ ಪುಣ್ಯ, ಮನವೆಲ್ಲ ಮಂಗಳ. ಅದರ ಮಹಿಮಾತಿಶಯವನ್ನು ಕೇಳುವ ಕಿವಿಯೆಲ್ಲ ಸವಿ, ಭಾವವೆಲ್ಲ ಬೆಳಗು. ಆದರೇನು ಇಂತಹ ನಿಜಕಲ್ಯಾಣವನ್ನು ನಾವು ಹೊಗಬಹುದೇ? ಅದು ನಮಗೆ ಕಾಣಬಹುದೇ?

ಲಿಂಗದ ಬೆಳಗೇ ಅಂಗವಾದ ಶರಣರ ವಚನಾಮೃತದ ಸವಿಯನ್ನು ಭವರೋಗವಡಸಿ ವಿಷವಾದ ನಾಲಗೆ ತಿಳಿಯಬಾರದೆಂತೋ ಅಂತೆಯೇ

ಆಶೆಯಾಮಿಷದ ಕಣ್ಗೆ ಕಲ್ಯಾಣದ ಅಂತರ್ಯ ಅಗಮ್ಯ, ಅಗೋಚರ. ಎಡೆವಿಡದೆ ವಿಷಯಕ್ಕೆ ಹರಿದಾಡುತ್ತಿರುವ ಕಾಲು ಕಲ್ಯಾಣವನ್ನು ಹೊಗಬಾರದು; ಮಿಕ್ಕಿ ಹೊಕ್ಕರೂ ಮರವೆಯೊಳಗಾಡುವ ಮನಕ್ಕೆ ಕಲ್ಯಾಣದ ಘನ ತೋರಲಿಲ್ಲ, ಅದಕ್ಕದು ಬೇರಲಿಲ್ಲ. ಇಮ್ಮಾವಿನ ಬಸವನ್ನು ಕಾಗೆ ಹೊಕ್ಕರೇನು ? ಮಲ್ಲಿಗೆಯ ಮಕರಂದವನ್ನು ಕಡಂದುರು ಕಂಡರೇನು ? 'ಊಡಬಾರದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ' ತನ್ನ ತಾ ಕಾಣದ ಕಣ್ಣಿಗೆ ಕಾಣಬಾರದ ಕಲ್ಯಾಣ ಕಾಂಬುದೆಂತು ? ಕತ್ತಲೆಯ ಜಾಲದಲ್ಲಿ ಸಿಕ್ಕು ಹಿಂದು ಮುಂದುಗಾಣದಿರುವ ಮನಕ್ಕೆ ಬಸವಣ್ಣನವರ ಕಲ್ಯಾಣದ ನಿಜಾರ್ಥ ಹೊಳೆಯಲಿಲ್ಲ , ಅದಕ್ಕದು ತಿಳಿಯಲಿಲ್ಲ. ಸುಗಂಧ ಪುಷ್ಪದ ಅರ್ಥ ಮಿಡಿಚೆಗಾಗಬಹುದೇ ? ಪುಷ್ಪವನ್ನು ಕಡಿಯಬಲ್ಲದು ಮಿಡಿಚೆ; ಆದರೆ ಅದರ ಸುಗಂಧವನ್ನು ಸ್ವೀಕರಿಸಬಲ್ಲುದೇ ? ಸತ್ಯ ಶರಣರಿಗೆ ಮಾತ್ರ ತನ್ನ ಅಂತರಂಗವನ್ನು ಬಿಚ್ಚಿದೆ ಕಲ್ಯಾಣ. ಅಂತೆಯೇ ಅವರು ಹೀಗೆ ಹೇಳುವುದು:—

> ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು, ಅಸಾಧ್ಯವಯ್ಯ ! ಆಶೆ ಆಮಿಷವನಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು. ಒಳ ಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು. ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು. ಒಳಗೆ ತಿಳಿದು ಚೆನ್ನ ಮಲ್ಲಿಕಾರ್ಜುನನಂಗೊಲಿದು ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು

ಮ. ವ., ಶೂ. ಸಂ., ಪು. ೨೭೮

ಇದೇ ಮಾತನ್ನು ಇನ್ನಷ್ಟು ಬಲವಾಗಿ ಹೇಳಿದ್ದಾರೆ ಮಡಿವಾಳಮಾಚಯ್ಯನವರು:

> ' ಹೊಗಬಾರದು ಕಲ್ಯಾಣವನ್ನಾರಾದಡೆಯು. ಹೊಕ್ಕಡೇನು ? ಕಲ್ಯಾಣದ ಸ್ಥಾನಮಾನಂಗಳನರಿಯಬಾರದು. ಕಲ್ಯಾಣದ ಕಡೆಯ ಕಾಣಬಾರದು. ಕಲ್ಯಾಣದೊಳಗೆ ಹೊಕ್ಕಿಹೆವೆಂದು, ಕಲ್ಯಾಣ ಚಾರಿತ್ರರಾದೆವೆಂದು ದೇವ ದಾನವ ಮಾನವರೆಲ್ಲರು ಭಾವಿಸುತ್ತಿದ್ದರು ನೋಡಾ ! ಕಲ್ಯಾಣವನು ಅನಂತ ಮೂರ್ತಿಗಳು, ಅನಂತ ಸ್ಥೂಲ ಮೂರ್ತಿಗಳು, ಅನಂತ ಸೂಕ್ಷ್ಮ ಮೂರ್ತಿಗಳು, ಅನಂತ ಮಂತ್ರಧ್ಯಾನ ಮೂರ್ತಿಗಳು, ಪುಣ್ಯಕ್ಕೆ ಅಭಿಲಾಷೆಯ ಮಾಡುವವರು, ಪೂಜಕರು, ಯೋಗಿಗಳು ಭೋಗಿ

ಗಳು, ದ್ವೈತರು ಅದ್ವೈತರು, ಕಾಮಿಗಳು ನಿಃಕಾಮಿಗಳು, ಅಶ್ರಿತರು ಅದೆಂತು ಕಲ್ಯಾಣವ ಹೊಗಬಹುದಯ್ಯ? ಅದೆಂತು ಕಲ್ಯಾಣವ ಕಾಣಬಹುದಯ್ಯ ಲಿಂಗದೃಷ್ಟಂಗಲ್ಲದೆ? ಲಿಂಗ ವೇದ್ಯಂಗಲ್ಲದೆ? ಲಿಂಗಗಂಭೀರಂಗಲ್ಲದೆ? ಪ್ರಸಾದ ಕುಳಾನ್ವಯಂಗಲ್ಲದೆ? ಆಸೆಗೆಡೆಗುಡದಿಪ್ಪುದೇ ಕಲ್ಯಾಣ. ಸರ್ವಾಂಗವನಳಿದು, ಕುಲವುದ ತಲೆದೋರದೆ, ಭಕ್ತಿ ಸಿತ್ಯವಾದುದೇ ಕಲ್ಯಾಣ. ಈ ಕಲ್ಯಾಣವೆಂಬ ಮಹಾಘನದೊಳಗೆ ಬಸವಣ್ಣನು ನಾನು ಕೂಡಿ ಹದುಳದೊಳಿರ್ದೆವು ಕಾಣಾ ಕಲಿದೇವರ ದೇವಾ.

ಮ. ಮಾ. ವ., ಶೂ. ಸಂ., ಪು. ೧೭೮

ಶರಣರ ಕಣ್ಣು ಕಂಡಂತೆ ಕಲ್ಯಾಣ ಸತ್ಯದ ಸಮುದ್ರ, ನಿತ್ಯದ ನಿಲಯ, ಭಕ್ತಿಯ ತವರು, ಮುಕ್ತಿಗೆ ಮುಖ. ಚತುರ್ದಶ ಭುವನಗಳೆಂಬ ಮಹಾ ಮಂದಿರಕ್ಕೆ ಕಲಶದಂತಿರುವ ಕೈಲಾಸವೇ ಮರ್ತ್ಯಕ್ಕವತರಿಸಿ ಕಲ್ಯಾಣವೆಂಬ ಪಟ್ಟಣ ಹುಟ್ಟಿತೆಂದೂ ಅವರ ಪೂಜ್ಯ ಭಾವನೆ. ಅಂತೆಯೇ ಅದು ಅಭಿನವ ಕೈಲಾಸ, ಪರಮ ಪವಿತ್ರವಾದ ಅವಿಮುಕ್ತಕ್ಷೇತ್ರ, ಪರಿಪೂಜ್ಯ, ಪರಮ ಮಂಗಲ. 'ಕಲ್ಯಾಣದ ನಾಮವ ಪಿಡಿದು ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು. ಲೋಕದೊಳಗೆ ಕಲ್ಯಾಣವೇ ಕೈಲಾಸವೆನಿಸಿತ್ತು' (ಶೂ ಸಂ. ಪು. ೮೬.) ಎಂಬುದು ಚೆನ್ನಬಸವಣ್ಣನವರ ಶಾಶ್ವತ ಶಾಸನದ ಮಾತು. ಇಂತಹ ಮಾತನ್ನು ಕೇಳಿ ಬುದ್ಧಿ ಸಿಡಿದೆದ್ದು ಪ್ರತಿಭಟಿಸಬಹುದು. ನಂಬಿಗೆಯೂ ನಂಬದಿರಬಹುದು. ಆದರೆ ಬುದ್ಧಿಯನ್ನು ಭಾವವನ್ನು ಸ್ತಿಮಿತಗೊಳಿಸಿ ಸಾವಧಾನವಾಗಿ ವಿವೇಚಿಸಿ ನೋಡಲು ಹಚ್ಚಿದರೆ ಈ ಮಾತಿನಲ್ಲಿರುವ ಸತ್ಯಾರ್ಥ ಹೊಳೆಯಬಹುದು. ಮೇಲಿನ ಕೈಲಾಸ ಕೆಳಗಿಳಿದು ಕಲ್ಯಾಣವಾಗಿ ಹುಟ್ಟಿರಲಿಕ್ಕಿಲ್ಲ. ಆದರೆ ಮರ್ತ್ಯ ಲೋಕದ ಕಲ್ಯಾಣವೇ ದೇವಲೋಕದ ಮಟ್ಟಕ್ಕೇರಿದೆ, ಆ ಮಟ್ಟವನ್ನೂ ಮೀರಿ ಆಚೆಗೆ ಮೆರೆದಿವೆ, ಇಹಪರವನ್ನು ಮೀರಿ ನಿಂದ ಶರಣರ ದಿವ್ಯ ಜೀವನ ಲೀಲಾವಿಲಾಸಕ್ಕೆ ರಂಗಸ್ಥಲವಾಗಿ 'ಮಂಗಳವಾಡ' ವಾಗಿದೆ, ಎಂಬ ಮಾತು ಬುದ್ಧಿಗೂ ಬಹು ಮಟ್ಟಿಗೆ ಒಪ್ಪಿಗೆಯಾಗಬಹುದು. ಸ್ವಾತ್ಮಾನುಭೂತಿ ಸಟೆಯಲ್ಲ, ದಿಟವೆಂದಿರುವ ಮಾನವನ ಭಾವಮಂತೂ ಈ ಮಾತನ್ನು 'ಶಿರಸಾ ಮಾನ್ಯ' ಮಾಡಬಹುದು.

ಕಲ್ಯಾಣದ ಅಂತರಂಗಕ್ಕೆ ಬೀಗವಿಕ್ಕಿರಬಹುದು. ಆ ಬೀಗವನ್ನು

ತೆಗೆವ ಕೈ ನಮಗಿರಲಿಕ್ಕಿಲ್ಲ. ಅಂತೆಯೇ ಒಳಹೊಕ್ಕು ನೋಡುವ ಭಾಗ್ಯ ನಮ್ಮದಾಗಲಿಕ್ಕಿಲ್ಲ. ಆದರೆ ಕಲ್ಯಾಣದ ಬಹಿರಂಗವನ್ನು ಕಣ್ತುಂಬ ನೋಡಬಹುದು.

ಕಲ್ಯಾಣ 'ಅಶ್ವಪತಿ ಗಜಪತಿ ನರಪತಿರಾಯ ರಾಜಾಧಿರಾಜ ಬಿಜ್ಜಳನ ರಾಜಧಾನಿ.' 'ನ ಭೂತೋ ನ ಭವಿಷ್ಯತಿ' ಎಂದು ಹೊಗಳಿಸಿ ಕೊಂಡ ಮಹಾಪಟ್ಟಣ. ಸಕಲೈಶ್ವರ್ಯ ಭೋಗ ಭಾಗ್ಯದಿಂದ ತುಂಬಿ ತುಳುಕುವ ಭವ್ಯನಗರ. ಆ ಮಹಾ ಕಲ್ಯಾಣದ ವಿಸ್ತಾರ ಹನ್ನೆರಡು ಯೋಜನ ಪರಿ ಪ್ರಮಾಣ. ಆ ಪಟ್ಟಣವನ್ನು ಬಳಸಿಬಂದ ನಾಲ್ವತ್ತೆಂಟು ಯೋಜನ ಪರಿಪ್ರಮಾಣದ ಕೋಟೆ. ರಾಜಪುತ್ರರು ಮಂತ್ರಿಗಳು ದಂಡನಾಯಕರು ಮಂಡಳೇಶ್ವರರು, ಮಹಾಸಾಮಂತರು ಸಾಮಂತರು, ರಾಯರಾವುತರು ಗಜಾ ರೋಹಕರು, ಬಿಂಕದಂಕಕಾರರು ಮಲ್ಲಜಟ್ಟಿಗಳು, ಕವಿ ಗಮಕಿ ವಾದಿ ವಾಗ್ಮಿ ಗಳು, ಗಾಯಕರು ಚಿತ್ರಕಾರರು ನರ್ತಕರು ವರ್ತಕರು ಇವರಿಂದ ಇವರ ಮನೆಗಳಿಂದ ಕಿಕ್ಕಿರಿದು ಕಳಕಳಿಸುವ ಕಲ್ಯಾಣ ಮಹಾಪಟ್ಟಣ. ಆ ರಾಜಧಾ ನಿಯ ಒಂದು ಮಗ್ಗುಲಿದು. ತಿರುಗಿ ಮತ್ತೊಂದು ಮಗ್ಗಲು ನೋಡಿದರೆ ಅದೇ ಕಲ್ಯಾಣ ಶಿವಭಕ್ತಿಸಾಮ್ರಾಜ್ಯದ ರಾಜಧಾನಿ ತೋರುತ್ತಿದೆ. ಇದು ಭಕ್ತಿಭಾಂಡಾರಿ ಬಸವಣ್ಣನ, ಮಾತು ಮನವನ್ನು ಮೀರಿ, ನಿತ್ಯ ನಿರಂಜನವಾಗಿ ಎಡೆದೆರಹಿಲ್ಲದೆ ಪ್ರಜ್ವಲಿಸಿ ತೊಳಗಿ ಬೆಳಗುವ ಮಹಾ ಘನಲಿಂಗವನ್ನು ಮರ್ತ್ಯಕ್ಕೆ ತಂದ 'ಆದಿಲಿಂಗ ಅನಾದಿ ಬಸವಣ್ಣ'ನ ಸ್ವರಾಟ್ ರಾಜಧಾನಿ ಆ ಮಹಾಕಲ್ಯಾಣ. ಸಂಗನ ಬಸವಣ್ಣ ಕಲ್ಯಾಣಕ್ಕೆ ಬಂದು ಮಹಾಮನೆಯ ಕಟ್ಟಿದರೆ 'ಮರ್ತ್ಯ ಲೋಕವೆಲ್ಲವು ಭಕ್ತಿ ಸಾಮ್ರಾಜ್ಯವಾಯಿತ್ತು; ಕಲ್ಯಾಣ ಕೈಲಾಸವೆನಿಸಿತ್ತು.'

ಆ ಮಹಾಕಲ್ಯಾಣದಲ್ಲಿ ಸಾವಿರಾರು ಶಿವಾಲಯ ಅವಕ್ಕೆಲ್ಲ ಮುಖ್ಯ ವಾದ ತ್ರಿಪುರಾಂತಕದೇವಾಲಯ. ಅದರ ಬದಿಯಲ್ಲಿ ಕಣ್ಣಳತೆ ಮೀರುವ ಬಲುದೊಡ್ಡ ಕೆರೆ. ಕೆರೆಯ ಸಮೀಪ ದಂಡೆಯ ಮೇಲೆ ರುದ್ರಮುನಿಯ ಗವಿ. ಆಚೆ ಅಕ್ಕ ನಾಗಮ್ಮನ ಗವಿ. ಹಾಳಾದ ಅನುಭವಮಂಟಪ. ಇನ್ನೂ ಹಲವಾರು ಕೆರೆಗಳು. ಪದ್ಮಪತ್ರ ತೀವಿದ ಸರೋವರಗಳು. ಪತ್ರಿಯ ಬನ ಪುಷ್ಪ ವಾಟಿಕೆಗಳು. ಕಲ್ಯಾಣದಲ್ಲಿದ್ದು ಭಕ್ತಿ ಸಾಮ್ರಾಜ್ಯದಲ್ಲಿ ಶಿವಪ್ರಕಾಶ

ದಲ್ಲಿ ಬಾಳಿದವರು ಅಸಂಖ್ಯಾತರು. ಮಹಾಘನಲಿಂಗದಲ್ಲಿ ಯಾವಾಗಲೂ ಎಚ್ಚತ್ತಿದ್ದು ನಿಚ್ಚ ಶಿವರಾತ್ರಿ ಮಾಡಿದವರನಂತ. ಸತ್ಯ ಸಾಮ್ರಾಜ್ಯದಲ್ಲಿ ಬಾಳಿದ ಸತ್ಯರು ಸಾತ್ವಿಕರು, ನಿತ್ಯರು ನಿಜೈಕ್ಯರು, ಪರಮ ಶಿವಯೋಗಿಗಳು ಲಿಂಗ ಭೋಗೋಪಭೋಗಿಗಳು, ಅಚ್ಚ ಪ್ರಸಾದಿಗಳು ನಿಚ್ಚ ಪ್ರಸಾದಿಗಳು, ಮಚ್ಚಿ ಹೊಲಿವ ಕಾಯಕದವರು, ದಣ್ಣಾಯಕರು. ಅಂದು ಕಲ್ಯಾಣದಲ್ಲಿ ಶರಣರು ಮಾಡದ ಕಾಯಕವಿಲ್ಲ, ಕಾಯಕವಿಲ್ಲದ ಗುರುಲಿಂಗ ಜಂಗಮ ದಾಸೋಹವಿಲ್ಲ. ಇಂತಹ ದಾಸೋಹದ ಮಠವಲ್ಲದ ಭಕ್ತನ ಮನೆ ಇಲ್ಲ. ಸಾವಿರಾರು ಕಟ್ಟಳೆಯ ನೇಮದ ಭಕ್ತರ ಮಠಗಳು, ಸದಾಚಾರಿಗಳ ಮಠಗಳು, ಶೀಲಸಂಪನ್ನರ ಮಠಗಳು, ಮಾಟಕೂಟದವರ ಮಠಗಳು. 'ಅಂತು ೨ ಲಕ್ಷ ೮೫ ಸಾವಿರದ ೭೭೦ ಅಸಂಖ್ಯಾತರಿಗೆ' ಮಹಾಪ್ರಮಥಗಣಂಗಳಿಗೆ ಭಕ್ತಮಹಾಗಣಂಗಳಿಗೆ ಪ್ರಮಥನಾಯಕನಾಗಿ ಅನಂತ ಕೋಟಿ ಮುಖವಾಗಿ ಒಡನಾಡಿಯಾಗಿಪ್ಪನು ಸಂಗನಬಸವಣ್ಣನು;

'ಎರಡು ಲಕ್ಷ ಎಂಬತ್ತೈದು ಸಾವಿರ ಏಳುನೂರೆಪ್ಪತ್ತು' ದಾಸೋಹದ ಮಠಗಳಿಗೆ ಮುಖ್ಯವಾದ ಬಸವಣ್ಣನವರ ಮಠ, ಅದೇ ಅವರ ಅರಮನೆ. ಕಲುಗೆಲಸದ ಪೌಳಿ, ಕುಸುರಿಗೆಲಸದ ದ್ವಾರವಟ್ಟ. ಮಿಸುನಿಯ ಕಂಭದ ಮೇಲೆ ಪಂಚಾಕ್ಷರದ ಶಾಸನ, ತೋರಣಗಳಲ್ಲಿ ರುದ್ರಾಕ್ಷಿಯ ಸೂಸಕ, ಮೇಲುಪ್ಪರಿಗೆಯ ಮೇಲೆ ಗಾಳಿಗೊಲಿದಾಡುವ ನಂದಿಯ ಧ್ವಜ, 'ಯೋಜನವರೆಯ ಬಿನ್ನಾಣದರಮನೆಯ ವಿಸ್ತೀರ್ಣದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ! ಇಂತಹ ಅಂಕಿ ಸಂಖ್ಯೆಗಳ ಕಲ್ಪನೆ ಇಂದಿನ ತಲೆ ಹಿಡಿವಂತಿಲ್ಲ.

ಪರಶಿವನ ಪರಮಪ್ರಕಾಶದಲ್ಲಿ ಮಿಂದು ಒಳಹೊರಗೆ ತೊಳಗಿ ಬೆಳಗುವ ಕಲ್ಯಾಣದ ಸದುಹೃದಯದಂತಿರುವ ಸಂಗನಬಸವಣ್ಣನ ಮಹಾಮನೆ. ಮುಂದೆ ಮಂಗಳಮಯವಾಗಿ ಕಂಗೊಳಿಸುವ ಅಂಗಳ. ಒಳಹೊರಗೆ ಹರಿದಾಡುವ ಶಿವಶರಣ ಭಕ್ತ ಮಹಾಗಣಂಗಳ ಸತ್ಯಾನಂದದ ಸಂಭ್ರಮ. ಶ್ರೀ ಗುರುವಿನ ಕಾರುಣ್ಯ ಕರಪಲ್ಲವದೊಳಗೆ ಜನಿಸಿ, ಪೂರ್ವಜನ್ಮವಳಿದು ಪುನರ್ಜಾತರಾಗಿ, ಮಾಂಸಪಿಂಡವಳಿದು ಮಂತ್ರಪಿಂಡರಾಗಿ, ವಿಷಯವಾಸನೆಯಳಿದು ಪ್ರಸಾದಕಾಯರಾಗಿ, ಅಂಗದ ನೆಲೆವನೆ ನಿಜ

ಲಿಂಗವೆಂದರಿದು, ನಿಜಲಿಂಗದೆಡೆಗೆ ತನುವೆಲ್ಲ ಕಾಲಾಗಿ ನಡೆದು, ಮನವೆಲ್ಲ ಲಿಂಗವ್ಯಾಮೋಹನವಾಗಿ ಆಲಿಂಗಿಸಿ, ಬಯಲಿಂಗೆ ಬೇಟಗೊಂಡು ಭಾವವೆಲ್ಲ ಬಯಲಾಗಿ, ಬಯಲೆಲ್ಲ ಬೆಳಗಾಗಿ, ಬೆಳಗೆಲ್ಲ ಸಚ್ಚಿದಾನಂದ ನಿತ್ಯ ಪರಿಪೂರ್ಣವಾಗಿ, ನಾನೆತ್ತ ಹೋದೆನೆಂದರಿಯದೆ, ಶೂನ್ಯ ನಿಶ್ಶೂನ್ಯವ ಮೀರಿ ನಿಶ್ಶಬ್ದ ನಿಜವಲ್ಲಿ ನಿಂದು ಲಿಂಗಲೀಲಾವಿಲಾಸದಲ್ಲಿ ನಲಿದಾಡುತ್ತಿರುವ ನಿತ್ಯ ನಿಜೈಕ್ಯ ಶರಣರ ವಿಭ್ರಮ ವಿಲಾಸ. ಸದ್ಭಕ್ತ ಮಹಾಗಣಂಗಳ ಅಂಗದಿಂದ ಹರಿವ ಸದಾಚಾರ. ಲಿಂಗವ್ಯಾಮೋಹದಿಂದ ಅವರ ಸಮುಹೃದಯವಲರಿ ಹೊರಸೂಸುವ ಸದ್ಭಕ್ತಿ. 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ತಂಪಾಗಿ ತೀಡುವ ದಾಸೋಹಭಾವ. ಶಿವಭಕ್ತಿಯುಟ್ಟ ಬೆಳಗಿನ ಮಡಿಯುಂತಿರುವ ಶಿವಜ್ಞಾನ. ಭಕ್ತಿಜ್ಞಾನಗಳ ಸಮರಸಸಂಗಮದಿಂದ ಹೆದ್ದೊರೆಯಾಗಿ ಹರಿವ ಪರಮಾನಂದಾಮೃತ ಜಲ. ಪರಮಾನಂದವಲ್ಲಿ ಪರಿಪೂರ್ಣವಾಗಿ ಕಂದೆರೆವ ವೈರಾಗ್ಯ ಇಂತಹ ಪರಮಪಾವನ ವಾತಾವರಣ ತುಂಬಿ ಮಿತಿ ಮೀರಿದ ಕೂಡಲಸಂಗಮದೇವನ ರಾಜತೇಜದಲ್ಲಿಪ್ಪ ಬಸವಣ್ಣನ ಮಹಾಮನೆಯ ಸುತ್ತು ಮುತ್ತು, ಈ ಮಹಾಮನೆಯಲ್ಲಿ ಮೇಲು ಕೀಳೆಂಬ ಕುಲ ಹೊಲೆಯೆಂಬ ಜಾತಿ ಸೂತಕವೆಂಬ ವಿಷಮ ವಿಷವಾಯುವಿನ ಸುಳಿವಿಲ್ಲ. ಹಾಲುಗಡಲಲ್ಲಿ ಬೇವಿನ ಬಿಂದು ಉಂಟೇ ? ಮೇಲು ಕೀಳು ! ಮೇಲಾವುದು ? ಕೀಳಾವುದು ? ಮರವೆ ತುಂಬಿ ತನ್ನ ತಾನರಿಯದ ಮಾನವನ ಕಲ್ಪನೆಯಲ್ಲವೇ ಇವು ? ಮರವೆಯ ಮಬ್ಬುಗಣ್ಣಿಗೆ ಮೇಲು ಕೀಳಲ್ಲದೆ ಅರಿವು ಕಂದೆರವಿಯಾದ-ಅರಿವೇ ತಾನಾದ- ಬಸವಣ್ಣನವರ ಮಹಾಮನೆಯಲ್ಲಿ ಈ ವಿಷಮ ದ್ವೈತವೆಲ್ಲಿ ? ಮರಹಿಂಗೆ ಹಿರಿದು ಕಿರಿದಲ್ಲದೆ, ಮರಹಿಂಗೆ ಮೇಲು ಕೀಳಲ್ಲದೆ, ಮರಹಿಂಗೆ ಶ್ರೇಷ್ಠ ಕನಿಷ್ಠ, ಹೆಚ್ಚು ಕಡಮೆಯಲ್ಲದೆ ನೆಲೆಯರಿದು ಅರಿವಿನ ತಿರುಳಾದ ಕಣ್ಣಿಗೆ ಇವರ ಮಾತೇಕೆ ? ಈ ಮಹಾಮನೆಯಲ್ಲಿ ಎತ್ತ ನೋಡಿದತ್ತ ಶರಣರಡಿಗೆ ಶರಣಾರ್ಥಿ, ಶರಣು ಶರಣಾರ್ಥಿ ಎಂಬ ಸದ್ವಿವೇಕ, ಸದ್ವಿನಯ. 'ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲಸಂಗಮದೇವ' ಎಂಬ ಪ್ರಾರ್ಥನೆ. ಶರಣರಿಗೆ ಶರಣು ಹೋದರೆ

ಭವ ಬಂಧನ ಹರಿವುದೆಂದು ಶರಣರ ಸಾವಧಾನ ಸೂತ್ರ. ಶರಣರಿಗೆ ಶರಣೆಂಬ ಭಾವದಲ್ಲಿ ಎಂತಹ ಜೀವಾನಂದವಿದೆ:

> ಅಡಿಗಡಿಗೆ ನಿಮ್ಮ ಶರಣರಡಿಗೆರಗಿ ಶರಣೆಂಬೆ. ಅವರ ನುಡಿಯ ಬೋಧೆಯ ಕೇಳಿ ಅನ್ಯನುಡಿ ನಮನಿಸವು. ಒಡೆದೆಲು ಸಿರ ಬಿಗಿದು ಮಡುಗಟ್ಟಿ ಕಂಬನಿಯು ಕಡಲೊಳಗೆ ಕೆಡೆಯುತೆಂದಿಪ್ಪೆನೋ? ವೃಢ ಶರಣು ಶರಣೆಂಬ ಶಬ್ದ ಒಡಲುಗೊಂಡು ಶಂಭುಜಕ್ಕೇಶ್ವರದೇವಂಗೆ ಶರಣೆನುತ ನ್ಯೆಮರೆದೆಂದಿಪ್ಪೆನೊ?

ವ. ಶಾ ಸಾ., ಭಾ. ೨ ಪು. ೩೬೨

ಶಿವನು ಎಷ್ಟು ಪೂಜ್ಯನೋ ಶರಣರೂ ಅಷ್ಟೇ ಪರಿಪೂಜ್ಯರು. ಬಸವಣ್ಣ ಭಕ್ತ, ಸುಜ್ಞಾನ ಜ್ಯೋತಿಯ ಬೆಳಗಿನೊಳಗೆ ಸುಳಿದಾಡುವ ಜಂಗಮ ಮೂರ್ತಿ ಪ್ರಭುದೇವರು. ಯಾರಿಗೆ ಯಾರು ಶರಣಾಗಬೇಕು? ಬಸವಣ್ಣ ಪ್ರಭುದೇವರ ಕಂಡು '........ ಕೂಡಲಸಂಗಮದೇವಯ್ಯ ನಿಮ್ಮ ಶ್ರೀ ಪಾದಕ್ಕೆ ನಮೋ ನಮೋ ಎನುತಿರ್ದೆನು' 'ಕೂಡಲಸಂಗಮದೇವಯ್ಯ ನಿಮ್ಮ ಶ್ರೀಪಾದವ ಕಂಡು ಧನ್ಯನಾದೆನು.' ಎಂದು ತಲೆಬಾಗಿದರೆ ಪ್ರಭುದೇವರು 'ಗುಹೇಶ್ವರನ ಶರಣ ಅಲ್ಲಯ್ಯಂಗೆ ನೀನು ಪರಮಾರಾಧ್ಯರು ಕಾಣಾ ಸಂಗನ ಬಸವಣ್ಣ.' 'ನಮ್ಮ ಗುಹೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು ಧನ್ಯರಾಗಬೇಕು ನಡೆ ಸಿದ್ಧರಾಮಯ್ಯ.' ಎಂದು ತಲೆದೂಗಿ ತಲೆಬಾಗಿದ್ದಾರೆ. ಅಂತೆಯೇ ಸುಪ್ಪಾಣಿಯ ಮುತ್ತಿನಂತಿರುವ ಬಸವಣ್ಣನವರ ಮಾತು

> ಕಂಡ ಭಕ್ತಂಗೆ ಕೈಮುಗಿವಾತ ಭಕ್ತ
> ಮೃದುವಿನಯವೇ ಸದಾಶಿವನ ಒಲುಮೆಯಯ್ಯ!

ನೀನೊಲಿದ ಕುಲಕ್ಕೆ ನೀನೊಲ್ಲದ ಹೊಲೆಗೆ ಮೇರೆಯುಂಟೇ? ಎಂಬ ಪರಿಪೂತ ಭಾವನೆಯ ಸಂಗನ ಬಸವಣ್ಣನ ಮಹಾಮನೆಯಲ್ಲಿ ಕುಲ ಹೊಲೆ ಜಾತಿ ಸೂತಕವೆಂಬ ಭಾವನೆಯ ಸೂತಕದ ಸುಳಿವಿಲ್ಲ. ಆವ ಕುಲವಾದರೇನು ಲಿಂಗವ ನಂಬಿದಾತ ಕುಲಜ, ಲಿಂಗವ ಪೂಜಿಸಿದಾತ ಕುಲಜ, ಲಿಂಗ ಮುಟ್ಟಿದಾತ ಕುಲಜ. ಮಾವು ಬೇವು ಅತ್ತಿ ಮತ್ತಿ ಮೊದಲಾದ ಕಟ್ಟಿಗೆಯು ಕುಲ ಜಾತಿ ಬೆಂಕಿ ಮುಟ್ಟಿ ಬೆಂಕಿಯಾದ ಮೇಲೆ ಮರಳಿ ಕುಲಜಾತಿಯನರಸಲುಂಟೇ? ಕೋಟಿಪುಣ್ಯದಿಂದ ಸದ್ಗುರು ದೊರೆತು ಆತನ ಹಸ್ತಕಮಲದಲ್ಲಿ ನಿಜ

ಜ್ಞಾನಜ್ಯೋತಿರ್ಮಯರಾಗಿ ಜನಿಸಿ ಗುರುಪುತ್ರರೆನಿಸಿದ ಶಿವಭಕ್ತರೆಲ್ಲರಿಗೆ ಸದ್ಗುರುವೇ ತಂದೆ ಆತನೇ ತಾಯಿ. ಭಕ್ತಗಣಂಗಳೇ ಬಂಧುಬಳಗ. ಶಿವ ಸಂಸ್ಕಾರ ಒದಗಿ ಶಿವನ ಪೂಜಿಸುವ ಕುಲವೇ ಶಿವಕುಲ, ಆತನ ಜಾತಿಯೇ ಶಿವಜಾತಿ 'ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜ,' 'ನಿಮ್ಮ ಭಕ್ತರಲ್ಲಿ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ' ಎಂಬ ಬಸವಣ್ಣನವರ ಸಮತೆಯನ್ನು ಕಂಡು ನೇವ ನಡುಗಿರಬಹುದು; ಶಾಸ್ತ್ರ ಸ್ತೈವೆರಗಾಗಿರಬಹುದು. ಏಕೆಂದರೆ ಶಾಶ್ವತ ಸತ್ಯತತ್ವವನ್ನಾಧರಿಸಿ ಮಾದಾರ ಚೆನ್ನಯ್ಯನ ಕುಲ ಚೋಳನ ಕುಲಕ್ಕಿಂತ ಮಿಗಿಲಾದುದನ್ನು ವೇದ ಕಂಡಿರಲಿಲ್ಲ! ಚೋಳನ ರಸಾಯನವನೊಲ್ಲದೆ ಚೆನ್ನನ ಅಂಬಕಳವನ್ನು ಉಂಡುದನ್ನು ವೇದಪುರುಷ ಕೇಳಿರಲಿಲ್ಲ!!

> ವೇದ ನಡನಡಗಿತ್ತು. ಶಾಸ್ತ್ರವಗಲಿ ಕೆಲಸಾರಿತ್ತಯ್ಯ. ತರ್ಕ ತರ್ಕಿಸ
> ಲರಿಯದೆ ಮೂಗುವಟ್ಟಿತ್ತಯ್ಯ. ಅಗವು ಹೊರ ತೊಲಗಿ ಅಗಲಿದ್ದಿತಯ್ಯ.
> ನಮ್ಮ ಕೂಡಲಸಂಗಯ್ಯನು ಮಾದಾರ ಚೆನ್ನಯ್ಯನ ಮನೆಯಲುಂಡ
> ಕಾರಣ.
>
> ಬ.ವ., ಪು. ೧೧೪

ಅಂತೆಯೇ ಕೂಡಲಸಂಗಮದೇವನ ಕುಲಗ, ಆತನ ಜಾತಿಯು ಬಸವಣ್ಣನ ಮಹಾಮನೆಯಲ್ಲಿ ಹಡಪದ ಅಪ್ಪಣ್ಣ, ಮಡಿವಾಳ ಮಾಚಿದೇವ, ಡೋಹರ ಕಕ್ಕಯ್ಯ, ಅಂತ್ಯಜನೆನಿಸಿದ ಶಿವನಾಗಿಮಯ್ಯ ಎಲ್ಲ ಕುಲ ಎಲ್ಲ ಜಾತಿ ಯಲ್ಲಿ. ಅವರೆ ಲಿಂಗವ ಮುಟ್ಟಿ ಲಿಂಗವ ಪೂಜಿಸಿ, ಲಿಂಗಸಂಗಿಗಳಾಗಿ ಲಿಂಗೈಕ್ಯ ರಾಗಿ, ಪೂರ್ವ ಕುಲಜಾತಿಯಳಿದು ಶಿವಕುಲ ಶಿವಜಾತಿಯಲ್ಲಿ, ಶಿವಭಕ್ತಿ ಶಿವ ಜ್ಯೋತಿಯಲ್ಲಿ ಥಳಥಳಿಸಿ ಹೊಳೆವವರು ಅವರು. ಸಂಗನ ಬಸವಣ್ಣನವರ ಮಹಾಮನೆಯಲ್ಲಿ ಇನ್ನೊಂದು ಮಾತು ಒಡೆದು ಕಾಣುವಂತಿದೆ. ಶಿವಭಕ್ತ ರೆಲ್ಲ ಒಂದೇ ಕುಲ ಎಂಬ ಭಾವನೆಯಷ್ಟೇ ಪ್ರಬಲ ಭಾವನೆ ಭವಬಂಧನದಲ್ಲಿ ಸಿಕ್ಕು ಭವಭಾರಿಗಳಾದ ಭವಿಯೊಂದು ಕುಲ ಎಂಬುದು. ಈ ಭೇದವೇಕೆ? ಎಂದು ಕೇಳಿದರೆ ಎಲ್ಲ ಶರಣರು ಹೇಳುವುದೊಂದೆ ಉತ್ತರ. ಲಿಂಗಮುಖದ ಲುದಯವಾದ ಶರಣನೆತ್ತ? ಅಂಗ ಮುಖದಲ್ಲಿ ಚರಿಸಾಡುವ ಭವಿಜೀವಿಯೆತ್ತ? ನಿತ್ಯತತ್ವವನಪ್ಪಿ ಶಾಶ್ವತವಾಗಿ ಬದುಕಿದ ಸತ್ಯಭಕ್ತನೆಲ್ಲಿ? ಮಿಥ್ಯೆಯೇ ಸತ್ಯ, ಸತ್ಯವೇ ಮಿಥ್ಯವೆಂದು ತಿರುವು ಮುರುವು ತಿಳಿದು ಹುಟ್ಟಿ ಸಾವ, ಸತ್ತು ಹುಟ್ಟುವ ಭವಿ ಜೀವನವೆಲ್ಲಿ? ಸತ್ಯ ಸದಾಚಾರವೇ ಭಕ್ತಿ. ಮಿಥ್ಯಾಚಾರ ಅನಾಚಾರವೇ ಭವಿ. ಸುಜ್ಞಾನ ಜ್ಯೋತಿಯೇ ಭಕ್ತಕುಲ ಅಜ್ಞಾನದ

ಕತ್ತಲೆಯೇ ಭವಿಕುಲ ಶರಣರು ಭವಿಯೆಂದು ಕಡೆಗಣಿಸಿದಾಗ ಅವರಲ್ಲಿ ಆತನಿಗಾಗಿ ಮರುಕವೂ ಉಂಟು. ಭವಿಯಲ್ಲಿಯೂ ಶಿವನುಂಟೆಂಬ ಭಾವನೆಯೂ ಉಂಟು. ಈ ಭಾವನೆಯಿಲ್ಲದಿದ್ದರೆ ಶಿವಜಗನ್ಮಯ ಸ್ಥಲವೆಂಬ ಸ್ಥಲದ ಆವಶ್ಯಕತೆಯೇ ಉಳಿಯುತ್ತಿರಲಿಲ್ಲ. 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು' ಎಂದು ಬಸವಣ್ಣನವರೂ ನುಡಿಯುತ್ತಿರಲಿಲ್ಲ. ಇದಕ್ಕೂ ಮುಂದೆ ಹೋದರೆ ಆ ಮಹಾಮನೆಯಲ್ಲಿ ಭವಿ ಭಕ್ತ ಎಂಬಲ್ಲಿ ತಾತ್ವಿಕ ಭೇದವು ಎಳ್ಳುಮೊನೆಯಷ್ಟೂ ತೋರುವಂತಿಲ್ಲ. ಏಕೆಂದರೆ ಭವಿ ಭಕ್ತರೆಂಬ ಭೇದವನ್ನು ಮಾಡುವ 'ಭವಿತನಕ್ಕೆ ಹೇಸಿ ಭಕ್ತರಾದ' ಭಕ್ತಗಣಂಗಳ ಮರುಳತನವನ್ನು ನೋಡಿ ಪ್ರತಿಭಟಿಸಿದ ಪ್ರಭುದೇವರ ಗುಡುಗಿಗೆ ಬಸವಣ್ಣನವರ ಮಹಾಮನೆಯ ಸುಶಾಂತ ವಾತಾವರಣವೂ ಬೆಚ್ಚಿ ಬೆದರಿರಬಹುದು; ಆದರ ಎದೆ ಅದಿರಿರಬಹುದು:—

> ಭವಿಯ ಕಳೆದೆನೆಂಬ ಮರುಳು ಜನಂಗಳು ನೀವು ಕೇಳಿರೆ ಭವಿಯಲ್ಲವೇ ನಿಮ್ಮ ತನುಮನ ಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣಗುಣಾದಿಗಳು? ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು. ನಾನು ಭವಿಯ ಪೂಜಿಸಿ ಭವಂ ನಾಸ್ತಿಯಾದೆ ಗುಹೇಶ್ವರ.
>
> ಪ್ರ. ವ., ಪು. ೧೮೬

ತನ್ನ ನಿಜದಲ್ಲಿ ನಿಂದು 'ಗುಹೇಶ್ವರ ಲಿಂಗವನಗಲಲಿಡೆಯಿಲ್ಲ' ಎಂದಿರುವ ನಿಜ ಶರಣರಿಗೆ ಭಕ್ತ ಭವಿ ಎಂಬ ಭಾವ ಉಳಿವುದೆಂತು?

ಬಸವಣ್ಣನವರ ಮಹಾಮನೆ ಅದೊಂದು ಪರಂಧಾಮ ಪರಮಾನಂದ ನಂದನವನ. ಚಿದಂಗನೆಯು ಸದ್ವಿಲಾಸದಿಂದ ವಿಹರಿಸುವ 'ರಸೋ ವೈ ಸಃ' ಎಂಬ ಸರಸೋದ್ಯಾನ. ಇತ್ತ ತನು ಉಕ್ಕಿ ಮನ ಉಕ್ಕಿ ಹರಿದೇರುವ ಸರೋವರ. ಶಾಂತಿ ಸೈರಣೆ ಸಮತೆ ಸಮಾಧಾನ ತುಂಬಿ ತಂಪಾಗಿ ಶೀಡಿ ಭವದ ಬೇಗೆಯನ್ನು ಜಡಿದು ಕೆಡೆನೂಕುವ ಸಾವಧಾನ ಮಾರುತ. ಅಂಗವ ತಿರುಳಾದ ಲಿಂಗದ ಬೆಳುದಿಂಗಳು. 'ನೇಹ ನಾನಾಸ್ತಿ ಕಿಂಚನ' ಎಂಬ ತನಿಗಾನವನ್ನು ಸಮರಸವಾಗಿ ಹಾಡಿ ಕಿವಿಯನೆಲ್ಲ ಸವಿಮಾಡಿ ಕುಕಿಲಿಡುವ ಓಂಕಾರವೆಂಬ ಜಾಣ ಕೋಗಿಲೆ. ದನಿಗೇಳಿ ಬೆರಗಾಗಿ ಪುಲಕವನೆ ತೊಟ್ಟ ಮಾಯದ ಮಾಮರ. ಮಾಮರದ ಮಕರಂದವನೊಲ್ಲದೆ ಓಂಕಾರನಾದ ಮಾಧುರ್ಯವನ್ನು ಹೀರಿ ಸಾಮರಸ್ಯದಲ್ಲಿ ಪ್ರಲಯಗಾನವ ಮಾಡುವ ಮನವೆಂಬ ತುಂಬಿ.

ಇತ್ತ ಭಕ್ತಿಪುಷ್ಪವಲರಿ ಬಸವಣ್ಣನಾಗುತ್ತಿದೆ. ಅತ್ತ ಶಿವಜ್ಞಾನ ಕಂದೆರೆದು ಚೆನ್ನಬಸವಣ್ಣನಾಗುತ್ತಿದೆ. ಮೇಲುಗಡೆ ಪರಮ ವೈರಾಗ್ಯ ಪುಷ್ಪಿತವಾಗಿ ನಿರಂಜನ ಪ್ರಭುವಾಗಿ ಝುಗಝುಗಿಸಿ ಪ್ರಕಾಶಿಸುತ್ತಿದೆ. ಮಹವು ಬಿರಿದು ಮಹಾದೇವಿಯಕ್ಕನಾಗುವಂತಿದೆ ಈಗಡೆ. ಮಾನವ್ಯವನ್ನು ಮಡಿ ಮಾಡುತ್ತಿರುವ ಮಡಿವಾಳ ಮಾಚಿದೇವ ಕಿನ್ನರಿಯ ನುಡಿಸಿ ತನ್ನ ತಾನೆ ಮೆಚ್ಚಿಸುತ್ತಿರುವ ಕಿನ್ನರೀ ಬೊಮ್ಮಣ್ಣ. ಹೀಗೆ ಅನಂತ ವಿಧವಾಗಿ ಅರಳಿ ಸರ್ವತೋಮುಖವಾಗಿ ಹಿಗ್ಗಿ ಹೊರೆಯೇರುತ್ತಿರುವ ಭಕ್ತಿಯ ಭಾಗ್ಯ ಬಸವಣ್ಣನವರ ಮಹಾಮನೆಯೆಂಬ ಪರಮ ಪಾವನ ನಂದನವನದ ಮುಂದೆ ವಾರಣಾಸಿಯ ಮಾತೇಕೆ, ರಾಮೇಶ್ವರದ ಹುಚ್ಚೇಕೆ? ಆ ಮಹಾಮನೆಯ ಮುಂದಿರುವ ಅಂಗಳಕ್ಕೆ ಇವೆಲ್ಲ ಸರಿದೊರೆಯಾಗಿ ತೂಗಬಲ್ಲುವೆ? ಎಂದೂ ಇಲ್ಲ ಎಂಬುದೇ ಪ್ರತ್ಯಕ್ಷ ಮುಕ್ತ್ಯಂಗನೆಯಂತಿರುವ ಮಹಾದೇವಿಯಕ್ಕಗಳ ಖಂಡ ತುಂಡ ಉತ್ತರ:

> ಭಕ್ತರ ಮನೆಯ ಅಂಗಣ ವಾರಣಾಸಿಯೆಂಬುದು ಹುಸಿಯೆ? ಭಕ್ತರ ಮನೆಯ ಅಂಗಣದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿಪ್ಪವಾಗಿ ಸುತ್ತಿದರೆ ಶ್ರೀಶೈಲ, ಕೆಲಬಲದಲ್ಲಿ ಕೇದಾರ, ಅಲ್ಲಿಂದ ಹೊರಗೆ ಶ್ರೀ ವಾರಣಾಸಿ. ವಿರಕ್ತಿ ಬೀಡಾಗಿ, ಭಕ್ತಿ ನೆಲೆಯಾಗಿ ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಭಕ್ತರ ಮನೆಯ ಅಂಗಣ ವಾರಣಾಸಿಗಿಂದಲಧಿಕ.
>
> ವ. ಶಾ. ಸಾ., ಭಾ. ೨ ಪು. ೩೯೫

ಅಂತೆಯೇ ಕಾಶಿಯನೊಲ್ಲದೆ, ರಾಮೇಶ್ವರಕ್ಕೆ ತಿರುಗದೆ ಶ್ರೀಶೈಲ ಕೇದಾರ ಮೊದಲಾದ ಪುಣ್ಯಕ್ಷೇತ್ರಗಳ ಪುಣ್ಯವಾಸನೆಯನೊಲ್ಲದೆ ಗಂಗೆ ಯಮುನೆ ಮೊದಲಾದ ಪವಿತ್ರತೀರ್ಥಗಳ ಜಲದಲ್ಲಿ ಮುಳುಗಲೊಲ್ಲದೆ ಕಲ್ಯಾಣದತ್ತ, ಬಸವಣ್ಣನವರ ಮಹಾಮನೆಯತ್ತ ಹೊರಳಿತು ಪರಮ ಸತ್ಯವ ಸಾಧಿಸಬೇಕೆಂದಿದ್ದ ಸದ್‌ಭಕ್ತಗಣತಿಂಥಿಣಿ, ಸುಜ್ಞಾನಜಂಗಮಸಮೂಹ. ಕಾಶಿಯಿಂದ ಕಾಶ್ಮೀರದಿಂದ ಒಡಿಸಾ ಗುಜರಾಥದಿಂದ ಬಂದವರು ಹಲವರು, ದ್ರಾವಿಡ ಆಂಧ್ರ ದೇಶದಿಂದ ಬಂದವರು ಎಷ್ಟೋ! ಕರ್ನಾಟಕದವರಂತೂ ಸರಿಯೇ, ಲೆಕ್ಕವಿಲ್ಲದಷ್ಟು. ಅಂತೆಯೇ 'ಅಸಂಖ್ಯಾತರು' ಎಂಬುದೂ ಶರಣರಿಗೆ ಬೇರೊಂದು ಹೆಸರು. ಬಸವಣ್ಣನವರ ಕಲ್ಯಾಣ, ಅವರ ಮಹಾಮನೆ

ಅಸಂಖ್ಯಾತರಿಂದ ತುಂಬಿ ತುಳುಕಿತು. ಅಸಂಖ್ಯಾತ ಭಕ್ತಮಹಾಗಣಂಗಳ ಸದ್‌ಭಕ್ತಿಯಿಂದ ತುಂಬಿ ಕಾಲನ ಕಮ್ಮಟವಾದ ಮರ್ತ್ಯ ಕರ್ತಾರನ ಕಮ್ಮಟವಾಯಿತು; ಸ್ವಾನುಭಾವ ಸುಜ್ಞಾನ ಪರಿಪೂರ್ಣವಾದ ಸದ್‌ಭಕ್ತಿಯ ಸಾಮ್ರಾಜ್ಯವಾಯಿತು. ನೋಡಬೇಕು ಕಣ್‌ತುಂಬಿ ಈ ಕರ್ತಾರನ ಕಮ್ಮಟ ವಾದ ಕಲ್ಯಾಣವನ್ನು! ಕಮ್ಮಟದಲ್ಲಿ ಕರಗಿ ಹೊಡಿಸಿಕೊಂಡು ಬಡಿಸಿಕೊಂಡು ಕೂಡಲಸಂಗನ ಶ್ರೀಪಾದಕ್ಕೆ ತೊಡಿಗೆಯಾಗಿ ಮೆರೆವ ಬಸವಣ್ಣನವರನ್ನು!! ಸಿರಿಯಾಳ ಸಿಂಧುಬಲ್ಲಾಳರ ಸಕಾಮಭಕ್ತಿಯ ಮನೆಯನೊಲ್ಲದೆ 'ಪೂರ್ವಾಚಾರಿ ಭಕ್ತಿಭಾಂಡಾರಿ' ಬಸವಣ್ಣನವರ ಮಹಾಮನೆಯೊಳಗೆ ತಲೆ ವಾಗಿ ನಡೆದು ಬದುಕಿದ ಶರಣರ ಸಂಕುಳವನ್ನು!!! ಇಂತಹ ಮಹಾಮನೆಯ ವಿಷಯದಲ್ಲಿ ಶರಣರ ಅಂತರಂಗದ ಅಭಿಪ್ರಾಯವೇನು? ಶಿವಯೋಗಿ ಸಿದ್ಧರಾಮಯ್ಯನು ಮುಂದೆ ಬಂದು ಹೀಗೆ ಹೇಳುತ್ತಾನೆ:

> ಅಯ್ಯ ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯ. ನಿಮ್ಮ ಶರಣರ ಮನೆಯೆ ನೆಲೆಮನೆ ನೋಡಾ ಎನಗೆ. ಸಿರಿಯಾಳ ಮನೆಗಟ್ಟಿ ಬೇರೂರಿಗೆ ಒಕ್ಕಲುಹೋದ. ದಾಸಿಮಯ್ಯ ಮನೆಗಟ್ಟಿ ವ್ಯವಹಾರವನಾಡಿ ಹೋದ. ಸಿಂಧುಬಲ್ಲಾಳ ಮನೆಗಟ್ಟಿ ಕೈಕೂಲಿಗಾರನಾಗಿ ಹೋದ. ಗಂಗೆ ವಾಳುಕರು ಮನೆಗಟ್ಟಿ ಲಿಂಗದ ಹೊಲಬನರಿಯದೆ ಹೋದರು. ಇವರೆಲ್ಲರು ಮನೆಯ ಮಾಡಿ ಮಹವನರಿಯದೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಪದವಿಗೊಳಗಾದರು. ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವು ಭಕ್ತಿಸಾಮ್ರಾಜ್ಯ ವಾಯಿತ್ತು. ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗ ಪದವ ಪಡೆದರು. ಆ ಗೃಹವ ನೋಡಬೇಕೆಂದು ನಾನು ಹಲಕಾಲ ತಪಸಿದ್ದೆನು. ಕಪಿಲಸಿದ್ಧಮಲ್ಲಿನಾಥ ನಿಮ್ಮ ಶರಣ ಸಂಗನಬಸವಣ್ಣನ ಮಹಮನೆಗೆ ನಮೋ ನಮೋ ಎಂದು ಬದುಕಿದೆನು.
>
> ಶೂ. ಸಂ., ಪು. ೮೯-೯೦

ಮಹವು ನೆಲೆಗೊಂಡ ಬಸವಣ್ಣನವರ ಮಹಾಮನೆಯ ನಿಜಾರ್ಥವನ್ನು ರನ್ನಗನ್ನಡಿಯಂತೆ ಕನ್ನಡಿಸಿದೆ ಸಿದ್ಧರಾಮಯ್ಯನವರ ಈ ವಚನ. ಹಿಂದೆ ಸಿರಿಯಾಳ ಸಿಂಧುಬಲ್ಲಾಳ ಮೊದಲಾದ ಪುರಾತನ ಭಕ್ತರು ಮರ್ತ್ಯಲೋಕ ದಲ್ಲಿ ಮನೆ ಕಟ್ಟಿ ಭಕ್ತಿಯ ಮಾಡಿರಬಹುದು. ಆದರೆ ಅವರ ಭಕ್ತಿ ನಿಜಭಕ್ತಿ ಯಲ್ಲ, ಫಲ ಪದವಿಗಳ ಬೇಡಿ ಮಾಡಿದ ಭಕ್ತಿ. ಶಿವಶರಣರ ದೃಷ್ಟಿಯಲ್ಲಿ

ಮಾಡಿ ಬೇಡುವಾತ ಇಲ್ಲವೆ ಬೇಡಿ ಮಾಡುವಾತ ಭಕ್ತನಲ್ಲ, ಕೊಟ್ಟು ಮಾಡಿಸಿಕೊಳ್ಳುವಾತ ದೇವನಲ್ಲ. ಇಂತಹ ಮಾಟ ಇಂತಹ ಫಲ ಶರಣ ಪಥಕ್ಕೆ ಸಲ್ಲವು. ಮಾಡಿ ಬೇಡುವುದು ಕೈಕೂಲಿ, ಅದೊಂದು ವ್ಯಾಪಾರ. ಮಾಡುವ ಭಕ್ತಿಯ ಹೃದಯದಲ್ಲಿ ಬೇಕೆಂಬ ಬಯಕೆ ಇದ್ದರೆ ಆ ಹೃದಯಕ್ಕೆ ಆ ಬಯಕೆ ಗೆದ್ದಲಿ ಇದ್ದಂತೆ. ಅದಕ್ಕದೆ ಕೊರತೆ. ಸತ್ಯಶುದ್ಧ ಭಕ್ತಿ ಅದೆಂದೂ ಆಗಲರಿಯದು. ಇನ್ನು ಮಾಡಿದ ಭಕ್ತಿಗೆ ಬೇಡಿದ ಫಲ ಬಂತೆಂದು ಇಟ್ಟು ಕೊಳ್ಳೋಣ. ಐಶ್ವರ್ಯವನ್ನೇ ಬೇಡುವ ಭಕ್ತಿಗೆ ಅಷ್ಟೈಶ್ವರ್ಯ ದೊರೆಕೊಳ್ಳಲಿ. ದೊರೆಕೊಂಡರೇನು? ಆ ಸಿರಿ ಸ್ಥಿರವೇ? ಅದು ಸತ್ಯ ಸುಖವೇ ನಿತ್ಯಾನಂದವೇ? ಎಂದಿಗೂ ಅಲ್ಲ. ಬೇವಿನ ಬೀಜವ ಬಿತ್ತಿ ಮಾವಿನ ಫಲವ ಬಯಸಿದರುಂಟೇ? ಐಸಿರಿಯನ್ನು ಬೇಡುವ ಮನ ಬಡಮನ, ಭಕ್ತಿ ಬಡತನ ವಡಸಿದ ಭಕ್ತಿ. ಆದರೆ ಸತ್ಯಶುದ್ಧಭಕ್ತಿಗೆ ಬಡತನ ಉಂಟೇ? 'ಅರಸಿಂಗೆ ಬಡಶಸವಲ್ಲದೆ ಭಕ್ತಂಗೆ ಬಡತನ ಉಂಟೇ?' ಎಂಬುದು ನಿಜಭಕ್ತಿಯ ನಿರ್ಭರ ಭಾಷೆ. 'ಬೇಡು, ಬೇಡಲಾರದ ಹಂದೇ' ಎಂದು ದೇವನನ್ನೇ ಮೂದಲಿಸುವ ಭಕ್ತ ಮರಳಿ ಆ ದೇವನನ್ನು ಬೇಡುವನೇ? ಲಿಂಗವ ಪೂಜಿಸಿ ಲಿಂಗದ ಹಂಗನೊಲ್ಲದ ಭಕ್ತ ಕಾಳುಬೆಳುದಿಂಗಳಂತಹ ಕೀಳು ಸಿರಿಗೆ ಕೈಯೊಡ್ಡುವನೇ? ಇದಲ್ಲದೆ ನಿಕಟಭಕ್ತಿ ಇನ್ನೂ ಮುಂದೆ ಹೋಗಿ ಸಾಲೋಕ್ಯ ಮೊದಲಾದ ಪದವಿಗಳನ್ನು ಗಳಿಸಬಹುದು. ಆದರೆ ಸತ್ಯಭಕ್ತಿಯ ಸುಜ್ಞಾನ ದೃಷ್ಟಿಯಲ್ಲಿ ಈ ಗಳಿಕೆ ಇದೊಂದು ಹಿರಿ ಹುಚ್ಚು. ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಘನಲಿಂಗವನೊಳಕೊಂಡ ಮಹಾಂತ ಶರಣರ ಇರವಿಗೆ ಸಾಲೋಕ್ಯದ ಲೋಕ ಸಾಲದು. ಆಕಾಶವನ್ನೆಲ್ಲ ಗಡಿಗೆಯಲ್ಲಿ ತುಂಬಿ ಮುಚ್ಚಿಡಬೇಕೆಂಬುದು ಹೆಡ್ಡತನ. ಸಾಮೀಪ್ಯದ ಮಾತು,. ದೇವನ ಸನ್ನಿಧಿಯಲ್ಲಿರುವುದು ದೊಡ್ಡತನದ ಕುರುಹೆಂದಿರುವುದೂ ಹುಚ್ಚು. ದೇವನೇನು ಹೆಚ್ಚು ಭಕ್ತನಿಗಿಂತ? 'ಬೆಳಗಿನೊಳಗಣ ಬೆಳಗು ಗುಹೇಶ್ವರ' 'ಬೆಳಗಿನೊಳಗಣ ಬೆಳಗು ಶರಣ' ಎಂದಮೇಲೆ ದೇವ ಹೆಚ್ಚಲ್ಲ, ಭಕ್ತನೇನು ಕಿರುಕುಳನಲ್ಲ. ಪರಶಿವತತ್ವ ಮತ್ತು ಶರಣತತ್ವ ಇವರ ಇದೇ ಲಕ್ಷಣವನ್ನು ಮುಂದಿಟ್ಟುಕೊಂಡು ಸಾರೂಪ್ಯ ಸಾಯುಜ್ಯ ಪದವಿಗಳನ್ನು ನೋಡಿದರೆ ಇವೂ ಶರಣನ ಮಹಾ ಘನ ಮಾನಕ್ಕೆ ಸಲ್ಲುವ ಘನಪದವಿಗಳಲ್ಲ. ಮತ್ತೂ ಇಂತಹ ಫಲ ಪದವಿಗಳು

ಇಹಲೋಕ ಪರಲೋಕ ತಾನಿರ್ದಲ್ಲಿ. ಗಗನ ಮೇರುಮಂದಿರ ತಾನಿರ್ದಲ್ಲಿ. ಸಕಲ ಭುವನ ಸತ್ಯಲೋಕ ತಾನಿರ್ದಲ್ಲಿ. ನಿತ್ಯನಿರಂಜನ ಪರತತ್ವ ತಾನಿರ್ದಲ್ಲಿ. ಉತ್ತರೋತ್ತರ ಚತುರ್ವಲಯ ತಾನಿರ್ದಲ್ಲಿ. ಚಂದ್ರ ಸೂರ್ಯರ ತಾರಾಮಂಡಲ ತಾನಿರ್ದಲ್ಲಿ. ಅಂತರ ಮಹದಂತರ ತಾನಿರ್ದಲ್ಲಿ. ಸ್ವತಂತ್ರ ಗುಹೇಶ್ವರ ತಾನಿರ್ದಲ್ಲಿ.

ಪ್ರ. ವ., ಶೂ. ಸಂ., ಪು. ೫೩೪

ಎಂದಿರುವ ಶರಣರ ಮಹದಾನಂದವನ್ನು, ಬೃಹತ್‌ಸುಖವನ್ನು ತೃಪ್ತಿಪಡಿಸ ಬಲ್ಲುವೇ? ಬಯಲು ಬತ್ತಲೆಯಾದರೆ ಹೊದಿಸುವರಾರು? ಹೊಚ್ಚುವುದೇನು? ಪರಮಾನಂದ ಸಾಗರದೊಳಗೆ ಓಲಾಡುತ್ತಿರುವ ನಿಜಶರಣರಿಗೆ ತನ್ನ ಬಿಟ್ಟು ಅನ್ಯ ಬಯಕೆ ಉಂಟೇ? ಅನ್ಯವೆಂಬುದಾದರೂ ಉಂಟೇ? ಸೂರ್ಯನಲ್ಲಿ ಕತ್ತಲೆಯ ಕಣಗಳಿರಬಹುದು; ಆದರೆ ಶರಣರಲ್ಲಿ ಕಾಮವಷ್ಟೇ ಅಲ್ಲ, ಫಲದ ಝುಳುಕಾದರೂ ಉಳಿದಿಲ್ಲ. 'ತನ್ನಲ್ಲಿ ತಾನಾದ ಬಯಲು. ತನ್ನಲ್ಲಿ ತಾನಾದ ಘನ.' ಇಂತಹ ಘನ ಶರಣರ ಪರಮಭಕ್ತಿ ಸಕಾಮ ಭಕ್ತಿಯೂ ಅಲ್ಲ. ನಿಷ್ಕಾಮ ಭಕ್ತಿಯೂ ಅಲ್ಲ ಇವೆರಡನ್ನು ಮೀರಿದ ಭಕ್ತಿ, ಮಹವ ನೊಳಕೊಂಡು ಮಹದಾನಂದದಲ್ಲಿ ನಲಿದಾಡುವ ಭಕ್ತಿ. ಇಂತಹ ಭಕ್ತಿಯ ನಲಿದಾಟಕ್ಕೆ ಲೀಲಾರಂಗಸ್ಥಲವಾಯ್ತು ಬಸವಣ್ಣನವರ ಮಹಾಮನೆ. ನಿಜ ಭಕ್ತಿಯ ನೆಲೆಯು ಮರ್ತ್ಯಕ್ಕೆಲ್ಲ ಬೀರಿದರು ಆ ಮನೆಯ ಮಹಾಗಣಂಗಳು. ಅಂತೆಯೇ ಶಿವಯೋಗಿ ಸಿದ್ಧರಾಮಯ್ಯನವರು, ಚೈತನ್ಯ ಜ್ಞಾನಸ್ವರೂಪ ರಾದ ನಿರಂಜನ ಪ್ರಭುದೇವರು, ಕಾಶಿಯ ಶಿವಲೆಂಕಮಂಚಣ್ಣಪಂಡಿತರು, ಕಾಶ್ಮೀರದಿಂದ ಮೋಳಿಗೆಯ ಮಾರಯ್ಯನವರು ಕಲ್ಯಾಣದ ಮಹಾಮನೆ ಯನ್ನು ಕಂಡು ಬದುಕಬೇಕೆಂದು ಹಲಕಾಲ ತಪವಿದ್ದು ಕಲ್ಯಾಣಕ್ಕೆ ಬಂದು ಬಸವಣ್ಣನವರು ಮರ್ತ್ಯದಲ್ಲಿ ಕಟ್ಟಿದ ಮಹಮನೆಗೆ 'ನಮೋ ನಮೋ' ಎಂದು ಬದುಕಿದರು. ಇಂದು ಬದುಕಿದ್ದಾರೆ.

'ನಿತ್ಯ ಮುಕ್ತ ಶರಣಗುಂಟೆ ಮತ್ತೆ ಪೂರ್ವಚರಿತವು?'

ನಿಜಾಂತರಂಗದೀಪ ಜ್ಯೋತಿರ್ಲಿಂಗದ ಪ್ರಸನ್ನಪ್ರಭೆಯನ್ನು ಸೂಸುತ್ತಿ ರುವ ಶಿವಶರಣರ ಶಿವಾನುಭಾವ ಗೀತಗಳ ಪರಮಾನಂದಾಮೃತರಸ ಸಂಪದ, ನಿತ್ಯನಿರಂಜನ ಪರತತ್ವದಲ್ಲಿ ಎಚ್ಚತ್ತು ಬದುಕಿ ನಿತ್ಯರಾದ ಸತ್ಯಶರಣರ 'ಲಿಂಗಲೀಲಾ ವಿಲಾಸ ಚಾರಿತ್ರ'ಕ್ಕೆ ಮಂಗಲ ರಂಗಮಂಟಪವಾದ ಕಲ್ಯಾಣದ

ಚಿದ್ವಿಲಾಸಸಂಪದ, ಮರ್ತ್ಯಕ್ಕೆ ಮಹವ ತಂದು, ಮಾನವನನ್ನು ಮುತ್ತಿ ಮುಸುಕಿ ಎಚ್ಚರಲೀಯದ ಮರವೆಯೆಂಬ ಮಹಾಂಧಕಾರವನ್ನು ಭೇದಿಸಿ ಕಳೆದು ನಿಜವರಿವಿನ ಸ್ವಯಂಜ್ಯೋತಿಯು ಬೆಳಗಿ, ಮರ್ತ್ಯಲೋಕ ದೇವ ಲೋಕಕ್ಕೆ ನಿಚ್ಚಣಿಕೆ ತಾನಾಗಿ ನೆರೆ ನೆರೆವ ಸಂಗನಬಸವಣ್ಣನ ಸಾರ ಸದ್ಭಕ್ತಿ ಸಂಪದ, ಇಂತಹ ಪರಮ ಮಂಗಲ ಸಂಪತ್ಸಮೃದ್ಧಿಯನ್ನೇ ಹಿನ್ನೆಲೆಯಾಗಿರಿಸಿಕೊಂಡು ಮೋಳಿಗೆಯ ಮಾರಯ್ಯನವರ ಜೀವನ ಚರಿತೆ ಯನ್ನು ಸಾವಧಾನವಾಗಿ ನೋಡಿ ತಿಳಿದುಕೊಳ್ಳಬಹುದು. 'ಜ್ಯೋತಿಯ ಬೆಳಗಿನಲ್ಲಿ ನೋಡಿ ಜ್ಯೋತಿಯ ಕಪಟವ ಕಾಂಬಂತೆ' ಆತ್ಮಜ್ಯೋತಿಯ ಬೆಳಗಿನ ಮುಖವಲ್ಲಿ ತನ್ನ ನಿಜವನೆಚ್ಚರಿಸಿ,ನೆರೆಯರಿದು ನೋಡಿ ಅನುಭವಿಸಿ ನಿತ್ಯ ನಿಜ ನಿವಾಸಿಯಾಗಿ ಸ್ವಲೀಲಾನಂದ ಕ್ರಿವಿಡಿದಾಚರಿಸಿದ ಮೋಳಿಗೆಯ ಮಾರಯ್ಯನವರು ಮಹಾಂತ ಶರಣರು. ಅಂಗವಿದ್ದು ನಿರಂಗವಾಗಿದ್ದ ನಿತ್ಯ ಮುಕ್ತರು, ಲಿಂಗಮಯ ಸಿರಿವಂತರು, ಅಂಗ ಮುಂತಾಗಿ ಗಮಿಸದೆ ಲಿಂಗ ಮುಂತಾಗಿ ಗಮಿಸಿ ಲಿಂಗಭೋಗೋಪಭೋಗಿಯಾಗಿ 'ನಿಃಕಳಂಕ ಮಲ್ಲಿಕಾರ್ಜುನ ಲಿಂಗ' ತಾನಾಗಿ ಚರಿಸಬಲ್ಲ ನಿಃಕಳಂಕಲಿಂಗಚರಿತರು. ಅವರ ಜೀವನ 'ಉದಯ ಮುಖದಲ್ಲಿ ಹುಟ್ಟಿ ಅಸ್ತಮಾನಕ್ಕೆ ಅಳಿದ' ಇನ್ನುಳಿದ ಪ್ರಾಣಿಗಳ ಜೀವನದಂತೆ ಅನಿತ್ಯ ಜೀವನವಲ್ಲ.

> ಆಯಿತ್ತೆ ಉದಯಮಾನ, ಹೋಯಿತ್ತೆ ಅಸ್ತಮಾನ. ಅಳಿದವಲ್ಲಾಗಿರಲಾದ ನಿರ್ಮಿತಂಗಳಿಲ್ಲವು. ಕತ್ತಲೆಗವಿಯಿತ್ತು ಮೂರು ಲೋಕದೊಳಗೆ! ಇವರಚ್ಚುಗವೇನು ಹೇಳಾ ಗುಹೇಶ್ವರಾ !
>
> ಪ್ರ. ವ., ಪು ೩೧

ಎಂದು ಪ್ರಭುದೇವರು ಅಚ್ಚರಿಪಡುವಂತೆ ಹುಟ್ಟುವುದೇಕೆ, ಹೋಂದುವುದೇಕೆ ಎಂಬುದೇನೂ ತಿಳಿಯದೆ ಕತ್ತಲೆಯಲ್ಲಿ ಸುತ್ತಿ ಸುತ್ತಿ ಸತ್ತು ಹುಟ್ಟುವ ಕತ್ತಲೆಯ ಜೀವನವಲ್ಲ ಮಾರಯ್ಯನವರದು. ನಿತ್ಯ ನಿಜಾನಂದವನ್ನೇ ಮರೆದು ಅನಿತ್ಯ ಸುಖದ ಅಳಿಯಾಸೆಯನ್ನೇ ಮುಂದುಗೊಂಡು ಸುಳಿದಾಡಿ ತೊಳಲಿ ಬಳಲಿ ಒಂದು ಸುಖಕ್ಕೆ ಕೋಟಿ ದುಃಖಪಟ್ಟು, 'ಬಣವೆ ಸುಟ್ಟು ಅರಳು ಹುರಿದುಕೊಂಡು ತಿನ್ನು'ವಂತೆ ತನ್ನನ್ನೇ ಮಾರಿ ಬಂದ ಸುಖವನುಂಬ ಮೈಯರಿಯದ ಮರುಳು ಮಾನವನ ಕಾಡು ಬಾಳಿನಂತಲ್ಲ ಅವರ ಬಾಳು. ಒಳಗನರಿಯದೆ ಮೇಲೆ ಮೇಲೆ ಬಾಳಿದ ಜೊಳ್ಳು ಜೀವನವಲ್ಲ ಅವರದು.

ನಾನು ನನ್ನದು ನನಗೆಂಬ ಮೇರೆಕಲ್ಲು ಹಾಕಿಕೊಂಡು ಆ ಮೇರೆಯೊಳಗಿದ್ದು ಬಾಳಿದ ಸಣ್ಣ ಸಂಸಾರವಲ್ಲ ಅದು. ಅವರದು ಸತ್ಯ ಜೀವನ. ಸತ್ಯಾರ್ಥವನ್ನು ಕಂಡುಂಡ ಸುಜ್ಞಾನ ಜೀವನ. ನಿತ್ಯಮುಕ್ತರಾದ ಅವರ ಜೀವನ ನಿತ್ಯ ಜೀವನ. ಸಿಜಾನಂದ ಸಾಗರದಲ್ಲಿ ಬೆರೆದಾಡಿದ ಅವರ ಜೀವನ ನಿಸ್ಸೀಮ ಜೀವನ, ಲಿಂಗಗಂಭೀರ ಜೀವನ. ಕತ್ತಲೆಯೆಂಬ ಜವನಿಕೆಯ ತೆಗೆದೊಗೆದು ಬೆಳಗಿನ ಬೆಳಗಾದ ಮಹಾಬೆಳಗಿನಲ್ಲಿ ಬಾಳಿದ ಅವರು ಪರಂಜ್ಯೋತಿ, ಅವರ ಜೀವನ ಪರಂಜ್ಯೋತಿಯ ಪ್ರಕಾಶ.

ಅಂತೆಯೇ ಇಂತಹ ಮಹಾಮಹಿಮರ, ಮಹಾನುಭಾವರ ಜೀವನ ಚರಿತೆಯನ್ನು ತಿಳಿದು ನೋಡಿ ತಾನೂ ತಿಳಿಯಾಗಬೇಕೆಂದಿದ್ದರೆ, ತನ್ನ ಮುಖದಲ್ಲಿ ತನ್ನ ನೋಡಿ ತನ್ನ ನಿಜವನೆಚ್ಚರಿಸಿ ಜೀವ ನಾನೆಂಬ ಅಹಂಭಾವದ ಕತ್ತಲೆಯ ನಿದ್ರೆಯನ್ನು ಮುಸುಕು ತೆಗೆದು ನೋಡಿ ಕಳೆದು ತನ್ನ ನಿಜಸ್ವರೂಪವನ್ನು ತಿಳಿಯಬೇಕಿದ್ದರೆ ವ್ಯೆಯೆಲ್ಲ ಎಚ್ಚರವಾಗಿರಬೇಕು. ಅವರ ಜೀವನ ಚರಿತೆ ಸಾಗಿದಂತೆ ಸಾಗಿದತ್ತ ಮನವು ಸಾವಧಾನವಾಗಿ ಮುಂದೆ ಮುಂದೆ ಹೆಜ್ಜೆ ಹಾಕಬೇಕು. ಅವರ ಪರಮ ಜೀವನ ಪ್ರವಾಹದ ನೆಲೆಯನ್ನು ನೋಡುವುದಿದ್ದರೆ ಭಾವವೆಲ್ಲ ಪ್ರಸನ್ನವಾಗಿ ಗಂಭೀರವಾಗುತ್ತಿರಬೇಕು. ಕಲುಷ ತಿಮಿರ ಮುಚ್ಚಿ ಮುಸುಕಿ ಕಲುಷಿತವಾದ ಭಾವಕ್ಕೆ ಶರಣರ ಜೀವನದ ಗಂಭೀರ ಗತಿ ಕಾಣಿಸುವುದಿಲ್ಲವೆಂದೇ ಶರಣರ ಶಾಶ್ವತ ಮತ. ಈ ಎಚ್ಚರ ಈ ಸಾವಧಾನ ಇಂತಹ ಪ್ರಸನ್ನಭಾವ ಮಾನವನಲ್ಲಿ ಮೂಡಬೇಕೆಂದಿದ್ದರೆ ಅದೊಂದು ಮಹಾಭಾಗ್ಯ ಪರಮಪುಣ್ಯ. ಇಂತಹ ಪುಣ್ಯವಿಲ್ಲದಿದ್ದರೆ ಶರಣರ ಜೀವನ ಚರಿತೆಯನ್ನು ತಿಳಿದುಕೊಳ್ಳುವೆನೆಂಬುದೊಂದು ಕನಸಿನ ಕನವರಿಕೆ, ಹುಚ್ಚು, ಹಿರಿಹುಚ್ಚು. ಏಕೆಂದರೆ ಪುಣ್ಯವಿಲ್ಲದವರಿಗೆ ಶರಣರ ಚರಿತೆಯಷ್ಟೇ ಅಲ್ಲ ಶರಣರ ಮಂಗಲಮೂರ್ತಿ ದರ್ಶನವೂ ನಮಗಿಲ್ಲವೆಂದು ಬಸವಣ್ಣನವರು ನಿರ್ಧರವಾಗಿ ಹೇಳುತ್ತಾರೆ:

**ಕಾಣಬಹುದೇ ಪರುಷಗಿರಿಯಂಧಕಂಗೆ?**
**ಅರಿಯಬಹುದೇ ರಸದ ಬಾವಿ ನಿಭಾಗ್ಯಂಗೆ?**
**ತೆಗೆಯಬಹುದೇ ಕಡವರವ ದರಿದ್ರಂಗೆ?**
**ಕರೆಯಬಹುದೇ ಕಾಮಧೇನುವಶುದ್ಧಂಗೆ?**
**ಹೊನ್ನೆಯ ಹುಳವ ಕಂಡು ನರಿ ತನ್ನ ಬಾಲವ**

ಹುಣ್ಣು ಮಾಡಿಕೊಂಡರೆ ಹೋಲಬಹುದೆ?
ಎನ್ನೊಡೆಯ ಕೂಡಲಸಂಗನ ಶರಣರು
ಪುಣ್ಯವಿಲ್ಲದೆ ಕಾಣಬಹುದೇ?

ಬ. ವ., ಪು. ೪೦

ಬಸವಣ್ಣನವರ ಈ ಮಾತಿನಲ್ಲಿ ಅಲಂಕಾರದ ಅತಿಶಯೋಕ್ತಿಯಿಲ್ಲ. ಅದೊಂದು ಕಾವ್ಯದ ಕಲ್ಪನೆಯಲ್ಲ. ಏಕೆಂದರೆ ಲಿಂಗವನಪ್ಪಿ ಸರ್ವಾಂಗಲಿಂಗವಾದ ನಿಜಶರಣರ ನಿಲವು ಅಂಗದಲ್ಲಿದ್ದು ಜೀವಿಸುವ ಅಂಗಜೀವಿಗಳಿಗೆಂತು ನಿಲುಕುವುದು ? ಗೂಗೆಯ ಕಣ್ಣಿಗೆ ಸೂರ್ಯನ ದರ್ಶನದ ಪುಣ್ಯ ಉಂಟೆ ? ನೆಲಮನೆಯಲ್ಲಿ ಕುಳಿತು ಮುಗಿಲ ಹರಹನೆಲ್ಲ ನೋಡಲುಂಟೆ ? ರೂಹಿನ ತುಣುಕು ತುಣುಕನ್ನು ಕಾಣಬಲ್ಲ ಕಾಯದ ಕಣ್ಣಿಗೆ ತೆರಹಿಲ್ಲದ ಬಯಲಾದ ಮಹಾಘನ ಶರಣರು ಕಾಂಬುದೆಂತು ? ಶಬ್ದದ ತುಂಡು ತುಂಡನ್ನು ತಿನ್ನಬಲ್ಲ ಕಿವಿಗೆ ವಿಶ್ವಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ ಪ್ರಣವಸ್ವರೂಪಿಗಳಾದ ಶರಣರ ನಿಶ್ಶಬ್ದದ ನುಡಿ ಎಂತು ಕೇಳುವುದು ? ಖಂಡಿತ ವಿಚಾರಗಳನ್ನು ಕಂಡು ಸಂದೇಹ ಸಾಗರದಲ್ಲಿ ಆಳುತ್ತ ಏಳುತ್ತಿರುವ ಮಾನವನ ಮನವು,

> ಸೂರ್ಯನ ಕರಜಾಲಂಗಳು ಸೂರ್ಯೋದಯವಾದಲ್ಲಿ ಹುಟ್ಟಿ ಸೂರ್ಯನಸ್ತಮಿಸಲು ಕೂಡೆ ಅಡಗುವಂತೆ ಮನೋವಿಕಾರದಿಂದ ಲೋಕವೆಲ್ಲವು ತೋರಿ ಮನ ಲಯವಾದಡೆ, ಒಡನೆ ಆ ಲೋಕವೆಲ್ಲವು ಅಡಗಿ, ಜ್ಞಾನತತ್ವ ಒಂದೇ ತನ್ನ ಸ್ವರೂಪವಾಗಿ ಉಳಿದಿಹ ಯೋಗಿಗೆ ಮುಂದೆ ಅರಿಯ ಬೇಕಾದದು ಒಂದೂ ಇಲ್ಲವಯ್ಯ. ಉಳಿದ ಉಳುಮೆ ಜ್ಞಾನರೂಪವಾಗಿ ನಿಂದಿತ್ತಯ್ಯ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಶರಣಂಗೆ.
>
> ವ. ಶಾ. ಸಾ., ಭಾ. ೧, ಪು. ೧೯೩

ಎಂಬಂತೆ ಮನದ ಮಾಯೆಯ ಖಂಡಿತವಳಿದು ತನ್ನ ನಿಜದ ನೆಲೆಯಾದ ಅಖಂಡ ಪರಿಪೂರ್ಣ ಸುಜ್ಞಾನ ಜ್ಯೋತಿಯಲ್ಲಡಗಿ ವರ್ಣಾತೀತವಾದ ಕೇವಲ ಜ್ಯೋತಿಯಾದ ಶರಣರನ್ನು ನೆನೆಯಬಲ್ಲುದೆ ?ಭಾವದ ಭ್ರಮೆಯಲ್ಲಿ ಸಂಚರಿಸುವ ಜೀವಿಗೆ ಭಾವವೆಲ್ಲ ಬತ್ತಲೆಯಾಗಿ ಸ್ವಯಂಭಾವದಲ್ಲಿ ನಿಂದು ಸುಳಿದಾಡುವ ಮಹಾಮಹಿಮರ ನೆಲೆ ಹತ್ತಬಹುದೇ ? ಅಂತೆಯೇ ಬಸವಣ್ಣನವರು. ಹೇಳುವ ಮಾತು ಸಂತೆಯ ಮಾತಲ್ಲ. ಕಂಡುನೋಡಿದ ಸತ್ಯದ ಅನುಭವ. ಶರಣರೆಂದರೆ ಅಜ್ಞಾನಾಂಧರು ನೋಡಬಾರದ ಪರುಷದ ಪರ್ವತ. ಶಿವಾಸ್ತು

ಗ್ರಹವಿಲ್ಲದ ನಿರ್ಭಾಗ್ಯರು ಸಾಧಿಸಬಾರದ ಸಿದ್ಧರಸದ ಬಾವಿ. ನಿಜಶರಣರು ನೆಲದ ಮರೆಯ ನಿಧಾನವಿದ್ದಂತೆ, ಮೇಘದ ಮರೆಯ ಮಿಂಚಿದ್ದಂತೆ. ಭಗವದ್ ಗೀತೆಯಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ

> ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।
> ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ ॥
>
> ಭ. ಗೀ., ಅ. ೭., ಶ್ಲೋ. ೨೫

ಎಂದು ಹೇಳುವಂತೆ ಸತ್ಯ ತತ್ವವನ್ನಾವರಿಸಿದ ಮಾಯೆಯ ಮುಸುಕನ್ನು ಲೋಕದ ಮೂಢ ಮಾನವನು ತೆಗೆಯಬಾರದು. ಅಂತೆಯೇ ಪರತತ್ವ ಸ್ವರೂಪರಾದ ಮರೆಯ ಮಾನವರಾದ ಶರಣರ ನಿಜದ ನಿಲವನ್ನು ಕಾಯ ಗೊಂಡ ಮೂಢರೆಲ್ಲ ಕಾಣಬಾರದು.

ಆದರೆ ಹಾವಿನ ಹೆಜ್ಜೆಯನ್ನು ಹಾವು ಬಲ್ಲುದು. ಬಂಜೆಗೆ ಬೇನೆ ತೋರದಿದ್ದರೂ ಹಡೆದ ತಾಯಿ ಹೆರುವ ಬೇನೆಯನ್ನು ಬಲ್ಲಳು. ಬರಿಯ ಕಣ್ಣಿಗೆ ಬೆಳಕು ಕಾಣದಿದ್ದರೂ ಕಣ್ಣಿನ ಕಣ್ಣಾದ ಬೆಳಕಿಗೆ ಬೆಳಕು ಪ್ರಕಟ ವಾಗುತ್ತದೆ. ಚಕೋರದ ರಸನೆಗೆ ಚಂದಿರನ ಸುಧಾರಸ ಪ್ರಕಟವಾಗುತ್ತದೆ. ಹಾಗೆಯೇ ಶರಣರ ಪರಮ ಮಂಗಲ ದರ್ಶನ ಲಿಂಗಶರಣರಿಗುಂಟು, ಲಿಂಗ ಭಕ್ತರಿಗುಂಟು. ಶರಣರ ನೆಲೆಯನ್ನು ಅವರ ನಿಲವನ್ನು ಶರಣರು ಬಲ್ಲರು. ನಿಜದಲ್ಲಿ ನಿಂದು ನಿಷ್ಪತ್ತಿಯಾದ ನಿಜ ಶರಣರನ್ನು 'ಕಾಯಗೊಂಡು ಕಂಡಿಹನೆಂದರೆ ಕಾಣಬಹುದೇ ?' ಎಂದು ಹೇಳುವ ಬಸವಣ್ಣನವರು ಶರಣ ರಿಗೆ ತನು ಮನ ನಯನಕ್ಕೆಲ್ಲ ಘೀಸಲು ಹಾಕಿ ಶರಣರನ್ನು ಕಂಡು ಅವರ ಸಂಗಸುಖವನ್ನು ಅನುಭವಿಸಿದರು. ನಿತ್ಯನಿರಂಜನ ಶರಣರ ರೂಪಸಂಪದ ವನ್ನು, ಅವರ ನಿವಾಸದ ನೆಲೆಯ ಬೆಡಗು ಬಿನ್ನಾಣವನ್ನು ಕಣ್ಣಿಲ್ಲದೆ ಕಂಡು ಅವರ ಶ್ರೀಪಾದದಲ್ಲಿ ಸೈಗೆಡಹ ಹಡಪದಪ್ಪಣ್ಣನವರು ತಮ್ಮ ಆನಂದಾನುಭವವನ್ನು ಇಂತು ಹಾಡಿದ್ದಾರೆ:-

> ಆಕಾಶವ ಮುಟ್ಟದು. ಎಡೆಯಲ್ಲೊಂದು ರೂಪಿಲ್ಲ. ಭಾವವೆಂಬ ಜ್ಞಾನವೇ ನಿವಾಸ. ನಿಲವೇ ಭಕ್ತಿ ನಿರಹಂಕಾರವೇ ಶಿಖರ. ಮಹತ್ತೇ ಶೃಂಗಾರ ಕಳಸ. ಸಹಸ್ರ ಪತ್ರದ ನವಕಮಲವೇ ಸಿಂಹಾಸನ. ನಿತ್ಯವೇ ಮಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯನಿರಾಳವೆಂಬ ಮಹಾಘನವು ಬಂದು

ಮೂರ್ತಿಗೊಳ್ಳಲು ಕಾಯದ ಕಣ್ಣು ಕಾಣಬಾರದು. ಮನದ ಮುಂದು ಅಳವಡದು. ಭಾವದ ಬಗೆಗೆ ಮೈದೋರದು. ಬಸವಪ್ರಿಯ ಕೂಡಲ ಚೆನ್ನ ಸಂಗಯ್ಯನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂಬೆನು.

ವ ಶಾ. ಸಾ., ಭಾ. ೩ ಪು. ೨ ೧

ಒಂದು ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಇಂತಹ ಮಹಾಮಹಿಮರಾದ ಘನಗಂಭೀರ ಶರಣರನ್ನು ಕಂಡಿಹೆನೆಂದರೆ ಹೊರಗನ್ನೇ ನೋಡುವ ಕಣ್ಣು ಮರೆಯಾಗುತ್ತದೆ. ಏಕೆಂದರೆ ಪರಂಜ್ಯೋತಿಲಿಂಗದಲ್ಲಿ ಎಡೆದೆರಹಿಲ್ಲದೆ ಬೆಳಗುವ ನಿರ್ಮಯರಾದ ಶರಣರನ್ನು ಕಾಣಬೇಕಿದ್ದರೆ ಒಳಹೊರಗೆಂಬ ಸಂದಿಲ್ಲದೆ ಮೈಯೆಲ್ಲ ಕಣ್ಣಾಗಿರಬೇಕು. ಮೂಗ ಮೂಗರ ಪ್ರಸಂಗದಂತಿರುವ ಶರಣರ ನುಡಿಗಡಣ ಕೇಳುವದಿದ್ದರೆ ಒಳಹೊರಗಣ ನಿಶ್ಶಬ್ದ ನಾದಕ್ಕೆ ಮರೆಯಾದ ಕಿವಿ ಮುಚ್ಚಿ ಅಂತರಂಗ ಬಹಿರಂಗವೆಂಬ ಭಯವಳಿದು ಮೈಯೆಲ್ಲ ಕಿವಿಯಾಗಿ ಬಾಯ್ದೆರೆದು ಕೇಳಬೇಕು. ನೆನಹಿಗೆ ಬಾರದ ಘನ ವಸ್ತುಸ್ವರೂಪರಾದ ಸಚ್ಚಿದಾನಂದ ಘನ ಶರಣರ ಮಹಿಮೆಯನ್ನು ತಿಳಿದು ನೋಡಲು ತರಹರಗೊಂಡರೆ ಒಳಗೆ ಮರೆದು ಹೊರಗೆ ಸಾಸಿರ ಮುಖದಲ್ಲಿ ಸೂಸುವ ಮನದ ಮರವೆಯ ತೆರೆಮರೆಯನ್ನು ಸೆಳೆದು ಮನವನ್ನು ಮಹಾಘನಕ್ಕೆಂಬುಮಾಡಿಕೊಡಬೇಕು.

ಸಾಗರವನ್ನು ಮುಟ್ಟುವವರೆಗೆ ನದಿಯ ಗತಿ ಅದರ ಪಥ. ಆದರೆ ಮುಂದೆ ಮುಂದೆ ಸಾಗಿ ಸಾಗರವನ್ನು ಸೇರಿ ಅದರಲ್ಲಿ ಲೀಯವಾಗಿ ಅದರಲ್ಲಿ ಹರಿದಾಡುವ ನದಿಗೆ ಸಾಗರದಿಚ್ಛೆಯ ಹರಿದಾಟವಲ್ಲದೆ ಬೇರೆ ಗತಿಯುಂಟೇ? ಬೇರೊಂದು ಪಥವುಂಟೇ? ವಾಯುವ ನಪ್ಪಿದ ಪರಿಮಳ ವಾಯುವಿನಿಚ್ಛೆಯಲ್ಲಿ ಸುಳಿದಾಡುವುದಲ್ಲದೆ ತನಗೆ ಬೇರೊಂದು ಸುಳಿದಾಟ ಉಂಟೇ? ಅಂತೆಯೇ ಮಹಾಲಿಂಗವನಾಲಿಂಗಿಸಿದ ಶರಣರ ಜೀವನ ಚರಿತ. ಅವರ ಚರಿತ ಲಿಂಗದ ಚರಿತ. ಜೀವನದ ಪ್ರಯಾಣವನ್ನು ಪೂರ್ತಿಮಾಡಿ ತಮ್ಮ ಗೊತ್ತು ಮುಟ್ಟಿದ ಶರಣರಿಗೆ ನಡೆವೆನೆಂದರೆ ಮತ್ತೆ ಹಾದಿಯಿಲ್ಲ. ಮುಟ್ಟಬೇಕೆಂಬ ಗುರಿ ಬೇರೆ ಇಲ್ಲ. ಅಂತೆಯೇ ಅವರು ಹೇಳುವುದು, 'ಒಳಗೆ ಹೊರಗೆ ಲಿಂಗವಾಗಿ ತೊಳಲಿ ಬಳಲಲೇತಕೋ?' ಎಂದು. ಪರಮ ಧ್ಯೇಯವನ್ನು ಕರತಲಾಮಲಕವಾಗಿ ಹಿಡಿದಿರುವ ಶರಣರ ಜೀವನದಲ್ಲಿ ವಿಷಮ ಸಂಸಾರದ ಮಾತೇಕೆ?

ಪರಿಮಳದ ಪುತ್ಥಳಿಗೆ ಕಾಡ ಹೂ ಚಲುವೇ ? ಪರುಷ ಪುರುಷನಿಗೆ ಕಬ್ಬಿನದ ಆಭರಣವೇ? ಸೂರ್ಯನ ಹಾದಿಗೆ ಕೈದೀವಿಗೆಯ ಹಂಗೇ ? ಬಯಲಿಗೆ ಬೆಂಕಿಯ ಭಯವೇ ? ಅಮೃತಕ್ಕೆ ಹಸಿದೆನೆಂಬ ಚಿಂತೆಯೇ ? ಅಂತೆಯೇ ಶರಣರ ಜೀವನ ನಿಶ್ಚಿಂತ ನಿರಾಳ ಜೀವನ. ಅವರ ಜೀವನ ತುಂಬುಜೀವನ, ನಿತ್ಯ ಪರಿಪೂರ್ಣ ಜೀವನ. ಇಂತಹ ಪರಿಪೂರ್ಣಜೀವನದಲ್ಲಿ ಚರಿಸಿ ಮೆರೆದಾಡುವ ಪ್ರಭುದೇವರು:

ಅಮೃತಸಾಗರದೊಳಗಿರ್ದು ಆಕಳ ಚಿಂತೆ ಏಕೆ ?
ಮೇರು ಮಂದಿರದೊಳಗಿರ್ದು ಜಲಗರದ ಚಿಂತೆ ಏಕೆ ?
ಶ್ರೀಮತ್ ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆ ಏಕೆ ?
ಕರಸ್ಥಲದೊಳಗೆ ಲಿಂಗವಿರ್ದ ಬಳಿಕ ಮುತ್ತಾವ ಚಿಂತೆ ಏಕೆ ಗುಹೇಶ್ವರಾ?

ವ. ಶಾ. ಸಾ., ಭಾ. ೨

ಎಂದು ತಮ್ಮ ನಿತ್ಯತೃಪ್ತವಾದ ಪರಿಪೂರ್ಣಾನಂದ ಜೀವನವನ್ನೇ ಹಾಡಿದ್ದಾರೆ.

ಆದ್ದರಿಂದ ನಿತ್ಯತೃಪ್ತವಾಗಿ ಪರಮಾನಂದದಲ್ಲಿ ಪರಿಣಮಿಸುತ್ತಿರುವ ಶರಣರ ಜೀವನ ಚರಿತೆಗೂ ಕತ್ತಲೆಯಲ್ಲಿ ಸಿಕ್ಕು, ಗೊತ್ತುಗುರಿಯನರಿಯದೆ ಕಾಯದ ಕಳವಳ, ಪ್ರಾಣದ ಸಂಚಲ, ಮನದಲ್ಲಿ ಹೆದ್ದೊರೆಯಾಗಿ ಹರಿಯುತ್ತಿರುವ ಆಶೆ ಇವು ಒಯ್ದತ್ತ ಸಾಗಿದ ಮಾನವನ ಜೀವನ ಚರಿತೆಗೂ ಭೂಮಿ ಆಕಾಶದಷ್ಟು ಅಂತರ. ಈತನ ಜೀವನ ಚರಿತೆ ನಮಗೆ ಚೆನ್ನಾಗಿ ತಿಳಿಯುತ್ತದೆ. ಏಕೆಂದರೆ ನಾವೂ ಕತ್ತಲೆಯಲ್ಲಿ ಸಿಕ್ಕವರು. ನಮಗೂ ಗೊತ್ತು ಗುರಿ ಎಂಬುದಿಲ್ಲ, ಗೊತ್ತುಗುರಿ ಇದೆ ಎಂಬ ನಿರ್ಧರವೂ ಇಲ್ಲ. ದುಡ್ಡಿಗಾಗಿ ದುಡಿದುಡಿದು ಸಾಯುತ್ತೇವೆ. ಅದಕ್ಕಾಗಿ ಅನ್ಯರನ್ನು ಕೊಲ್ಲುತ್ತೇವೆ. ಹೆಣ್ಣಿನ ಬಣ್ಣವನ್ನು ಕಾಮಿಸುತ್ತೇವೆ. ಅದನ್ನು ಶುದ್ಧ ಪ್ರೇಮವೆಂದು ಕರೆಯುತ್ತೇವೆ. ಆದರೆ ಹೆಣ್ಣು ಸಿಕ್ಕರೂ ಕಾಮವಾಸನೆಯಳಿಯದೆ ಸತ್ತುಹೋಗುತ್ತೇವೆ. 'ಇಳೆ ನಿಮ್ಮ ದಾನ'ವೆಂಬುದನರಿಯದೆ ಮಣ್ಣಿಗಾಗಿ ಹೋರಾಡಿ ಮಣ್ಣುಪಾಲಾಗುತ್ತೇವೆ. ಕೀರ್ತಿ ವಾರ್ತೆ ಪದವಿ ಅಧಿಕಾರಕ್ಕಾಗಿ ತನ್ನ ಬಲಿಕೊಟ್ಟು ನಿಧಾನವನ್ನು ಸಾಧಿಸುವ ಮರುಳನಂತೆ ನಮ್ಮನ್ನೇ ಬಲಿಕೊಟ್ಟು ದೊಡ್ಡವರೆನಿಸಿಕೊಂಡು ಬಾಳಬೇಕೆಂದಿದ್ದೇವೆ. ಬಡತನಕ್ಕೆ ಊಟದ ಚಿಂತೆ. ಶ್ರೀಮಂತಿಕೆಗೆ ಹೊಟ್ಟೆ ಕೆಟ್ಟ ಚಿಂತೆ. ಇಂದು

ಸುಖ ನಾಳೆ ದುಃಖ. ತಾಯಿಯ ಗರ್ಭದಲ್ಲಿ ಜನ್ಮ, ಜನ್ಮದ ಗರ್ಭದಲ್ಲಿ ಮರಣ. ಇಲ್ಲಿ ಮದುವೆಯ ಮೆರವಣಿಗೆ, ಅಲ್ಲಿ ಸ್ಮಶಾನ ಯಾತ್ರೆಯ ಸಂಭ್ರಮ. ಇಂದು ಸೊಕ್ಕೇರಿದ ಯೌವನ, ನಾಳೆ ಮೃತ್ಯುವಿನ ಬಾಯ ತುತ್ತಾದ ಮುಪ್ಪು. ಒಂದಕ್ಕೆ ಅಧಿಕಾರದ ಮದ. ಬಳಿಯಲ್ಲಿ 'ಬಗ್ಗಿಸಲು ನಡುಗಿ ಬೀಳುವ ಸೇವಿಪ ಕಷ್ಟವೃತ್ತಿ.' ಇಂತಹ ಸಾವಿರಾರು ವಿಷಮ, ಸಾವಿರಾರು ಸುಖ ದುಃಖ ಕಷ್ಟ ನಷ್ಟ, ಸಾವು ನೋವುಗಳಿಂದ ಬಳಲಿ ಬೆಂಡಾಗುವ ಮಾನವರೆಲ್ಲ ಸ್ವಲ್ಪ ಹೆಚ್ಚು ಕಡಮೆ ಸಮಾನ ಧರ್ಮಿಗಳೆಂದು ಹೇಳಬೇಕು. ಅಂತೆಯೇ ಒಬ್ಬರ ಸುಖ ದುಃಖ ಮತ್ತೊಬ್ಬರಿಗೆ ತಿಳಿಯುತ್ತವೆ. ಒಬ್ಬರ ಕಷ್ಟ ನಷ್ಟ ಮತ್ತೊಬ್ಬರಿಗೆ ಅರ್ಥವಾಗುತ್ತವೆ. ಆದರೆ ಶರಣರು ಹೇಳುವಂತೆ ಶರಣರ ಸೃಷ್ಟಿ ಹೊಸತು, ಅವರ ಹುಟ್ಟು ಹೊಸತು. ಶರಣರ ಪರಿ ಆವ ಲೋಕದೊಳಗೂ ಇಲ್ಲವೆಂದು ಅವರೇ ಹೇಳುತ್ತಾರೆ. ಅವರ ಪಥ ಲೋಕಕ್ಕೆ ಹೊಸತು. ಲೋಕದ ಮಾರ್ಗ ಅವರಿಗೆ ಹೊಸತು. ಶರಣ ಶ್ರೀಗುರುಕಾರುಣ್ಯಕರಪಲ್ಲವದೊಳಗೆ ಜನಿಸಿದಾತ ಅಂತೆಯೇ ಅಯೋನಿಜ, ಜನನರಹಿತ. ಹುಟ್ಟಿಲ್ಲ ಅಂತೆಯೇ ಆತನಿಗೆ ಸಾವಿಲ್ಲ, 'ಮರಣವ ಗೆಲಿದ ಮಹಾಂತ.' ಆತನ ಪಿಂಡ ಮಾಂಸಪಿಂಡವಲ್ಲ, ಮಂತ್ರಮಯ ಪಿಂಡ. ಆತ ಪಂಚಭೂತಕಾಯನಲ್ಲ ಪ್ರಸಾದಕಾಯ. ವಾಯು ಪ್ರಾಣಿಯಲ್ಲ ಲಿಂಗ ಪ್ರಾಣಿ. ಇಂತಹ ಅಸಾಮಾನ್ಯ ಮೂರ್ತಿಯಾದ ಶರಣ ಸಂಸಾರವನ್ನು ಹೊದ್ದಿಯೂ ಹೊದ್ದದಂತೆ. ಆತನಿಗೆ ಪುಣ್ಯಪಾಪವಿಲ್ಲ, ಸ್ವರ್ಗ ನರಕವಿಲ್ಲ. ಸದಾ ಸುಖಿ, ನಿತ್ಯತೃಪ್ತ.

> ಕರಣಾದಿ ಗುಣಂಗಳಳಿದು ನವಚಕ್ರಗಳು ಭಿನ್ನವಾದ ಬಳಿಕ ಇನ್ನೇನೋ ಇನ್ನೇನೋ ?
> ಸ್ವರ್ಗವಿಲ್ಲ ನರಕವಿಲ್ಲ ಇನ್ನೇನೋ ಇನ್ನೇನೋ ?
> ಪುಣ್ಯವಿಲ್ಲ ಪಾಪವಿಲ್ಲ ಇನ್ನೇನೋ ಇನ್ನೇನೋ ?
> ಗುಹೇಶ್ವರ ಲಿಂಗ ವೇಧಿಸಿ ಸುಖಿಯಾದ ಬಳಿಕ ಇನ್ನೇನೋ ಇನ್ನೇನೋ ?
>
> ವ. ಶಾ. ಸಾ., ಭಾ. ೨

ಆದ್ದರಿಂದ ಮಾನವನ ಸಂಸಾರಕ್ಕೂ ಶರಣರ ಸಂಸಾರಕ್ಕೂ ಮಹದಂತರವಿದೆ. ಕರಣಾದಿಗುಣಗಳಿಲ್ಲದ ಮಾನವನಿಲ್ಲ. ನವಚಕ್ರಗಳನ್ನು ಭೇದಿಸಿದವ ನರನಲ್ಲ. ಇನ್ನು ಲಿಂಗವೇಧಿಸಿ ಲಿಂಗವೆ ಆದ ಶರಣರು 'ನರರೆಂದರೆ ನಾಯಕ

ನರಕ ತಪ್ಪದು' ಎಂದು ಉರಿಲಿಂಗಪೆದ್ದಿಗಳು ಎಚ್ಚರ ಕೊಡುತ್ತಾರೆ. ಉರಿಯುಂಡ ಕರ್ಪುರವನ್ನು ಕರ್ಪುರವೆನ್ನಬಹುದೇ ? ಪರುಷ ಸೋಂಕಿ ಹೊನ್ನಾದ ಕಬ್ಬುನ ಕಬ್ಬುನವೇ ? ಜ್ಯೋತಿಯು ಮುಟ್ಟಿದ ಮೇಲೆ ತೃಣವುಂಟೆ ? ಅಂತೆಯೇ ಲಿಂಗ ಮುಟ್ಟಿದ ಕಾಯ ಲಿಂಗಕಾಯ. ಆತನ ಚರಿತ್ರ ಲಿಂಗಕಾಯ ಚರಿತ್ರ. ಆತನಿಗೆ ಸಂಸಾರದ ಲೇಪ ಎಳ್ಳನಿತಾದರೂ ಇಲ್ಲ ಆತ ದೇಹಧಾರಿಯಾಗಿದ್ದರೇನು ? ಮಾನವರಂತೆ ತೋರಿ ಚರಿಸಾಡಿದರೇನು ? ಆತನನ್ನು ನರನೆನ್ನಬಹುದೇ ? ಎಂದೂ ಇಲ್ಲ.

> 'ಅರಿವ ಬೈಚಿಟ್ಟುಕೊಂಡು ಮರೆಯ ಮಾನವನಾಗಿ ಕುರುಹಿನ ಹೆಸರಿನಲ್ಲಿ ಕರೆದರೆ ಓ ಎನುತ್ತಿಪ್ಪವರು ನರರೇ ಅಯ್ಯಾ ? ನಿಮ್ಮರುಹಿನಲರತವರು ನರರೇ ಅಯ್ಯಾ ? ನಿಮ್ಮಲ್ಲಿ ತೆರಹಿಲ್ಲದ ಶರಣಂಗೆ ಕುರುಹಿಲ್ಲವಾಗಿ ಬರಿಯ ಸಂಸಾರವ ಬಳಸಿಯೂ ಬಳಸದಂತಿಪ್ಪರು. ಮಹಾಲಿಂಗ ಕಲ್ಲೇಶ್ವರ ನಿಮ್ಮ ಶರಣರ ಪರಿ ಇಂತುಂಟು.
>
> ವ. ಶಾ. ಸಾ., ಭಾ. ೨., ಪು. ೩೯೬

ಎಂದು ಹಾವಿನಹಾಳ ಕಲ್ಲಯ್ಯನವರು ಹೇಳುತ್ತಾರೆ. ಉರಿಯ ಬೊಂಬೆಯನ್ನು ಅರಗಿನ ಪುತ್ಥಳಿ ಅಪ್ಪಬಲ್ಲುದೇ? 'ಸ್ವಯಂಜ್ಯೋತಿ ಲಿಂಗದಲ್ಲಿ ಸದಾ ಸನ್ನಿಹಿತನಾದ ಶರಣನಿಗೆ ಕತ್ತಲೆಯ ಮಾನವನನ್ನು ಸುತ್ತಿದ ಸಂಸಾರ ಲೇಪಿಸಬಹುದೇ ? ಬಯಲು ಭಿತ್ತಿಯ ಮೇಲೆ ಚಿತ್ತಾರ ಮೂಡಬಲ್ಲುದೇ ? ನಾಲಗೆಗೆ ತುಪ್ಪ ಅಂಟಿಕೊಳ್ಳಬಹುದೇ ?

ಈ ಮೊದಲೇ ನೋಡಿದಂತೆ ಮಾನವನ ಸೃಷ್ಟಿ ಬೇರೆ ಶರಣರ ಸೃಷ್ಟಿ ಬೇರೆ. ಒಂದು ಬ್ರಹ್ಮ ಸೃಷ್ಟಿ ಮತ್ತೊಂದು ಶ್ರೀಗುರು ಸೃಷ್ಟಿ. ಒಂದು ತನಗೆ ತಾ ಮರೆಯಾಗಿ ತನ್ನ ತಾ ಮರೆದು ಕತ್ತಲೆಯಲ್ಲಿ ಕೆಳಗಿಳಿವ ಅಧೋಮುಖವಾದ ಅಂಧಃಸೃಷ್ಟಿ. ಮತ್ತೊಂದು ತನ್ನ ತಾನೆಚ್ಚತ್ತು ನೋಡಿ 'ಶಿವ ಪಥವನರಿವಡೆ ಗುರುಪಥವೆ ಮೊದಲು' ಎಂದು ಗುರುಕರದಲ್ಲಿ ಹುಟ್ಟಿ ಲಿಂಗದಲ್ಲಿ ಬೆಳೆದು ಜಂಗಮವಾಗಿ ಸಂಚರಿಸಿ ಬಯಲ ಪ್ರಸಾದದಲ್ಲಿ ಬಯಲಾಗಿ ಬೆಳಗುವ ಊರ್ಧ್ವಸೃಷ್ಟಿ. ಅಂತೆಯೇ ಬ್ರಹ್ಮಸೃಷ್ಟಿಯಲ್ಲಿ ಎಡೆಯಾಡುವ ಮಾನವ ಜೀವನಕ್ಕೂ ಶ್ರೀಗುರುಸೃಷ್ಟಿಯಲ್ಲಿ ಹುಟ್ಟಿ ಲಿಂಗ ಲೀಲೆಯಲ್ಲಿ ಸುಳಿದಾಡುವ ಶರಣ ಜೀವನಕ್ಕೂ ಕತ್ತಲೆ ಬೆಳಗಿನಷ್ಟು ಅಂತರವಿದೆ. ಮನವ ಮುಂದುಗೊಂಡು ನಡೆವ ಮಾನವನ ಚರಿತ ಬೇರೆ,

‘ಮನ ಉಂಟೇ ಮರುಳೆ ಶಿವಯೋಗಿಗೆ’ ಎಂದು ಪ್ರಭುದೇವರು ಕೇಳುವಂತೆ ಮನವು ತನ್ನ ಮೂಲದಲ್ಲಿ ಮುಳುಗಿ ನಿವಾತವಾಗಿ ನಿಂದು ಪ್ರಜ್ವಲಿಸುವ ಆತ್ಮಜ್ಯೋತಿಯಲ್ಲಿ ನಡೆದಾಡುವ ಶರಣರ ಚರಿತ ಬೇರೆ. ಶರಣ ಚಾರಿತ್ರ ಮಾನವರ ಪರಿ ಅಲ್ಲವೆಂಬುದು ಅವರ ಜೀವನ ಚರಿತೆಯ ಕೆಲ ಸಂಗತಿಗಳನ್ನು ನೋಡಿ ಕಂಡುಕೊಳ್ಳಬಹುದು.

ಮುಂಜಾವು, ಬೆಳಗಾಗಿದೆ. ನಾನು ಜಗವೆಂಬ ಜನನ ಮರಣವೆಂಬ ಸುಖ ದುಃಖವೆಂಬ, (ತನಗೆ ತಾ ಭಿನ್ನನಾಗಿ ಅನ್ಯವೆಂದು ನೋಡುವ) ಭಿನ್ನ ಜ್ಞಾನದ ಇಲ್ಲವೆ ದ್ವೈತ ಜ್ಞಾನದ ಕತ್ತಲೆ ಸರಿದು ಮಾಯವಾಗಿ ಬೆಳಗಾಗುತ್ತಿದೆ. ಪ್ರಣವ ಘೋಷವೆಂಬ ಕೋಳಿಯ ದನಿ ಕೇಳಿ ದಿಕ್ಕು ದೆಸೆಯೆಲ್ಲ ತಾನೆಚ್ಚರವಾಗುತ್ತಿದೆ ನಾನೆಂಬುದು ಮೈಮುರಿದೆದ್ದು ಬೆಳಗಿನಲ್ಲಿ ಪ್ರಸನ್ನವಾಗಿ ತಾನೇ ತಾನಾಗಿ ತೊಳಗಿ ಬೆಳಗುತ್ತಿದೆ. ಈ ಬೆಳಗಿನಲ್ಲಿ ಕರಣಗಳೆಲ್ಲ ಲಿಂಗದ ಕಿರಣಗಳಾಗುತ್ತವೆ. ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳಾಗುತ್ತವೆ. ಈ ಬೆಳಗಿನಲ್ಲಿ ಸುಖ ದುಃಖವೆಲ್ಲ ಆನಂದ,ಜನನ ಮರಣವೆಲ್ಲ ಹುಟ್ಟು ಹೋದಿಲ್ಲದ ನಿತ್ಯಾತ್ಮನ ನಿಜಲೀಲೆ. ನಾನು ಮತ್ತು ಜಗತ್ತು ? ಎಲ್ಲಿಯ ನಾನು ? ಎತ್ತಣ ಜಗತ್ತು ? ಕತ್ತಲೆಯಲ್ಲಿ ಮರೆದು ಮಲಗಿದ್ದ ‘ನಾನು ಎಚ್ಚೆತ್ತು ನೋಡಿದ ಮೇಲೆ ತಾನು ಎಲ್ಲ, ಎಲ್ಲ ತಾನು. ನಾನು ಮಾಯವಾದ ಈ ಬೆಳಗಿನಲ್ಲಿ ತಾನು ವಿಚಿತ್ರ ವಿಶ್ವಾದ್ಭುತವಾದ ಬೃಹದಾಕಾರವನ್ನು ತಾಳುತ್ತಿದೆ! ಎಂತಹ ಬೆಳಗಿದು, ಏನು ಮಾಟ ! ಈ ಬೆಳಗು ಮೂಡುವುದೆಲ್ಲಿಂದ ? ಅದೋ ನೋಡಲ್ಲಿ ಲಿಂಗೋದಯ ಪ್ರಜ್ವಲಿಸುತ್ತದೆ:—

> ಉಪಾಧಿಕ ಮನ, ಉಪಾಧಿಕ ರಹಿತ ಮನ ನಿಂದು ನಿವಾತವಾದಲ್ಲಿ
> ಲಿಂಗೋದಯ ಪ್ರಜ್ವಲಿಸುತ್ತಿದೆ ಗುಹೇಶ್ವರ ಲಿಂಗ ತಾನೆಯಾಗಿ
>
> ವ. ಶಾ. ಸಾ., ಭಾ., ೨ ಪು. ೪೨೮

ಎಡೆದೆರಹಿಲ್ಲದೆ ವಿಶ್ವಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ ಈ ಬೆಳಗಿನ ಉಗಮ ಸ್ಥಾನವೇ ಅಂತರ್ಮುಖವಾದ ಮನದ ಲಯಸ್ಥಾನ. ಅದೇ ಅದರ ಪರಿಪೂರ್ಣತ್ವದ ನೆಲೆ. ಎಲ್ಲಿ ‘ನೀನೆಂಬ ಸರೆ ಹಿಂಗಿ ತಾನೇ ತೋರುತ್ತಿಹುದೋ’ ಅದೇ ‘ಹವಣಿಸಬಾರದ ಅಖಂಡ ಬೆಳಗು.’ ಈ ಅಖಂಡ ಚಿಜ್ಜ್ಯೋತಿಯ ಬೆಳಗಿನಲ್ಲಿ ಎಚ್ಚೆತ್ತು ಅರಳಿ ಲಿಂಗವಾದ ಅಖಂಡೇಶ್ವರ ಶರಣರು ಅದೇ ಬೆಳಗಿನ

ಔಜ್ಜ್ವಲ್ಯವನ್ನು ಇಂತು ಹಾಡಿದ್ದಾರೆ:—

'ಪಶ್ಚಿಮ ಗಿರಿಯ ಚಿತ್‌ಸೂರ್ಯ ಉದಯವಾದುದ ಕಂಡೆ. ಸುತ್ತು ಮುತ್ತಿನ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ! ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನ ಮೊತ್ತವೇ ತುಂಬಿ ತುಂಬಿದ್ದ ಕಂಡು ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗಿ, ಅಚ್ಚ ಹೊಸ ಗಂಧವು ದೆಸೆ ದೆಸೆಗೆ ಎಸೆದುದ ಕಂಡೆ! ಇಂತಿದರ ಕೌಶಲವ ಕಂಡು ಬೆರಗಾದೆನಯ್ಯಾ ಅಖಂಡೇಶ್ವರಾ.'

ವ. ಶಾ. ಸಾ., ಭಾ. ೧, ಪು ೬೭೪

ಅನಂತಕೋಟಿ ಚಂದ್ರಸೂರ್ಯ ತಾರಾಮಂಡಲಗಳು ಭೇದಿಸಬಾರದ ಕತ್ತಲೆಯನ್ನೆಲ್ಲ ಬೆಳಗು ಮಾಡಬಲ್ಲ ಈ ಬೆಳಗಿನ ಬೆಳಗಾವುದು? ಇಂತಹ ಬೆಳಗನ್ನು ಮಾನವನ ಕಣ್ಣು ಕಂಡಿಲ್ಲ. ಕಂಡ ಮಾನವರೆಲ್ಲ ಬೆಳಗಾಗಿ ಶರಣರೆನಿಸಿಕೊಂಡಿದ್ದಾರೆ. ಇಂತಹ ಬೆಳಗಿನಲ್ಲಿಯೇ ಮಾನವ್ಯವರಳಿ ದಿವ್ಯವಾಗುವುದು.

ಪ್ರಜ್ವಲಿಸುವ ಲಿಂಗೋದಯದ ಬೆಳಗಿನ ಮುಖದಲ್ಲಿ ಎಚ್ಚತ್ತು ಆ ಬೆಳಗಿನಲ್ಲಿ ಬಾಳುವ ಪರಮ ಭಾಗ್ಯ ಶರಣರದು. ಇಂತಹ ಬೆಳಗಿನಲ್ಲಿ ಸುಳಿದಾಡುವ ಶರಣರ ಚರಿತೆ ಉಪಮಿಸಬಾರದ ಚರಿತೆ. ಅವರ ಕಾಯಕ ದಾಸೋಹ, ಅವರ ಅರ್ಚನ ಪೂಜೆ, ಅವರ ಅರ್ಪಣ ಪ್ರಸಾದ, ಅವರ ಕ್ರಿ, ಅವರ ಜ್ಞಾನ, ಅವರ ನೋಟ ಕೂಟ, ಅವರ ಮಾಟ ಕೂಟ,ಅವರ ಅಂಗಸ್ಥಲದ ಆಚರಣೆ ಲಿಂಗಸ್ಥಲದ ಆಚರಣೆ ನಿಃಸ್ಥಲದ ನಿಲವು, ಇವೆಲ್ಲ ಅಸಾಮಾನ್ಯ, ಅದ್ವಿತೀಯ.

ನೋಡಬಹುದು ಅವರ ಲಿಂಗಪೂಜೆಯ ಸಂಭ್ರಮವನ್ನು ಅವರ ಆರೋಗಣೆಯ ಸಿರಿ ಸಂಪತ್ತನ್ನು. ಏನು ಪಾದಸಾಲೆ! ಎಂತಹ ಲಿಂಗ! ಮಜ್ಜನಕ್ಕೆರೆವ ಬಿಂದುಗೆ ಮಾಡಿದವರಾರು? ಧಾರೆ ಧಾರೆಯಾಗಿ ಸುರಿವ ಮಜ್ಜನೋದಕ, ಗಂಧಾಕ್ಷತೆ ಎಷ್ಟು ಹೊಳೆಯುತ್ತಿವೆ! ಪಂಚಮಹಾವಾದ್ಯ ನಾದದ ಅಬ್ಬರವೆಷ್ಟು! ಏನು ಪರಿಯಾಣ! ಎಂತಹ ಸರ್ವಸಾರ ರಸಾಯನ! ಎಂತಹ ರಸವೀಟಿಕೆ! ಉಡುವ ವಸ್ತ್ರವ ನೆಯ್ದವರಾರು? ಇದೇನು ಗಾರುಡ! ಎಂತಹ ಬಿನ್ನಾಣದ ಜೀವನ! ಅದರ ಬೆಡಗೇನು! ಕೋಟಿ ನುಡಿದು ಆ

ಬೆಡಗ ಬಣ್ಣಿಸಬಹುದೆ ? ಕೋಟಿ ವಿಚಾರಿಸಿ ಆ ಜೀವನದ ಬಿನ್ನಾಣವ ಬಿಚ್ಚಬಹುದೆ ? ಕೋಟಿ ಭಾವಿಸಿ ಶರಣರ ಜೀವನದ ಪರಮಾನಂದವನ್ನು ಅನುಭವಿಸಬಹುದೇ ? ಇದೇ ಈ ಮಾತಿನಲ್ಲಿ ತುಂಬಿದ್ದಾರೆ ಪ್ರಭುದೇವರು ತಮ್ಮ ಪೂಜೆಯ ಸಂಭ್ರಮವನ್ನು, ತಮ್ಮ ಗುಹೇಶ್ವರ ಲಿಂಗಕ್ಕಾದ ಸಂತೃಪ್ತಿಯ ಸೌಂದರ್ಯವನ್ನು:—

> ಅನಾದಿ ಶರಣ ಹೃತ್ಕಮಲ ಮಧ್ಯದ ತೇಜೋಮಯವನೇನೆಂದು ಪೂಜಿಸುವೆನಯ್ಯ ! ಜಲವೇ ಪಾದಶಿಲೆ, ಪೃಥ್ವಿಯೇ ಪಿಂಡಿಗೆ, ಆಕಾಶವೇ ಲಿಂಗ, ಸಪ್ತಸಮುದ್ರಂಗಳೇ ಪಂಚಾಮೃತ, ಮೇಘವೇ ಅಗ್ಗವಣಿಯ ಬಿಂದುಗೆ, ಮಳೆಗಾಲವೇ ಮಜ್ಜನ, ಚಂದ್ರಮನೇ ನೊಸಲಗಂಧ, ನಕ್ಷತ್ರವೇ ಅಕ್ಷತೆ, ತರುಮರಾದಿಗಳೇ ಪತ್ರಿ ಪುಷ್ಪ, ಒ(ಮೊ ?)ಳಗೇ ಪಂಚ ಮಹಾವಾದ್ಯ. ಮಾಗಿಯೆಂಬ ಪರಿಯಾಣವ ಬೆಳಗಿ, ಬೇಸಿಗೆಯೆಂಬ ಓಗರವ ಗಡಣಿಸಿ, ಸರ್ವ ಪರಿಮಳವೆಂಬ ತುಪ್ಪವನೆರೆದು, ಪರವೆಂಬ ಮೇಲೋಗರ ವನಿಕ್ಕಿ, ಬೆಳಗು ಕತ್ತಲೆಯೆಂಬ ಕನ್ನಡಕವ ಕಟ್ಟಿ, ಇಂತು ಲಿಂಗಾರೋಗ ಣೆಯ ಮಾಡಿಸಿ, ಸುಜ್ಞಾನದಲ್ಲಿ ಕೈಗೆರೆದು, ಭಾವವೆಂಬ ವೀಳೆಯವ ಕೊಟ್ಟು, ಆನು ನೀನೆಂಬ ಅನುಲೇಪನ ಗಂಧವ ಪೂಸಿ, ವಾಯುವೆಂಬ ವಸ್ತ್ರವನುಡಿಸಿ, ಎಲೆ ಗುಹೇಶ್ವರನೆಂಬ ಲಿಂಗವು ಪರಿಪೂರ್ಣವಾಗಿರ್ದ ಬಳಿಕ ಮಜ್ಜನಕ್ಕೆರೆವ ಠಾವಾವುದೈ ಸಂಗನಬಸವಣ್ಣ ?
>
> ವ. ಶಾ. ಸಾ., ಭಾ. ೨, ಪು. ೫೩೮

ಎಂತಹ ಭವ್ಯಲಿಂಗ ! ಏನು ದಿವ್ಯಪೂಜೆ ! ಆದರೆ ಇಂತಹ ಪೂಜೆಮಾಡುವ ಭಕ್ತನಾರು ಪೂಜಿಸಿಕೊಂಬ ದೇವನಾರು ? ಎರಡೂ ಒಂದೇ ! ಪ್ರಜ್ವಲಿಸುವ ಲಿಂಗದ ಬೆಳಗು ಹೆಚ್ಚು ಉಜ್ವಲವಾಗುತ್ತ ಅಂತೆ ಬಯಲಾಗುತ್ತ ಹೋದಂತೆ ಮಾಡುವ ಅಂಗ ಮಾಡಿಸಿಕೊಂಬ ಲಿಂಗ ಸಮರಸವಾಗುತ್ತವೆ. ಲಿಂಗ ಅಂಗ ಒಂದೇ ಎಂಬ ಸಮರಸೈಕ್ಯದ ಅರಿವು ಬೀಜರೂಪವಾಗಿ ನೂರೊಂದು ಸ್ಥಲದಲ್ಲಿ ಮೊದಲನೆಯ ಸ್ಥಲವಾದ ಪಿಂಡಸ್ಥಲದಲ್ಲಿಯೇ ಕಂಡು ಬರುತ್ತದೆ. ಅಲ್ಲಿಯ ನನೆ ಇಲ್ಲಿ ಹೂವಾಗಿ ಪರಿಮಳವಾಗಿದೆ. ಅಲ್ಲಿಯ ಕನ್ನೆ ಇಲ್ಲಿ ಮೈನೆರೆದು ಪ್ರಾಣೇಶ್ವರನ ಸಂಗದ ಸಮರತಿ ಸುಖಸಾಗರದಲ್ಲಿ ಮುಳುಗಿದ್ದಾಳೆ. ಇಂತಹ ಸಮರತಿ ಸಮಸುಖ ಸಮರಸಾನಂದದ ಸುಖವ ಬಲ್ಲವರೇ ಬಲ್ಲರು. ಮಾತು ಮನವನ್ನು ಮೀರಿದ ಆನಂದ, ಅದು ಭಾವಾತೀತ, ತ್ರಿಗುಣರಹಿತ. ಅದು ತನ್ನ ಎಚ್ಚರವೂ ಇಲ್ಲದ ಅಮಳ ಸುಖದ ಸುಗ್ಗಿ:—

ಆತನ ನೋಡಿದಡೆ ದೆಸೆಗಳ ಮರೆದೆ ಇನ್ನೆಂತವ್ವಾ !
ಆತ ನುಡಿಸಿದಡೆ ಮೈ ಬೆವರ್ದೆ ಇನ್ನೆಂತವ್ವ !
ಅವ್ವ, ಕೈಯ ಹಿಡಿದಡೆ ನಿರಿಗಳು ಸಡಲಿದವು ಇನ್ನೆಂತವ್ವ !
ಅವ್ವ, ನಮ್ಮ ಮಹಾಲಿಂಗ ಗಜೇಶ್ವರನಪ್ಪಿದನೆಂದಡೆ ಆ ನಷ್ಟವ ಮರೆದೆ ನಿನ್ನೆಂತವ್ವ !

ವ. ಶಾ. ಸಾ., ಭಾ. ೨, ಪು. ೫೪೨

ಇಂತಹ ಕೂಟದ ಕುಟಿಲ ಮಾನವನಿಗಿನ್ನು ನಿಲುಕಿಲ್ಲ. ಇದು ಹೆಣ್ಣು ಗಂಡಿನ ಕತ್ತಲೆಯ ಕೂಟದ ತಾಮಸ ಸುಖದಂತಲ್ಲ. ಪ್ರಜ್ವಲಿಸುವ ಪರಂಜ್ಯೋತಿ ಲಿಂಗವನ್ನು ನೋಡಿದ ಶರಣ ಆ ಲಿಂಗವಲ್ಲಿ ದಿಕ್ಕು ದೆಸೆ ತಾನೇ ಆಗಿ ಪ್ರಕಾಶಿಸುತ್ತಾನೆ. ಮಹಾಲಿಂಗವನಪ್ಪಿದ ಶರಣನ ಇರವೆಲ್ಲ ಕರಗಿ ಅರಿವರತು ಮರಹು ನಷ್ಟವಾಗಿ ಮಹಾಲಿಂಗ ತಾನಾಗಿ ಬೆಳಗುತ್ತಾನೆ. ಆತನ ಅಂತರಂಗ ಬಹಿರಂಗ ಸರ್ವಾಂಗವೆಲ್ಲ ಮಹಾಲಿಂಗದ ಪ್ರಜ್ವಲ ಪ್ರಕಾಶದಿಂದ ತೊಳಗಿ ಬೆಳಗುತ್ತದೆ. ಆತನು ತನುವಿಡಿದಿದ್ದರೇನು ದಗ್ಧಪಟನ್ಯಾಯದಂತೆ? ಬೆಂದ ನುಲಿಯಂದವಾಗಿ? ಮಹವನಿಂಬುಗೊಂಡ ಆತನ ಮನವ ಒಂದು ಮನವೆನ್ನಬಹುದೇ? ಭಾವ ಬತ್ತಲೆಯಾಗಿ ಭಾವಲಿಂಗವಾದ ಆ ಶರಣನಿಗೆ ಲಿಂಗಭಾವವಲ್ಲದೆ ಬೇರೆ ಭಾವಉಂಟೇ? ಇಂತು ಸರ್ವಾಂಗಲಿಂಗಿಗಳಾದ ಶರಣರನ್ನು ನರರೆಂದು ಕರೆಯಬಹುದೇ? ಎಂದಿಗೂ ಇಲ್ಲವೆಂದು, ಬೇರೆ ಉತ್ತರ ಆವಶ್ಯಕತೆಯೇ ಇಲ್ಲವೆಂದು ಹೀಗೆ ಹೇಳುತ್ತಾರೆ ಸಿದ್ಧರಾಮಯ್ಯನವರು:—

ಕಲ್ಪವೃಕ್ಷ ಮರನೆನ್ನಬಹುದೇ ?
ಕಾಮಧೇನು ಪಶುವೆನ್ನಬಹುದೇ ?
ಪರುಷ ಪಾಷಾಣವೆನ್ನಬಹುದೇ ?
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ನುಂಗಿದವರೆಲ್ಲ ಮಾನವರೆನ್ನಬಹುದೇ ?

ಸಿ. ವ., ಪು ೧

ಇನ್ನು ಉರಿಯನಪ್ಪಿದ ಕಪ್ಪುರಕ್ಕೆ ಕಪ್ಪುರದಿಚ್ಛೆಯ ಚರಿತೆಯೆಂಬುದಿಲ್ಲ. ಗಾಳಿಯನಪ್ಪಿದ ಪರಿಮಳಕ್ಕೆ ಗಾಳಿಯಿಚ್ಛೆಯ ಸುಳಿದಾಟವಲ್ಲದೆ ತನ್ನಿಚ್ಛೆಯ ನಡತೆಯೊಂದಿಲ್ಲ. ಅಂತೆಯೇ ಲಿಂಗವನಾಲಿಂಗಿಸಿದ ಶರಣನ ಚರಿತ ಲಿಂಗ ಚರಿತ, ಲಿಂಗಲೀಲೆ, ಲಿಂಗಾವಿಲಾಸವಲ್ಲದೆ ಶರಣನ ಚರಿತೆಯೆಂಬುದೊಂದು ಬೇರಿಲ್ಲ. ಸರ್ವಾಂಗವೆಲ್ಲ ಲಿಂಗದಲ್ಲಿ ಸಮರಸವಾಗಿ ಲಿಂಗಮುಖವಾಗಿ

ಚರಿಸುವ ಶರಣನ ಚರಿತೆ ಜೀವೋಹಂಭಾವ, ದೇಹೋಹಂಭಾವದಲ್ಲಿ ನಿಂದು ತಿರುಗುವ ಜೀವಾತ್ಮನ ಸಂಸಾರ ಚರಿತೆಯಂತಹದಲ್ಲ. ಅಂತೆಯೇ ಶರಣನು ಸಂಸಾರದಲ್ಲಿದ್ದು ಇಲ್ಲದಂತೆ, ಹೊದ್ದಿ ಹೊದ್ದದಂತೆ ಇರುವನು. ಕುಂಬಾರ ಹುಳು ಕೆಸರಲ್ಲಿದ್ದು ಕೆಸರಲ್ಲಾಡಿದರೂ ಕೆಸರಿನ ಲೇಪವೆಳ್ಳನಿತೂ ಇಲ್ಲದಂತೆ ಶರಣರ ಚರಿತೆಯ ಪರಿ. ಶರಣ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ. ಲೋಕದಲ್ಲಿ ಮಕ್ಕಳು ಸತ್ತರೆ, ಹೆಂಡತಿಯು ಮಾನಹಾನಿಯಾದರೆ ಅಳದವರಾರು ? ಸಿಡಿದೇಳದವರಾರು ? ಘಟ್ಟಿವಾಳಯ್ಯನವರು ಬಸವಣ್ಣನವರು ಮೊದಲಾದವರ ಚರಿತೆಯನ್ನು ನೋಡಿದರೆ ಪರಮಾನಂದ ಪರಮ ಶಾಂತಿಯೇ ಇಂತಹ ಸಂದರ್ಭಗಳಿಗೆಲ್ಲ ಉತ್ತರ ಕೊಟ್ಟುದು ಗೊತ್ತಾಗುತ್ತದೆ:-

> ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೇ ಅಯ್ಯಾ ? ನಿಮ್ಮನರಿದ ಶಿವಯೋಗಿಗೆ
> ಸಂಸಾರ ಬಂಧಿಸಬಲ್ಲುದೇ ಹೇಳಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ?
>
> ವ. ಶಾ. ಸಾ., ಭಾ. ೧, ಪು. ೪೮೨

ಇದಲ್ಲದೆ

> ಮಳೆಗೆ ನೆನೆವುದೆ ? ಗಾಳಿಬೀಸಿದೊ
> ಡೊಲೆವುದೇ ? ಬಲುಗಿಚ್ಚಿನುರಿಯಿಂ
> ದಳೆವುದೇ ? ನಭವಾ ಪರಿಯು ಬಯಲುಗನು ತಾನಾಗಿ ।
> ಕಳವಳದ ವಿಷಯಂಗಳ ವ್ಯಸನಗ
> ಳೊಳಗೆ ಸಿಕ್ಕುವನಲ್ಲವಾತನ
> ಹೊಲಬು ತಾ ದೇಹೊಂದು ಪರಿಯೇನೆಂಬೆನಲ್ಲಮನ ॥
>
> ಪ್ರ. ಲಿಂ., ಲೀ., ಗತಿ. ೫, ಪದ್ಯ ೪೭

ಎಂದು ಚಾಮರಸನು ಅಲ್ಲಮಪ್ರಭುದೇವರ ನಿರಂಜನ ನಿರ್ಮಾಯ ನಿರ್ಲೇಪನ ಲೀಲೆಯನ್ನು ಚಿತ್ರಿಸಿರುವಂತೆ ನಿರ್ಮಾಯಲಾದ ಶರಣರಿಗೆ ವಿಷಯ ಪ್ರಪಂಚದ ಲೇಪ ಉಂಟೆಂಬ ಕಲ್ಪನೆಯೂ ಕಲ್ಪನಾತೀತ. 'ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ' (ಛಾಂ. ಅ., ಪ್ರ. ೧೨, ಖಂ. ಮಂ ೧, ಪು. ೭೩) ಎಂಬ ಶೃತಿ ವಚನವೂ ಇದೇ ಮಾತನ್ನು ಹೇಳುತ್ತದೆ.

ಶರಣರ ಚರಿತೆಯ ಬಗೆಗೆ ಶರಣರ ಅಭಿಪ್ರಾಯ ಇನ್ನೂ ಮುಂದುವರಿದಿದೆ. ಅವರ ವಿಚಾರದಂತೆ ಶರಣರ ಲಿಂಗಲೀಲಾವಿಲಾಸದ ಪರಿ ಮಾನವರಿಗಷ್ಟೇ ಅಲ್ಲ ದೇವಾಧಿದೇವತೆಗಳಿಗೂ ಅಳವಡದು. ನರಲೋಕದವರೆಲ್ಲ

ನರಸಂಸಾರಕ್ಕೊಳಗಾದಂತೆ ಸುರಲೋಕದವರೆಲ್ಲ ಸುರಸಂಸಾರಕ್ಕೊಳಗಾದರು. ಮುನಿಮುನಿಗಳೆಲ್ಲ ಯೋಗಸಂಸಾರಕ್ಕೊಳಗಾದರು. ಹುಟ್ಟಿಸುವ ಸಂಸಾರದಲ್ಲಿ ಬಿದ್ದ ಬ್ರಹ್ಮ. ಹೊರೆವ ಸಂಸಾರದಲ್ಲಿ ಮುಳುಗಿದ ವಿಷ್ಣು. ಹೋಂದಿಸುವ ಸಂಸಾರವನ್ನು ಹೊತ್ತುಕೊಂಡ ರುದ್ರ. ತಿರೋಧಾನವೆಂಬ ಸಂಸಾರಜಾಲದಲ್ಲಿ ಸಿಕ್ಕ ಈಶ್ವರ. ಅನುಗ್ರಹ ಸಂಸಾರದಿಂದ ಬದ್ಧ ಸದಾಶಿವ. ಅಂತು ಈ ಸಂಸಾರದ ಕರಿಯ ನೂಲಿನ ಜಾಲ ಮರ್ತ್ಯಲೋಕದಲ್ಲಷ್ಟೇ ಅಲ್ಲ ಇದ್ದ ಬಿದ್ದ ಲೋಕಗಳಲ್ಲೆಲ್ಲ ಪಸರಿಸಿದೆಯಂತೆ. ಶರಣರ ಅಭಿಪ್ರಾಯದಂತೆ ಹರಿಹರ ಬ್ರಹ್ಮಾದಿಗಳೂ ಮಾಯಾಜಾಲದ ಬಾಲಕರಲ್ಲದೆ ತಮ್ಮ ತಾವರಿದು ನಿಜದಲ್ಲಿ ನಿಂದು ನಿರಾಳವಾಗಿ ಆಡಬಲ್ಲ ಘನಹಿರಿಯರಲ್ಲ. ಸಂಸಾರಪಾಶದಿಂದ ಕಟ್ಟುವಡೆದಿವರೆಲ್ಲ ಕೆಟ್ಟುಹೋದರು. ಆದರೆ,

> ಇಂತೀ ಭವಸಂಸಾರಕ್ಕೊಳಗಾಗದೆ ನಮ್ಮ ಶರಣಗಣಂಗಳೆಲ್ಲ ತಮ್ಮ ತಾವರಿದು, ತಮ್ಮ ನಿಜ ಚಿದ್‌ಬೆಳಗ ರಚಿಸಿ, ಗುಹ್ಯಾಲಂಪಟ ಜಿಹ್ವಾಲಂಪಟದಲ್ಲಿ ಬೀಳದೆ, ಸತ್ತುಚಿತ್ತಾನಂದ ನಿತ್ಯ ಪರಿಪೂರ್ಣವೆಂಬ ಅವಿರಳಾನಂದ ಬೆಳಗಿನೊಳಗೆ ಸಂತೃಪ್ತರಾಗಿ, ಭವರೋಗವೈದ್ಯ ಶರಣಾಗತರಕ್ಷಾಮಣಿಗಳೆಂದು ಸಕಲ ಶಾಸ್ತ್ರಾಗಮಂಗಳಿಂದ ಹೊಗಳಿಸಿ (ಕೊಂಡು), ಅಯೋನಿಸಂಭವರೆನಿಸಿ ಪಾವನಾರ್ಥವಾಗಿ ತಮ್ಮ ನಿಜ ಚಿದ್‌ಬೆಳಗಿನೊಳಗೆ ಅಂಕುರಿಸಿ, ನಿಜ ಚಿದ್‌ಬೆಳಗಿನೊಳಗೆ ಬೆಳೆದು, ತಮ್ಮ ನಿಜ ಚಿದ್ ಬೆಳಗಿನೊಳಗೆ ಮತ್ತೊಂದಿನಂತೆ ಬಯಲೊಳಗೆ ಮಹಾಬಯಲಾದರು ನೋಡಾ ಅಪ್ರಮಾಣ ಕೂಡಲಸಂಗಮದೇವಾ.
>
> ವ. ಶಾ. ಸಾ., ಭಾ. ೧ ಪು. ೩೮

ಮೈಯೆಲ್ಲ ಕಾಲಾಗಿ ಹರಿವ ಹೆದ್ದೊರೆಯಂತೆ, ಮೈಯೆಲ್ಲ ನಾಲಗೆಯಾಗಿ ಉರಿವ ಬೆಂಕಿಯಂತೆ ತನು ಮನ ಭಾವ ಪ್ರಾಣ ಇಂದ್ರಿಯಗಳೆಲ್ಲ ಲಿಂಗಪ್ರಕಾಶದಿಂದ ತುಂಬಿ, ಲಿಂಗದಿಚ್ಛೆಯಲ್ಲಿದ್ದು ಲಿಂಗದಿಚ್ಛೆಯಂತೆ ನಡೆವ ಶರಣರ ಚರಿತೆಯ ಸಾರಸಾರಾಯ ತಿಳಿವುದು ಸತ್ಯಶರಣರಿಗೆ,ಸತ್ಯ ಭಕ್ತರಿಗೆ, ಸತ್ಯಾಪೇಕ್ಷೆಯುಳ್ಳವರಿಗೆ,ಸತ್ಯತತ್ವವನ್ನರಿದಾಚರಿಸಿ ನಿತ್ಯರಾಗಬೇಕೆಂಬ ಸತ್ಯ ಸದಾಚಾರಿಗಳಿಗೆ. ಇನ್ನುಳಿದವರಿಗೆ ಶರಣರ ಚರಿತೆ ತಿಳಿಯದೆಂದಿದರರ್ಥವಲ್ಲ. ಆದರೆ ಆ ಚರಿತೆಯ ಸಾರಗರ್ಭವಾದ ಚಿದಾನಂದ ವಿಲಾಸ ಅವರ ಹಿಡಿತಕ್ಕೆ ಸಿಕ್ಕದೆಂಬುದೇ ಚಾಮರಸನಂತಹ ಕಾವ್ಯ ಶರಣರ ಅಭಿಪ್ರಾಯ. ಪ್ರಭು

ಲಿಂಗಲೀಲೆಯನ್ನು ಕೇಳುವವರಿಗೆ ಆತನು ಕೊಟ್ಟ ಎಚ್ಚರ ಇಂದಿಗೂ ಕಿವಿಯಲ್ಲಿ ಗುಡುಗುವಂತಿದೆ. ಬಾಯ ಮಾತನ್ನು ಕಿವಿಯಲ್ಲಿ ಕೇಳಿ 'ಆಹಾ ಭಲಾ !! ' ಎಂದು ಪರಿಣಮಿಸಿ ಕಿವಿ ಝಾಡಿಸಿಕೊಂಡು ಹೋಗುವುದಕ್ಕೆ ಶರಣರ ಚರಿತೆ ನಿತ್ಯವನ್ನೇ ಮರೆದು ಅನಿತ್ಯವನ್ನೇ ಹಿಡಿದು ಸತ್ತುಹೋದವರ ಕಥೆಯಲ್ಲ. ಕರ್ಮದ ಕತ್ತಲೆಯಲ್ಲಿ ಸಿಕ್ಕು ಅಸತ್ಯಕ್ಕಾಗಿ ಸತ್ತು ಹುಟ್ಟಿ, ಹುಟ್ಟಿ ಸತ್ತ ಮಿಥ್ಯಾಜೀವಿಗಳ ಹಗರಣವಲ್ಲ. ಹೊತ್ತು ಹೋಗದೆ ಪುಂಡರು ಕೇಳುವ ಸಂತೆಯ ಶಾಸ್ತ್ರವಲ್ಲ. ಆದ್ದರಿಂದ ಶರಣರ ಚರಿತೆಯನ್ನು ತಿಳಿದುಕೊಳ್ಳಬೇಕಾದರೆ ತನು ಮನ ಭಾವವೆಲ್ಲ ಪ್ರಸನ್ನವಾಗಿ ಆ ಚರಿತೆಯ ಗಾಂಭೀರ್ಯವನ್ನು ಅದರ ಔನ್ನತ್ಯ ವೈಶಾಲ್ಯಗಳನ್ನು ಚೆನ್ನಾಗಿ ಪ್ರತಿಬಿಂಬಿಸುತ್ತಿರಬೇಕು. ಇಲ್ಲವಾದರೆ ಶರಣರ ಚರಿತೆಯನ್ನು ಓದಿ ಫಲವೇನು ? ಕುರಿ ಹೊಕ್ಕು ಫಲವೇನು ಕಬ್ಬಿನ ತೋಟವನ್ನು ? ಕಾಗೆ ಹೊಕ್ಕು ಫಲವೇನು ಇಮ್ಮಾವಿನ ಬನವನ್ನು ? ಮದಕರಿ ಹೊಕ್ಕು ಕಬ್ಬಿನ ರಸವನ್ನು ಸೂರೆಗೊಳ್ಳುತ್ತದೆ. ಮಾವಿನ ಹಣ್ಣಿನ ತನಿರಸವನ್ನು ತಿಂದುತೇಗುವುದು ಗಿಳಿ, ಕಾಗೆಗೆ ಮಾವಿನ ಹಣ್ಣಿನ ಅರ್ಥವಿಲ್ಲ. ಕುರಿಗೆ ಕಬ್ಬನ್ನು ಸಿಗಿವ ಹಲ್ಲಿಲ್ಲ. ಇದು ಹಣ್ಣಿನ ದೋಷವಲ್ಲ, ಕಬ್ಬಿನ ಕೊರತೆಯಲ್ಲ. ಬಸವಣ್ಣನವರ ಜೀವನದ ಜೀವಾಳ 'ಕೂಡಲಸಂಗಮದೇವ.' ಪ್ರಭುದೇವರ ಲಿಂಗಲೀಲೆಯ ಪರಮ ರಹಸ್ಯ 'ಗುಹೇಶ್ವರಲಿಂಗ.' ಅದರಂತೆ ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯ ಜ್ಞಾನಚೈತನ್ಯ 'ನಿಃಕಳಂಕ ಮಲ್ಲಿಕಾರ್ಜುನ.' ಎಂದಿಗೂ ಶರಣನ ಅರ್ಥ ಲಿಂಗ, ಲಿಂಗಕ್ಕೆ ಅರ್ಥ ಶರಣ. ಲಿಂಗ ಸಾರಾಯ ಶರಣ ಲಿಂಗ. ತಾನೇ ಲಿಂಗವೆಂದು ಕುರುಹುವಿಡಿದಹನಲ್ಲದೆ ಶರಣನಿಗೆ ಬೇರೆ ಕುರುಹುಂಟೇ ? ಆದ್ದರಿಂದ ಇಂತಹ ಮಹಾಂತ ಶರಣರ ಜೀವನ ಚರಿತೆಯ ಸಾರ ರಹಸ್ಯವನ್ನು ತಿಳಿಯಬೇಕಿದ್ದರೆ ಗಿಳಿಯಂತಿರಬೇಕು. ಮದಕರಿಯಂತಿರಬೇಕು. ಸುಜ್ಞಾನ ಸತ್‌ಕ್ರಿಯಾ ಸಾಮರಸ್ಯವೇ ಶರಣರ ಲೀಲಾವಿಲಾಸವನ್ನು ನೋಡಿ ನಲಿಯಬಲ್ಲುದು, ತಿಂದು ತಣಿಯಬಲ್ಲುದು. ಇಂತಹ ದೃಷ್ಟಿಯನ್ನಿಟ್ಟುಕೊಂಡು ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯ ರಂಗಮಂಟಪದಲ್ಲಿ ನಾವು ಪ್ರವೇಶ ಮಾಡಬಹುದು. ಹೀಗೆ ಪ್ರವೇಶಮಾಡುವಾಗ ಸಾರಾಸಾರ ವಿವೇಕ ಬುದ್ಧಿಯೂ ಮೈತುಂಬ ಕಣ್ಣಾಗಿರಬೇಕು. ಏಕೆಂದರೆ ಹಿಂದೆ ಆದವರೆಲ್ಲ ಶರಣ

ರಲ್ಲ. 'ನನ ನನಗೆ ಶರಣರು ತನ ತನಗೆ ಶರಣರು, ಮನೆ ಮನೆಗೆ ಶರಣರು' ಎಂದು 'ಶರಣರ' ಸಂಖ್ಯೆ ಲೆಕ್ಕಗೆಟ್ಟಿದೆ. ಅಂತೆಯೇ ನಾವು ಪುರಾಣದ ಶರಣರಾರು ? ನಿಜಶರಣರಾರು ? ಎಂಬುದನ್ನು ಎಚ್ಚತ್ತು ನೋಡುತ್ತಿರಬೇಕು. ಸತ್ಯಾನ್ವೇಷಣೆ ಎಂದಿಗೂ ನ್ಯಾಯನಿಷ್ಠುರವಾಗಿರಬೇಕು. ಇಲ್ಲಿ ನನ್ನದು ತನ್ನದೆಂಬ ಅಂಧ ಪಕ್ಷಪಾತ ಸತ್ಯಾನ್ವೇಷಣೆಯ ನಿರಂಜನ ದೃಷ್ಟಿಯನ್ನು ಮಸುಕು ಮಾಡಬಾರದು. ಶರಣರೂ ಇಂತಹ ಅಂಧತನವನ್ನು ಎಂದೂ ಪುರಸ್ಕರಿಸಿಲ್ಲ. ಮನೆಯ ದೀವಿಗೆಯೆಂದು ಮುದ್ದುಕೊಡುವುದೇ ? ಷಟ್‌ಸ್ಥಲ ಧೀರರೆನಿಸಿಕೊಂಡ ಚೆನ್ನಬಸವಣ್ಣನವರು ಈ ವಿಷಯದಲ್ಲಿ ಎಷ್ಟು ಸ್ಪಷ್ಟ ಎಂತಹ ನ್ಯಾಯನಿಷ್ಠುರ ಅಭಿಪ್ರಾಯ ಕೊಟ್ಟಿದ್ದಾರೆ ! ಅದೋ ಅವರ ಸತ್ಯ ವಚನ ಹೀಗೆ ನುಡಿಯುತ್ತಿದೆ:—

> ಬಟ್ಟಬಯಲೆಲ್ಲ ಗಟ್ಟಿಗೊಂಡಡೆ ಸ್ವರ್ಗ ಮರ್ತ್ಯ ಪಾತಾಳಕ್ಕೆ ತಾವಿನ್ನೆಲ್ಲಿಹುದೋ ? ಮೇಘ ಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಹುದೋ ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದೊಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ ? ........ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.
>
> ಚೆ. ಬ. ವ.. ಪು. ೨೦

ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯನ್ನು ವಿಮರ್ಶೆ ಮಾಡುವಾಗ ಚೆನ್ನಬಸವಣ್ಣನವರ ಸುಪ್ರಾಣಿ ಮುತ್ತಿನಂತಹ ಮಾತನ್ನು ಯಾವಾಗಲೂ ಬುದ್ಧಿಯ ಮುಂದಿಟ್ಟುಕೊಂಡಿರಬೇಕು.

*

೨

# ಮೋಳಿಗೆ ಮಾರಯ್ಯನವರ ಜೀವನ ಚರಿತೆ

ಪ್ರಕೃತಿ ಎಂಬ ಕುಂಭಕ್ಕೆ ಹೊರಗಾಗಿ ನಿಜ ನಿಜಗೂಡಿದ ಬೇಗು
ನಿಃಕಳಂಕ ಮಲ್ಲಿಕಾರ್ಜುನನಲ್ಲಿ ತುಂಬಿ ಇಂಬಾಯಿತ್ತು.

ಮೋ. ಮಾ. ವ., ಪು. ೧೧೦

ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯನ್ನು ತಿಳಿಯಲು ಸಾಧನಸಂಪತ್ತಿ ಸಾಕಷ್ಟಿದ್ದರೂ ಸತ್ಯಶುದ್ಧವಾದ ಅವರ ಸಂಪೂರ್ಣ ಐತಿಹಾಸಿಕ ಜೀವನವನ್ನು ತಿಳಿವುದು ಸುಸಾಧ್ಯವಲ್ಲವೆಂದು ಹೇಳಬೇಕು. ಈಗ ಉಪಲಬ್ಧವಿದ್ದ ಸಾಧನ ಸಾಮುಗ್ರಿಯನ್ನು ನೋಡಿದರೆ ಅದು ಅಸಾಧ್ಯವೆಂದೇ ಹೇಳಬಹುದು. ಹನ್ನೆರಡನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಪಾಲ್ಕುರಿಕೆ ಸೋಮನಾಥರಿಂದ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಮಹಾಂತದೇವರವರೆಗೆ ಮೋಳಿಗೆಯ ಮಾರಯ್ಯನವರ ಜೀವನವನ್ನು ಒಂದಿಲ್ಲೊಂದು ಸಂದರ್ಭದಲ್ಲಿ ಒಂದಿಲ್ಲೊಂದು ವಿಧವಾಗಿ ತಿಳಿಸುವ ಹಲವಾರು ಕವಿಗಳು ಪುರಾಣಕಾರರು ಚರಿತೆಕಾರರು ಕಂಡೇ ಕಾಣುತ್ತಾರೆ. ಕೆಲವೊಂದು ಅಪವಾದ[೧]ಗಳನ್ನು ಬದಿಗಿರಿಸಿದರೆ ಏನಿಲ್ಲೆಂದರೂ ಮೋಳಿಗೆಯ ಮಾರಯ್ಯನವರ ಹೆಸರನ್ನು ಸಮುಚಿತ ಸಂದರ್ಭದಲ್ಲಿ ಎತ್ತಿಕೊಳ್ಳದ ವೀರಶೈವ ಗ್ರಂಥಗಳು ತೀರ ಕಡಿಮೆಯೆಂದು ಹೇಳಬೇಕು. ಇಂದೂ ಕೀರ್ತನಕಾರರು ಮೋಳಿಗೆಯ ಮಾರಯ್ಯನವರ ವಿಷಯವನ್ನಿಟ್ಟುಕೊಂಡು ಕೀರ್ತನ ಮಾಡುವುದನ್ನು ನೋಡಿದರೆ ಮಾರಯ್ಯನವರ ವ್ಯಕ್ತಿತ್ವದಲ್ಲಿರುದ ಚೈತನ್ಯ ಸಜೀವ ಚೈತನ್ಯವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

ಪಾಲ್ಕುರಿಕೆ ಸೋಮಾರಾಧ್ಯರಿಗಿಂತ ಮೊದಲಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಬೌದ್ಧರೊಡನೆ ವಾದ ಮಾಡಿ ಬಂದ ದೋಷಪರಿಹಾರಕ್ಕಾಗಿ ಮಾಡಿದ ಸಹಸ್ರ ಗಣನಾಮ ಸಂಕೀರ್ತನದಲ್ಲಿ ಮೋಳಿಗೆಯ ಮಾರಯ್ಯನವರ ಹೆಸರು ಬಸವಣ್ಣ ಚೆನ್ನಬಸವಣ್ಣ ಮಡಿವಾಳ ಮಾಚಯ್ಯ ಕಿನ್ನರಿ ಬ್ರಹ್ಮಯ್ಯ ಮುಸುಡಿ ಚೌಡಯ್ಯ ಮೊದಲಾದವರ ಹೆಸರಿನೊಡನೆ

೧ ಸಿಂಗಿರಾಜ ಪುರಾಣ. ಪ್ರಭುಲಿಂಗಲೀಲೆ.

ಬರುವುದು ಕಂಡುಬರುತ್ತಿದೆ. ಪಂಡಿತಾರಾಧ್ಯರು ಮಾರಯ್ಯನವರ ಸಮಕಾಲೀನರಾಗಿದ್ದರೂ ಅವರನ್ನು ಕಂಡಿರಲಿಕ್ಕಿಲ್ಲ. ಆದರೂ ಅವರನ್ನು ಶರಣಗಣಂಗಳ ಪಂಜ್ತಿಯಲ್ಲಿ ಸೇರಿಸಿರುವನ್ನು ನೋಡಿದರೆ ಅವರ ವ್ಯಕ್ತಿತ್ವದ ಪ್ರಭಾವ ಪಂಡಿತಾರಾಧ್ಯರ ಕಾಲದಲ್ಲಿ ಎಷ್ಟು ಭವ್ಯವಾಗಿತ್ತೆಂಬುದು ಸ್ಪಷ್ಟವಾಗಿ ತೋರುತ್ತದೆ. ಮಾರಯ್ಯನವರು 'ತುಟ್ಟತುದಿಯನೇರಿ ಬಟ್ಟ ಬಯಲಾ'ದರೂ ಅವರ ದಿವ್ಯ ವ್ಯಕ್ತಿತ್ವ ಇಂದಿಗೂ ನಿಚ್ಚಳವಾಗಿ ಬೆಳಗುತ್ತ ಬಂದಿದೆ.

ಮೋಳಿಗೆಯ ಮಾರಯ್ಯನವರ ಉತ್ತರಾರ್ಧ ಜೀವನದ ರಂಗಸ್ಥಲ ಬಸವಣ್ಣನವರ ಕಲ್ಯಾಣ. ಬಸವಣ್ಣನೆಂಬ ಜ್ಯೋತಿಯಿಂದ ಬೆಳಗಿದ ಅಸಂಖ್ಯಾತರಲ್ಲಿ ಅವರೂ ಒಬ್ಬರು ಅವರ ಸ್ವತಂತ್ರ ಧೀರ ಜೀವನವನ್ನು ಕಂಡು ಕೇಳಿ ಕೊಂಡಾಡಿದವರು ಹಲವರು. ಇಂತಹ ಶರಣರ ವಚನ ಗೀತಗಳೂ ಮಾರಯ್ಯನವರ ಜೀವನದ ಮೇಲೆ ಸತ್ಯ ಪ್ರಭೆಯನ್ನು ಸೂಸುತ್ತವೆ. ಬಸವಣ್ಣನವರಿಗೆ ಅತಿ ನಿಕಟ ಸಂಬಂಧವಾಗಿದ್ದ ಚೆನ್ನಬಸವಣ್ಣ, ಮಡಿವಾಳ ಮಾಚಯ್ಯ, ಹಡಪದಪ್ಪಣ್ಣ, ಕಿನ್ನರಿ ಬ್ರಹ್ಮಯ್ಯ ಮೊದಲಾದವರೊಡನೆ ಮಾರಯ್ಯನವರ ಹೆಸರನ್ನೂ ಅನೇಕ ವೀರಶೈವ ಗ್ರಂಥಗಳು ಎತ್ತಿಕೊಳ್ಳುವುದನ್ನು ನೋಡಿದರೆ ಮಾರಯ್ಯನವರ ವ್ಯಕ್ತಿತ್ವವು ಅವರು ಜೀವಿಸಿದ್ದ ಕಾಲದಲ್ಲಿಯೂ ಎಷ್ಟು ಪ್ರಭಾವಶಾಲಿಯಾಗಿತ್ತೆಂಬುದು ಚೆನ್ನಾಗಿ ತಿಳಿಯುತ್ತದೆ. ಅವರ ಜೀವನದ ಘನವನ್ನು ಕಂಡುಕೊಂಡು ಕೊಂಡಾಡಿದವರು ಬಸವಣ್ಣ, ಚೆನ್ನಬಸವಣ್ಣ, ಮಡಿವಾಳ ಮಾಚಯ್ಯ, ಸಿದ್ಧರಾಮ ಮೊದಲಾದವರು. (ಆ ಮೇಲೆ ಆಗಿ ಹೋದ ವಚನಕಾರರೂ ಮಾರಯ್ಯನವರ ಮಹಿಮಾಘನ ಜೀವನವನ್ನು ನೋಡಿ ತಲೆದೂಗಿದುದುಂಟು.) ಮಾರಯ್ಯನವರ ಸತ್ಯ ಜೀವನ ಚರಿತೆಯನ್ನು ತಿಳಿವಲ್ಲಿ ಸಮಕಾಲೀನರಾದ ಇಂತಹ ಶರಣರ ವಚನಗಳ ಉಪಯುಕ್ತತೆಯನ್ನ ಬೇರೆ ಹೇಳಬೇಕಿಲ್ಲ. ಮತ್ತು ಮಾರಯ್ಯ ಸುತ್ತುಮುತ್ತಣ ವಾತಾವರಣವನ್ನು ಪ್ರತ್ಯಕ್ಷ ಪ್ರತಿಬಿಂಬಿಸುವ ವಚನ ವಾಙ್ಮಯದ ಮಹತ್ವ ಮಾರಯ್ಯನವರ ಸತ್ಯ ಚರಿತೆಯನ್ನು ತಿಳಿಯ ಬಯಸುವ ನಮಗೆ ಎಷ್ಟಿದೆ ಎಂಬುದೂ ಸ್ಪಷ್ಟ. ಇಲ್ಲಿ ನಾವು ಇನ್ನೊಂದು ಮಾತನ್ನೂ ಲಕ್ಷ್ಯದಲ್ಲಿಟ್ಟುಕೊಳ್ಳಬಹುದು. ವಚನ ಸಾಹಿತ್ಯದ ಕೂಲಂಕಷವಾದ ಅಭ್ಯಾಸ

ವಿಲ್ಲದೆ ಮಾರಯ್ಯನವರದೇ ಆಗಲಿ ಇಲ್ಲವೆ ಇನ್ನುಳಿದ ಶರಣರದೇ ಆಗಲಿ ಜೀವನ ಚರಿತೆಯನ್ನು ಪರಿಪೂರ್ಣವಾಗಿ ನಿಚ್ಚಳವಾಗಿ ತಿಳಿಯಲಾರೆವು.

ಹನ್ನೆರಡನೆಯ ಶತಮಾನದ ಕೊನೆಯ ಭಾಗದಿಂದ ಮುಂದೆ ಹರಿದು ಬಂದಿರುವ ವಚನ ಸಾಹಿತ್ಯ ಸಾಂಪ್ರದಾಯವನ್ನು ಪರಿಶೀಲಿಸಿದರೆ ಮಾರಯ್ಯ ನವರ ವ್ಯಕ್ತಿತ್ವದ ಔಜಲ್ಯ ಸ್ಫುಟವಾಗಿ ಒಡೆದು ಮೂಡುತ್ತದೆ. ಸುಮಾರು ೧೧೮೦ರಲ್ಲಿದ್ದ ಉರಿಲಿಂಗ ಪೆದ್ದಿಗಳು ಅವರ 'ಘನವನ್ನು' ಕೊಂಡಾಡಿದ್ದಾರೆ. ೧೫ನೆಯ ಶತಮಾನದ ಮಧ್ಯದಲ್ಲಿದ್ದ ತೋಂಟದ ಸಿದ್ಧಲಿಂಗ ಯತಿವರೇಣ್ಯರು ಮಾರಯ್ಯನವರ ಪ್ರಸಾದದಿಂದ **ಕರ್ಮನಿರ್ಮಳವಾಗಿ ತಾವು ವೀರ** ಮಾಹೇಶ್ವರರಾದೆವೆಂದು ಆನಂದದಿಂದ ಹಾಡಿದ್ದಾರೆ. ೧೬ನೆಯ ಶತ ಮಾನದ ಅಂತ್ಯಭಾಗದಲ್ಲಿದ್ದ ಮತ್ತು ಇದೇ ತೋಂಟದಾರ್ಯರ ಪ್ರಶಿಷ್ಯರಾದ ಗೂಳೂರು ಸಿದ್ಧವೀರಣಾಚಾರ್ಯರು ತಮ್ಮ 'ಶ್ರೀಮತ್ ಸಕಲಗಣ ಪುರಾತನ ರೊಳ್ **ಪ್ರಭುದೇವರು** ಮಹಾನುಭಾವ ಸದ್‌ಗೋಷ್ಠಿಯಂ ಮಾಡಿದ' ಶೂನ್ಯ ಸಂಪಾದನೆಯಲ್ಲಿ ಮೋಳಿಗೆಯ ಮಾರಯ್ಯಗಳ ಸಂಪಾದನೆಯನ್ನೂ ವಿವರಿಸಿ ದ್ದಾರೆ. ಈ ಸಂಪಾದನೆಯಲ್ಲಿ ಪ್ರಭುದೇವರು ಮಾರಯ್ಯನವರೊಡನೆ 'ಮಹಾ ನುಭಾವ ಸದ್‌ಗೋಷ್ಠಿ'ಯನ್ನು ಮಾಡಿದ ಮಾತೇ ಇಲ್ಲವಾದರೂ ಮೋಳಿಗೆಯ ಮಾರಯ್ಯಗಳ ಸಂಪಾದನೆಯನ್ನು ಶೂನ್ಯ ಸಂಪಾದನೆಯಲ್ಲಿ ಸೇರಿಸಿಕೊಂಡುದನ್ನು ನೋಡಿದರೆ ವೀರಶೈವ ಪುನರುತ್ಥಾನವು ಸರ್ವತೋ ಮುಖವಾಗಿ ಸರ್ವ ಚೈತನ್ಯಮಯವಾಗಿ ನಡೆದ ೧೬ನೆಯ ಶತಮಾನ ದಲ್ಲಿಯೂ ಮಾರಯ್ಯನವರ ಜೀವನದ ಘನಮಾನವೆಷ್ಟಿತ್ತೆಂಬುದು ಗೊತ್ತಾ ಗುತ್ತದೆ.[1] ಮುಂದೆ ಸುಮಾರು ೧೬೭೫ರಲ್ಲಿದ್ದ ಕಾಡಸಿದ್ಧೇಶ್ವರದೇವರು ಮೋಳಿಗೆಯ ಮಾರಿತಂದೆಗಳು ತಮ್ಮ ಕಾಶ್ಮೀರದರಸೊತ್ತಿಗೆ ಬಿಟ್ಟು ಕಲ್ಯಾಣಪಟ್ಟಣಕ್ಕೆ ಬಂದರೆಂದು ಹೇಳಿ ಮಾರಯ್ಯನವರ ಪರಮ ವೈರಾಗ್ಯ ವನ್ನು ತಮ್ಮ ವಚನವಲ್ಲಿ[2] ಕೊಂಡಾಡಿದ್ದಾರೆ. ಸಂಗನ ಬಸವೇಶ್ವರನ

---

೧. ಇನ್ನೂ ಅಚ್ಚಾಗದ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಮತ್ತು ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆಗಳಲ್ಲಿಯೂ ಮೋಳಿಗೆಯ ಮಾರಯ್ಯನವರ ಸಂಪಾದನೆ ಇದ್ದಿರಬಹುದು.

೨. ಕಾ. ಸಿ ವ., ಪು. ೨೧

( ಕಾಲ ? ) ವಚನಗಳಲ್ಲಿಯೂ ಮೋಳಿಗಯ್ಯಗಳ ಉಲ್ಲೇಖವಿದೆ. ಕಾಲ ಜ್ಞಾನದ ವಚನಗಳನ್ನು ( ಕಾಲ ? ) ನೋಡಿದರೂ ಮಾರಯ್ಯನವರು ಮಹಾಶರಣರಲ್ಲೊಬ್ಬರು ಎಂಬುದು ಗೊತ್ತಾಗುತ್ತದೆ. ಮತ್ತು ಅನೇಕ ವಚನ ಸಂಗ್ರಹಕಾರರು ಮಾರಯ್ಯನವರ ವಚನಗಳನ್ನು ತಂತಮ್ಮ ಸಂಗ್ರಹಗಳಲ್ಲಿ ಆಯ್ದುಕೊಂಡುದು ಅವರ ವಚನಗೀತಗಳ ಮಹತಿಯನ್ನಲ್ಲದೆ ಮಾರಯ್ಯನವರ ಅನುಭಾವದ ಗಾಂಭೀರ್ಯವನ್ನೂ ಸೂಚಿಸುತ್ತದೆ ಇಂತಹ ಸಂಗ್ರಹಕಾರರೇ 'ವಚನ ಭಾಂಡಾರ'ವನ್ನು ಭದ್ರವಾಗಿ ಕಾಯ್ದುಕೊಂಡು ಬಂದವರೆಂಬುದು ಮೋಳಿಗೆಯ ಮಾರಯ್ಯನವರ ಮತ್ತು ಅವರ ರಾಣಿ ಮಹಾದೇವಿಯಮ್ಮನವರ ಹೆಚ್ಚು ಕಡಿಮೆ ಒಂಬತ್ತುನೂರು ವಚನಗಳು ಸಂಗ್ರಹ ಕಾರರಿಲ್ಲದಿದ್ದರೆ ಉಳಿಯುತ್ತಿದ್ದಿಲ್ಲವೆಂಬುದೂ ನೆನಪಿನಲ್ಲಿಡತಕ್ಕ ಮಾತು.

ಮೇಲೆ ತಿಳಿಸಿದ ವಚನಕಾರರಲ್ಲದೆ ಬೇರೆಯವರೂ ಮಾರಯ್ಯನವರ ವಿಷಯವನ್ನೆತ್ತಿಕೊಂಡಿರಬಹುದು. ಬೆಳಕನ್ನು ಕಾಣದ ಇಂತಹ ವಚನಗಳು ಪ್ರಕಟವಾದರೆ ಶರಣರ ಜೀವನ ಚರಿತೆಯನ್ನು ತಿಳಿದುಕೊಳ್ಳಲು ಮತ್ತಷ್ಟು ಉಪಯೋಗವಾಗಬಹುದು.

ಇನ್ನು ತನ್ನ ವಿಷಯ ತನಗೆ ತಿಳಿದಷ್ಟು ಅನ್ಯರಿಗೆ ಗೊತ್ತಾಗದೆಂಬುದು ಸಹಜ. ಈ ಮಾತಿನಲ್ಲಿ ಸತ್ಯಾಂಶ ಹೆಚ್ಚಿದ್ದರೆ ಮೋಳಿಗೆಯ ಮಾರಯ್ಯ ನವರ ಸತ್ಯಚರಿತೆಯನ್ನು ತಿಳಿವಲ್ಲಿ ಅವರ ವಚನಗಳನ್ನೇ ಪರಮ ಪ್ರಮಾಣ ವೆಂದು ಹೇಳಬೇಕು. ಏಕೆಂದರೆ ಆವರ ನುಡಿಗಡಣವಲ್ಲಿ ಅವರ ನಡೆ, ಅವರ ನಿಜಚರಿತ ಪ್ರತಿಫಲಿಸುವುದು ಸಹಜ. ಮತ್ತು ಸತ್ಯಶರಣರ ಜೀವನದಲ್ಲಿ 'ನಡೆದಂತೆ ನುಡಿ ನುಡಿದಂತೆ ನಡೆ' ಎಂಬ ನಡೆನುಡಿಯ ಸಾಮರಸ್ಯ ಸೂತ್ರ ನಿತ್ಯ ಮುತ್ತೈದೆಯ ಮಂಗಳ ಸೂತ್ರದಂತೆ ಎಂದಿಗೂ ಶೋಭಿಸುತ್ತಿದೆ. ಈ ಮಂಗಲ ಸೂತ್ರವನ್ನು ಶರಣರೆಂದೂ ಬಿಟ್ಟಿರಬಾರದೆಂಬ ಮಾತನ್ನು ಈ ಮೊದಲೇ ನೋಡಿದ್ದೇವೆ. ಇದೇ ಸಾಮರಸ್ಯ ವಚನ ಸಾಹಿತ್ಯಕ್ಕೆ ವಿಶಿಷ್ಟ ವಾದ ಮುಖ್ಯ ಲಕ್ಷಣಗಳಲ್ಲೊಂದು ಎಂಬುದನ್ನೂ ಕಂಡಿದ್ದೇವೆ. ( 'ನುಡಿದ ಮಾತಿಂಗೆ ನಡೆಯದಿದ್ದರೆ ಕೆಡೆ ನುಡಿಯದೆ ಬಿಡುವರೆ ಲಿಂಗವನೊಡಗೂಡಿದ ಶರಣರು ?' )

> ಹಿಡಿದ ಹೊಲಕ್ಕೆ ಒಡವೆಯು ಕೊಡೆನೆಂಬಡೆ ಬಿಡುವರೇ ಪೊಡವಿಯೊಡೆಯರು ? ನುಡಿದ ಮಾತಿಂಗೆ ನಡೆಯುದಿದ್ದರೆ ಕೇಡ (ಕಡೆ) ನುಡಿಯುದೆ ಬಿಡ ವರೇ ಲಿಂಗವನೊಡಗೂಡಿದ ಶರಣರು ? ಇದಕ್ಕೆ ಪದಿ ಪುಚ್ಚವಿಲ್ಲ ವೆಂದೆ ನಿಃಕಳಂಕ ಮಲ್ಲಿಕಾರ್ಜುನ
>
> ಮೋ. ಮಾ ವ., ಪು. ೧೦೨

'ಹೊಲ ಮಾಡಿ ತೆರಿಗೆ ಕೊಡದಿದ್ದರೆ ಒಡೆಯರು ಕೇಳುವರೆ ? ನುಡಿದು ನಡೆಯದಿದ್ದರೆ ಒಡೆಯರಾದ ಶರಣರು ಒಪ್ಪಿಕೊಳ್ಳುವರೆ ? ನಿಜೈಕ್ಯರಾದ ಶರಣರು ಮೆಚ್ಚದ ಬಾಳೊಂದು ಬಾಳೇ ?' ಎಂಬುದನ್ನು ಚೆನ್ನಾಗಿ ಬಲ್ಲ ಮಾರಯ್ಯನವರ ಕ್ರಿಯಾ ಚೈತನ್ಯದ ಒಡಲೇ ಅವರ ನುಡಿಗಡಣವೆಂದು ಹೇಳಬೇಕು. ಅವರ ಆಚಾರ ಅವರ ವಿಚಾರ, ಅವರ ಭಾವ ಅವರ ಅನುಭಾವ, ಅವರ ಶೀಲ ಸ್ವಭಾವಗಳೆಲ್ಲ ಇದ್ದಕ್ಕಿದ್ದಂತೆ ಅವರ ಮಾತಿನಲ್ಲಿ ಮೂರ್ತಿಗೊಂಡಿವೆ ಎಂದು ಹೇಳಬೇಕು ಅಂತೆಯೇ ಅವರ ನುಡಿ ಅವರ ಜೀವನ ಚರಿತೆಯ ಕನ್ನಡಿ ಎಂದೂ ಹೇಳಬಹುದು ಆದರೆ ಒಂದು ಮಾತು. ಶರಣರ ವಚನಗಳಲ್ಲಿ ಅವರ ಅಂತರಂಗ ಜೀವನ ಬಿಮ್ಮನೆಷ್ಟೇ ಬಲವಾಗಿ ಅವರ ಬಾಹ್ಯಜೀವನ ಸ್ಫುರಿಸುವುದಿಲ್ಲ. ಈ ಮಾತು ಮಾರಯ್ಯನವರ ಗೀತಗಳಿಗೂ ಚೆನ್ನಾಗಿ ಅನ್ವಯಿಸುತ್ತದೆ. ಅವರ ಅಂತರಂಗ ಜೀವನವನ್ನು ಸಾಕಷ್ಟು ತೋರಿ ಬೀರುವ ಅವರ ವಚನಗಳಲ್ಲಿ ಅವರ ಬಾಹ್ಯಜೀವನ ಚರಿತೆಯನ್ನು ಕುರಿತ ವಚನಗಳ ಸಂಖ್ಯೆ ತೀರ ಕಡಿಮೆಯೆಂದು ಹೇಳಬೇಕು. ಅಂತೆಯೇ ಅವರ ಅಂತರಂಗ ಜೀವನದ ದರ್ಶನ ಪಡೆವಲ್ಲಿ ಅವರ ಸತ್ಯ ಗೀತಗಳೇ ಪರಮ ಪ್ರಮಾಣವೆಂದಿಟ್ಟುಕೊಂಡು ಅವರ ಬಾಹ್ಯಜೀವನ ಚರಿತೆಯನ್ನು ತಿಳಿವಲ್ಲಿ ಹೆಚ್ಚಾಗಿ ಕವಿಗಳ ಪುರಾಣಿಕರ ಚರಿತೆಕಾರರ ಮರೆ ಹೋಗುವದು ಅನಿವಾರ್ಯವಾಗುತ್ತದೆ.

ಮೋಳಿಗೆಯ ಮಾರಯ್ಯನವರ ಚರಿತೆಯನ್ನು ತಿಳಿಯಲು ಇನ್ನೂ ಒಂದು ಮಹತ್ವದ ಸಾಧನವಿದೆ. ಈ ಸಾಧನವೆಂದರೆ ಅವರ ರಾಣಿ ಮಹಾದೇವಿಯಮ್ಮನವರ ವಚನಗಳು. ಇತಿಹಾಸಕಾರರ ಪುಣ್ಯವೋ ಏನೋ ಮಹಾದೇವಿಯಮ್ಮನವರ ಉಪಲಬ್ಧ ವಚನಗಳ ಸಂಖ್ಯೆ ಸಣ್ಣದಿದ್ದರೂ ಮಾರಯ್ಯನವರ ಸತ್ಯಚರಿತೆಯ ದೃಷ್ಟಿಯಿಂದ ಆ ವಚನಗಳ ಮಹತ್ವ ಅಷ್ಟಿಷ್ಟಲ್ಲ. ಕತ್ತಲೆಯ ಮಿಂಚಿನಂತೆ ರಾಣಿಯವರ ವಚನಗಳು ಹಾದಿ ತಪ್ಪಿದ ಮಾರಯ್ಯನವರ ಚರಿತೆ

ಕಾರರ ಕೈಹಿಡಿದು ಹಾದಿಗೆ ಹಚ್ಚುವಂತಿವೆ. ಮತ್ತು ಅವರ ವಚನಗಳು ಮಾರಯ್ಯನವರ ದಾಂಪತ್ಯ ಜೀವನದ ಸೌಂದರ್ಯ, ಅದರ ಮಾಧುರ್ಯ ಗಾಂಭೀರ್ಯವನ್ನು ರಮಣೀಯವಾಗಿ ಕನ್ನಡಿಸಿವೆ. ಅವೇ ವಚನಗಳು ಅಮ್ಮನವರ ನೆಲೆ ನಿಲವು, ಅವರ ಸುಜ್ಞಾನ ಶಿವಾನುಭಾವ ಅವರ ಪತಿನಿಷ್ಠೆ ನಿಜನಿಷ್ಠೆ ಇವನ್ನೆಲ್ಲ ಸಾರಾಯವಾಗಿ ತೋರುತ್ತವೆ. ಅಂತೆಯೇ ಮಾರಯ್ಯನವರ ಸಂಪೂರ್ಣ ಚರಿತೆಯನ್ನು ನಿರ್ಧರಿಸುವಲ್ಲಿ ಅಮ್ಮನವರ ವಚನಗಳು ಮಾರಯ್ಯನವರ ವಚನಗಳಷ್ಟೇ ಪ್ರಬಲ ಪ್ರಮಾಣವೆಂದಿಟ್ಟುಕೊಳ್ಳ ಬಹುದು.

ಒಟ್ಟಾರೆ ನೋಡಿದರೆ ಮೋಳಿಗೆಯ ಮಾರಯ್ಯನವರ ಜೀವನ ಚರಿತೆ ಯನ್ನು ತಿಳಿದುಕೊಳ್ಳಲು ನಮಗೆ ದೊರೆವ ಸರ್ವ ಸಾಧನಸಾಮಗ್ರಿ ಕೆಳಗೆ ಕೊಟ್ಟ ಗ್ರಂಥಗಳೆಂದು ಹೇಳಬಹುದು:—

೧ ಮೋಳಿಗೆಯ ಮಾರಯ್ಯನವರ ವಚನಗಳು.

೨ ರಾಣಿ ಮಹಾದೇವಿಯ ವಚನಗಳು.

೩ ಇನ್ನುಳಿದ ವಚನ ಸಾಹಿತ್ಯ.

೪ ಬಸವ ಪುರಾಣವು. ಕವಿ ಪಾಲ್ಕುರಿಕಿ ಸೋಮನಾಥ. ಕಾಲ ಸು. ೧೧೯೦.

೫ ಬಸವ ಪುರಾಣ. ಕವಿ ಭೀಮಕವಿ. ಕಾಲ ೧೩೬೯.

೬ ಮೋಳಿಗಯ್ಯನ ಪುರಾಣ. ಕವಿ ಗೌರವಾಂಕ.[೧] ಕಾಲ ೧೪೦೦ ?

೭ ಶಿವತತ್ವ ಚಿಂತಾಮಣಿ. ಕವಿ ಲಕ್ಕಣ್ಣದಂಡೇಶ. ಕಾಲ ೧೪೨೮.

೮ ಶೂನ್ಯಸಂಪಾದನೆ. ಸಂಪಾದಿಸಿದ ಕವಿ ಗೂಳೂರು ಸಿದ್ಧವೀರಣಾ ಚಾರ್ಯ. ಕಾಲ ೧೫ನೆಯ ಶತಮಾನ ಮಧ್ಯಭಾಗ.

೯ ವೀರಶೈವಾಮೃತ ಪುರಾಣ. ಕವಿ ಗುಬ್ಬಿಯ ಮಲ್ಲಣಾಚಾರ್ಯ. ಕಾಲ ಸು. ೧೫೧೩.

---

೧. ಕರ್ನಾಟಕ ಕವಿಚರಿತೆಯಲ್ಲಿ ಈ ಕವಿಯ ಈ ಗ್ರಂಥದ ಹೆಸರೇ ಬಂದಿಲ್ಲ.

೧೦ ಚೆನ್ನಬಸವ ಪುರಾಣ. ಕವಿ ವಿರೂಪಾಕ್ಷ ಪಂಡಿತ. ಕಾಲ ೧೫೮೪.

೧೧ ಪ್ರಭುದೇವರ ಪುರಾಣ. ಕವಿ ಹರೀಶ್ವರ. ಕಾಲ ೧೬೦೬.

೧೨ ರಾಘವಾಂಕನಕಾವ್ಯ, ಗುರುರಾಜ ಚಾರಿತ್ರ.
ಕವಿ ಸಿದ್ಧನಂಜೇಶ ಕಾಲ ೧೬೭೦.

೧೩ ವೃಷಭೇಂದ್ರ ವಿಜಯ. ಕವಿ ಷಡಕ್ಷರದೇವ. ಕಾಲ ೧೬೫೫.

೧೪ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ.
ಕವಿ ಶಾಂತಲಿಂಗದೇಶಿಕ. ಕಾಲ ೧೬೭೨.

೧೫ ಶಿವಶರಣ ಲೀಲಾಮೃತ ಕವಿ ಚೆನ್ನಪ್ಪ. ಕಾಲ ಸು. ೧೭೫೦.

೧೬ ಚೋರಬಸವಪುರಾಣ. ಕವಿ ಶಂಕರ. ಕಾಲ ೧೭೬೩.

೧೭ ಶಿವಶರಣ ವಿಲಾಸ. ಕವಿ ಮಹಾಂತ ದೇಶಿಕೇಂದ್ರ[೧].
ಕಾಲ ೧೯ನೆಯ ಶತಮಾನ ಉತ್ತರಾರ್ಧ.

೧೮ ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ. ಕವಿ ? ಕಾಲ ?

ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯನ್ನು ತಿಳಿಸುವ ಈ ಗ್ರಂಥಗಳನ್ನು ನಾಲ್ಕು ವಿಭಾಗ ಮಾಡಬಹುದು:—

(೧) ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯನ್ನೇ ಕಥಾವಸ್ತುವಾಗಿಟ್ಟುಕೊಂಡು ಬರೆದ ಗ್ರಂಥ:—

ಮೋಳಿಗಯ್ಯನ ಪುರಾಣವೊಂದೇ ಈ ವಿಭಾಗದಲ್ಲಿ ಸೇರುತ್ತದೆ.

(೨) ಮೋಳಿಗೆಯ ಮಾರಯ್ಯನವರ ಸಂಪೂರ್ಣ ಜೀವನ ಚರಿತೆಯನ್ನು ವಿಸ್ತಾರವಾಗಿ ಹೇಳುವ ಗ್ರಂಥಗಳು:—

ಈ ವಿಭಾಗದಲ್ಲಿ (೧) ಚೋರಬಸವ ಪುರಾಣ (೨) ಶಿವಶರಣಲೀಲಾಮೃತ (೩) ಶಿವಶರಣ ವಿಲಾಸ ಇವನ್ನು ಸೇರಿಸಬಹುದು.

---

೧. ಕರ್ನಾಟಕ ಕವಿಚರಿತೆಯ ತೃತೀಯ ಸಂಪುಟದಲ್ಲಿ ಈ ಕವಿಯ ಹೆಸರು, ಕಾಲ, ಗ್ರಂಥಗಳನ್ನು ಹೇಳಿದ್ದರೂ ಇದೇ ಕವಿ ಬರೆದ ಶಿವಶರಣವಿಲಾಸದ ಹೆಸರು ಹೇಳಿಲ್ಲ.

(೩) ಮೋಳಿಗೆಯ ಮಾರಯ್ಯನವರ ಸಂಪೂರ್ಣ ಚರಿತೆಯನ್ನು ಸಂಕ್ಷೇಪವಾಗಿ ಹೇಳುವ ಗ್ರಂಥಗಳು:—

ಈ ವಿಭಾಗದಲ್ಲಿ (೧) ಶಿವತತ್ವಚಿಂತಾಮಣಿ (೨) ಶೂನ್ಯಸಂಪಾದನೆ (೩) ವೀರಶೈವಾಮೃತ ಪುರಾಣ (೪) ಚೆನ್ನಬಸವ ಪುರಾಣ (೫) ಪ್ರಭುದೇವರ ಪುರಾಣ (೬) ರಾಘವಾಂಕನ ಕಾವ್ಯ (೭) ಗುರುರಾಜ ಚಾರಿತ್ರ.

(೪) ಮೋಳಿಗೆಯ ಮಾರಯ್ಯನವರ ಪೂರ್ವಾರ್ಧ ಹೆಚ್ಚಾಗಿ ಉತ್ತರಾರ್ಧ ಜೀವನವನ್ನು ವಿಸ್ತಾರವಾಗಿ ಇಲ್ಲವೆ ಸಂಕ್ಷಿಪ್ತವಾಗಿ ಹೇಳುವ ಗ್ರಂಥಗಳು:—

ಮೇಗಣ ವಿಭಾಗಗಳಲ್ಲಿ ಹೇಳಿರುವ ಗ್ರಂಥಗಳನ್ನು ಬಿಟ್ಟು ಉಳಿದುವೆಲ್ಲ ಈ ವಿಭಾಗಕ್ಕೆ ಸೇರುತ್ತವೆ.

ಮೋಳಿಗೆಯ ಮಾರಯ್ಯನವರ ಅಂತರಂಗ ಜೀವನವನ್ನು ತಿಳಿಯಲು ವಚನ ಸಾಹಿತ್ಯದ ಮಹತ್ವವೆಷ್ಟಿದೆ ಎಂಬುದನ್ನು ಈಮೊದಲೇ ನೋಡಿದ್ದೇವೆ.

ಮಾರಯ್ಯನವರ ಚರಿತೆಯನ್ನು ತಿಳಿಯಲು ಮೇಲೆ ಹೇಳಿದ ಗ್ರಂಥಗಳಲ್ಲದೆ ಅಚ್ಚಾದ ಇಲ್ಲವೆ ಅಚ್ಚಾಗದ ಹಲವಾರು ಗ್ರಂಥಗಳಿರಬಹುದು. ಇಂತಹ ಗ್ರಂಥಗಳಲ್ಲದೆ ಶಾಸನದಂತಹ ಬೇರೆ ಸಾಧನಗಳೂ ದೊರೆಯಬಹುದು. ಇದಲ್ಲದೆ ವೀರಶೈವ ಸಾಹಿತ್ಯವು ವಿಪುಲವಾಗಿ ಬೆಳೆದ ತೆಲಗು ಸಂಸ್ಕೃತ ಇಲ್ಲವೆ ತಮಿಳು ಸಾಹಿತ್ಯವೂ ಸಹಕಾರಿಯಾಗಬಹುದು. ಇಂತಹ ಸಾಧನ ಸಂಪತ್ತಿಯನ್ನೆಲ್ಲ ಸಾಧಿಸಿ, ಆಳವಾಗಿ ಅಭ್ಯಾಸಮಾಡಿ ಸಾರಾಸಾರ ವಿವೇಕವನ್ನು ಮುಂದಿಟ್ಟುಕೊಂಡು ಸಂಗತಿಗಳನ್ನು ಅಳೆದು ತೂಕಮಾಡಿ ಮಾರಯ್ಯನವರ ಸತ್ಯಜೀವನ ಸಂಶೋಧನೆ ಮಾಡಬಹುದು. ಆದರೆ ಆ ಸತ್ಯವೂ ನಿಜವೆಂದು ನಿರ್ಧರಿಸುವರಾರು ? ಮಾನವನ ಬುದ್ಧಿ ಎಷ್ಟು ? ಅಂತಹ ಸಾಧನ ಸಂಪತ್ತು ದೊರೆವುದು ಎಷ್ಟು ಜನರಿಗೆ ? ಇದ್ದ ಸಾಧನಗಳಿಂದಲೇ ಸಾಧ್ಯವಾದಷ್ಟು ಸಂಪೂರ್ಣ ಸತ್ಯವನ್ನು ಕಾಣುವ ಕಣ್ಣೆಷ್ಟು ?

ಮೋಳಿಗೆಯ ಮಾರಯ್ಯನವರ ಜೀವನ ಚರಿತೆಯನ್ನು ತಿಳಿಸುವ ಗ್ರಂಥಗಳನ್ನೆಲ್ಲ ಸುಸೂಕ್ಷ್ಮವಾಗಿ ಪರಿಶೀಲಿಸಿದರೆ ಮಾರಯ್ಯನವರ ಜೀವನದಲ್ಲಿ ಎರಡು ಮಟ್ಟಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಒಂದು ಪೂರ್ವಾಶ್ರಯ ಜೀವನ, ಮತ್ತೊಂದು ಪುನರ್ಜಾತ ಜೀವನ. ನಾನಾರೆಂಬುದನರಿಯದೆ

ಸಂಸಾರವನ್ನು ಹೊದ್ದುಕೊಂಡು ಸಕಲ ಭೋಗೋಪಭೋಗದಲ್ಲಿದ್ದು ಅಂಥ
ಭಕ್ತಿಯಲ್ಲಿ ಜಂಗಮದಾಸೋಹ ಮಾಡುತ್ತ ಹಿಂದೆ ಸರಿಯದೆ ಮುಂದುಗಾಣದೆ
ಇದ್ದ ಅಜ್ಞಾನಾಂಧಕಾರ ಜೀವನ ಒಂದು, ತನ್ನ ತಾನೆಚ್ಚತ್ತು ನೋಡಿ
ಹೊದ್ದಿದ ಸಂಸಾರವ ಹರಿದೊಗೆದು ಸತ್ಯಕಾಯಕದಿಂದ ನಿತ್ಯ ಜಂಗಮ
ದಾಸೋಹ ಮಾಡಿ ನಿಜಾನಂದದಲ್ಲಿ ನಿಂದು ತೊಳಗಿ ಬೆಳಗುವ ಜೀವನ
ಮತ್ತೊಂದು. ನೆಲಮನೆಯ ಬಾಳುವೆ ಒಂದು. ಮೇಲುಪ್ಪರಿಗೆಯ ಮಹಾ
ಮನೆಯ ಮಹಾಂತಜೀವನ ಮತ್ತೊಂದು ಒಂದರ ರಂಗಸ್ಥಲ ಕಾಶ್ಮೀರ.
ಮತ್ತೊಂದರ ಕ್ರೀಡಾಂಗಣ ಕಲ್ಯಾಣ. ಒಂದರಲ್ಲಿ ನಾಯಕ ಮಹಾದೇವ
ಭೂಪಾಲ. ಮತ್ತೊಂದರ ಲೀಲಾಪುರುಷ ಮೋಳಿಗೆಯ ಮಾರಯ್ಯ.
ಭೂಪಾಲ ಕುಟ್ಮಲವಂತಿದ್ದರೆ ಮಾರಯ್ಯ ನೆರೆಯರಳಿದ ಹೂವಿನಂತೆ.
ಭೂಪಾಲ ನೆಲದಂತಿದ್ದರೆ ಮಾರಯ್ಯ ನೆಲದ ಮರೆಯ ನಿಧಾನದಂತೆ. ಭೂಪಾಲ
ಎಣ್ಣೆ ಬತ್ತಿಯಿದ್ದ ಪಣತಿ, ಮಾರಯ್ಯ ಜ್ಯೋತಿ.

ಇಂತಹ ಜೀವನ ಚರಿತೆಯನ್ನು ಸಾಂಪ್ರದಾಯವು ಹೇಗೆ ಕಂಡಿದೆ?
ಹೇಗೆ ಚಿತ್ರಿಸಿದೆ? ಎಂಬುದನ್ನು ನೋಡಿ ವಿಮರ್ಶಾತ್ಮಕ ದೃಷ್ಟಿಗೆ ಆ ದರ್ಶನ
ಆ ಚಿತ್ರ ಹೇಗೆ ತೋರುತ್ತದೆ ಎಂಬುದನ್ನು ವಿವೇಚಿಸಬಹುದು. ಸಾಂಪ್ರ
ದಾಯವು ಸಾಮಾನ್ಯವಾಗಿ ಮಾರಯ್ಯನವರ ಜೀವನ ಚರಿತೆಯ ಚಿತ್ರವನ್ನು
ಹೀಗೆ ರೇಖಿಸುತ್ತದೆ:—

ಕಾಶ್ಮೀರದೇಶ. ಸಕಲ ಸಂಪತ್ಸಮೃದ್ಧಿಯಿಂದ ಶೋಭಿಸುವ
ಭಾರತಕ್ಕೆ 'ಮುಖಗನ್ನಡಿ'ಯಂತೆ ಚಕಚಕಿಸುತ್ತಿರುವ ಕಾಶ್ಮೀರದೇಶ. ಲೋಕ
ಸಂಜೀವಿನಿಯೆನಿಸಿ ಹರಿವ ಸೌಧಾನದಿಯಲ್ಲಿ ತೆರೆಮಾರ್ದೆರೆಗಳಿಂದ ಭೋರ್
ಭೋರೆಂದು ಹರಿವ ಅದರ ರಭಸದ ಗಾನ. ಎತ್ತ ನೋಡಿದತ್ತ ಬನಸಿರಿಯ
ಬೆಡಗುಬಿನ್ನಾಣ ಆಕೆಯ ಸಿರಿಸಿಂಗರ. ಪಲಸು ಪಾದರಿ ಅರನೆಲ್ಲಿ ಅರ
ನೇರಿಲು ತೆಂಗು ಅಡಕೆ ಸಂಪಗೆ ಹೊಂಗೇದಗೆ ಮೊಲ್ಲಿ ಮಲ್ಲಿಗೆ ಸುರಹೊನ್ನೆ
ಬಕುಲ ತಿಲಕ ಮೊದಲಾದ ಫಲಪುಷ್ಪ ತರುಲತೆಗಳ ಪ್ರಸನ್ನ ಗಂಭೀರ
ಸೌಂದರ್ಯದಿಂದ ಕಮನೀಯವಾಗಿ ರಾರಾಜಿಸುವ ಆರವೆಗಳಲ್ಲಲ್ಲಿ. ಮರಿ
ದುಂಬಿಯ ಸರಸಗಾನವಲ್ಲಿ. ಜಾಣ ಕೋಗಿಲೆಯ ಪಂಚಮದಿಂಚರವಿತ್ತ.
ಕೊಳವಲ್ಲಿ ಅರಸಂಚೆಯ ಲೀಲಾವಿಲಾಸ ಗಮನ. ಮೇಲುಗಡೆ ಆಕಾಶ
ವನ್ನಡರುವ ಹಕ್ಕಿಗಳ ಹಾರಾಡುವ ಸಂಭ್ರಮ:—

ರಾಗಿಸುವಳ ಸಲಿದಾಡುವ ನವಿಲಸು
ವಾಗಿ ನುಡಿವ ಗಿಳಿವಿಂಡು ।
ಕೂಗುತ ಕುಶಲದೊಳ್ ಕೋಗಿಲೆಯುಂಚಿ ಸ
ರಾಗದಿ ವನದಲೊಪ್ಪಿರ್ದವು ॥

ಮೋ. ಪು, ಸಂ. ೧, ಪ ೩

ಆ ದೇಶದಲ್ಲಿ ತಿರವಟಿಗೆ ಅನ್ನಛತ್ರವಿಲ್ಲದ ದಾರಿಯಿಲ್ಲ, ಶಿವಾಲಯ ಶಿವಭಕ್ತಿಯಿಲ್ಲದ ಊರಿಲ್ಲ. ದಯಾ ದಾನ ಪರಹಿತ ಪರೋಪಕಾರ ಮೊದಲಾದುವೇ ಆ ನಾಡವರ ನೀತಿ ಸಂಪತ್ತು. ಶಿವಭಜನೆ ಶಿವಕೀರ್ತನೆ ಶಿವಾರ್ಚನೆ ತ್ರಿವಿಧ ದಾಸೋಹ ಮೊದಲಾದುವೇ ಅವರ ಧರ್ಮ ಸಂಪತ್ತು. ಜನಸಂಖ್ಯೆ ಹೆಚ್ಚಿರದ ಆ ಕಾಲದಲ್ಲಿ ಅನ್ನ ಧನ ಮೊದಲಾದ ಸಂಪತ್ತಿಗೆ ಬಡತನವೆಲ್ಲಿ? ನೀತಿ ಆಚಾರ ಧರ್ಮತತ್ವ ಇವೆಲ್ಲ ಭೌತಿಕ ಸಂಪತ್ತಿನ ಕೈವಿಡಿದು ನಡೆವಾಗ ಹುಸಿನುಸುಳೆಲ್ಲಿ? ಕೊಲೆ ಕಳವೇಕೆ? ಕುಹಕ ಕುಟಿಲ ಕುಯುಕ್ತಿ ಎತ್ತ? ಅಸತ್ಯ ಅನಾಚಾರ ಅಧರ್ಮಗಳ ಮಾತೇಕೆ?

ಭಾರತಕ್ಕೆ ತಲೆಮಣಿಯಂತೆ ಒಪ್ಪುತ್ತಿರುವ ಇಂತಹ ಕಾಶ್ಮೀರದೇಶದಲ್ಲಿ ನಕ್ಷತ್ರಗಳ ನಡುವೆ ಸೂಳೆ ಹೊಳೆವ ಚಂದಿರನಂತೆ ಒಪ್ಪುವ ಮಾಂಡವ್ಯಪುರ. ಮುಗಿಲೊತ್ತಿನ ಕೋಟೆ, ಆಳವಾದ ಕೊತ್ತಳ, ಅಂಬರವ ಚುಂಬಿಸುವ ಅಟ್ಟಳೆ. ದಿಡ್ಡಿ ಕಿತಾಕೆ ಹೂಡೆಯುಗಳಿಂದ ಆ ಪುರದ ಹೊರವಲಯದ ಸರ್ವಭದ್ರವಾದ ಶೋಭೆ. ಒಳಗಡೆ ದೊರೆಗಳು ಅರಸುಮಕ್ಕಳು ಮಂತ್ರಿಗಳು ಭಟರು ಕರಣಿಕರು ಕಂಚುಕಿಯರು ಮೊದಲಾದವರ ತರತರದ ಕೇರಿಗಳು. ಮಕರ ತೋರಣ ರತ್ನದ ಲಂಬಣಗಳಿಂದ ಝುಗಝುಗಿಸುವ ಕರುಮಾಡಗಳು. ಮೇಲುಪ್ಪರಿಗೆಯ ಮನೆಗಳು. ಮುತ್ತು ಮಾಣಿಕದಂಗಡಿಗಳು, ಸರಮಂದಿಗರ ಸಾಲುಗಳು, ಲೆತ್ತ ಚದುರಂಗದಾಟಕಾರರು. ತಗರ ಕಾಳಗ ಮಲ್ಲಯುದ್ಧ ಮೊದಲಾದ ವಿಲಾಸ ವಿನೋದಗಳು. ಪಟ್ಟಣದ ಒಂದೆಡೆಯಲ್ಲಿ ರಾಜನ ಭವ್ಯ ಭವನ. ಹೊಂಗಳಸಗಳ ಪ್ರಭೆಯಿಂದ ರಂಜಿಸುವ ಆ ರಾಜಮಂದಿರದಲ್ಲಿ ನಯನಾನಂದಕರವಾದ ನಾಟಕಶಾಲೆ, ಶಯನಮಂದಿರ, ಮಜ್ಜನಮಂಡಿರ, ಹಯಗಜಲಾಯ, ಉಗ್ರಾಣ, ಕಣಜ, ಬೊಕ್ಕಸ ಭಾಂಡಾರ.

ಇಂತು ಸಕಲೈಶ್ವರ್ಯ ಸಂಪನ್ನವಾದ ಕಾಶ್ಮೀರದೇಶದ ಅರಸು

ಮಹಾದೇವ ಭೂಪಾಲ. ಆತನ ತಂದೆ ಭಾಳಲೋಚನ. ಪರಮಶಿವಭಕ್ತ. ಏಕೈಕ ನಿಷ್ಠಭಕ್ತ. ಶಿವನ ನೋಡಿ ನೋಡಿ ಆತನ ಕಣ್ಣು ದಣಿಯವು. ಶಿವನ ಹಾಡಿ ಹಾಡಿ ಆತನ ನಾಲಗೆ ದಣಿಯದು. ಶಿವನ ಕೀರ್ತಿಯ ಕೇಳಿ ಕೇಳಿ ಆತನ ಕಿವಿ ದಣಿಯವು. ಶಿವಪೂಜೆ ಮಾಡಿ ಮಾಡಿ ಆತನ ಕೈ ದಣಿಯವು. ಶಿವನ ಘನಮಹಿಮೆಯ ನೆನೆನೆನೆದು ಆತನ ಮನ ದಣಿಯದು. ಶಿವರತಿಯ ತೋರಿ ತೋರಿ ಆತನ ಭಕ್ತಿಭಾವ ದಣಿಯದು:—

ನೋಡಿ ದಣಿಯ ಕಣ್ಣಲಿ ಕೈಯಲಿ ಪೂಜೆ
ಮಾಡಿ ದಣಿಯ ರಸನೆಯಲಿ।
ಹಾಡಿ ದಣಿಯ ರತಿ ಮಾಡಿ ದಣಿಯ ನೆನೆ
ದಾಡಿ ದಣಿಯನು ಮನದಲಿ ॥

ಸೋ. ಪು., ಸಂ. ೪, ಪ. ೨೩೯

ಇಂತಹ ಸಾರ ಶಿವಭಕ್ತಿಸಂಪತ್ತಿಯಿಂದ ಶೋಭಿಸುವ ಭಾಳಲೋಚನನ ಕಾಲದಲ್ಲಿ ಶಿವಭಕ್ತಿಯ ಹಗೆ ಚಾರ್ವಾಕ ಬೌದ್ಧ ಧರ್ಮಗಳು ಪ್ರಬಲವಾಗಿರಲು ಭಾಳಲೋಚನ ಶಿವನನ್ನು ಕುರಿತು ಉಗ್ರತಪ ಮಾಡಿದನು. ಆತನ ಭಕ್ತಿಗೆ ಶಿವ ಮೆಚ್ಚಿ ಆತನಿಚ್ಛೆಯಂತೆ 'ಈ ಭಾಳಲೋಚನನಿಗೆ ಅಯೋನಿಜನಾಗಿ ಜನಿಸಿ ವಿದ್ಯಾವಿಷಯ ವೀರ ವಿತರಣ ಸಂಪನ್ನನಾಗಿ ಶಿವಭಕ್ತಿವರ್ಧನನಾಗಿ ಅರಸನಾಗಿ ನೆಲವನಾಳಿ ಮತ್ತೆ ಕಲ್ಯಾಣಕ್ಕೆ ಹೋಗಿ ಮಹಾಮಹಿಮನೆನಿಸಿ ಬಾಳು. ನಿನ್ನ ಹೆಸರು ಮಹಾದೇವರಾಣೆ(ಜ).' ಎಂದು ತನ್ನ ಮೂರ್ತಿಯೇ ರೂಪಾದ ಸುಖಮಯನೆಂಬ ಗಣನನ್ನು ಕರೆದು ಆಜ್ಞಾಪಿಸಿದನು. ಭಾಳಲೋಚನನ ಮಗನಾದ ಕಾಶ್ಮೀರದರಸು ಮಹಾದೇವಭೂಪಾಲ ಶಿವನಪ್ಪಣೆಯಂತೆ ಧರೆಗಿಳಿದ ಸುಖಮಯ ಗಣನಾಥ. ಅಂತು ಬಸವಾದಿ ಪ್ರಮಥರನ್ನು ಅವತಾರ ಪುರುಷರೆಂದು ಭಾವಿಸಿಕೊಂಡು ಬಂದ ಸಾಂಪ್ರದಾಯವು ಸಾಮಾನ್ಯವಾಗಿ ಎಲ್ಲ ಶರಣರನ್ನೂ ಅವತಾರ ಮೂರ್ತಿಗಳೆಂದು ನಂಬಿಕೊಂಡು ಬಂದಿದೆ.

ತಂದೆಯಂತೆ ಮಹಾದೇವ ಭೂಪಾಲನೂ ಮಹಾ ಶಿವಭಕ್ತ. ಅರಸೊತ್ತಿಗೆಯ ಸಿರಿಸಂಪತ್ತು, ಆ ಸಂಪತ್ತಿಗೆ ತಕ್ಕ ಔದಾರ್ಯ. ಆತನ ಪೀಠಕ್ಕೆ ಒಪ್ಪುವ ವಿದ್ಯೆ, ಆ ವಿದ್ಯೆಗೆ ಅಲಂಕಾರವಾದ ವಿನಯ. ಇಂತಹ ಸದ್ಗುಣ ಸಂಪತ್ತಿಗೆಲ್ಲ ಶೋಭೆಯಾದ ಆತನ ಶಿವಭಕ್ತಿ, ಶಿವಾಚಾರ. ಶಿವಲಾಂಛನ ಕಂಡು ಆಸನ ಬಿಟ್ಟಿಳಿದು ಬಂದು ನಮಿಸಿ ವಂಚನೆಯಿಲ್ಲದೆ ತನು

ಮನ ಧನವನ್ನರ್ಪಿಸಬಲ್ಲ ಸತ್ಯಭಕ್ತನಾತ. ಆತನ ಸತಿ ಗಂಗಾದೇವಿ ಕಡು ಚಲುವೆ 'ರತಿಗಿಂತ ಲಾವಣ್ಯರಸ್ಪವಡೆದಿಹಳು[೧].' ಆಕೆಯ ಪತಿಭಕ್ತಿ ಪಾತಿವ್ರತ್ಯ ಪತಿನಿಷ್ಠೆ ಇವನ್ನು ಉಪಮಿಸಬಾರದು. ಮನ್ಮಥನ ಸುಂದರ ರೂಪವನ್ನು ಕೀಳು ಮಾಡುವ ಲಿಂಗರತಿ ಎಂಬೊಬ್ಬ ಮಗ ಆ ಗಂಗಾದೇವಿಗೆ.

ಮಹಾದೇವಭೂಪಾಲ ಶಿವಭಕ್ತಿನಿಷ್ಠನಾಗಿದ್ದರೂ ಸಕಲೈಶ್ವರ್ಯ ಭೋಗೋಪಭೋಗಗಳ ಸುಖವಿಲಾಸವನ್ನು ಅಲ್ಲಗಳೆದಿರಲಿಲ್ಲ. ಲೌಕಿಕ ಪಾರಮಾರ್ಥವೆರಡನು ಮಾಣದೆ ಕೂಡಿ ನಡೆಸುತ್ತಿದ್ದ ಜಾಣನಾದ ಆ ರಾಯನ ಒಂದು ಕೈ ಪಾರಮಾರ್ಥವನ್ನು ಹಿಡಿಯಲು ಹವಣಿಸುತ್ತಿದ್ದರೆ ಆತನ ಮತ್ತೊಂದು ಕೈ ಲೌಕಿಕ ಸುಖವನ್ನು ವಜ್ರಮುಷ್ಟಿಯಿಂದ ಹಿಡಿದಿತ್ತು. ಅಂತೆಯೇ ಆತನಿಗೆ ಮಹಾರಾಣಿ ಗಂಗಾದೇವಿಯಲ್ಲದೆ ಏಳುನೂರು ಭೋಗ ಸತಿಯರ[೨]. ನಿತ್ಯ ಜಂಗಮದಾಸೋಹ ನಿರತನಾಗಿದ್ದ ಮಹಾದೇವರಾಯನು ಆರುಸಾವಿರ ಜಂಗಮರನ್ನು ಜಾಗ್ರಾವಲಿನಿಂದ ತನ್ನಲ್ಲಿಟ್ಟುಕೊಂಡು ಲಿಂಗ ಜಂಗಮ ಪೂಜೆ ಮಾಡಿ ಅವರ ಪ್ರಸಾದವನ್ನು ಪ್ರತಿನಿತ್ಯ ಕೈಕೊಳ್ಳುತ್ತಿದ್ದ. ಜಂಗಮದ ಜಂಗಮಪ್ರಸಾದದ ಮಹಿಮೆಯನ್ನು ಚನ್ನಾಗಿ ಬಲ್ಲ. ಆ ಭೂಪಾಲ ಜಂಗಮರಿಗೆ ಅವರವರ ಇಷ್ಟಾರ್ಥವನ್ನೆಲ್ಲ ಸಲ್ಲಿಸಿ ಅವರು ಸದಾ ಆನಂದವಾಗಿರಬೇಕೆಂದು ಎಂದಿಗೂ ಹವಣಿಸುತ್ತಿದ್ದ. ಅವರು ತನ್ನ ಪಟ್ಟಣ ಬಿಟ್ಟು ಬೇರೆ ಕಡೆ ಹೋಗಬಾರದೆಂದು ಜಾಗರೂಕನಾಗಿಯೂ ಇದ್ದ. ಆತನಲ್ಲಿ ಜಂಗಮಪ್ರೇಮ ಹುಟ್ಟಿ ಬೆಳೆದು ಇಷ್ಟೊಂದು ಬಲಿತುದಕ್ಕೆ ಕಾರಣವೆಂದರೆ ಆತನ ರಾಜಧಾನಿಯಲ್ಲಿಯೇ ಒಮ್ಮೆ ನಡೆದ ಅಪೂರ್ವ ಘಟನೆ.

ಮಾಂಡವ್ಯನಗರದ ಲುಬ್ಧಕನ ಹಂದಿಯೊಂದು ತನ್ನ ಆಹಾರವನ್ನು ಹುಡುಕುತ್ತ ನದಿಯ ಬಳಿ ಬಂತು. ನದಿಯ ದಂಡೆಯ ಮೇಲೆ ಭಿಕ್ಷಾನ್ನವನ್ನುಂಡು ಸೂಸಿದ ಅಗುಳನ್ನು ಕಾಣದೆ ಒಬ್ಬ ಜಂಗಮಮೂರ್ತಿ ಹಾಗೆಯೇ ಹೋಗಿದ್ದನು. ವರಾಹ ಆ ಶೇಷಾನ್ನವನ್ನುಂಡು ಜಂಗಮ ಪ್ರಸಾದದ ಮಹಿಮೆಯಿಂದ ಪರುಷಾಂಗಿಯಾಯ್ತು.

---

೧ ಶ. ಲೀ., ಸಂ. ೮, ಪ. ೧೮.

೨ ಸೋ. ಪು., ಸಂ. ೩, ಪ. ೨೮.

ಅದಕ್ಕೆ ಯಾವುದೋ ರೋಗವಡಸಿತೆಂದು ಲುಬ್ಧಕನು ಕಬ್ಬಿನದ ಕುಡ ಕಾಸಿ ಅವರಂಗಕ್ಕೆ ಬರೆ ಕೊಟ್ಟನೆ. ಪುರುಷಾಂಗಿಯಾದ ಹಂದಿಯನ್ನು ಸೋಂಕಿ ಕಬ್ಬಿನದ ಕುಡವೆಲ್ಲ ಕನಕವಾಯ್ತು. ಮತ್ತೆ ಕಾಸಿ ಬರೆಕೊಟ್ಟ ಕುಡಗಳೆಲ್ಲ ಕನಕವಾಗಲು ಆ ಸುದ್ದಿ ಮಹಾದೇವ ಭೂಪಾಲನಿಗೆ ಮುಟ್ಟಿತು. ಅರಸು ಹಂದಿಯನ್ನು ತರಿಸಿ ಕುಡ ಕಾಸಿ ಬರೆಯನೆಳೆದಂತೆ ಕಬ್ಬಿನವೆಲ್ಲ ಹೊನ್ನಾಯ್ತು. ಹಂದಿ ಕಿಚ್ಚಿನಿಂದ ಬೆಂದು ಸತ್ತು ಹೋಯ್ತು. ಅದರ ಶರೀರದಿಂದ ದಿವ್ಯ ಪುರುಷ ಹೊರಬಿದ್ದು ತನ್ನ ವೃತ್ತಾಂತವನ್ನು ಅರಸನಿಗಿಂತು ಹೇಳಿದನು:—

"ನಾನು ಕೇತಕಿಯೆಂಬ ಗಂಧರ್ವ. ಒಮ್ಮೆ ನಾನು ರುದ್ರಸಂಬಂಧಿಗೆ ಜಂಗಮರ ಶೇಷಾನ್ನವನ್ನು ವರಲಿಂಗಕ್ಕೆ ಕೊಡಬಹುದೇ ಎನಲು ಆ ರುದ್ರ ಗಣ ಕಿಡಿಕಿಡಿವೋಗಿ ಜಂಗಮಪ್ರಸಾದವನ್ನು ಕೆಡೆ ನುಡಿದ ನನ್ನನ್ನು ಹಂದಿಯಾಗೆಂದು ಶಪಿಸಿದನು. ಈಶನಿಗೆ ಮರೆಹೋಗಲು ಆತ ಕರುಣಿಸಿ 'ಗಣಂಗಳ ಶಾಪ ತಪ್ಪದು. ನೀನು ಮಾಂಡವ್ಯನಗರದ ಲುಬ್ಧಕನಲ್ಲಿ ಹಂದಿ ಯಾಗಿ ಹುಟ್ಟು. ಮುಂದೆ ನಿನಗೆ ಜಂಗಮದ ಶೇಷ ಪ್ರಸಾದ ದೊರೆತು ಶಾಪಮುಕ್ತನಾಗಿ ದಿವ್ಯಾಂಗಿಯಾಗಿ ಪೂರ್ವರೂಪ ತಾಳುವೆ.' ಎಂದು ಅಪ್ಪಣೆ ಕೊಡಲು ನಾನೀ ಹಂದಿಯ ರೂಪ ತಾಳಿ ಜಂಗಮದ ಶೇಷ ಪ್ರಸಾದದ ಮಹಿಮೆಯಿಂದ ನನ್ನ ಶಾಪ ನಿಶ್ಶಾಪವಾಯ್ತೆ"ಂದು ಹೇಳಿ ಗಂಧರ್ವನು ಅಭ್ರ ಪಥಕ್ಕೆ ಚಿಗಿದನು.

ಮಹಾದೇವರಾಯನು ಬೆರಗು ಬೆರಗಾಗಿ ತನ್ನ ಪೌರಾಣಿಯಿಂದ ಜಂಗಮದ ಘನವನ್ನು ಅವರ ಪ್ರಸಾದದ ಮಹಿಮೆಯನ್ನು ಸವಿಸ್ತಾರವಾಗಿ ಕೇಳಿ 'ಜಂಗಮದ ಶೇಷಾನ್ನವನ್ನುಂಡ ಹಂದಿ ದಿವ್ಯ ಶರೀರಿಯಾಯ್ತು. ಜಂಗಮನನ್ನು ಭಕ್ತಿಯಿಂದ ಅರ್ಚಿಸಿ, ಪೂಜಿಸಿ ಉಣಿಸಿ ತಣಿಸಿ ಅವರ ಮಹಾ ಪ್ರಸಾದವನ್ನು ಸ್ವೀಕರಿಸಿದರಿನ್ನೆಂತೋ!' ಎಂದು ಬಗೆದು ಬಂಧು ಬಳಗ ಸಹಿತ ಲಿಂಗದೀಕ್ಷೆ ಹೊಂದಿ ನಿತ್ಯ ಜಂಗಮಸೇವಾ ತತ್ಪರನಾಗಿದ್ದನು.

ಮಹಾದೇವ ಭೂಪಾಲನ ದಿನಚರಿ ಇಂತಿದು. ಶಿವಧ್ಯಾನಮಾಡುತ್ತ ಮುಂಜಾವಿನಲ್ಲೆದ್ದು ನಿತ್ಯ ಕ್ರಿಯೆಗಳನ್ನು ತೀರಿಸಿಕೊಳ್ಳುವುದು. ಅರಮನೆ ಯಲ್ಲಿ ಶಾಕ ಪಾಕ ರಸ ರಸಾಯನವು ಸಿದ್ಧವಾಗಲು ಅರಸು ಜಂಗಮ

ಮೂರ್ತಿಗಳನ್ನು ಅರಮನೆಗೆ ಬರಮಾಡಿಕೊಳ್ಳುತ್ತಿದ್ದನು. ಭೋರ್ಗರೆವ ಭೇರಿ ಕಂಸಾಳ ಶಂಖ ಹರೆ ಡಿಂಡಿಮ ನಾಗಸರ ಮೊದಲಾದ ವಾದ್ಯ ದಬ್ಬರದೊಡನೆ ನಾನಾ ವಿಧ ಪತ್ರಿ ಪುಷ್ಪದ ತೋಟ ತಳಿಗೊಳದಿಂದ ರಂಜಿಸುವ ಜಂಗಮ ಮಠಕ್ಕೆ ಬಂದು ಅವರ ಶ್ರೀಪಾದ ಪದ್ಮಂಗಳಿಗೆರಗಿ ಭಸಿತವನ್ನಿಟ್ಟು ಅತ್ಯಂತ ವೈಭವ ಸಂಭ್ರಮದಿಂದ ಗಣಂಗಳನ್ನು ಅರಮನೆಗೆ ಬಿಜಯಂಗೈಸಿಕೊಳ್ಳುತ್ತಿದ್ದನು. ಮನೆಗೆ ಬರಲೊಡನೆ ಅವರ ಪಾದ ತೊಳೆದು ಪಾದೋದಕವನ್ನು ಸತಿಪತಿಗಳು ತಮ್ಮ ಮಂಡೆಯಲ್ಲಿ ತಳೆದು ಪರಮಪಾವನರಾದೆವೆಂದು ಆನಂದದಿಂದ ಸಂಭ್ರಮಿಸುತ್ತಿದ್ದರು. ಗಣಂಗಳ ಅಭ್ಯಂಗತೈಲಸ್ನಾನ. ಆ ಮೇಲೆ ಅವರು ಮನವಲರಿ ಮಾಡುವ ಶಿವಪೂಜೆ. ಪರಮನ ಮಂತ್ರವನ್ನುಚ್ಚರಿಸುತ್ತ ಲಿಂಗಕ್ಕೆ ಮಜ್ಜನವೆರೆದು ಪರಿಮಲ ಗಂಧ ವನ್ನು ತೀಡಿ ಬನ್ನಿ ಬಿಲ್ವ ಸುರಗಿ ಸುರಹೊನ್ನೆ ಸಂಪಗೆ ಮಲ್ಲಿಗೆ ಮಾಲತಿ ಮೊದಲಾದ ಸುಗಂಧದ ಪತ್ರಿ ಪುಷ್ಪವನ್ನು ಧರಿಸಿ ಧೂಪ ದೀಪಾರತಿಯನ್ನೆತ್ತಿ 'ಜಯ ಜಯ' ಎಂದು ಶಿವನ ಹಾಡಿ ಮಂಗಲಮಾಡುವ ಸಂಭ್ರಮದ ಶಿವ ಪೂಜೆ. ಪೂಜೆ ಮುಗಿದ ಮೇಲೆ ಅವರ ಆರೋಗಣೆಯ ಸಂಭ್ರಮ. ಅವರವರ ಮನದಿಚ್ಛೆಯರಿದು ಪರಮಾನ್ನ ದಿವ್ಯಾನ್ನವನ್ನೆಡೆಮಾಡಿ ರಸ ರಸಾಯನವನ್ನು ನೀಡಿ ಸಂತೃಪ್ತಿಗೊಳಿಸಿ ಊಟವಾದ ಮೇಲೆ ಅರಸನೇ ಕೈ ತೊಳೆಯಲು ಪನ್ನೀರು ಕೊಟ್ಟು ಬಳಿಕ ತಾಂಬೂಲವನ್ನು ತಿನಲಿತ್ತು ಅವರಂಗಕ್ಕೆ ಗಂಧ ಕಸ್ತೂರಿ ಪುನುಗು ಜವಾದಿಗಳನ್ನು ಪೂಸಿ ದೇವಾಂಗ ದಿವ್ಯಾಂಗ ಮೊದಲಾದ ನವ್ಯವಸ್ತ್ರಗಳನ್ನಿತ್ತು ಅಲಂಕರಿಸಿ ಮತ್ತೆ ಮತ್ತೆ ಮಣಿದು ಜಂಗಮರನ್ನು ಬೀಳ್ಕೊಳ್ಳುತ್ತಿದ್ದನು.

ಆ ಮೇಲೆ ತಾನೂ ಶಿವಪೂಜೆ ತೀರಿಸಿಕೊಂಡು ಜಂಗಮದ ಶೇಷ ಪ್ರಸಾದವನ್ನು ಸ್ವೀಕರಿಸಿ ವೀಳೆಯವನ್ನು ಕೊಂಡು ಓಲಗಕ್ಕೆ ಹೊರಡ ಲನುವಾಗುತ್ತಿದ್ದನು. ಕಸ್ತೂರಿ ಮುಂತಾದ ಪರಿಮಳ ದ್ರವ್ಯಗಳನ್ನು ಲಿಂಗಕಿತ್ತು ತನ್ನಂಗಕ್ಕೆ ಲೇಪಿಸಿಕೊಂಡು ಕೊರಳಹಾರ ಪದಕ ತಳತಳಿಸುವ ಮಸ್ತಕದ ಮಕುಟ ಭುಜಕೀರ್ತಿ ಪೊಂಮೊಡಿಗೆ ಪೆಂಡೆಯಗಳಿಂದಲಂಕೃತ ನಾಗಿ ನೊಸಲ ಭಸಿತ ಪೇರುರದ ರುದ್ರಾಕ್ಷಿಯಿಂದ ರಂಜಿಸಿ ಅಭಿನವ ಮನ್ಮಥನಂತಿರುವ ಅರಸನನ್ನು ರಸಋಷಿಯೇ ಬಣ್ಣಿಸಬಲ್ಲ:—

ಕಸ್ತೂರಿ ಪುನುಗು ಜವಾದಿಗಳನು ಲಿಂಗ ।
ಕಿತ್ತು ಮೈಯೊಳು ಪೂಸುತೊಡನೆ ।
ಮುತ್ತಿನ ಹಾರ ಪದಕ ಪೆಂಡೆಯ ಭುಜ ।
ಕೀರ್ತಿಯೊಸೆಯಲನುವಾದ ॥
ನೊಸಲ ಭಸಿತ ಪೇರುರದ ರುದ್ರಾಕ್ಷಿ ರಂ
ಜಿಸುವ ಪೊಂನೊಡಿಗೆ ಮೈಯೊಳಗೆ ।
ಒಸೆದಿಟ್ಟ ಬಾವನ್ನ ಚಂಪಕ ಮಾಲೆ ಕಂ
ಪೆಸೆಯೆ ಪೊರಟನೋಲಗಕೆ ॥

ಸೋ. ಪು., ಸಂ. ೧, ಪ. ೯೮-೯೯

ವಂದಿ ಮಾಗಧರು 'ಭಾಪು ಪಾಯುವಧಾರು ಜಯ ಕಾಶ್ಮೀರ ಭೂಪ' ಎಂದು ನಲಿದು ಕೊಂಡಾಡುತ್ತಿರಲು ನಾನಾ ವಿಧವಾದ ವಾದ್ಯ ಮೊಳಗುತ್ತಿರಲು ಮಹಾದೇವರಾಜನು ಓಲಗಕ್ಕೆ ಬಂದು ಸಿಂಹಾಸನದ ಮೇಲೆ ಮಂಡಿಸುತ್ತಿದ್ದನು. ರಾಜತೇಜದಿಂದೊಪ್ಪುವ ಗಂಭೀರ ಮುಖ. ಮುಖದಲ್ಲಿ ತುಂಬಿ ಸೂಸುವ ಮುಗುಳು ನಗೆ. ಅರಸನ ವಿಸ್ತಾರವಾದ ಒಡ್ಡೋಲಗದಲ್ಲಿ ನಾನಾ ದೇಶದ ರಾಜರು ರಾಜಕುಮಾರರು ಮನ್ನೆಯರು ಮಕುಟವರ್ಧನರು ಮಂತ್ರಿಗಳು ಕರಣಿಕರು ಕವಿ ಗಮಕಿಗಳು ವಾದಿ ವಾಗ್ಮಿಗಳು ಗಾಯಕರು ಪಾಠಕರು ನಟರು ನೃತ್ಯಾಂಗನೆಯರು ಪಾತ್ರದವರು ಪರಿಹಾಸದವರು. ನಾನಾ ಸಂಭ್ರಮದಿಂದ ಶೋಭಿಸುವ ಆಸ್ಥಾನಮಂಟಪದಲ್ಲಿ ಒಮ್ಮೆ ವೀಣೆ ಕಿನ್ನರಿಗಳ ರಾಗರಸದಿಂಪು ಮತ್ತೊಮ್ಮೆ ಸರಸ ಕಾವ್ಯದ ಮಧುರಾಲಾಪ. ಈಗ ಪಂಡಿತ ಮಂಡಳಿಯ ತರ್ಕ ಆ ಮೇಲೆ ನರ್ತಕಿಯ ಭಾವ ತುಂಬಿ ಕುಣಿವ ನೃತ್ಯ. ಆನೆಗಳ ಸಾಧನೆ, ತಗರ ಕಾಳಗ, ಮಲ್ಲರ ಯುದ್ಧ, ವಿದೂಷಕರ ವಿನೋದ. ಇಂತಿರುವ ಸಭಾಮಧ್ಯದಲ್ಲಿ ಮಹಾದೇವ ಭೂಪಾಲನು ತಾರಾನಿಕರ ಮಧ್ಯದ ಚಂದ್ರನಂತೊಪ್ಪುತ್ತಿದ್ದನು. ಆಸ್ಥಾನದ ಅನಂತ ವೈಭವದಲ್ಲಿ ಅರಸನ ದೇಹವಿದ್ದರೂ ಆತನ ಮನಸು ಜಂಗಮದಂಘ್ರಿಯ ಧ್ಯಾನದಲ್ಲಿ, ಸಕಲ ಭೋಗಭಾಗ್ಯವೆಲ್ಲ ಶಿವನ ದಾನವೆಂದು ನೆನೆವ ಶಿವಧ್ಯಾನದಲ್ಲಿ.

ಇನ್ನು ಳಿದ ಕಾಲ ತನ್ನಲ್ಲಿದ್ದ ಪೌರಾಣಿಯಿಂದ ಶಿವಕಥೆ ಶಿವಪುರಾಣ ಲಿಂಗಜಂಗಮದ ಮಹಿಮೆ ಶಿವಭಕ್ತರ ಆಧಿಕ್ಯವನ್ನು ಕೇಳಿ ಕೇಳಿ ಮಹಾ

ದೇವ ಭೂಪಾಲನ ಭಕ್ತಿಭಾವ ಉಕ್ಕೇರುತ್ತಿತ್ತು. ಆತನ ಆನಂದ ಮೇರೆ ಮೀರುತ್ತಿತ್ತು.

ಹೀಗೆ ಸಕಲ ಭೋಗಭಾಗ್ಯ ಸಂಪತ್ತಿನಿಂದ ಸಮೃದ್ಧವಾದ ಕಾಶ್ಮೀರ ಭೂಪಾಲನ ಜೀವನದಲ್ಲಿ ಆತನ ಜೀವನ ಪಥವನ್ನೇ ಬದಲು ಮಾಡುವ ಅತಿ ಮಹತ್ವದ ಸಂಗತಿಯೊಂದು ಸಂಭವಿಸಿತು. ಅರಸನ ಅನನ್ಯಸಾಮಾನ್ಯವಾದ ಜಂಗಮ ಭಕ್ತಿಯ ವಾರ್ತೆ ಎಲ್ಲೆಡೆ ಹಬ್ಬಿತು. ಕಲ್ಯಾಣಕ್ಕೂ ಮುಟ್ಟಿತು. ಜಂಗಮ ಪ್ರಾಣಿಯಾದ ಬಸವಣ್ಣನು ೧ ಲಕ್ಷ ೯೦ ಸಾವಿರ ಜಂಗಮಗಣಕ್ಕೆ ವಂಚನೆಯರಿಯದ ಭಕ್ತಿಯಿಂದ ನಿತ್ಯ ದಾಸೋಹ ಮಾಡುತ್ತಿದ್ದ. ಆದರೆ ಸಂಗಮೇಶ್ವರನಿತ್ತ ನೇಮ ಪೂರೈಸಲು ಆತನಿಗೆ ಇನ್ನೂ ಆರು ಸಾವಿರ ಗಣಂಗಳು ಬೇಕಾಗಿದ್ದರು. ಕಾಶ್ಮೀರ ಗಣಂಗಳ ಸುದ್ದಿ ಕೇಳಿ ಬಸವಣ್ಣನಿಗೆ ಆಕಾಶದಷ್ಟು ಆನಂದ. ತನ್ನ ಸತಿ ನೀಲಾಂಬೆ ಮಾಡಿದ ಕಟ್ಟೋಗರದ ಬುತ್ತಿಯನ್ನು ಕಟ್ಟಿಸಿಕೊಂಡು ವೇಷ ಮರೆಸಿ ಹಸುಬೆಯ ಸೆಟ್ಟಿಯಾಗಿ ಕಾಶ್ಮೀರ ದೇಶಕ್ಕೆ ಬಂದ. ಮಾಂಡವ್ಯಪುರದಲ್ಲಿ ಗಂದಿಗೆ ಮಸಾಲೆ ದ್ರವ್ಯಗಳ ಮಾರಾಟ ಮಾಡಿ ಕಾವಲಿದ್ದ ಕಟ್ಟಾಳುಗಳ ಮನವೊಲಿಸಿ ಜಂಗಮವಿದ್ದ ಠಾವಿಗೆ ಬಂದ ಸ್ನಾನ ಮಾಡಿ ಪೂಜೆ ತೀರಿಸಿಕೊಂಡು ಜಂಗಮದಂಘ್ರಿಯಲ್ಲಿ ಸೈಗೆಡೆದು ಆರೋಗಣೆಗೆ ಬಿನ್ನಹ ಮಾಡಿದ. ತಾನು ತಂದ ಬುತ್ತಿಯಲ್ಲಿ ಎಲ್ಲ ಗಣಂಗಳ ಸಂತೃಪ್ತಿ ಮಾಡಿದ. ಕಟ್ಟೋಗರದ ಬುತ್ತಿಯ ಸವಿ ತಲೆಗೇರಿದ ಜಂಗಮಕ್ಕೆ ನಿಬ್ಬೆರಗು ! ಒಂದೇ ಬುತ್ತಿಯಲ್ಲಿ ಎಲ್ಲರನ್ನು ತಣಿಸಿದ ಪರಮಾಶ್ಚರ್ಯ !! ಅರಸನ ಕಟ್ಟಳೆಯಲ್ಲಿದ್ದು ಒಂದೇ ಮನೆಯ ಊಟ ಬೇಸರಿಟ್ಟ ಜಂಗಮಕ್ಕೆ ಸೆಟ್ಟಿಯಿಂದ ಕಲ್ಯಾಣದ ಬಸವಣ್ಣನ ನಿರತಿಶಯ ಜಂಗಮ ಪ್ರೇಮವನ್ನು ಕೇಳಿದ ಮೇಲಂತೂ ಗಣಂಗಳ ಮನದ ಕಾಲು ಕಲ್ಯಾಣದವರೆಗೆ ಜಾರಿದುವು. ಆದರೆ ಅಲ್ಲಿಂದ ಪಾರಾಗುವದೆಂತು? ಕಾವಲನ್ನು ವಂಚಿಸುವರಾರು? ಜಂಗಮದಿಂಗಿತವನ್ನು ತಿಳಿದ ಸೆಟ್ಟಿ ಆ ಕಾವಲನ್ನು ವಂಚಿಸಿ ಕಲ್ಯಾಣಕ್ಕೆ ಕರೆದೊಯ್ವೆನೆಂದು ಹೊಣೆ ಹೊತ್ತುಕೊಂಡ. ಆತನಿಚ್ಛೆಯಂತೆ ಆರುಸಾವಿರ ಜಂಗಮರೆಲ್ಲ ಹಸುಬೆಯಲ್ಲಿ ಹೊಕ್ಕರು. ಹಸುಬೆ ಸಣ್ಣದು. ಆದರೆ ಅದರೊಳಗೆ ಸಾವಿರ ಲೆಕ್ಕದ ವಿಸ್ತಾರ. ಹಸುಬೆಯ ಸೆಟ್ಟಿ ಕಾವಲಿನ ಕಟ್ಟಾಳುಗಳನ್ನು ತರತರವಾಗಿ ವಂಚಿಸಿ ಮಾಂಡವ್ಯಪುರವನ್ನು ಬಿಟ್ಟು ಕಲ್ಯಾಣಕ್ಕೆ ಬಂದ. ಸೆಟ್ಟಿಯೇ

ಬಸವಣ್ಣನೆಂಬುದು ಜಂಗಮಕ್ಕೆ ಗೊತ್ತಾಯ್ತು. ಸೇರಿ ಮೀರಿದ ಆನಂದ! ಬಸ
ವಣ್ಣನ ಭಕ್ತಿಯಲ್ಲಿ ಸುಖವಾಗಿ ನಿಂತರು.

ಇತ್ತ ಕಾಶ್ಮೀರ ಭೂಪನಿಗೆ ಜಂಗಮ ಮಾಯವಾದ ಸುದ್ದಿ ಬಂತು. ಬಿರು
ಗಾಳಿಯ ಹೊಡೆತಕ್ಕೆ ಸಿಡಿದೆದ್ದ ಸಾಗರದಂತಾಯ್ತು ಆತನ ಇರವು. ಒಮ್ಮೆ
ಕೋಪ ಮತ್ತೊಮ್ಮೆ ಸಂತಾಪ. ಅರೆ ನಿಮಿಷ ಭಯ ಮತ್ತೆ ಉದ್ವೇಗ. ಏನೋ
ಆಸೆ ಮರುಕ್ಷಣ ನಿರಾಶೆ. ಜಂಗಮರನ್ನು ಶೋಧಿಸಲು ದೆಸೆ ದೆಸೆಗೆ ಚರರು ಹರಿದು
ಹೋದರು. ನದಿ ಆರವೆ ಪತ್ರಿಯ ಬನ ಪುಷ್ಪವಾಟಿಕೆ ಶಿವಾಲಯವನ್ನೆಲ್ಲ
ಹುಡುಕಿದರೂ ನಕಾರವೇ ಅವರ ಪುರುಷಪ್ರಯತ್ನಕ್ಕೆ ಉತ್ತರವಾಯ್ತು.
ಆವರೆ ಕಾಶ್ಮೀರದಿಂದ ಜಂಗಮ ಸಂತತಿ ಕಲ್ಯಾಣಕ್ಕೆ ಬಂದ ಸಂಗತಿಯನ್ನು
ಒಬ್ಬ ಚರಮೂರ್ತಿಯಿಂದ ತಿಳಿದು ಆ ಸುದ್ದಿಯನ್ನು ಅರಸನಿಗೆ ಮುಟ್ಟಿಸಿದರು.
ಅರಸನ ಕೋಪ ನೂರು ಮಡಿ ಸಾಸಿರ್ಮಡಿಯಾಯ್ತು ಕಲ್ಯಾಣದ ಬಸ
ವನೇ ಜಂಗಮರನ್ನು ವಂಚಿಸಿಕೊಂಡೊಯ್ದನೆಂದು ಸಿಡಿದೆದ್ದು ಕಿಡಿ ಕಿಡಿಯಾ
ದ. 'ಜಂಗಮ ಭಕ್ತಿಗೆ ಅಡ್ಡ ಬರುವುದು ಎಂತಹ ಮಹಾ ಪಾಪ! ಹೀಗೆ ಮೋ
ಸಮಾಡಿ ಭಕ್ತಿಯನ್ನು ಕೆಡಿಸಿದ ಪಾಪಿಯನ್ನು ಕೊಂದರೆ ಪಾಪವೇ? ಬಸವ
ಸತ್ತರೆ ಆರು ಸಾವಿರ ಜಂಗಮರಿಚ್ಛೆಯನ್ನು ನಡೆಸುವವರಾರು ? ಗಣಂಗಳು
ಮರಳಿ ಇತ್ತ ಬರಲೇ ಬೇಕು.' ಎಂದು ಬಗೆದು 'ಕಲ್ಯಾಣದ ಬಸವನನ್ನು
ಕೊಲ್ಲುವ ಕಟ್ಟಾಳುಂಟೇ ?' ಎಂದು ಕೇಳಲು ಚೋರ ಚಿಕ್ಕಯ್ಯನೆಂಬೊಬ್ಬ
ಚೋರನಾಯಕ ಮುಂದೆ ಬಂದ. ಕಪಟೋಪಾಯದಿಂದ ಬಸವಣ್ಣನನ್ನು
ಕೊಲ್ಲುವ ಬಗೆಯನ್ನೂ ತಿಳುಹಿದ. ಅರಸನಿಂದ ವೀಳೆಯವನ್ನು ಕೊಂಡು
ಪುರವನ್ನು ಪೊರಮಟ್ಟು ಕಲ್ಯಾಣದ ಕಡೆ ನಡೆದ.

ಚೋರ ಚಿಕ್ಕಯ್ಯ ಅನೇಕ ದೇಶ ಕಳೆದು ಕಲ್ಯಾಣದ ಉಪವನಕ್ಕೆ
ಬಂದು ಮುಟ್ಟಿದ. ಅಲ್ಲಿ ಕಾವಿಯುಟ್ಟು ನೊಸಲಿಗೆ ಭಸಿತವನ್ನಲಂಕರಿಸಿ ಔಡಲ
ಕಾಯಿಗಳನ್ನೇ ಸರಗೊಳಿಸಿ ಕೊರಳಲ್ಲಿ ರುದ್ರಾಕ್ಷಿ ಮಾಲೆ ಮಾಡಿ ಕರೆ ಬದ
ನೆಯ ಕಾಯನ್ನೇ ಲಿಂಗದಂತೆ ಧರಿಸಿ ಕಲ್ಯಾಣ ಪಟ್ಟಣದ ಬೀದಿ ಬೀದಿಗಳನ್ನು
ದಾಟಿ ಬಸವಣ್ಣನವರ ಮಹಾಮನೆಗೆ ಬಂದ. ಜಂಗಮಕ್ಕೆ ಯಾವ ನಿರ್ಬಂಧ
ವೂ ಇಲ್ಲದ ಆ ಮಹಾಮನೆಯಲ್ಲಿ ಆತನ ಪ್ರವೇಶವಾಯ್ತು. ಬಸವಣ್ಣನವರು

ಜಂಗಮ ಮೂರ್ತಿಯನ್ನು ನೋಡಿದರು. ಹುಣ್ಣಿಮೆಯ ಚಂದಿರನ ಕಂಡು ಹಾಲುಗಡಲುಕ್ಕಿದಂತಾಯ್ತು ಅವರ ನಿಸ್ಸೀಮ ಭಕ್ತಿ.

ಲಾಂಛನವ ಕಂಡು ನಂಬುವೆ. ಅವರಂತರಂಗವ ನೀವೇ ಬಲ್ಲಿರಿ.
ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎಮಗೇಕಯ್ಯಾ?
ಠಕ್ಕ ಮಾರ್ಕಿಕರೆಮ್ಮ ಕೂಡಲ ಸಂಗಮದೇವಾ ನಿಮ್ಮ ಶರಣರು.

ಎಂಬ ಭಾಷೆಯು ಬಸವಣ್ಣನವರ. ಶಿವಲಾಂಛನವನ್ನು ಶಿವನೆಂದೇ ಕಂಡು ನಂಬಿದರು. ಲಾಂಛನಕ್ಕೆ ಶರಣೆಂದು ಜಂಗಮಲಿಂಗವಡಿಯಲ್ಲಿ ಸಾಷ್ಟಾಂಗವೆರಗಿ 'ಮೃಡರೂಪ, ಭವತಿಮಿರ ಭಾನು, ಎನ್ನ ಕಣ್ಣೇ, ಎನ್ನ ಪುಣ್ಯವೇ, ತಾಯೇ ತಂದೆಯೇ, ಎನ್ನ ಗತಿಯೇ, ಎನ್ನ ಮತಿಯೇ' ಎಂದು ಮುಂತಾಗಿ ಬಗೆ ಭಾವ ನಾಲಗೆ ತುಂಬಿ ಕೊಂಡಾಡಿ ಕೊನೆವಾಡಿದರು. ಕಪಟ ಜಂಗಮ ಜಜ್ಜನೇ ಜರಿದ. ಮನವಲ್ಲಿ ಬೆಚ್ಚಿ ಬೆವರಿ ಹುವ್ವನೆ ಹಾರಿ ಮುಡಗಿದಾಯುಧವನ್ನು ಕಿತ್ತೆಸೆದು ಪೂರ್ವಾಚಾರಿ ಭಕ್ತಿಭಾಂಡಾರಿಯ ಅಡಿಗೆರಗಿ 'ಎನ್ನೊಡೆಯ ನಿನ್ನ ನೋಟಪರುಷದಿಂದ ನನ್ನ ಜಡನುಡುಗಿಹುದು. ತಪ್ಪೆನ್ನದು, ಕ್ಷಮೆ ನಿಮ್ಮದು. ನಿಮ್ಮಡಿಯ ಭಕ್ತನ ಮಾಡಿ ಸಲಹೆನ್ನ.' ಎಂದು ಬಿದ್ದು ಬೇಡುವ ಮೂರ್ತಿಯನ್ನು ನೋಡಿ ನೀವಾರೆಂದು ಕೇಳಲು ಚೋರ ಚಿಕ್ಕಯ್ಯ ತನ್ನ ವೃತಾಂತವನ್ನೆಲ್ಲ ವಿಸ್ತಾರವಾಗಿ ಹೇಳಿದ. ಸಂಗನ ಲೀಲೆಗೆ ಬಸವಣ್ಣ ಬೆರಗಾದ. ಕಪಟ ವೇಷವೆಲ್ಲ ನಿಜರೂಪವಾದುದ ನೋಡಿ ಮೂರ್ತಿಯ ಮನದ ಹದವರಿತು ಬಸವಣ್ಣ ಲಿಂಗಕ್ಕೆ ಕಳೆ ತುಂಬಿ ಅತನಂಗವಲ್ಲಿ ಧರಿಸಿ ಅತನ ಕಿವಿಯಲ್ಲಿ ಪರಮ ಪಂಚಾಕ್ಷರಿಯನ್ನು ಬಿತ್ತಿ ಲಿಂಗದೀಕ್ಷೆ ಮಾಡಿ 'ನಿಜಲಿಂಗ ನುಸಂಗ ಬಾರೆಂ'ದು ಅನುವದಿಂದ ಕರೆದು, 'ನೀವು ಭಕ್ತಿಯೊಳಿರುವುದು. ಕೆಲದಿನದ ಮೇಲೆ ಒಬ್ಬ ಕನ್ನೆಯಿಂದ ನಿಮಗೆ ಕೈಲಾಸವಹುದೆಂ'ದು ಅಪ್ಪಣೆ ಕೊಟ್ಟು ಕಳುಹಲು, ನಿಜಲಿಂಗ ಚಿಕ್ಕಯ್ಯನು ಓಲೆಯ ಕಾಯಕ ಮಾಡಿಕೊಂಡು ಕಲ್ಯಾಣದಲ್ಲಿಯೇ ಉಳಿದನು.

ಇತ್ತ ಮಹಾದೇವರಾಯ ಚೋರ ಚಿಕ್ಕಯ್ಯನ ಹಾದಿ ನೋಡಿ ನೋಡಿ ಬೇಸತ್ತು ನಿರಾಶೆಗೆ ಒಳಗಾದ. ಅತನ ಸುದ್ದಿ ತಿಳಿಯಲು ಚರರನ್ನು ಕಲ್ಯಾಣಕ್ಕಟ್ಟಿದ. ಅವರು ಕಲ್ಯಾಣಕ್ಕೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿದುಕೊಂಡು ಮಾಂಡವ್ಯಪುರಕ್ಕೆ ಮರಳಿ ಬಂದು ಅರಸನಿಗೆ ಎಲ್ಲ ವೃತ್ತಾಂತವನ್ನರುಹಿದರು. ಭೂಪಾಲನ ಜೀವನದ ಹೊಂಗನಸಿನ ಭವ್ಯಭಕ್ತಿ ಮುಕ್ತಿ

ಮಂದಿರವೆಲ್ಲ ಪಾತಳಕ್ಕೆ ಕುಸಿಯಿತು. ನೋಡಿದತ್ತೆಲ್ಲ ನಿಸ್ಸಾರ, ಶೂನ್ಯ ರಾಜ್ಯಸಂಪದವೇಕೆ ? ಹೆಂಡಿರು ಮಕ್ಕಳೇನು ? ಹುಟ್ಟುವ ಗುರಿಯೇ ಮಾಯವಾದರೆ ಸಾಗುವುದೆತ್ತ ?

ಇಂತಹ ಗಂಭೀರ ನಿರಾಶೆಯಲ್ಲಿಯೂ ಅರಸು ತನ್ನ ಪೌರಾಣಿಯಿಂದ ಪುರಾತನ ಪುಣ್ಯಚರಿತೆಗಳನ್ನು ಕೇಳುತ್ತಿದ್ದ. ಜಾಣ ಮತ್ತು ರಸಿಕನಾದ ಪೌರಾಣಿ ಪರುಷ ಪುರುಷ, ದ್ವಿತೀಯ ಶಂಭು, ಜಂಗಮಸುಖಾಕಾರನಾದ ಕಲ್ಯಾಣದ ಬಸವಣ್ಣನ ಅಲ್ಲಿಯ ಮಹಾಶರಣರ ಘನ ಮಹಿಮೆಯನ್ನೂ ವಿಸ್ತಾರವಾಗಿ ಹೇಳಿದ. ಶರಣರ ಘನ ಅರಸನ ಮನದಲ್ಲಿ ಅಚ್ಚೊತ್ತಿದಂತೆ ಮೂಡಿತು. ಆನಂದವುಕ್ಕುರಿಸಿ ಪುಳಕ ಪಲ್ಲವಿಸಿ ಗದ್ಗದ ಕಂಠದಿಂದ ಪೌರಾಣಿಯನ್ನು ವಣೆಯದೆ ಕೊಂಡಾಡಿದ. ಅಂದಿನ ಸುಖನಿದ್ರೆಯಲ್ಲಿ ಶುಭ ಸ್ವಪ್ನವನ್ನೂ ಕಂಡ. ಆತನ ಸ್ವಪ್ನದಲ್ಲಿ ಶಿವ ಮೈದೋರಿ 'ನಿನೇ ಸುಖಮಯ ಗಣನಾಥ. ನಿನ್ನ ತಂದೆ ಫಾಳಲೋಚನನ ಭಕ್ತಿಗೊಲಿದು ನಿನ್ನನ್ನು ಕಳಿಸಿದೆ. ನೀನಿನ್ನು ಕಲ್ಯಾಣಕ್ಕೆ ಹೋಗಿ ಕಡು ಮಹಿಮನಾಗು. ನನ್ನ ಹೆಸರು ನಿಃಕಳಂಕ ಮಲ್ಲೇಶ್ವರ.' ಎಂದು ಹೇಳಿ ಫಾಳಕ್ಕೆ ಭಸಿತವನ್ನಿಟ್ಟು ಹರಸಿ ಅಂತರ್ಧಾನವಾದ. ಕನಸು ತಿಳಿದೆದ್ದ ಅರಸನ ಆನಂದಕ್ಕೆ ನಾವುದೆಲ್ಲಿ? ಸೀಮೆಯೆಲ್ಲಿ ? 'ಭಾಪು ಬಾಗ್ಯವೇ! ನಿಃಕಳಂಕ ಮಲ್ಲಯ್ಯ ನನಗೊಲಿದ ! ಇನ್ನೇನು ? ಕಾಲನ ಗೆಲಿದೆ, ಭವದ ಬಳ್ಳಿಯ ಬೇರ ಕಿತ್ತೆ, ಇನ್ನು ಸಂಸಾರದ ಹೊದ್ದಲೀವೆನೆ ?' ಎಂದು ನಿಜ ಭಕ್ತಿಯುಕ್ಕುರಿಸಿ ಶಿವಜ್ಞಾನ ಬೆಳಗಿ ವೈರಾಗ್ಯವಾವರಿಸಿ, ಮಗ ಲಿಂಗಾರತಿಗೆ ಪಟ್ಟಗಟ್ಟಿ, ಹಲವು ದೇಶಕೋಶ ಭಕ್ತತತಿಗಿತ್ತು, ಭೂಪಾಲನಾಗಿದ್ದ ಮಹಾದೇವ ಮಾಂಡವ್ಯನಗರವನ್ನು ಬಿಟ್ಟು ಕಲ್ಯಾಣದತ್ತ ಹೊರಟ. ಪಟ್ಟದರಸಿ ಗಂಗಾದೇವಿಗೆ ಈ ಸುದ್ದಿ ಮುಟ್ಟಿದೊಡನೆ ವೇಷ ಭೂಷಣವನ್ನೆಲ್ಲ ತೆಗೆದು ಎಳಗಾವಿಯನ್ನುಟ್ಟು ಭಸಿತ ರುದ್ರಾಕ್ಷಿ ಧರಿಸಿ ಗಂಡನ ಬೆಂಬತ್ತಿದಳು. 'ಸಿರಿ ಸಂಪದವನೆಲ್ಲ ಬಿಟ್ಟು ಇಂತು ಬರುವುದೇ ? ಮಗನೊಡನೆ ಸುಖವಾಗಿರು' ಎಂದು ಬುದ್ಧಿ ಹೇಳಿದ ಗಂಡನಿಗೆ ದೇವಿಯ ಉತ್ತರವಾಯ್ತಿದು :—

ಧರೆಯಿಂದ ಜಸದಿಂದ ಕಾಲಾಳು ರಥ ಕರಿ
ತುರಗ ಸೌಭಾಗ್ಯವೇಳ್ನೂರು ।
ತರುಣಿಯರಿದ್ದಿರ್ದು ಸೀನ್ಯೆದುತಿರೆ ಕೇಳು
ಸಿರಿ ನನಗೆಲ್ಲಿಯದೋಜಾ ॥

ಮತ್ತು

ಸುಧೆಯನು ಸವಿಯಲರಿಯದೆ ಕೆಚ್ಚಲ ಕಚ್ಚಿ
ರುಧಿರವನೀಂಟುವುಣ್ಣಿಯೊಲು ।
ಸದಮಲ ಮುಕ್ತಿಯ ಸುಖಮಿರೆ ಬಿಟ್ಟು ಮಾ
ಯದ ಸಿರಿಯಲ್ಲಿ ನಾಸಿಹೆನೆ ? ॥

ಮೋ. ಮಾ. ಪು., ಸಂ. ೫, ಪ. ೮-೯

ಇನ್ನು ಮುಂದೆ ಮಾತೇನು? ಹೆಂಡತಿಯ ಮಾತಿನ ಕೆಚ್ಚು ಕೃತಿಯಲ್ಲಿದೆಯೇ ಎಂಬುದನ್ನು ಅರಸು ಮನಗಂಡ. ನಡುಬೀದಿಯಲ್ಲಿ ನಿರ್ವಾಣವಾಗಲು ಹೇಳಿದರೆ ದೇವಿ ಹಿಂದು ಮುಂದು ನೋಡಲಿಲ್ಲ. ಬತ್ತಲೆಯಾಗುವದನ್ನು ತಾನೇ ತಡೆದು 'ನಿನ್ನಿಂದೆನಗೆ ಮುಂದೆ ಮುಕ್ತಿ ಪಲ್ಲವಿಸುವುದು.' ಎಂದು ಹೇಳಿ ತನ್ನೊಡನೆ ಕಲ್ಯಾಣಕ್ಕೆ ಬರಲು ಹೆಂಡತಿಗೆ ಅಪ್ಪಣೆ ಕೊಟ್ಟ. ಕುಸುಮ ದೊಡನೆ ಗಂಧ, ಭೃಂಗಾರದೊಡನೆ ಬಣ್ಣ, ಪದದೊಡನೆ ಅರ್ಥ ಕೂಡಿ ಬರುವಂತೆ ಗಂಡ ಹೆಂಡಿರು ಕಲ್ಯಾಣಕ್ಕೆ ನಡೆದರು. 'ಶರಣರ ಕೃಪೆಯಲ್ಲೆಂ ದಿರ್ಪೆವೊ ?' ಎಂದು ಶರಣರ ನೆನಹೇ ನೆನಹಾಗಿ ದೇಶ ದೇಶ ಕಳೆದು ಕಲ್ಯಾಣದ ಸಮೀಪಕ್ಕೆ ಬಂದರು ಅರಸು ತನಗೆ ಸತ್ಯಕಾಯಕವಾವು ದೆಂದು ಯೋಚಿಸಿ ಕಟ್ಟಿಗೆ ಆಯ್ದು ಹೊರೆ ಕಟ್ಟಿ ಹೊತ್ತುಕೊಂಡು ಹೆಂಡತಿ ಯೊಡನೆ ಅಭಿನವ ಕೈಲಾಸವೆನಿಸುವ ಕಲ್ಯಾಣ ಪಟ್ಟಣವನ್ನು ಕಂಡು ನಲಿದಾಡಿ ಕೊಂಡುಕೊನೆದಾಡಿ ನಮೋ ನಮೋ ಎಂದು ನಿಜಭಕ್ತಿ ನಿಜಾನಂದ ವನ್ನು ಪ್ರವೇಶ ಮಾಡುವಂತೆ ಪುರಪ್ರವೇಶ ಮಾಡಿದ.

ಸಂಗಮೇಶ್ವರನು ಅರುಹುದೋರಲು ಬಸವಣ್ಣ ಅಸಂಖ್ಯಾತರೊಡನೆ ಅನುಭಾವ ಮಂಟಪದಲ್ಲಿ 'ರಾಜಯೋಗಿ'ಯ ಬರವನ್ನು ಹಾರೈಸಿಕೊಂಡಿದ್ದ. ಕಾಶ್ಮೀರದರಸು ಗಂಗಾದೇವಿಯೊಡನೆ ಅನುಭಾವಮಂಟಪಕ್ಕೆ ಬಂದು ಶರಣ ರನ್ನೆಲ್ಲ ಕಂಡೊಡನೆ ಹೆಚ್ಚಿ ಹಿಗ್ಗಿ ಹೊರೆ ಇಳುಹಿ ಶರಣರಡಿಯಲ್ಲಿ ಸೈಗೆಡೆದ. ಬಸವಣ್ಣ ಥಟ್ಟನೆ ಬಂದು 'ಸಾಸಿವೆಯ ಮೇಲೆ ಸಾಗರವಾಯಿತ್ತೆನ್ನ ಭಕ್ತಿ'

ಎಂಬ ಭಾವ ಮುಂದುಗೊಂಡು ಅರಸನಡಿಯುಲ್ಲಿ ಪರಮಾನಂದದಿಂದೆರಗಿ ಆತನನ್ನು ತೆಗೆದಪ್ಪಿ ಬಿಗಿಯಪ್ಪಿ ಮುಂಡಾಡಿ ಕೊಂಡಾಡಿ ಆತನ ವೃತ್ತಾಂತ ವನ್ನೆಲ್ಲ ಕೇಳಿ ನಿಬ್ಬೆರಗಾದ. ಶರಣರೆಲ್ಲ ಅರಸನ ಮತ್ತು ಅರಸಿಯು ವೀರ ವೈರಾಗ್ಯಕ್ಕೆ ತಲೆದೂಗಿದರು. ಕಾಶ್ಮೀರವೆತ್ತ! ಕಲ್ಯಾಣವೆತ್ತ! ಸಕಲ ಸಿರಿ ಸಂಪತ್ತಿನ ಸಂಭೋಗವೆತ್ತ! ಕಷ್ಟದ ಕಟ್ಟಿಗೆಯು ಹೊರೆಯೆತ್ತ! ಪರಮಾ ಶ್ಚರ್ಯಪಟ್ಟ ಅನುಭಾವಮಂಟಪವೆಲ್ಲ ಕೆಲಕಾಲ ಗಂಭೀರ ಮೌನ ಮುದ್ರಿ ತವಾಗಿತ್ತು. ನನಗಾವ ಕಾಯಕವೆಂದು ಕೇಳಿದ ಆ ವೈರಾಗ್ಯವೀರನಿಗೆ ಶರಣ ಗಣಂಗಳು ಆತನ ಲಿಂಗದಿಚ್ಛೆಯಂತೆ ಕಟ್ಟಿಗೆಯ ಕಾಯಕವನ್ನು ದಯಪಾಲಿಸಿದರು. ಅಂತೆಯೇ 'ಮೋಳಿಗೆಯ ಮಾರಯ್ಯ' ನೆಂಬ ಹೆಸ ರನ್ನೂ ಕೊಟ್ಟರು. ಶರಣರಡಿಗೆರಗಿ ಬೀಳ್ಕೊಂಡ ಮೋಳಿಗೆಯ ಮಾರಯ್ಯ ಹೆಂಡತಿಯೊಡನೆ ಅನುಭಾವ ಮಂಟಪದಿಂದ ಹೊರ ಹೊರಟ.

ಕಲ್ಯಾಣ ಮಹಾ ಪಟ್ಟಣದ ಒಂದು ಭಾಗ. ಅಲ್ಲಿ ಒಂದು ಸಣ್ಣ ಗುಡಿ ಸಲು. ಆ ಗುಡಿಸಲಿನಲ್ಲಿ ಗಂಡಹೆಂಡರಿಬ್ಬರ ಸಣ್ಣ ಸಂಸಾರ. ಕಾಶ್ಮೀರದ ಮಹಾದೇವ ಭೂಪಾಲನೇ ಆ ಗುಡಿಸಲ ಬಾಳನ್ನು ಆನಂದದಿಂದ ಅಪ್ಪಿದ ಮೋಳಿಗೆಯ ಮಾರಯ್ಯ. ಆ ಭೂಪಾಲನ ಪಟ್ಟದರಸಿಯಾದ ಗಂಗಾ ದೇವಿಯೇ ಆ ಗುಡಿಸಲ ಬಾಳನ್ನು ಬೆಳಗಿದ ಮಹಾದೇವಿಯಮ್ಮ. ಕಾಶ್ಮೀರ ಬಿಟ್ಟು ಕಲ್ಯಾಣಕ್ಕೆ ಬಂದ ದಂಪತಿಗಳ ಜೀವನದಲ್ಲಿ ಉಪಮಿಸಬಾರದ ಪರಿ ವರ್ತನೆ, ದಿವ್ಯಕಾಂತಿ, ಭವ್ಯವಿಕಾಸ. ಬಸವಣ್ಣನವರ ಕಲ್ಯಾಣವೆಂಬ ಶುಕ್ತಿಕೆಯಲ್ಲಿ ಮಹಾದೇವ ಭೂಪಾಲನೆಂಬ ಸ್ವಾತಿಯ ಜಲ ಬಿಂದು ಸೇರಿ ಮಾರಯ್ಯನೆಂಬ ಥಳ ಥಳಿಸುವ ಮುತ್ತಾಯ್ತು. ಆ ಮುತ್ತಿನ ಶೀತಲ ಕಾಂತಿಯೇ ಮಹಾದೇವಿಯಮ್ಮನಾಗಿ ತೊಳಗಿ ಬೆಳಗುವಂತಾಯ್ತು. 'ಮ ರ್ತ್ಯಕ್ಕೆ ಮಹವ ತಂದ ಬಸವಣ್ಣ' ನೆಂಬ ಪರಂಜ್ಯೋತಿ ಮುಟ್ಟಿದ ಗಂಡ ಹೆಂಡರು ಆತ್ಮ ಜ್ಯೋತಿಯಲ್ಲಿ ಎಚ್ಚತ್ತು ಬಾಳಿ ಬೆಳಗ ತೊಡಗಿದರು.

ಪ್ರತಿನಿತ್ಯ ಮುಂಜಾವು ಲಿಂಗದ ನೆನಹಿನಲ್ಲೆದ್ದು ದೃಷ್ಟಿಯಾರೆ ಲಿಂಗವ ನೋಡಿ ನಿತ್ಯಕ್ರಿಯೆ ತೀರಿಸಿಕೊಂಡು ಮಾರಯ್ಯ ಘೋರ ಕಾಂತಾರಕ್ಕೆ ಹೋಗುತ್ತಿದ್ದ. ಬನಸಿರಿಯ ಸಹಜ ಸೌಂದರ್ಯವನ್ನು ನೋಡಿ ತಲೆದೂಗ್ಗಿ

ಶಿವ ನಿಮಿತ್ತಾರ್ಥದ ಸಲೆ ವೃತ್ತಿಯೆನಗೆ
ಅಮಿತದಿಂ ಕಟ್ಟಿಗೆಯ ನಾನೊಯ್ವೆನೆಂದು!
ಅಂಗರಕ್ಷಣೆಗಲ್ಲ ಹರಗಣರ ತೃಪ್ತಿಗೆ
ಮಂಗಳಾಕರ ನಿನಗೆ ಮುಂದೆ ದೊರಕುವದು!!

ಶ. ಲೀ, ಸಂ. ೯, ಪ. ೧೦—೧೧

ಎಂದು ವನಲಕ್ಷ್ಮಿಯನ್ನೊಡಂಬಡಿಸಿ ಕಟ್ಟಿಗೆಗಳನ್ನು ಕಡಿ ಕಡಿದು ಒಟ್ಟಿ ದೊಡ್ಡ ಹೊರೆ ಕಟ್ಟಿ ಹೊತ್ತುಕೊಂಡು ಲಿಂಗಧ್ಯಾನ ಲಿಂಗಾನಂದವಲ್ಲಿ ನಡೆದು ಪಟ್ಟಣಕ್ಕೆ ಬಂದು ಹೊರೆಯನ್ನು ಅಂಗಡಿಯಲ್ಲಿ ಮಾರಿ ಬಂದ ಹಣದಿಂದ ಒಕ್ಕಳ ಭತ್ತ ತಂದು ಇಂದು ನಾಳೆಂಬ ಸಂದೇಹವಿಲ್ಲದೆ 'ಇಂದಿನ ದುಡ್ಡು ನಾಳೆ ತಂಗಳೆಂ'ದು ಸದ್ಭಕ್ತಿಯಿಂದ ಜಂಗಮಾರಾಧನೆ ಮಾಡಿಕೊಂಡು ಗಂಡ ಹೆಂಡಿರು ನಿತ್ಯ ಸುಖದಲ್ಲಿರುತ್ತಿದ್ದರು. ಬಸವಣ್ಣನರಮನೆಯ ರಸರಸಾಯನವನೊಲ್ಲದೆ ಮಹಾದೇವಿಯಮ್ಮ ಮಾಡಿದ ಅಂಬಕಳ (ಅಂಬಲಿ) ವನ್ನು ಜಂಗಮಕೋಟಿ ಸವಿ ಸವಿದು ನಿರ್ಭರ ತೃಪ್ತಿಯಿಂದ ತೇಗುತ್ತಿತ್ತು. ಸರ್ವಾಂಗಧೀರನಾದ ಮಾರಯ್ಯನ ಭಕ್ತಿಯ ನಿರ್ಮಲ ಕೀರ್ತಿ ಹಾಗೆ ಹಬ್ಬ ತೊಡಗಿತು. ಮಾರಯ್ಯನೊಬ್ಬ ಅಸಾಮಾನ್ಯ ಶರಣನಾಗಿ ಬೆಳಗ ತೊಡಗಿದ. ಅಂತೆಯೇ ಪಾಲ್ಕುರಿಕಿ ಸೋಮಾರಾಧ್ಯರು ಆ ಶರಣನ ಘನಮೂರ್ತಿಯನ್ನು ಹೀಗೆ ಬಣ್ಣಿಸುವುದು:

ಪ್ರಚ್ಛನ್ನ ರುದ್ರುಡ ವಿಚ್ಛಿನ್ನಕೀರ್ತಿ ಸ್ವಚ್ಛ ಸದಾಚಾರ ಸಂಪತ್-ಪ್ರಪೂರ್ತಿ।
ವಿಜಿತಕಾಮಕ್ರೋಧ ವಿಮಲ ಮಾನಸುಡು ನಿಜಗತಿ ಲಿಂಗೈಕ್ಯ ನಿಷ್ಠಾ ಪರುಂಡು।
ಮಂಗಳ ಚರಿತುಡು ಲಿಂಗ ಸಮರ್ಥು ಜಂಗ ವಿಕಾರ ದೂರೈಕ ವರ್ತನುಡು।
ಸವಿಶೇಷ ಜಂಗಮಾರ್ಚನ ಪರತಂತ್ರು ದವಿಕಲವಿಧಿನಿಷೇಧವಿವರ್ಜಿತುಂಡು।
ಪ್ರವಿಮಲಾಂಗುಡು ನಿಷ್ಪ್ರಪಂಚ ಗುಣಾಢ್ಯುಡವಿರಳ ತತ್ತ್ವಾನುಭವ ಸುಖಾಂಬೋಧಿ।
ಕನರ್ಪಪಹರುಡು ಲಿಂಗಪ್ರಾಣಮುಘನ ಮುರ್ಮಜ್ಞುಡನ ಲಸನ್ಮಹಿಮ... ।

ತೆ. ಬ. ಪು., ಪಂಚಮಾಶ್ವಾಸಮು

ಬಸವಣ್ಣನರಮನೆಯ ಹೊಸ ಹೊಸ ರಸ ರಸಾಯನವನ್ನುಂಡು ತಣಿಯದೆ ಗಣಂಗಳು ತಪ್ಪದೆ ಒಪ್ಪೊತ್ತು ಮಾರಯ್ಯನ ಅಂಬಕಳಕ್ಕೆ ಮನ ಜೋಲುತ್ತಿದ್ದರು. ಅಂಬಕಳ ಉಂಡು ಅದರ ರುಚಿ ತಲೆಗೇರಿ ಜಂಗಮರು ಬಸವಣ್ಣನಲ್ಲಿಗೆ ಬಂದು 'ಬಸವರಸ, ಮಾರಯ್ಯನ ಮನೆಯ ಅಂಬಕಳ! ಏನು ರುಚಿ!!

ಎಂತಹ ಸಂತೃಪ್ತಿ!!! ಆತನ ಅಂಬಲಿಕ್ಕೆ ನಿಮ್ಮರಮನೆಯ ಷಡ್ರಸಾನ್ನ ಸರಿಯಾಗ ಬಲ್ಲುದೇ? ಮಾರಯ್ಯನ ಭಕ್ತಿ ಏನು! ಆತನ ನಿಷ್ಠೆ ಏನು!! ಅಂತಹ ಭಕ್ತ ಈ ಲೋಕದೊಳಗುಂಟೆ? ಭಾಪು ಮೋಳಿಗೆ ಮಾರ ಭಕ್ತಿ ವಿಸ್ತಾರ, ಭಾಪುರೇ! ಎಂದು ತಮ್ಮ ಪರಮಾನಂದ ರಸವನ್ನು ಉತ್ಕಂಠವಾಗಿ ಹರಿಸಿದರು. ಬಸವಣ್ಣ ಅತ್ಯಂತ ವಿಸ್ಮಿತನಾದ. 'ಪಾಪ, ಇಂತಹ ಮಹಾತ್ಮನಿಗೂ ಬಡತನವೇ?' ಎಂಬ ಕಾರುಣ್ಯಭಾವ ಒನ್ಮೊಲೆ ಮನದಲ್ಲಿ ಮೂಡಿತು. ಪ್ರಚ್ಛನ್ನ ಭಾವದಿಂದ ಮಾರಯ್ಯನ ಮನೆಗೆ ಬಂದು ಮಹಾದೇವಿಯಮ್ಮನವರಿಗೆ ಶರಣೆಂದು ಅಡಿಗೆರಗಿದ.ಆ ವೇಳೆಯಲ್ಲೇ ಅಮ್ಮನವರು ಶರಣು ಶರಣಾರ್ಥಿಯೆಂದು ಪಾದಕ್ಕೆ ಅರ್ಗ್ಘವಣಿ ಕೊಟ್ಟರು. ಪಾದ ತೊಳೆದುಕೊಂಡು 'ಅವ್ವೆಯರೇ, ನಮ್ಮ ಲಿಂಗದೇವರು ಹಸಿದಿದ್ದಾರೆ. ಮನೆಯೊಳಗುಳ್ಳುದನ್ನೇ ಗಡಣಿಪುದೆಂ'ದು ಹೇಳಿ ಲಿಂಗಾರ್ಚನೆ ಮಾಡಿಕೊಂಡು ಮಹಾದೇವಿಯಮ್ಮ ಎಡೆಮಾಡಿದುದನ್ನು ಪ್ರಸಾದವೆಂದುಂಡು ಬಸವಣ್ಣ ಶರಣರ ಪ್ರಸಾದದ ಘನವನ್ನು ಹಾಡಿ ಹರಸಿದ.'ಶರಣರ ಮನೆಯ ಮಹಾಪ್ರಸಾದ ಭವರೋಗಕ್ಕೌಷಧವಲಾ! ಇದೇ ಭಕ್ತಿಯ ಬೆಳಸು, ನಿಜ ಪದದ ನೆಲೆವನೆ' ಎಂದು ನಾಲಗೆ ದಣಿಯದೆ ಮಾರಯ್ಯನ ಮನೆಯ ಪ್ರಸಾದವನ್ನು ಕೊಂಡಾಡಿ, ಮಜ್ಜನಸಾಲೆಯೊತ್ತಿನಲ್ಲಿ ಎರಡು ಸಾವಿರ ಹೊಂಗಳ ಎರಡು ಜಾಳಿಗೆಗಳನ್ನು ಮರೆಮಾಡಿಟ್ಟು ಅಮ್ಮನವರಿಗೆ ಶರಣಾರ್ಥಿಯೆಂದು ಸ್ಕೈಗೆಡೆದು ಹೊರ ಹೊರಟ. ಅಂಗಳಕ್ಕೆ ಬಂದು ತಿರುಗಿ ನಿಂದು ಹುಲ್ಲು ಗುಡಿಸಲು ನೋಡಿ ಆನಂದವಲರಿ ಹಾಡ ತೊಡಗಿದ:—

> ಈ ಸದನಮಂ ನೋಡಿದಾತನ
> ದೋಷವೆಲ್ಲಂ ಕೆಟ್ಟು ಹೋಗದೆ
> ಈ ಸದನದೊತ್ತಿನಲಿ ಚರಿಸುವವಂ ಕೃತಾರ್ಥನಲಾ!
> ಈ ಸದನ ಸೀಮೆಯೊಳಗೊಗೆದಿರು
> ವಾಸಿಸುವ ಜೀವಿಗಳ ಭಾಗ್ಯವ
> ದೋಸೊ ಈ ಗೃಹರೇಣು ಸಿಕ್ಕಿದವಂಗಹುದು ಮುಕ್ತಿ ॥

ಮಾರಿ ತಂದೆಯ ಮನೆಯ ಮುಂದೆ ನಿಂತು ಮನವುಕ್ಕಿ ಕೊಂಡಾಡಿ ಭಕ್ತಿ ಭಾಂಡಾರಿ-ತನ್ನರಮನೆಗೆ ಮರಳಿ ಬಂದ.

ಮಧ್ಯಾಹ್ನ ಸಮಯ. ಬಲಿಷ್ಠವಾದ ಕಟ್ಟಿಗೆ ಹೊರೆ ಹೊತ್ತುಕೊಂಡು ಲಿಂಗಧ್ಯಾನ ಮಾಡುತ್ತ ಮಾರಯ್ಯ ಮನೆಗೆ ಬಂದು ಮೋಳಿಗೆಯನ್ನು

ಬಾಗಿಲ ಮುಂದಿಳುಹಿದ. ಮಹಾದೇವಿಯಮ್ಮ ತನ್ನ ಪ್ರಿಯ 'ಎನ್ನಯ್ಯ ಪ್ರಿಯ ಇಮ್ಮಡಿ ನಿಷ್ಕಳಂಕ ಮಲ್ಲಿಕಾರ್ಜುನ'ನನ್ನು ಕಂಡೊಡನೆ ಆತನ ಶ್ರೀ ಪಾದ ತೊಳೆದು ಪಾದೋದಕವನ್ನು ಅತ್ಯಂತ ಭಕ್ತಿಯಿಂದ ಮಂಡೆಯಲ್ಲಿ ಧರಿಸಿಕೊಂಡು ಆನಂದವಾಗಿ ಅರಳಿದಳು. ಮಾರಯ್ಯ ಸ್ನಾನ ಮಾಡಿದ. ಮನೆಗೆ ಬಂದ ಜಂಗಮ ಮೂರ್ತಿಗಳಿಗೆ ಶರಣೆಂದು ಭಕ್ತಿಯಿಂದ ಬಾಗಿ ಆನಂದ ದಿಂದ ಬೀಗಿ ಅವರನ್ನು ಮೂರ್ತಗೊಳಿಸಿದ. ನಲವೇರಿ ಲಿಂಗಪೂಜೆಗೆ ಅನು ವಾದ. ಮಜ್ಜನಕ್ಕೆರೆವಾಗ ಮಜ್ಜನಶಾಲೆಯೊತ್ತಿನಲ್ಲಿ ಹೊನ್ನಜಾಳಿಗೆ ನೋಡಿ ಬೆರಗಾದ. 'ಇವೇನು? ಯಾರು ಕೊಟ್ಟರು?' ಎಂದು ಹೆಂಡತಿಯನ್ನು ಕೇಳಲು ಆಕೆ ಒಬ್ಬಯ್ಯ ಬಂದು ಲಿಂಗಾವಸರ ಮಾಡಿ ಹೋದ ಸಂಗತಿ ತಿಳಿಸಿ ಜಾಳಿಗೆಯ ವಿಷಯ ತನಗೆ ತಿಳಿಯದೆಂದು ಹೇಳಿದಳು. ಮಾರಯ್ಯನ ಮನ ದಲ್ಲಿ ಒಮ್ಮೆಲೆ ಬಸವಣ್ಣ ಮೂಡಿದ. 'ಮತ್ತಾರು? ಭಕ್ತಿ ಭಂಡಾರಿ ಬಸ ವಣ್ಣನೇ ಬಂದಿರಬೇಕು. ನಾವು ಬಣಗು ಭಕ್ತರೆಂದು ಹಣವನಿರಿಸಿ ಹೋಗಿರ ಬೇಕು. ನಮ್ಮ ಲಿಂಗಯ್ಯ ಕೊಟ್ಟ ಕಾಯಕ ನಮಗಿರಲು ಈ ಹಾದರಗಿತ್ತಿ ಹೊನ್ನಿನ ಹಂಗು ನಮಗೇಕೆ? ತಾನು ಧನವಂತನೆಂಬ ಹೆಮ್ಮೆ ಬಸವಣ್ಣನಿ ಗೇಕೆ?' ಎಂಬ ಮುನಿಸಿನಿಂದ ಮೊಗ ನಸುಗೆಂಪೇರಿ ಜಂಗಮ ಮೂರ್ತಿಗಳಿಬ್ಬ ರಿಗೆ ಎರಡೂ ಜಾಳಿಗೆ ಕೊಟ್ಟು ನಮಿಸಿ ಬಸವಣ್ಣನವರ ಮನೆಗೆ ನಡೆದು ಅಲ್ಲಿದ್ದ ಜಂಗಮಕ್ಕೆಲ್ಲ ಬಿನ್ನಹ ಮಾಡಿ ಕರೆತಂದ. ಅಮ್ಮನವರ ಅಡಿಗೆ ಸದಾ ಸಿದ್ಧ. ಜಂಗಮಕೋಟಿಗೆಲ್ಲ ಇಚ್ಛಿತ ಪದಾರ್ಥವನ್ನು ನೀಡಿ ಎಲ್ಲ ರನ್ನು ಸಂತೃಪ್ತಿಗೊಳಿಸಿದ. ಅವರ ಪಾದೋದಕವನ್ನೇ ತಾ ತಂದ ಕಟ್ಟಿಗೆಯ ಹರಬಿನ ಮೇಲೆ ತಳಿದ. ಕಟ್ಟಿಗೆಯೆಲ್ಲ ಕನಕದಂಡಗಳಾದುವು. ಕಡಿಕಡಿದು ಗಣಂಗಳಿಗೆಲ್ಲ ಒಂದೊಂದು ಬಂಗಾರದ ಕೋಲನ್ನು ಸಲ್ಲಿಸಿದ. ಜಂಗಮರಿಗೆಲ್ಲ ನಿಬ್ಬೆರಗು! ಮಾರಯ್ಯನ ಮಹಿಮೆ ಯಾವ ಸೀಮೆಯೊಳಗೆ?

ಮಾರಯ್ಯನ ಮಾಟಕ್ಕೆ ಪರಮಾಶ್ಚರ್ಯಪಟ್ಟ ಗಣಂಗಳು ಬಸವಣ್ಣ ನರಮನೆಗೆ ಬಂದರು. 'ಮಾರಯ್ಯನ ಭಕ್ತಿ ಮಿಕ್ಕವರಿಗುಂಟೇ? ಆತನ ನಿಷ್ಠೆ ನಿಸ್ಸೀಮ. ಆತನ ಮಹಿಮೆ ಅಸದಳ. ಭೂಮಿಯ ಮೇಲೆ ಇಂತಹ ಸಾರ ಸದ್‌ಭಕ್ತಿಯುಂಟೇ?' ಎಂದು ಬಸವಣ್ಣನಿಗೆ ನಡೆದ ಸಂಗತಿಯನ್ನೆಲ್ಲ ಬಿತ್ತರಿಸಿದರು. ಬಸವಣ್ಣ ಬೆಚ್ಚಿ ಬೆರಗಾದ! ನಡನಡನೆ ನಡುಗುತ್ತ ಮಾರಿ

ತಂದೆಯೆಡೆಗೆ ಬಂದು ಸಾಷ್ಟಾಂಗ ಪ್ರಣತನಾದ. ಕೈಮುಗಿದು ನಿಂತು 'ದೇವಾ, ಕಾವುದೆನ್ನ, ಮರವೆಯ ಮರುಳು ನಾನು' ಎಂದು ದೈನ್ಯದಿಂದ ಬೇಡಿಕೊಂಡ. ಮೊಗದಲ್ಲಿ ನಸುನಗೆ ಮೊಳೆಯೆ ಮಾರಯ್ಯ 'ಬಸವರಸ, ಇಂತು ನುಡಿವರೇ? ನಾನು ನಿಮಗೆ ಎಂದೂ ಏನೂ ಎಂದವನಲ್ಲ. ಬಣಗುಭಕ್ತರ ಹರಣ ನೀವು ನಿಮ್ಮ ಮಕ್ಕಳೆಂದು ನಮಗಿತ್ತು ಸಲಹಿದಿರಿ. ಬದುಕಿದೆವು. ಲೋಕಕ್ಕೆಲ್ಲ ಹೀಗೆಯೇ ಕೊಟ್ಟು ಲೋಕೋಪಕಾರ ಮಾಡಿದಿರಿ. ಕೀರ್ತಿ ಪಡೆದಿರಿ.

ಭಾಪು! ಭಾಗ್ಯಪ್ರಾಣಿ! ಭಾಪು ಕೃತಾತ್ಮ!
ಭಾಪುರೆ ಧನವಂತ! ಭಾಪು ಕೀರ್ತಿವೀರ!

ಹಣವಿದ್ದರೆ ಉಣಬೇಕು. ಬಣಗುಭಕ್ತರಾದ ನಮ್ಮನ್ನು ಇಂತು ಅಣಕ ಮಾಡುವುದೇ? ನಮಗೇನು ಗೊತ್ತು ಹೊನ್ನಿನ ಜಾಳಿಗೆ? ನಿಮ್ಮಿಂದ ಕಂಡರಿದೆವು.' ಎಂದು ಮುಃತಾಗಿ ಕಟಕಿಯನಾಡಲು ಬಸವಣ್ಣ ಹೆದರಿ ಹಪ್ಪನೆ ಹಾರಿದ. ಮತ್ತೆ ಮಾರಯ್ಯನಡಿಗೆರಗಿ ಕೈಂಕರ್ಯಭಾವದಿಂದ ಕೈಮುಗಿದು ಗದುಗದಿಸುವ ಕಂಠದಿಂದ 'ಮಾಂತಂದೆ ನೀವಿಂತು ನುಡಿವರೇ? ಕಟಕಿಯೆತ್ತ? ಕಾರುಣ್ಯವೆತ್ತ? ನಾನೆತ್ತ? ನೀವೆತ್ತ? ಸುಗುಣನಿಧಿ ನೀವು, ದುರ್ಗುಣನಿಧಿಯು ನಾನು. ನನ್ನಲ್ಲಿ ಅವಗುಣವನರಸುವರೇ? ಮೇರುವರಸಿತೇ ಕಾಕನ ಗುಣವ? ಪರುಷವರಸಿತೇ ಲೋಹದ ಗುಣವ? ನನ್ನೊಡೆಯ ಕೂಡಲಸಂಗ, ನನ್ನ ಅವಗುಣವೆಲ್ಲ ಮರೆದು ನಿಮ್ಮ ಸದ್ಗುಣವ ಮೆರೆವುದು. ನೀವೆನ್ನ ಕಾವುದು ಕರುಣಿಸುವುದು.' ಎಂದು ದೈನ್ಯದಿಂದ ಕಂಬನಿದುಂಬಿ ತೊದಲು ನುಡಿಯಲು ಮಾರಯ್ಯನ ಅಂತಃಕರಣ ಕರಗಿ ನೀರಾಯಿತು. ಬಸವಣ್ಣನನ್ನು ತೆಗೆದು ಬಿಗಿಯಪ್ಪಿ ಮುತ್ತಪ್ಪಿ, 'ಆದರೆ ಕೇಳು ಬಸವಯ್ಯ, ಭಕ್ತಿಯ ಭೇದವ. ಕೊಡುವರಾರು? ಬೇಡುವರಾರು? ಒಡವೆ ಏನು? ಒಡೆತನ ಯಾರದು? ಎಲ್ಲ ಎಲ್ಲ ಶಿವನೊಡವೆಯಲ್ಲದೆ ಬೇರುಂಟೇ? ಎಲ್ಲ ಎಲ್ಲಕ್ಕೆ ಶಿವನೊಡೆತನವಲ್ಲದೆ ಮತ್ತೇನು? ನನ್ನದು ನಾನು ಕೊಟ್ಟೆ ಕೊಡುವೆನೆಂಬ ಭಕ್ತಿಯೊಂದು ಭಕ್ತಿಯೇ? ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲೆಂಬುದ ನೀ ಬಲ್ಲೆ. ಮಾಡುವ ಮಾಟದೊಳಗೆ ತಾ ತಪ್ಪಿಪ್ಪ ಭಕ್ತನ ಒಪ್ಪಕ್ಕೆ ನಮೋ ನಮೋ ಎಂಬೆ.' ಎಂದು ನಿಜಭಕ್ತಿಯ ನಿಲವ ಬಸವಣ್ಣನಿಗೆ ತೋರಿ ತನ್ನ

ಕಾರುಣ್ಯಾಮೃತ ರಸಸಾಗರದಲ್ಲಿ ಆತನನ್ನು ತೇಲಿಸಿದ. ಸದ್ಭಕ್ತಿಭಾವ ಮಹಾಸಾಗರದಂತೆ ಉಕ್ಕೇರಿ,

ಜಯ ಜಯ ತ್ರಾಹಿ ಮದ್ಗುರು ಸಂಗಮೇಶ್ವರ
ಜಯ ಮೋಳಿಗೆಯ್ಯ ಮತ್ ಪ್ರಭುವೇ ।
ಜಯ ಜಯ ಮತ್ ಪ್ರಾಣನಾಥ ರಕ್ಷಿಪುದೆನ್ನ
ಜಯ ಎಂದು ಬಸವೇಶ ನುತಿಸೆ ॥

ಮೋ. ಪು., ಸಂ. ೫., ಪ. ೧೬೫

ಎಂದು ಮ್ಯಾದು ಮಧುರಾಂಚಿತೋಕ್ತಿಯಿಂದ ಕೊಂಡಾಡಿ ಕುಣಿದಾಡಿ ಸದು ವಿನಯವೇ ಸ್ಥೈಗೆಡೆದಂತೆ ಬಸವಣ್ಣ ಮಾರಯ್ಯಗಳ ಶ್ರೀ ಪಾದಂಗಳಲ್ಲಿ ಬಿದ್ದಿರಲು, ಮಾರಯ್ಯ ಬಸವಿದೇವನನ್ನೆತ್ತಿ ಕೊಂಡಾಡಿ ಮುಂಡಾಡಿ ಮುದ್ದಾಡಿ ಪರಮಾನಂದದಿಂದ ಪರಮ ಕಾಷ್ಠೆಯನ್ನೈದಿದ. ಬಸವಣ್ಣನೆಚ್ಚತ್ತು ಮಾರಯ್ಯನವರಿಗೆ ಮತ್ತೆರಗಿ ಅವರಪ್ಪಣೆ ಪಡೆದು ಮೋಳಿಗೆ ತಂದೆಗಳ ಮಹಾಮಹಿಮೆಯನ್ನು ನೆನೆಯುತ್ತ ಮರಳಿ ತನ್ನ ಮನೆಗೆ ಬಂದ.

ಇತ್ತ ಮೋಳಿಗೆಯ ಮಾರಯ್ಯನವರು ಸತ್ಯ ಶುದ್ಧ ಕಾಯಕದಿಂದ ನಿತ್ಯ ಜಂಗಮ ದಾಸೋಹ ಮಾಡುತ್ತ ನಿರಹಂಕಾರ ಸಾರ ಸದ್ಭಕ್ತಿಯ ನೆಲೆಯನ್ನು ಅದರ ನಿಲವನ್ನು ಜಗತ್ತಿಗೆ ತೋರಿ ಬೀರಿದರು. ಇಂತು ನಿಜಭಕ್ತಿಯಲ್ಲಿ ನಿಂದು ಕಲ್ಯಾಣವೆಂಬ ರಂಗಮಂಟಪದಲ್ಲಿ ನಿಜಭಕ್ತಿಯನಾಚರಿಸುತ್ತ ಅನೇಕ ವರ್ಷ ಇದ್ದು ತಮ್ಮ ಮಣಿಹ ಪೂರೈಸಿತೆಂದು ಅಂತರಂಗದ ಅಖಂಡ ಜ್ಯೋತಿಯಲ್ಲಿ ದೃಷ್ಟಿ ಮನ ಭಾವ ನಟ್ಟು ಬೇರಿಲ್ಲದೆ ಬೆರೆಯಬೇಕೆಂದು ಬಗೆದರು. ಪರಮಪರಂಜ್ಯೋತಿ ಸ್ವರೂಪನಾದ ನಿಃಕಳಂಕ ಮಲ್ಲೇಶ್ವರನ ಧ್ಯಾನ ಕರಿಗೊಂಡು ಪರಮ ಶಾಂತಿಯಲ್ಲಿ ವಿಶ್ರಮಿಸಲನುವಾಯ್ತು. ಪರಮ ಶಾಂತಿ ಮುಳವಟ್ಟಂತೆ ನಿಃಕಳಂಕ ಮಲ್ಲೇಶ್ವರ ಪ್ರಜ್ವಲಿಸಿ ತೊಳಗಿ ಬೆಳಗಿದ. ಪರಿಮಳವೇ ರೂಪುಗೊಂಡು ಪುಷ್ಪವಾದಂತೆ ಅಖಂಡ ಪರಿಪೂರ್ಣಜ್ಯೋತಿಯೇ ಮೈದಾಳಿ ನಿಃಕಳಂಕ ಮಲ್ಲೇಶ್ವರನಾಗಿ ಬಹಿಷ್ಕರಿಸಿ ರುದ್ರಪ್ರಮಥಗಣಂಗಳೊಡಗೂಡಿ ಪ್ರಕಟವಾದ ಮಾರಯ್ಯನ ಪರಮಾನಂದ ಮೋರೆಗಳೆದ ಮಹಾಸಾಗರದಂತೆ ಹರಿಯಿತು.

ನಿತ್ಯನಿರಾಳ ನಿರಂಜನ ನಿರುಪಮ
ನತ್ಯತಿಶುದ್ಧ ಶಾಂಗಲನೇ ।

ಪ್ರತ್ಯಕ್ಷ ಪರಂಜ್ಯೋತಿಸ್ವರೂಪ ಸಂ
ಸ್ತುತ್ಯ ಮತ್ಕರ್ತ ಮಾಂ ತ್ರಾಹಿ ॥

ಮೋ. ಪು., ಸಂ. ೫., ಪ. ೧೪೪

ಎಂದು ಮಾರಯ್ಯ ತಾ ಕಂಡ ಪ್ರತ್ಯಕ್ಷ ನಿರಂಜನ ಪರಂಜ್ಯೋತಿಯನ್ನು ಉಕ್ಕೇರಿ ಕೊಂಡಾಡಿ ತನ್ನ ತಾ ಮರೆದ. ಆತನ ಸತಿ ಮಹಾದೇವಿಯವ್ವನೂ ಪ್ರತ್ಯಕ್ಷ ನಿಃಕಳಂಕ ಮಲ್ಲೇಶ್ವರನನ್ನು ಕಣ್ಣು ತುಂಬ ಕಂಡು ಭಕ್ತಿ ಭಾವ ತುಂಬಿ ಹಾಡಿ ಕೊಂಡಾಡಿದಳು. ಶರಣಗಣಂಗಳು ಮಾರಯ್ಯನ ಮಹಾ ಮಹಿಮೆಯನ್ನು ಪರಮ ವಿಸ್ಮಯ ಮೂಕರಾಗಿ ತಲೆದೂಗಿ ಕೊಂಡಾಡಿದರು. ನೆರೆದ ಶರಣ ಗಣಂಗಳ ಶ್ರೀಪಾದಂಗಳಿಗೆ ಪ್ರಣತಿಗಳನ್ನು ಸಮರ್ಪಿಸಿ ಶರಣದಂಪತಿಗಳು ಕರ್ಪೂರ ಉರಿ ನೊಂಕಿದಂತೆ ಶಿವನ ಪಾದವಪ್ಪಿ ನಿರ್ವಯಲನೈದಿದರು. ಶರಣ ಗಣ ತಿಂತಿಣಿಯ ಜಯಘೋಷ ದಿಕ್ತಟವನೆಲ್ಲ ತುಂಬಿತು. ಉಘೇ ಉಘೇ ಚಾಂಗು ಭಲಾ ಎಂದು ಪುಷ್ಪಾಂಜಲಿ ಮಾಡಿ ವಿಭೂತಿ ವೀಳೆಯವಿತ್ತು ತಮ ತಮಗೆ ಗಣಪರ್ವ ಮಾಡಿದರು. ಮೋಳಿಗೆಯ್ಯನ ನೆನೆನೆನೆದು ಒಪ್ಪಿಕೆ ದರು.

ಈ ಮೇರೆಗೆ ಮೋಳಿಗೆಯ ಮಾರಯ್ಯನವರ ಜೀವನಚರಿತ್ರೆಯನ್ನು ಸಾಂಪ್ರದಾಯವು ಮನದ ಮಗ್ಗುಲಲ್ಲಿಟ್ಟು ಜೋಪಾನ ಮಾಡಿ ಉಳಿಸಿಕೊಂಡು ಹಲವಾರು ಬಾರಿ ಹಲವಾರು ಕಡೆ ಮನ ಬಂದಂತೆ ಬೆಳೆಸಿಕೊಂಡು ಬಂದಿದೆ. ಸಾಂಪ್ರದಾಯದ ಕಣ್ಣು ಸತ್ಯವನ್ನೆ ಕಾಣಬೇಕೆಂಬ ಸತ್ಯನಿಷ್ಠವಾದ ವಿಚ್ಚಳ ಕಣ್ಣಲ್ಲ. ಪ್ರೇಮಾಶ್ರುಜಲಪೂರಿತವಾಗಿ ಮಸುಕಾದ ಮಮತೆಯ ದೃಷ್ಟಿ ಯದು. ಅಂತೆಯೇ ಸಾಂಪ್ರದಾಯವು ಹೇಳುವ ಮಾತೆಲ್ಲ ಸತ್ಯ, ನುಡಿದ ನುಡಿಯೆಲ್ಲ ತತ್ವವೆಂದು ನಾವಿಟ್ಟುಕೊಳ್ಳಬೇಕಿಲ್ಲ. ಸತ್ಯ ಸಂಶೋಧಕ ದೃಷ್ಟಿಗೆ ಸಾರಾಸಾರ ವಿವೇಕ ಬುದ್ಧಿಗೆ ಜಾತಿ ಮತ ಕುಲ ಛಲ ನಾಡು ನುಡಿ ಯೆಂಬ ಸೂತಕದಲ್ಲಿ ಬಿದ್ದು ಬಳಲಬೇಕಿಲ್ಲ, ಅಹಂಕಾರ ಮಮಕಾರಗಳಿಂದ ತಮ್ಮನ್ನು ತಾವು ಬಂಧಿಸಿಕೊಂಡು ಒದ್ದಾಡ ಬೇಕಿಲ್ಲ. ಇಲ್ಲಿ ಸರ್ವಸೂತಕ ವನತಿಗಳೆದು ಎಲ್ಲ ಬಂಧನಗಳನ್ನು ಹರಿದೊಗೆದು ಮೀರಿ ನಿಂದು ಸತ್ಯದ ಹುಸಿವೇಷವನ್ನು ಅಸತ್ಯವನ್ನು ಭೇದಿಸಿ ಕಳೆದು, ಅಸತ್ಯದ ಮನೆಯಲ್ಲಿ ಹುದುಗಿಕೊಂಡಿರುವ ಸತ್ಯವನ್ನೇ ಸಾಧಿಸಿ ಶೋಧಿಸಿ ಹುಡುಕಿ ತೆಗೆದು ಸತ್ಯ

ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವದು ಸತ್ಯ ಸಂಶೋಧಕರ, ಸಾರಾಸಾರ ವಿಮರ್ಶಕರ ಪರಮ ಪಾವನ ಕರ್ತವ್ಯ.

ಸಾಂಪ್ರದಾಯವು ಹೇಳುವ ಮಾರಯ್ಯನವರ ಚರಿತೆಯಲ್ಲಿ ಹುದುಗಿರುವ ಸತ್ಯಾಂಶಗಳನ್ನು ಬಯಲಿಗೆಳೆಯಲು ಸಾಕಷ್ಟು ಸಾಧನವಿಲ್ಲದಿದ್ದರೂ ಬಹುಮಟ್ಟಿಗೆ ಅವರ ಸತ್ಯ ಚರಿತೆಯನ್ನು ನಿರ್ಧರಿಸಬಲ್ಲ ಕೆಲವೊಂದು ಅಂತರ ಬಾಹ್ಯ ಪ್ರಮಾಣಗಳು ದೊರೆಯುತ್ತವೆ. ಹಿಂದೊಮ್ಮೆ ಹೇಳಿದಂತೆ ಮಾರಯ್ಯನವರ ವಚನಗಳು, ಅವರ ರಾಣಿ ಮಹಾದೇವಿಯಮ್ಮನ ವಚನಗಳು, ಇವಲ್ಲದೆ ಸತ್ಯಸಂಶೋಧನೆಗೆ ಅನುಕೂಲವಾಗುವ ಇನ್ನುಳಿದ ಸಾಧನಗಳನ್ನು ಮಾರಯ್ಯನವರ ಸತ್ಯ ಚರಿತೆಯನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪ್ರಮಾಣಗಳೆಂದಿಟ್ಟುಕೊಂಡು ನಾವು ಮುನ್ನಡೆಯಬಹುದು.

ಸತ್ಯವನ್ನು ಭೇದಿಸಿ ನೋಡಬಲ್ಲ ಸತ್ಯ ದೃಷ್ಟಿಯನ್ನಿಟ್ಟುಕೊಂಡು ಸಾರಾಸಾರವನ್ನು ತೋರಬಲ್ಲ ವಿಮರ್ಶಾತ್ಮಕ ಬುದ್ಧಿಯ ಬೆಳಗಿನಲ್ಲಿ ಮುಂದೆ ಮುಂದೆ ಹೆಜ್ಜೆಯನ್ನಿಡುತ್ತ ಹೋದರೆ ಮಾರಯ್ಯನವರ ಜೀವನದಲ್ಲಿ ಸಂಭವಿಸಿದ ಸತ್ಯ ಸಂಗತಿ ಸಂದರ್ಭ ಘಟನೆಗಳು ಸ್ಫುಟವಾಗಿ ಒಡೆದು ಮೂಡಿ ಕ್ರಮವಾಗಿ ಮುಂದೆ ಬಂದು ನಿಲ್ಲುತ್ತವೆ.

೧ ಮಾರಯ್ಯನವರು ಕಲ್ಯಾಣದಲ್ಲಿ ಹುಟ್ಟಿ ಬೆಳೆದವರಲ್ಲ. ಅವರು ಬೇರೊಂದು ನಾಡಿನಿಂದ ಬಂದವರು. ಸಾಂಪ್ರದಾಯವು ಹೇಳುವ ಈ ಮಾತನ್ನು ಮಾರಯ್ಯನವರ ಮತ್ತು ಮಹಾದೇವಿಯಮ್ಮನವರ ವಚನಗಳು ಸಂಶಯವೆಷ್ಟೂ ಉಳಿಯದಂತೆ ಸಮರ್ಥಿಸುತ್ತವೆ:—

೧ ಬಂದೆ ನಾ ಬಸವಣ್ಣನ ಕಥನದಿಂದ....

ಮೋ. ಮಾ. ವ. ೨೪೯, ಪು. ೬೦

೨ ನಾನೇಕೆ ಬಂದೆ ಸುಖವ ಬಿಟ್ಟು ? ಬಂದುದಕ್ಕೆ ಬಂದೂ ಆದುದಿಲ್ಲ....

ಮೋ. ಮಾ. ವ. ೧೫೦, ಪು. ೩೬

೩ ...ಸಕಲ ದೇಶ ಕೋಶ ವಾಸ ಭಾಂಡಾರ ಸವಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬ ಕೈಕೂಲಿಯೋ ನಿಮ್ಮ ಭಕ್ತಿ ?

ಮ. ವ. ೨೩, ಪು. ೨೭೫

೪ ಸವಾಲಕ್ಷದಲ್ಲಿ ಹುಟ್ಟಿ ಸಕಲ ಕ್ರಮಂಗಳಲ್ಲಿದ್ದು ಭೋಗಿಸಿ....
ವೃಥಾ ವೈಭವಕ್ಕೆ ಕೆಡುತ್ತಿದ್ದೆಯಲ್ಲಾ! ಅಂದು ಬಂದ ಕಥನ...

ಮ. ವ. ೬೧, ಪು. ೨೮೫

ಎಂಬಿವೇ ಮೊದಲಾದ ವಚನಗಳು ಮಾರಯ್ಯನವರು ಬೇರೊಂದು ದೇಶದಿಂದ ಬಂದರೆಂಬುದನ್ನು ಸ್ಪಷ್ಟಗೊಳಿಸುತ್ತವೆಯಲ್ಲದೆ ಯಾವ ನಾಡಿನಿಂದ ಬಂದರೆಂಬುದನ್ನೂ ನಿರ್ಧರಿಸುತ್ತವೆ. ಅವು ತಿಳಸುವಂತೆ ಮಾರಯ್ಯನವರು ಸವಾಲಕ್ಷದಲ್ಲಿ ಹುಟ್ಟಿ ಬೆಳೆದವರು. ಸವಾಲಕ್ಷವೆಂದರೆ ೧ ಲಕ್ಷ ೨೫ ಸಾವಿರದ ನಾಡು ಎಂದು ಅರ್ಥವಾಗುತ್ತದೆ. ಸಾಂಪ್ರದಾಯವು ಮಾರಯ್ಯನವರು ತಾಯ್ನಾಡೆಂದು ಹೇಳುವ ಕಾಶ್ಮೀರವೇ ೧೨ನೆಯ ಶತಮಾನದಲ್ಲಿ ಸವಾಲಕ್ಷ ವೆಂದು ಪ್ರಸಿದ್ಧಪಡೆದ ಬಗೆಗೆ ಇತಿಹಾಸ ಮೌನ ತಾಳಿದೆ. 'ಕಾಶಿಯರಸು ಕಾಶ್ಮೀರ ರಾಜ' ಎಂದು ಮಾರಯ್ಯನವರನ್ನು ಕಾಶಿಯವರೆಂದು ಹೇಳುವ 'ಶಿವಶರಣ ವಿಲಾಸ'ವೊಂದನ್ನು ಬಿಟ್ಟರೆ ಎಲ್ಲ ಗ್ರಂಥಕಾರರು ಅವರು ಕಾಶ್ಮೀರದವರೆಂದೇ ಹೇಳುತ್ತಾರೆ. 'ಶಿವಶರಣ ವಿಲಾಸ'ದ ಮಾತಿನಲ್ಲಿ ತಥ್ಯವಿಲ್ಲೆಂದು ಬಿಟ್ಟು ಬಿಡಬಹುದು. ಸುಮಾರು ೧೪ನೆಯ ಶತಮಾನದಲ್ಲಿ ರಚಿತವಾದ 'ಮೋಳಿಗೆಯ್ಯನ ಪುರಾಣ'ದಿಂದ ಪ್ರಾರಂಭವಾಗುವ 'ಮಾರಯ್ಯ ಕಾಶ್ಮೀರದರಸನಾಗಿದ್ದ' ಎಂಬ ಸಾಂಪ್ರದಾಯವನ್ನೂ ಬದಿಗಿರಿಸಿದರೆ ಮಾರಯ್ಯನವರು 'ಸವಾಲಕ್ಷದಲ್ಲಿ' ಹುಟ್ಟಿ ಬೆಳೆದವರೆಂಬುದು ಸತ್ಯ ಸಂಗತಿಯೆಂದು ತೋರುತ್ತದೆ. ಈ ಸಂಗತಿಗೆ

> ಕ್ಷೋಣಿಪತಿ ಸವಾಲಕ್ಷದೇಶಪತಿ ಮಹದೇವ
> ರಾಣಿಯರು ಮುಳಿದರಿದು ಬಂದು ಕ
> ಲ್ಯಾಣದೊಳು ಕಟ್ಟಿಗೆಯ ಹೊತ್ತು ಶರಣರ ಸೇವೆಯಂ ಮಾಡುತಿರೆ ಬಸವನು ॥
>
> ವೀ. ಪು. ಕಾಂಡ ೮, ಸಂ. ೨, ಪ. ೬೧

ಎಂಬ ಗುಬ್ಬಿಯ ಮಲ್ಲಣಾರ್ಯರ (ಕಾಲ. ಸು. ೧೫೧೩) ಉಕ್ತಿಯು ಪುಷ್ಟಿಯನ್ನು ಕೊಡುತ್ತದೆ. ಆದುದರಿಂದ ಮಾರಯ್ಯನವರು ಸವಾಲಕ್ಷ ದೇಶ ದಲ್ಲಿ ಹುಟ್ಟಿ ಬೆಳೆದರೆಂಬ ಸಂಗತಿ ನಿಸ್ಸಂದಿಗ್ಧವಾಗುತ್ತದೆ. ಆದರೆ ಸವಾಲಕ್ಷ ದೇಶವೆಂದರೆ ಹಿಂದೆ ಪ್ರಸಿದ್ಧವಾಗಿದ್ದ ೫೬ ದೇಶಗಳಲ್ಲಿ ಯಾವ ದೇಶ ಅದರ ಭೌಗೋಲಿಕ ಸ್ಥಾನವೆಲ್ಲಿ ಎಂಬುದು ವಿಚಾರಾಸ್ಪದವಾದ ಮಾತೇ ಆಗಿ ಉಳಿಯುತ್ತದೆ.

ಇನ್ನು 'ಸವಾಲಕ್ಷ'ವು ಭಾರತದ ಯಾವ ಭಾಗದಲ್ಲಿತ್ತು ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಹತ್ತನೆಯ ಶತಮಾನದಲ್ಲಿದ್ದ ಆದಿಕವಿ ಪಂಪ

ಮೊದಲುಗೊಂಡು ಹದಿನಾರನೆಯ ಶತಮಾನದಲ್ಲಿದ್ದ ವಿರೂಪಾಕ್ಷಪಂಡಿತನ ವರೆಗೆ ಹಲವಾರು ಕವಿಗಳು, ಕೆಲವು ಐತಿಹ್ಯಗಳು 'ಸವಾಲಕ್ಷ' ದ ಅಸ್ತಿತ್ವ ವನ್ನು ನಿರ್ಧರಿಸುವಂತಿದ್ದರೂ, ಅದರ ಭೌಗೋಲಿಕ ಸ್ಥಾನವನ್ನು ನಿರ್ದಿಷ್ಟ ವಾಗಿ ಹೇಳಿಲ್ಲ.

(೧) ಆದಿಕವಿ ಪಂಪನು (ಕ್ರಿ. ಶ. ೯೪೧) 'ವಿಕ್ರಮಾರ್ಜುನ ವಿಜಯ' ವಲ್ಲಿ ತನ್ನ ಪೋಷಕನಾದ ಅರಿಕೇಸರಿಯೆಂಬ ಚಾಳುಕ್ಯರಾಜನ ಅನ್ವಯವನ್ನು ಹೇಳುವಾಗ ಆತನ ಪೂರ್ವಜರಲ್ಲಿ ಪ್ರಸಿದ್ಧಿ ಪಡೆದ ಯುದ್ಧಮಲ್ಲನು 'ಸಪಾದ ಲಕ್ಷ ಕ್ಷಿತಿ' ಯನ್ನು ಆಳಿದನೆಂದು ಹೇಳುತ್ತಿದ್ದರೂ ಅದರ ಸ್ಥಾನವನ್ನು ನಿರ್ದಿಷ್ಟಗೊಳಿಸಿಲ್ಲ.

(೨) ಹದಿಮೂರನೆಯ ಶತಮಾನದಲ್ಲಿದ್ದ 'ಆಶಾಧರ' ನೆಂಬ ಜೈನ ಕವಿ ತನ್ನ 'ಸಾಗಾರ ಧರ್ಮಾಮೃತ' ಎಂಬ ಸಂಸ್ಕೃತ ಗ್ರಂಥದಲ್ಲಿ (i) 'ಶ್ರೀಮಾನಸ್ತಿ ಸಪಾದಲಕ್ಷವಿಜಯಃ' (ii) 'ಮ್ಲೇಚ್ಛೇನ ಸಪಾದ ಲಕ್ಷ ವಿಷಯೇ ವ್ಯಾಪ್ತಿ' ಎಂದು 'ಸಪಾದ ಲಕ್ಷ' ದ ವಿಷಯವಾಗಿ ಹೇಳಿ ದ್ದರೂ ಅದರ ಭೌಗೋಲಿಕ ಸ್ಥಾನವನ್ನು ಆತನೂ ಸ್ಪಷ್ಟಪಡಿಸಿಲ್ಲ.

(೩) "ಬಾಬರನನ್ನು ಕುರಿತು ಬರೆಯಲ್ಪಟ್ಟ ಇತಿಹಾಸದಲ್ಲಿ ಇದು (ಅಹಿಚ್ಛತ್ರ) ಕಾಶ್ಮೀರದಲ್ಲಿರುವದೆಂದೂ ಇದರ ಹತ್ತಿರ ಪರ್ವತ ಶ್ರೇಣಿಗಳು ಬಹಳವಾಗಿರುವವೆಂದೂ ಹೇಳಿರುವುದು. ಹಿಮಾಲಯದ ದಕ್ಷಿಣ ಭಾಗ ವಲ್ಲಿರುವ ಗುಡ್ಡದ ಸಾಲಿಗೆ 'ಸಾವಲಾಖ್' ಎಂಬ ಹೆಸರು. ಇದರಲ್ಲಿ ಒಂದು ಲಕ್ಷ ಇಪ್ಪತ್ತೈದು ಸಾವಿರ (೧,೨೫೦೦೦) ಗುಡ್ಡಗಳಿರುವುದರಿಂದ ಬಾಬರನು ಇದಕ್ಕೆ 'ಸಾವಲಾಖ್' ಅಂದರೆ ಸವ್ವಾಲಕ್ಷವೆಂದು ಹೆಸರಿಟ್ಟ ನೆಂದು ಕೆಲವರು ಹೇಳುವರು. ಆದರೆ ಇದು ಕಾಲ್ಪನಿಕ ವ್ಯುತ್ಪತ್ತಿ ಎಂದು ತಿಳಿಯುವದು. ಯಾಕಂದರೆ ಇದರ ಮೂಲ ಹೆಸರು 'ಸಪದಲಕ್ಷ' ಎಂದು ಇರುವದು." ಎಂದು ರೆ. ಉತ್ತಂಗಿ ಚೆನ್ನಪ್ಪನವರು ತಮ್ಮ 'ಹಿಂದೂ ಸಮಾಜ ಹಿತಚಿಂತಕ' ಎಂಬ ಗ್ರಂಥದಲ್ಲಿ ಹೇಳುತ್ತಾರೆ. ಈ ಹೇಳಿಕೆಯ ವಿಮರ್ಶೆ ಮಾಡಿದಲ್ಲಿ 'ಸಾವಲಾಖ್' ಇಲ್ಲವೆ 'ಸವಾಲಕ್ಷ'ವೆಂಬುದು ಹಿಮಾಲಯದ ದಕ್ಷಿಣಕ್ಕೆ ಕಾಶ್ಮೀರದ ಒಂದು ಭಾಗವಾಗಿ ಪರ್ವತ ಶ್ರೇಣಿಗಳಿಂದ ತುಂಬಿದ ನಾಡಾಗಿತ್ತೆಂಬ ಸಂಗತಿ ಒಡೆದು ಮೂಡುತ್ತದೆ. ಇದಲ್ಲದೆ ಇನ್ನೂ ಮುಂದೆ

ಹೋಗಿ ರೆ. ಚೆನ್ನಪ್ಪನವರು 'ಸವಾಲಕ್ಷ'ವು ಕಮಾವೂನ್, ಗರವಾಲ, ಕಾಂಗಪ, ಪಠಿಂಪುರ ಮೊದಲಾದ ಜಿಲ್ಲೆಗಳನ್ನೊಳಗೊಂಡಿರುವುದೆಂದೂ 'ಅಹಿಚ್ಛತ್ರ'ವೇ ಈ ಪ್ರಾಂತದ ಮುಖ್ಯ ನಗರವೆಂದೂ ಹೇಳುತ್ತಾರೆ. ಇದು ಡಾ ಭಂಡಾರಕರ ಇವರ ಲೇಖನದ ಮೇಲೆ ಆಧಾರಗೊಂಡಿದ್ದು Indian Antiquary ಎಂಬ ಸಂಶೋಧನ ಪತ್ರಿಕೆಯಲ್ಲಿ ಚರ್ಚಿಸಲ್ಪಟ್ಟಿದೆ

(೪) ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವು ರೆ. ಚೆನ್ನಪ್ಪನವರ ಹೇಳಿಕೆಯನ್ನು ಬಹುಮಟ್ಟಿಗೆ ಸಮರ್ಥಿಸುವಂತೆ ತೋರುತ್ತದೆ. 'ಕಾಲಜ್ಞಾನ'ದ ಸಂಧಿಯಲ್ಲಿ ಪ್ರಭುದೇವರ ಸಂಚಾರವನ್ನು ಬಣ್ಣಿಸುವ

ಇದಲ್ಲಿ ಕಂಚಿ ಕಾಳಾಸ್ತಿ ಪೆನ್ನಾಂಬಲವು ।
ಅರುಣಾಚಲಂ ಕುಂಭಕೋಣ ರಾಮೇಶ ವು ।
ತ್ತರದಲ್ಲಿ ಗೋಕರ್ಣ ಸೌರಾಷ್ಟ್ರ ಕಾಶಿ ಕೇದಾರಾದಿ ತೀರ್ಥಂಗಳ ॥
ಕರುಣದಿಂ ನೋಡುತ್ತೆ ಹಿಮಗಿರಿಯ ದಾಂಟಿ ತಾಂ ।
ತಿರುಗಿ ಬರುವಂ ಸವಾಲಕ್ಷ ಪರ್ವತದಲ್ಲಿ ।
ಪರಮ ಮುನಿಗಳ ನೋಡಿ ತತ್ತ್ವವಂ ಪೇಳ್ದು
ಮುಕ್ತಿಯನೊಲಿದು ಕೊಟ್ಟು ಬಳಿಕೆ ॥

— ಚೆ. ಬ. ಪು., ಸಂ. ೬೨, ಪದ್ಯ ೭

ಈ ಪದ್ಯವೂ 'ಸವಾಲಕ್ಷ'ದ ಭೌಗೋಲಿಕ ಸ್ಥಾನವನ್ನು ಅಂದರೆ ಹಿಮಾಲಯದ ದಕ್ಷಿಣಕ್ಕಿರುವದೆಂದೂ ಪರ್ವತ ಶ್ರೇಣಿಗಳಿಂದ ತುಂಬಿರುವುದೆಂದೂ ಸ್ಪಷ್ಟಗೊಳಿಸಿದರೂ, ಅದೊಂದು ದೇಶವೇ ಎಂಬುದನ್ನು ನಿರ್ದಿಷ್ಟಗೊಳಿಸಿಲ್ಲ.

(೫) ಹಿಂದೆ ಹೇಳಿದ ಮಾರಯ್ಯನವರ ರಾಣಿಯ 'ಸವಾಲಕ್ಷ'ದ ಬಗೆಗಿರುವ ವಚನಗಳನ್ನೂ, ಮಾರಯ್ಯನು ಕಾಶ್ಮೀರದ ಅರಸನಾಗಿದ್ದನೆಂಬ ಸಾಂಪ್ರದಾಯವನ್ನೂ ಮುಂದಿಟ್ಟುಕೊಂಡು ಮೇಲಿನ ವಿಷಯವನ್ನು ಪರಿಶೀಲಿಸಿದಲ್ಲಿ ಅವರು ಹಿಮಾಲಯದ ದಕ್ಷಿಣಕ್ಕೆ ಕಾಶ್ಮೀರದ ಒಂದು ಭಾಗವಾಗಿ ಪರ್ವತ ಶ್ರೇಣಿಗಳಿಂದ ಕೂಡಿದ 'ಸಪಾದಲಕ್ಷ' ಇಲ್ಲವೆ 'ಸವಾಲಕ್ಷ' ದೇಶದವರೆಂಬ ಮಾತು ಸ್ಪಷ್ಟವಾಗುತ್ತದೆ.

(೬) 'ಸವಾಲಕ್ಷದ' ವಿಷಯಕ್ಕೆ ಡಾ. ಎ. ಎನ್. ಉಪಾಧ್ಯೆ ಅವರು ಹೇಳುವುದು ಹೀಗೆ:—

"As to Sapada-laksa in the 12th century, it is mentioned by Asadhara of that period. It stood for the territory round about Nagaur in Jodhapur. Later on Ajmer and a portion of Mewad were included in the territory called Sapada-laksa. So it stands roughly for the north-western portion of Rajaputana. This country would certainly be on the way from Kashmir to Karnataka."

ಇವರ ಹೇಳಿಕೆಯಂತೆ 'ಸಪಾಲಕ್ಷ'ವು ರಜಪೂತಸ್ಥಾನದ ವಾಯುವ್ಯ ಭಾಗದಲ್ಲಿತ್ತೆಂದು ಹೇಳಬಹುದು. ಇವರ ಹೇಳಿಕೆಗೂ ಆಧಾರವಾವುದೋ ನಮಗೆ ತಿಳಿಯದು. ಮತ್ತು 'ಸಪಾದಲಕ್ಷ'ಕ್ಕಿರುವ ಇವರ ಅಭಿಪ್ರಾಯವನ್ನೂ, ಇದೇ ವಿಷಯಕ್ಕಿರುವ ರೆ. ಚೆನ್ನಪ್ಪನವರ ಅಭಿಪ್ರಾಯವನ್ನೂ ವಿಮರ್ಶಿಸಿದರೆ ರೆ. ಚೆನ್ನಪ್ಪನವರ ಅಭಿಪ್ರಾಯವು ಹೆಚ್ಚು ಸಾಧುವಾದುದೆಂದು ತೋರುತ್ತದೆ. ಏಕೆಂದರೆ ರೆ. ಚೆನ್ನಪ್ಪನವರ ವಿಚಾರದ ಧೋರಣೆಗೆ ನಮಗೆ ತಿಳಿದಂತೆ ಇತಿಹಾಸ ಮತ್ತು ಸಾಂಪ್ರದಾಯದ ಬೆಂಬಲವಿದೆ.

ಇನ್ನು ಮಾರಯ್ಯನವರ ಬಗೆಗಿರುವ ಸಾಂಪ್ರದಾಯವೇ ಅವರ ರಾಜಧಾನಿಯೆಂದು ಹೇಳುವ ಮಾಂಡವ್ಯಪುರಕ್ಕೂ ರೆ. ಚೆನ್ನಪ್ಪನವರು 'ಸಪಾಲಕ್ಷ' ಮುಖ್ಯನಗರವೆಂದು ಹೇಳುವ ಅಹಿಚ್ಛತ್ರಪುರಕ್ಕೂ ಸಂಬಂಧವೇನೆಂಬುದು ಬಿಚ್ಚಬಾರದ ಗಂಟೇ. ಈ ವಿಷಯದಲ್ಲಿ ಭೌಗೋಲಿಕ ಸಂಶೋಧನೆ ಮುಂದುವರಿವುದು ಅತ್ಯವಶ್ಯವಿದೆ.

೨ ಮೊದಲು ಸಪಾಲಕ್ಷದೇಶದಲ್ಲಿದ್ದ ಮಾರಯ್ಯನು ಆ ದೇಶದ ಅರಸನಾಗಿದ್ದನೇ ? ಎಂಬುದು ಮುಂದೆ ಬರುವ ಪ್ರಶ್ನೆ. ಮಾರಯ್ಯನ ಪೂರ್ವಾಶ್ರಯ ಜೀವನದ ಮಾತನ್ನೇ ಎತ್ತದ ಪಾಲ್ಕುರಿಕಿ ಸೋಮಾರಾಧ್ಯರ ತೆಲುಗು ಬಸವಪುರಾಣವೊಂದನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳು ಮಾರಯ್ಯನವರು ಮೊದಲು ಅರಸರಾಗಿದ್ದರೆಂದೇ ಹೇಳುತ್ತವೆ. ಸೋಮಾರಾಧ್ಯರನ್ನೇ ಅನುಸರಿಸಿದ ಭೀಮಕವಿಗಳು ತಮ್ಮ ಬಸವ ಪುರಾಣದಲ್ಲಿ 'ವೋಳಿಗೆಯ ಮಾರವಿಭು' ಎಂದು ಮಾರಯ್ಯನವರನ್ನು ಕರೆದಿರುವುದು ಅವರು ಅರಸರಾಗಿದ್ದರೆಂಬ ಸಂಗತಿಯನ್ನು ಅಪ್ರತ್ಯಕ್ಷ ಸೂಚಿಸುವಂತಿದೆ.

ಆದರೆ ಈ ತೆರನಾದ 'ಧ್ವನಿ'ಗೂ ತೆಲುಗು ಬಸವ ಪುರಾಣದಲ್ಲಿ ಆಸ್ಪದವಿಲ್ಲ. ಮೋಳಿಗೆಯ್ಯನ ಪುರಾಣದ ಮೇರೆಗೆ ಮಾರಯ್ಯ ಅರಸನಾಗಿದ್ದ ಇಷ್ಟೇಅಲ್ಲ, ಆತ 'ಏಕಛತ್ರದಲ್ಲಿ ಛಪ್ಪನ್ನ ದೇಶವನ್ನಾಳುತ್ತಿದ್ದ ! ಛಪ್ಪನ್ನ ದೇಶದರಸರು ಆತನನ್ನು ಓಲೈಸುತ್ತಿದ್ದರು!' ಅಂತು ಮಾರಯ್ಯ ಮೊದಲು ಅರಸನಾಗಿದ್ದಿರಬಹುದೇ ? ಎಂಬ ಸಂಶಯ ಒಂದು ಕಡೆ. ಆತ ಏಕಛತ್ರಾಧಿಪತಿ ಎಂಬ ಹೇಳಿಕೆ ಮತ್ತೊಂದು ಕಡೆ. ಈ ಸಮಸ್ಯೆಯನ್ನು ಬಿಡಿಸುವಲ್ಲಿ ಮಾರಯ್ಯನವರ ಮತ್ತು ಅವರ ಹೆಂಡತಿಯ ವಚನಗಳು ಬಹಳ ಸಹಕಾರಿಯಾಗುತ್ತವೆ:—

(೧) ಇಂತೀ ಷಡುಸ್ಥಲಮೂರ್ತಿಯಾಗಿ ಬಂದೆಯಲ್ಲಾ ಸಂಗನ ಬಸವಣ್ಣ ಚೆನ್ನ ಬಸವಣ್ಣ.... ಬಂದುದ ಕಂಡು ಎನ್ನ ಸಿರಿ ಉರಿಯೊಳಗಾಯಿತ್ತು...

ಮೋ ಮಾ. ವ. ೪೪೫, ಪು. ೧೧೩

(೨) ಸಕಲ ದೇಶ ಕೋಶ ವಾಸ ಭಾಂಡಾರ ಸವಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು.....

ಮಾ. ವ. ೨೩, ಪು. ೨೭೫

(೩) ಸವಾಲಕ್ಷದಲ್ಲಿ ಹುಟ್ಟಿ ಸಕಲ ಕ್ರಮಗಳಲ್ಲಿದ್ದು ಭೋಗಿಸಿ....

ಮಾ. ವ. ೬೧, ಪು. ೨೮೫

ಎಂಬಿವೇ ಮೊದಲಾದ ವಚನಗಳು ಪ್ರತ್ಯಕ್ಷವಾಗಿ,

(೪) ಆನೆ ಕುದುರೆ ಬಂಡಿ ಭಂಡಾರವಿದ್ದಡೇನೋ ? ತಾನುಂಬುದು ಪಡಿಯಕ್ಕಿ...

ಮೋ. ಮಾ. ವ. ೬೪, ಪು. ೧೭

ಮತ್ತು ಮಾರಯ್ಯನವರ ವಚನಗಳಲ್ಲಿ ಮೇಲಿಂದ ಮೇಲೆ ಮೈದೋರುವ ಕೋಟೆ, ಹುಡೆಯ ಆಳು, ಅರಸು ಮೊದಲಾದ ಶಬ್ದಪ್ರಯೋಗಗಳು ಮತ್ತು ಆತನ ಮಾತಿನ 'ಠೀವಿ' ಇವೆಲ್ಲ ಅಪ್ರತ್ಯಕ್ಷವಾಗಿ ಮಾರಯ್ಯನು ಏಕಛತ್ರಾಧಿಪತಿಯಲ್ಲದಿದ್ದರೂ ಸವಾಲಕ್ಷವೆಂಬ ದೇಶದ ದೊರೆಯಾಗಿದ್ದನೆಂಬುದು ನಿಸ್ಸಂಶಯ. ಮಾರಯ್ಯ ಮೊದಲು ದೊರೆಯಾಗಿರದಿದ್ದರೆ ಆತ ದೇಶ ಕೋಶ ವಾಸ ಭಾಂಡಾರ ಮತ್ತು ಅನೇಕ ಭೋಗ ಸತಿಯರು ಇವರ ಸಕಲ ಕ್ರಮದ ಭೋಗ ವೈಭವದಲ್ಲಿದ್ದನೆಂಬ ವಚನಗಳಿಗೆ ಅರ್ಥವೇ ಆಗುವುದಿಲ್ಲ.

೩ ಮಾರಯ್ಯನವರ ಹೆಂಡಿರುಮಕ್ಕಳು ಬಂಧುಬಳಗದವರ ವಿಷಯ:— ಮೋಳಿಗೆಯ್ಯನ ಪುರಾಣವು ಹೇಳುವಂತೆ ಮಹಾದೇವರಾಜನ ಪಟ್ಟದರಾಣಿ

ಗಂಗಾದೇವಿ. ಆದರೆ ಚೋರ ಬಸವಪುರಾಣ ಶರಣಲೀಲಾಮೃತ ಮೊದಲಾದವು ಪಟ್ಟದರಸಿಯ ಹೆಸರನ್ನು ಮಹಾದೇವಿಯೆಂದೇ ಹೇಳುತ್ತವೆ. ಅರಸಿಯ ಹೆಸರು ಮೊದಲೇನೇ ಇರಲಿ ಕಲ್ಯಾಣಕ್ಕೆ ಬಂದ ಮೇಲೆ ಮಹಾದೇವಿ ಎಂಬುದೇ ಅವರ ನಾಮಾಂಕಿತ. ಇನ್ನು ಮಹಾದೇವ ಭೂಪಾಲನಿಗೆ ಭೋಗ ಸತಿಯರು ಇಲ್ಲವೆ ಸಂಬಂಧ ಸ್ತ್ರೀಯರಿದ್ದರೆಂಬುದು ಈ ಮೊದಲೇ ಉದಹರಿಸಿದ 'ಸಂಬಂಧ ಸ್ತ್ರೀಯರ ಬಿಟ್ಟು' ವಚನದಿಂದ ಸ್ಪಷ್ಟವಾಗುತ್ತದೆ. ಮತ್ತು ಅವರ ಸಂಖ್ಯೆ ಏಳುನೂರೆಂದು ಮೋಳಿಗೆಯ್ಯನ ಪುರಾಣವು ಹೇಳುತ್ತದೆಯೆಂಬುದನ್ನು ಹಿಂದೊಮ್ಮೆ ನೋಡಿದ್ದೇವೆ. ಅರಸನಿಗೆ 'ಲಿಂಗರತಿ' ಇಲ್ಲವೆ 'ಲಿಂಗಾರತಿ' ಎಂಬೊಬ್ಬ ಮಗನಿದ್ದ ವಿಷಯವನ್ನು ಅನೇಕ ಗ್ರಂಥಗಳು ತಿಳಿಸುತ್ತವೆ. ಮತ್ತು ಅರಸು ವೈರಾಗ್ಯ ತಾಳಿ ರಾಜ್ಯ ಪರಿತ್ಯಾಗ ಮಾಡಿ ಕಲ್ಯಾಣಕ್ಕೆ ಹೊರಡುವ ಪೂರ್ವದಲ್ಲಿ ತನ್ನ ಮಗ 'ಲಿಂಗರತಿ' ಇಲ್ಲವೆ 'ಲಿಂಗಾರತಿ'ಗೆ ಪಟ್ಟಗಟ್ಟಿದನೆಂದೂ ತಿಳಿಯುತ್ತದೆ. ಅರಸನಿಗೆ ನಿಜದೇವಿ ಎಂಬ ತಂಗಿ ಇದ್ದಳೆಂದೂ ಆ ನವತಾರುಣ್ಯದಲ್ಲಿ ವೈರಾಗ್ಯವೆರಗಿ ಕಲ್ಯಾಣಕ್ಕೆ ಬೊಂತೆಯುಟ್ಟು ಬಂದು ಬೊಂತಾದೇವಿ ಇಲ್ಲವೆ ಬೊಂತಲಾದೇವಿಯೆಂದು ಪ್ರಸಿದ್ಧಿ ಪಡೆದಳೆಂದೂ ಶ್ರೀಮಾನ್ ಹಳಕಟ್ಟಿಯವರು ತಮ್ಮ ಶಿವಶರಣರ ಚರಿತ್ರೆಗಳು ಎಂಬ ಗ್ರಂಥದಲ್ಲಿ ತಿಳಿಸುತ್ತಾರೆ. ಆದರೆ ಇಲ್ಲಿ ವಿಚಾರ ಮಾಡತಕ್ಕ ವಿಷಯ ಒಂದು. ಕಾಶ್ಮೀರದರಸನ ಮಗಳು ನಿಜದೇವಿ ಶಿವನನ್ನೇ ಮೋಹಿಸಿ ವೀರ ವಿರಾಗಿಣಿಯಾಗಿ ಕಲ್ಯಾಣಕ್ಕೆ ಬಂದು ಬೊಂತಾದೇವಿಯೆಂಬ ಪ್ರಸಿದ್ಧ ಶಿವಶರಣೆಯಾದ ಸಂಗತಿ ಅನೇಕ ವೀರಶೈವ ಗ್ರಂಥಗಳು ತಿಳಿಸುತ್ತವೆ. ಆದರೆ ನಿಜದೇವಿ ಕಾಶ್ಮೀರದರಸು ಮಹಾದೇವ ಭೂಪಾಲನ ತಂಗಿಯೆಂಬುದನ್ನು ಯಾವ ಆಧಾರದಿಂದ ಶ್ರೀಮಾನ್ ಹಳಕಟ್ಟಿಯವರು ಹೇಳುವರೋ ನಮಗೆ ತಿಳಿಯದು. ಬೊಂತಾದೇವಿ ಮಾರಯ್ಯ ಇವರು ಬಸವಣ್ಣನವರ ಸಮಕಾಲೀನರು. ಕಾಶ್ಮೀರದರಸೊತ್ತಿಗೆಗೆ ಸಂಬಂಧಪಟ್ಟವರು. ಅಂತೆಯೇ ನಿಜದೇವಿ ಮಹಾದೇವ ಭೂಪಾಲನ ತಂಗಿಯಾಗಿದ್ದರಬಹುದೆಂದು ಶ್ರೀಮಾನ್ ಹಳಕಟ್ಟಿಯವರು ಒಂದು ಊಹೆ ಮಾಡಿದಂತೆ ತೋರುತ್ತದೆ. ಈ ಊಹೆ ಅಸಂಭವವೆಂದೂ ನಮ್ಮ ಅಭಿಪ್ರಾಯವಲ್ಲ. ಆದರೆ ಈ ಬಾಂಧವ್ಯವನ್ನು ವೀರಶೈವ ಗ್ರಂಥಕಾರರು ಹೇಳಲಿಲ್ಲವೇಕೆ ಎಂಬುದೇ ನಮ್ಮ ಪ್ರಶ್ನೆ.

ಮಾರಯ್ಯನವರ ಚರಿತೆಯ ದೃಷ್ಟಿಯಿಂದ ಚೋರ ಚಿಕ್ಕಯ್ಯನ ವಿಷಯ ಮಹತ್ವದ್ದಾಗಿದೆ. ಮೋಳಿಗೆಯ್ಯನ ಪುರಾಣ ಮೊದಲಾದ ಗ್ರಂಥಗಳು ತಿಳಿಸುವಂತೆ ಚೋರ ಚಿಕ್ಕಯ್ಯ ಬೇಡಪಡೆಯ ನಾಯಕ ಮಹಾದೇವ ಭೂಪಾಲನ ಆಶ್ರಯದಲ್ಲಿದ್ದವ. ಸಾಂಪ್ರದಾಯವು ಹೇಳುವಂತೆ ಈ ಚೋರ ಚಿಕ್ಕಯ್ಯ ಭೂಪಾಲನ ಅಪ್ಪಣೆಯಂತೆ ಬಸವಣ್ಣನನ್ನು ಕೊಲ್ಲ ಹೋಗಿ ಆತನಿಂದ ದೀಕ್ಷೆಪಡೆದು ನಿಜಲಿಂಗ ಚಿಕ್ಕಯ್ಯನಾಗಿದ್ದರೆ ಮಾರಯ್ಯನವರ ಚರಿತೆಯ ಮೇಲೆ ಹೆಚ್ಚಿನ ಬೆಳಕು ಬಿದ್ದಂತಾಗುತ್ತದೆ. ಅಂತು ಮಾರಯ್ಯನವರ ಪೂರ್ವಾಶ್ರಯ ಜೀವನದಲ್ಲಿ ನಿಕಟ ಸಂಬಂಧವಿದ್ದವರೆಂದರೆ ಪಟ್ಟದರಸಿ (೧) ಗಂಗಾದೇವಿ ಇಲ್ಲವೆ ಮಹಾದೇವಿ, (೨) ಮಗ ಲಿಂಗರತಿ ಇಲ್ಲವೆ ಲಿಂಗಾರತಿ, (೩) ಚೋರ ಚಿಕ್ಕಯ್ಯ.

ಮೋಳಿಗೆಯ ಮಾರಯ್ಯನವರ ಲಿಂಗದೀಕ್ಷೆ:— ಮಾರಯ್ಯನವರು ವೀರಶೈವ ದೀಕ್ಷೆಯನ್ನು ಪಡೆದುದು ಎಲ್ಲಿ, ಯಾರಿಂದ, ಯಾವಾಗ ಎಂಬುದು ಒಡೆಯಬಾರದ ಒಗಟೇ. ಕಾಶ್ಮೀರದಲ್ಲಿ ಅರಸನಾಗಿದ್ದಾಗ ಕೇತಕಿಯೆಂಬ ಗಂಧರ್ವನಿಂದ ಪ್ರಸಾದ ಮತ್ತು ಜಂಗಮ ಮಹಿಮೆಯನ್ನು ತಿಳಿದು ಮಹಾದೇವ ಭೂಪಾಲನು ಬಂಧು ಬಳಗ ಸಹಿತ ಲಿಂಗದೀಕ್ಷೆ ಪಡೆದನೆಂದು 'ಚೋರ ಬಸವ ಪುರಾಣ'ವು ತಿಳಿಸುತ್ತದೆ. ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ರಚಿತವಾದ ಈ ಪುರಾಣಕ್ಕಿಂತ ಪೂರ್ವದಲ್ಲಿ ಹುಟ್ಟಿದ ಯಾವ ಗ್ರಂಥಗಳೂ ಈ ಸಂಗತಿಯನ್ನು ಹೇಳಿಲ್ಲ. ಅಂತೆಯೇ ಈ ಸಂಗತಿ ಸತ್ಯ ಸಂಗತಿಯೆಂದು ಒಪ್ಪುವುದು ಕಷ್ಟ.

ಶ್ರೀಮಾನ್ ಹಳಕಟ್ಟಿಯವರು ತಿಳಿಸುವಂತೆ ಮಹಾದೇವ ಭೂಪಾಲನು ತಮ್ಮ ಗುರುವಿನ ಒಡಹುಟ್ಟಿದವರ ಅಪ್ಪಣೆಯಂತೆ ಕೈಕೂಲಿ ಮಾಡಿ ಕಬ್ಬಿಣದ ತುಂಡು ತಂದು ಅವರಿಗೆ ಅರ್ಪಿಸಿದನಂತೆ. ಈ ಐತಿಹ್ಯಕ್ಕೆ ಆಧಾರವಿದ್ದರೆ ಮಾರಯ್ಯನು ಮಹಾದೇವರಾಜನಾಗಿದ್ದಾಗ ಆತನಿಗೊಬ್ಬ ಗುರುವಿದ್ದ ಸಂಗತಿ ಸತ್ಯವೆಂದೆನಿಸುತ್ತದೆ. ಆದರೆ ಆ ಗುರುವಾರು ? ಆತನ ಹೆಸರೇನು ? ಆ ಗುರು ಭೂಪಾಲನಿಗೆ ವೀರಶೈವ ದೀಕ್ಷೆಯನ್ನೇ ಕೊಟ್ಟನೇ ? ಎಂಬೀ ವಿಷಯಗಳು ಮತ್ತೂ ಕತ್ತಲೆಯಲ್ಲಿಯೇ ಉಳಿಯುತ್ತವೆ.

ಇನ್ನು ಮಾರಯ್ಯನವರ ವಚನಗಳನ್ನೇ ಪರಿಶೀಲಿಸಬಹುದು:—

(೧) ಎನಗಿಷ್ಟವ ಕೊಟ್ಟ ಗುರು ಬಟ್ಟೆಯ ಹೇಳಿದುದಿಲ್ಲ...

ಮೋ. ಮಾ. ವ. ೬೦೬, ಪು. ೧೬೨

(೨) ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಮಂಡೆಯ ಕುರುಹನರಿಯೆ.
ಲಿಂಗಕ್ಕೆ ಬಡಿಸಬಲ್ಲಡೆ ಬಾಯ ನೆಪ್ಪ ಕಾಣೆ. ಇದಕ್ಕಿನ್ನೇವೆ ?
ಇನ್ನಾರಿಗೆ ಹೇಳುವೆ? ಕೊಟ್ಟ ಗುರು ದೃಷ್ಟವ ಹೇಳಿದುದಿಲ್ಲ.
ಕುರುಡರ ಹಿಡಿದು ಹಾಳಹಗೆಯದಲ್ಲಿ ಬೀಳುವ ತೆರನೆನಗಾಯಿತ್ತು
ನಿಃಕಳಂಕ ಮಲ್ಲಿಕಾರ್ಜುನ

ಮೋ. ಮಾ. ವ. ೬೧೫, ಪು. ೧೬೫

(೩) ಇಂತಲ್ಲದೆ ಭರದಲ್ಲಿ ತಿರುಗುವ ಸುಳುಹಿನ ಅರೆಬಿರುದಿನವರು
ಅಯ್ಯಗಳೇ ? ಎನ್ನ ಗುರು ಭವರೋಗವೈದ್ಯ, ಪರಶಿವ
ಮೂರ್ತಿ, ಪರಬ್ರಹ್ಮಗುರು ತಾನೆ ನಿಃಕಳಂಕ ಮಲ್ಲಿಕಾರ್ಜುನ.

ಮೋ. ಮಾ. ವ. ೬೧೬, ಪು. ೧೬೫

ಇಂತಹ ವಚನಗಳನ್ನು ವಿವರಿಸಿ ನೋಡಿದರೆ ಮಾರಯ್ಯನಿಗೆ ಗುರುವೊಬ್ಬ ನಿದ್ದ ಎಂಬ ಸಂಗತಿ ಸ್ಪಷ್ಟವಾಗುತ್ತದೆ. ಆತನ ಹೆಸರು 'ನಿಃಕಳಂಕ ಮಲ್ಲೇಶ್ವರ' ಇಲ್ಲವೆ 'ನಿಃಕಳಂಕ ಮಲ್ಲಿಕಾರ್ಜುನ' ಎಂದಿದ್ದಿರಬಹುದು. ಜಂಗಮರನ್ನು ಕಳೆದುಕೊಂಡು ಕಷ್ಟ ಕಾಲದಲ್ಲಿದ್ದ ಮಹಾದೇವರಾಜನ ಸ್ವಪ್ನದಲ್ಲಿ ವೈದೋರಿದ ಮೂರ್ತಿ 'ನಿಃಕಳಂಕ ಮಲ್ಲೇಶ್ವರ'ನೆಂದೂ ಈ ನಿಃಕಳಂಕ ಮಲ್ಲೇಶ್ವರನಲ್ಲಿಯೇ ಮಾರಯ್ಯನು ಐಕ್ಯವಾದನೆಂದೂ ಮೋಳಿಗೆಯ್ಯನ ಪುರಾಣವು ತಿಳಿಸುತ್ತದೆ. ಈ ಊಹೆಗೆ ಎಲ್ಲಕ್ಕಿಂತ ಪ್ರಬಲ ಪ್ರಮಾಣವೆಂದರೆ ಮಾರಯ್ಯನವರ ವಚನಗಳ ಅಂಕಿತ. ವಚನಕಾರರು ತಮ್ಮ ಗುರುವಿನ ಹೆಸರನ್ನೇ ತಮ್ಮ ವಚನಗಳಲ್ಲಿ ಅಂಕಿತವಾಗಿಟ್ಟುಕೊಂಡ ಉದಾಹರಣೆ ಸಾಕಷ್ಟಿರುವಾಗ ಮಾರಯ್ಯ ತನ್ನ ಗುರುವಿನ ಹೆಸರನ್ನೇ ತನ್ನ ವಚನಗಳಲ್ಲಿ ಅಂಕಿತವಾಗಿಟ್ಟುಕೊಂಡುದು ಐತಿಹಾಸಿಕ ಸತ್ಯವೆಂದೆನ್ನಲು ಬಾರದಿದ್ದರೂ ಬಹುಮಟ್ಟಿಗೆ ಸಂಭವನೀಯವಾಗಿ ತೋರುತ್ತದೆ.

ಸೊನ್ನಲಾಪುರದ ಸಿದ್ಧರಾಮಯ್ಯ ಮೊದಲಾದವರು ಕಲ್ಯಾಣಕ್ಕೆ ಬಂದು ಲಿಂಗದೀಕ್ಷೆ ಪಡೆದಂತೆ ಮಾರಯ್ಯನವರು ಕಲ್ಯಾಣಕ್ಕೆ ಬಂದಮೇಲೆಯೇ ದೀಕ್ಷೆಯಾಯಿತೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಶರಣರಿಂದ

ಕಾಯಕ ಪಡೆದ ಸಂಗತಿ ಮಾತ್ರ ಸತ್ಯ. ಆದ್ದರಿಂದ ಮಾರಯ್ಯನವರು ಕಾಶ್ಮೀರದಲ್ಲಿರುವಾಗಲೇ ದೀಕ್ಷೆ ಹೊಂದಿದ್ದರೆಂದು ಹೇಳಬಹುದು. ಒಡಿಸಾದಿಂದ ಸುಜ್ಞಾನಿದೇವರು ಕಲ್ಯಾಣಕ್ಕೆ ಬರುವಾಗ ಅವರ ಹಸುಬೆಯಲ್ಲಿ ಲಿಂಗಗಳಿದ್ದವೆಂದೂ ಅವರು ಮಾತಂಗ ತಮ್ಮನಿಗೆ ಲಿಂಗದೀಕ್ಷೆ ಕೊಟ್ಟರೆಂದೂ ಹೇಳುವ ವೀರಶೈವ ಗ್ರಂಥಗಳ ಮಾತು ಸತ್ಯವಾಗಿದ್ದರೆ ಈ 'ಲಿಂಗದೀಕ್ಷೆ'ಯು ಪದ್ಧತಿ ಕಾಶ್ಮೀರದವರೆಗೆ ಹೋಗಿತ್ತೆಂದು ಹೇಳಲು ಅಡ್ಡಿಯೇನು ? ಇದಲ್ಲದೆ ಶ್ರೀಮಾನ್ ಹಳಕಟ್ಟಿಯವರು ತಿಳಿಸುವಂತೆ ೧೧-೧೨ನೆಯ ಶತಮಾನಗಳಲ್ಲಿ ಕರ್ನಾಟಕಕ್ಕೂ ಕಾಶ್ಮೀರಕ್ಕೂ ಧಾರ್ಮಿಕ ಸಂಬಂಧ ಅತಿ ನಿಕಟವಾದ ಸಂಬಂಧ. ಅಲ್ಲಿಯ ಪಂಡಿತರು ಇಲ್ಲಿಗೆ ಬರುವುದು ಇಲ್ಲಿಯ ಲಿಂಗಜ್ಞಾನಿಗಳಾದ ಜಂಗಮರು ಅಲ್ಲಿಗೆ ಹೋಗುವುದು ಅಂದು ವಿಶೇಷವಾಗಿತ್ತು. ಲಿಂಗದ ಮರ್ಮವನ್ನು ಬಲ್ಲ ಇಂತಹ ಅಯ್ಯನವರೊಬ್ಬರು ಮಹಾದೇವ ರಾಜನಿಗೆ ಆತನ ಬಂಧು ಬಳಗದವರಿಗೆ ದೀಕ್ಷೆಯನ್ನೇ ಮಾಡಿರಬಹುದು. ಆದರೆ ಇದೆಲ್ಲ ಊಹೆ ಎಂಬ ಮಾತು ಮರೆಯತಕ್ಕದ್ದಲ್ಲ. ಸಾಕಷ್ಟು ಆಧಾರ ದೊರೆವವರೆಗೆ ಇದು ಊಹೆಯಾಗಿಯೇ ಉಳಿಯತಕ್ಕದ್ದು.

ಮೋಳಿಗೆಯ್ಯನ ಪುರಾಣವು ತಿಳಿಸುವಂತೆ ಮಹಾದೇವ ಭೂಪಾಲನಲ್ಲಿ ೧೨೦೦೦ ಇಲ್ಲವೆ ಇನ್ನುಳಿದ ಗ್ರಂಥಗಳು ಹೇಳುವಂತೆ ೬೦೦೦ ಜಂಗಮರಿದ್ದಿರಬಹುದೇ ? ಬಸವಣ್ಣನು ಅವರನ್ನು ಕದ್ದು ಕಲ್ಯಾಣಕ್ಕೆ ತಂದಿರಬಹುದೇ ? ಮೋಸಮಾಡಿದ ಬಸವಣ್ಣನನ್ನು ಘಾತಿಸಲು ಭೂಪಾಲನು ಚೋರ ಚಿಕ್ಕಯ್ಯನನ್ನು ಕಳಿಸಿರಬಹುದೇ ? ಈ ಚೋರ ಚಿಕ್ಕಯ್ಯನೇ ಬಸವಣ್ಣನವರ 'ನೋಟ ಪರುಷ'ದಿಂದ ನಿಜಲಿಂಗ ಚಿಕ್ಕಯ್ಯನಾಗಿರಬಹುದೇ? ಎಂಬೀ ಪ್ರಶ್ನೆಗಳು ಮಾರಯ್ಯನವರ ಚರಿತೆಯನ್ನು ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವ ನಮ್ಮ ಮುಂದೆ ಒಂದರ ಮೇಲೊಂದು ಬಂದು ನಿಲ್ಲುತ್ತವೆ. ಈ ಪ್ರಶ್ನೆಗಳನ್ನು ಬಿಡಿಸಲು ಮಾರಯ್ಯನವರ ಇಲ್ಲವೆ ಅವರ ಹೆಂಡತಿಯ ವಚನಗಳು ಹೆಚ್ಚಿನ ಸಹಾಯ ನೀಡುವಂತೆ ತೋರುವುದಿಲ್ಲ. ಆದರೂ ಬಾಹ್ಯ ಪ್ರಮಾಣಗಳನ್ನಿಟ್ಟುಕೊಂಡೇ ಈ ಪ್ರಶ್ನೆಗಳನ್ನು ಬಿಡಿಸಬಹುದು.

ಮಾರಯ್ಯನವರ ಪೂರ್ಣಜೀವನವನ್ನು ತಿಳಿಸುವ ಎಲ್ಲ ಗ್ರಂಥಗಳು ಮಹಾದೇವರಾಯನಲ್ಲಿ ಜಂಗಮರಿದ್ದರೆಂದು ತಿಳಿಸುತ್ತವೆ. ಇಷ್ಟೇ ಅಲ್ಲ,

ಅರಸು ತನ್ನ ಭಕ್ತಿಯ ಕಟ್ಟಳೆಯಲ್ಲಿ ಜಾಗ್ರಗಾವಲಿನಿಂದ ಅವರನ್ನು ಇಟ್ಟು ಕೊಂಡಿದ್ದನೆಂದೂ ಹೇಳುತ್ತವೆ 'ಜಂಗಮ' ಶಬ್ದವೇ ಹೇಳುವಂತೆ ಜಂಗಮರು ಶಿವಜ್ಞಾನಿಗಳಾಗಿ ಶಿವಲಾಂಛನ ಧರಿಸಿ ಲೋಕೋಪಕಾರಕ್ಕಾಗಿ ದೇಶ ದೇಶ ಸಂಚರಿಸುವವರು. ಈ ಮೊದಲೇ ತಿಳಿಸಿದಂತೆ ೧೧-೧೨ನೆಯ ಶತಮಾನಗಳಲ್ಲಿ ಕರ್ನಾಟಕದಿಂದ ಸುಜ್ಞಾನಿಗಳಾದ ಜಂಗಮರು ಕಾಶ್ಮೀರಕ್ಕೆ ಹೋಗಿ ಬರುತ್ತಿದ್ದರು.[೧] ಇವರನ್ನೇ ಮಹಾದೇವರಾಜನು ತನ್ನಲ್ಲಿಟ್ಟುಕೊಂಡಿರಬಹುದು.

ಈ ಜಂಗಮ ಮೂರ್ತಿಗಳನ್ನು ಬಸವಣ್ಣ ತನ್ನ ಹಸುಬೆಯಲ್ಲಿ ಕದ್ದು ಕಲ್ಯಾಣಕ್ಕೆ ತಂದನೆಂಬ 'ಪವಾಡ'ದಲ್ಲಿ ಹುರುಳಿದ್ದಂತೆ ತೋರುವುದಿಲ್ಲ. ಏಕೆಂದರೆ ಇಂತಹ ಜಡ 'ಪವಾಡ'ಕ್ಕಿಂತ ಹೆಚ್ಚಿನ ಅದ್ಭುತವನ್ನು ಸಾಧಿಸುವ ಶಕ್ತಿ ಬಸವಣ್ಣನ ಭಕ್ತಿಯಲ್ಲಿತ್ತು. ಆತನ ಭಕ್ತಿಯೆಂಬ ಹಸುಬೆ ಕಾಶ್ಮೀರದಿಂದಷ್ಟೇ ಅಲ್ಲ ಇನ್ನೂ ಅನೇಕ ದೇಶದೇಶಗಳಿಂದ ಶಿವಭಕ್ತರನ್ನು ಶಿವಶರಣರನ್ನು ಜಂಗಮಗಣಂಗಳನ್ನು ತಂಡ ತಂಡವಾಗಿ ತಾನೇ ತಂದಿದೆ. ಹರಿಹರನು ಹೇಳುವಂತೆ ಬಸವಣ್ಣನ ಜಗದ್ಭರಿತವಾದ ಕೀರ್ತಿಯನ್ನು ಕೇಳಿ, 'ಸಕಲ ದೇಶದ ಶರಣಾವಳಿ ಕರುಣದಿಂ ಹರಭಕ್ತಿಸರೋನಿಧಿ ತೆರೆಮಸಗಿ ಮೀರಿ ಬಪ್ಪಂತೆ'[೨] ಕಲ್ಯಾಣಕ್ಕೆ ಸಂದಣಿಸಿ ನಡೆತಂದುದು. ಇದೇ ಮಾತನ್ನು ಇನ್ನೂ ವಿವರವಾಗಿ ಹರಿಹರನು ಹೀಗೆ ಹೇಳುತ್ತಾನೆ:—

ಈ ಬಂದುದಿದೆ ಚೋಳದೇಶದ ಮಹಾಗಣಂ
ಆ ಬಂದುದೇ ಪಾಂಡ್ಯ ಕೇರಳದಿಶಾಗಣಂ
. . . . . . . . . . .
ಇತ್ತಲಿದೆ ಸಿಂಗಣದ್ವೀಪದ ಗಣವ್ರಾತ
ಇತ್ತಲಿದೆ ಕಾಶ್ಮೀರದೇಶದ ಶರಣಜಾತ.[೩]

ಬಸವ ಪುರಾಣ ಕರ್ತೃ ಭೀಮಕವಿಯೂ ಲಾಳ ಮಾಳವ ಸಿಂಧು ಸಿಂಗಣ ಕಾಶ್ಮೀರ ಮೊದಲಾದ ದೇಶ ದೇಶಗಳಿಂದ ಶರಣಸಂತತಿ ಸಡಗರಿಸುತ್ತ ಕಲ್ಯಾಣಕ್ಕೆ ಬಂದ ಸಂಗತಿಯನ್ನು ವಿಸ್ತಾರವಾಗಿ ತಿಳಿಸುತ್ತಾನೆ.* ಆದ್ದರಿಂದ

---

೧ ಜಂಗಮರು ಕೇವಲ ಕರ್ನಾಟಕದ ಸೊತ್ತೆಂದು ಹೇಳುವುದು ಸಂಪೂರ್ಣ ಸತ್ಯವೆಂದು ತೋರುವದಿಲ್ಲ.

೨ ಬ. ರಾ. ದೇ. ಶ. ೬ ನೆಯ ಸ್ಥಲ

೩ ಬ. ರಾ. ದೇ. ಶ. ೯ ನೆಯ ಸ್ಥಲ

* ಬ. ಪು. ಸಂ. ೬೨, ಪ. ೧೮-೧೯

'ಭಕ್ತಜನಭಾಗ್ಯ' 'ಶರಣಸುಖಾಕಾರ' 'ಜಂಗಮಪ್ರಾಣಿ'ಯಾದ ಬಸವಣ್ಣನ ಅಪ್ರತಿಮ ಭಕ್ತಿಯ ಅದ್ವಿತೀಯ ಶಕ್ತಿಯಿಂದ ಆಕರ್ಷಿತರಾಗಿ ಭಕ್ತ ಜಂಗಮ ಗಣಂಗಳು ಎಲ್ಲ ಕಡೆಯಿಂದ ಕಲ್ಯಾಣಕ್ಕೆ ಬಂದಂತೆ ಮಹಾದೇವ ಭೂಪಾಲನ 'ಅಂಕಿತ'ದಲ್ಲಿದ್ದ ಜಂಗಮರು ಕಲ್ಯಾಣಕ್ಕೆ ಬಂದುದು ಸರ್ವಸಂಭವನೀಯವಾಗಿ ತೋರುತ್ತದೆ. ಕಾಶ್ಮೀರದಿಂದ ಜಂಗಮರು ಓಡಿ ಬಂದುದಕ್ಕೆ ಕುರುಹಾಗಿ 'ಬಂದ್ರೋಡಿ' ಎಂಬ ಊರೊಂದು ಕಲ್ಯಾಣದ ಹತ್ತಿರ ಇದೆಯೆಂದು ಹೇಳುತ್ತಾರೆ. ಜಂಗಮರು ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದ ಸಂಗತಿಯನ್ನು ಈ 'ಕುರುಹು' ಮತ್ತಿಷ್ಟು ಬಲಪಡಿಸುತ್ತದೆ. ಆದರೆ ಈ ಕುರುಹನ್ನು ಐತಿಹಾಸಿಕವೆಂದು ಮನ್ನಿಸಬಹುದೇ ಎಂಬುದೊಂದು ಪ್ರಶ್ನೆಯೇ.

ಜಂಗಮರು ತನ್ನಿಂದ ತಪ್ಪಿಸಿಕೊಂಡು ಬಂದ ಮೇಲೆ ಮಹಾದೇವ ಭೂಪಾಲನು ಬಸವಣ್ಣನವರನ್ನು ಕೊಲ್ಲಲು ಚೋರ ಚಿಕ್ಕಯ್ಯನನ್ನು ಕಳುಹಿರಬಹುದೇ ? ಎಂಬ ಪ್ರಶ್ನೆಗೆ ಸಮರ್ಪಕವಾದ ಉತ್ತರ ದೊರೆವಂತಿಲ್ಲ. ಚೋರ ಚಿಕ್ಕಯ್ಯನ ಚರಿತೆ 'ಇತಿಹಾಸ'ವೆಂದು ಕರೆವುದಾದರೆ ಮೇಗಣ ಸಂಗತಿಯನ್ನು ನಂಬಬೇಕಾಗುತ್ತದೆ. ಇಂತಹ ವಿಷಮ ವಿಷಯವನ್ನು ತಿಳಿಸಲೊಲ್ಲದೆ ಪಾಲ್ಕುರಿಕಿ ಸೋಮಾರಾಧ್ಯರು ಈ ತಮ್ಮ ಬಸವ ಪುರಾಣದಲ್ಲಿ ಮಾರಯ್ಯನವರ ಪೂರ್ವಾಶ್ರಯಜೀವನವನ್ನೇ ಎತ್ತಿಕೊಳ್ಳಲಿಲ್ಲವೇನೋ! ಮತ್ತು

೧. ಬಂದೆ ನಾ ಬಸವಣ್ಣನ ಕಥನದಿಂದಗಿ

೨. ಅಂದು ಬಂದ ಕಥನಂ

ಎಂಬೀತೆರನಾದ ಹೇಳಿಕೆಯಲ್ಲಿ ಬರುವ 'ಕಥನ' ಶಬ್ದದಲ್ಲಿ ಯಾವ ರಹಸ್ಯಾರ್ಥವಿದೆಯೇನೋ! ಬಸವಣ್ಣನವರನ್ನು ಘಾತಿಸಲು ಬೇಡನಾಯಕನನ್ನು ಕಳುಹಿ ಅವರ ಘನ ಮಹಿಮೆಯನ್ನು ತಿಳಿದು ವೈರಾಗ್ಯತಾಳಿ ಕಲ್ಯಾಣಕ್ಕೆ ಬಂದ ಕಥೆಯೆಲ್ಲ ಆ 'ಕಥನ' ವೆಂಬ ಒಂದು ಶಬ್ದದಲ್ಲಿ ಹುದುಗಿದೆಯೇನೋ !

---

೧ ವೋ. ಮಾ. ವ. ೨೪೯, ಪು. ೬೦

೨ ವೋ. ಮಾ. ವ. ೬೧, ಪು. ೨೮೫

ಇನ್ನು ಚೋರ ಚಿಕ್ಕಯ್ಯ ಕಪಟ ಜಂಗಮ ವೇಷ ತಾಳಿ ಬಸವಣ್ಣನನ್ನು ಹತಿಸಲು ಬಂದಿದ್ದರೆ ಆತ ಧರಿಸಿದ ಕರಿ ಬದನೆಕಾಯಿ ಔಡಲಕಾಯಿ ಸರ ಬಸವಣ್ಣನ ಪರುಷ ದೃಷ್ಟಿಯಿಂದ ಲಿಂಗರುದ್ರಾಕ್ಷಿಗಳಾದುದನ್ನು 'ಪವಾಡ'ವೆಂದು ಮೂಲೆಗಿಟ್ಟರೂ 'ಚಿದ್‌ಘನ ಪ್ರಭಾವುಯ' 'ಭಕ್ತಿ ಭಾಂಡಾರಿ'ಯಾದ ಬಸವಣ್ಣನವರ ಪರಮ ಮೂರ್ತಿಯನ್ನು ಕಂಡೊಡನೆ ಚೋರ ಚಿಕ್ಕಯ್ಯನ ಜೀವನದಲ್ಲಿ ದಿವ್ಯಕ್ರಾಂತಿಯಾಗಿ ಬಸವಣ್ಣನವರಿಗೆ ಶರಣಾಗತನಾಗಿ ಅವರಿಂದ ವೀರಶೈವದೀಕ್ಷೆ ಪಡೆದು ನಿಜಲಿಂಗ ಚಿಕ್ಕಯ್ಯನಾದುದು 'ಅಪರೂಪ' ಸಂದರ್ಭವಲ್ಲ. ಪರುಷ ಸೋಂಕಿ ಕಬ್ಬುಣ ಹೊನ್ನಾದಂತೆ ಬಸವಣ್ಣನೆಂಬ ಲಿಂಗಜ್ಯೋತಿ ಸೋಂಕಿ ಅನೇಕ 'ಅಂಗಜೀವಿ'ಗಳು 'ಲಿಂಗಜೀವಿ'ಗಳಾದ ಅಘಟಿತ ಘಟನೆಗಳು ಬಸವಣ್ಣನವರ ಜೀವನದಲ್ಲಿ ಹಲವಾರು.

ಸವಾಲಕ್ಷ ದೇಶದರಸು ಮಹಾದೇವ ಭೂಪಾಲ ತನ್ನಲ್ಲಿದ್ದ ಜಂಗಮರು ಕಲ್ಯಾಣಕ್ಕೆ ಹೋದ ಮೇಲೆ ಕಲ್ಯಾಣದ ಭಕ್ತಿ ಭಾಂಡಾರಿ ಬಸವಣ್ಣನವರ ಘನಮಹಿಮೆಯನ್ನು ಮನವಾರೆ ಕೇಳಿ ಸದ್‌ಭಕ್ತಿಯುಂಕುರಿಸಿ ಸುಜ್ಞಾನೋದಯವಾಗಿ ವಿಷಯವ್ಯಾಮೋಹದ ಪಟಲ ಹರಿದು ಪರಮ ವೈರಾಗ್ಯ ತಾಳಿ ಮಗ ಲಿಂಗರತಿಗೆ ಪಟ್ಟ ಕಟ್ಟಿ ಹೆಂಡತಿ ಗಂಗಾದೇವಿಯೊಡನೆ ಕಲ್ಯಾಣಕ್ಕೆ ಬಂದನೆಂದು ಮಾರಯ್ಯನವರ ಸಂಪೂರ್ಣಜೀವನ ಚರಿತೆಯನ್ನು ಹೇಳುವ ಎಲ್ಲ ಗ್ರಂಥಗಳು ತಿಳಿಸುತ್ತವೆ. ಜಂಗಮರನ್ನು ಕಳೆದುಕೊಂಡುದೇ ಮಾರಯ್ಯನವರ ರಾಜ್ಯತ್ಯಾಗಕ್ಕೆ ಕಾರಣವೆಂದು ಮೋಳಿಗೆಯ್ಯನ ಪುರಾಣ, ಶಿವಶರಣ ಲೀಲಾಮೃತ ಮೊದಲಾದ ಗ್ರಂಥಗಳು ಸ್ಪಷ್ಟ ಹೇಳುತ್ತಿವೆ. ಹೀಗಿದ್ದರೂ ಶ್ರೀಮಾನ್ ಹಳಕಟ್ಟಿಯವರು 'ರಾಜನು ತಾನು ಕೂಲಿಯಾಗಿ ಕೊಟ್ಟ ಕಬ್ಬಿಣದ ತುಂಡು ಹೀಗೆ ಚಿನ್ನವಾದುದನ್ನು ಕೇಳಿ ಅವರಲ್ಲಿ ವಿರಕ್ತಿಯುಂಟಾಯಿತು'[೧] ಎಂದು ಹೇಳುತ್ತಾರೆ. ತನ್ನ ಗುರಗಳ ಒಡಹುಟ್ಟಿದವರು ಬೊಕ್ಕಸದ ಹಣವನ್ನು ಕಾಣಿಕೆಯಾಗಿ ಕೊಳ್ಳದೆ ದುಡಿದು ತಂದ ಕಾಯಕದ ಲಬ್ಧಿಯನ್ನು ಬೇಡಲು ಅರಸು ವೇಷ ಮರೆಸಿಕೊಂಡು ಕುಲಿಮೆಯಲ್ಲಿ ಕಬ್ಬಿಣ ಬಡಿದು ಒಂದು ಕಬ್ಬಿಣ ಗಟ್ಟಿ

೧ ಶಿ. ಶ. ಚ., ಭಾ. ೨, ಪು. ೨೨೬

ಯನ್ನು ಕೂಲಿ ಇಸಿದುಕೊಂಡು ಅವರಿಗೆ ಅರ್ಪಿಸಲು ಅದು ಚಿನ್ನದ ಗಟ್ಟಿಯಾಯಿತು. ಈ ಘಟನೆಯೇ ಭೂಪಾಲನ ವೈರಾಗ್ಯಕ್ಕೆ ಕಾರಣವಾಯಿತೆಂದು ಶ್ರೀಮಾನ್ ಹಳಕಟ್ಟಿಯವರ ಹೇಳಿಕೆಗೆ ಆಧಾರವೇನೋ ತಿಳಿಯದು. ಘಟನೆ ಯಾವುದೇ ಇರಲಿ ಮಹಾದೇವ ಭೂಪಾಲ ವೈರಾಗ್ಯ ತಾಳಿ ಮಗ 'ಲಿಂಗರತಿ'ಗೆ ಅರಸೊತ್ತಿಗೆ ಒಪ್ಪಿಸಿ ಹೆಂಡತಿಯೊಡನೆ ಕಲ್ಯಾಣಕ್ಕೆ ಬಂದ ಸಂಗತಿ ಐತಿಹಾಸಿಕ ಸತ್ಯವೆಂದೇ ಹೇಳಬೇಕು. ಈ ಸಂದರ್ಭದಲ್ಲಿ ಕೆಂಭಾವಿಯ ಚಂದಿಮರಸ, ಕಲ್ಲುಕುರಿಕೆಯ ಶಿವಯೋಗಿ ಮಲ್ಲರಸ, ಸಕಳೇಶ ಮಾದರಸ ಮೊದಲಾದವರು ಶಿವಾನುಭವಕ್ಕಾಗಿ ತಂತಮ್ಮ ರಾಜ್ಯತ್ಯಾಗ ಮಾಡಿದ ಉದಾಹರಣೆ ತಾವೇ ಮುಂದೆ ಬಂದು ನಿಲ್ಲುತ್ತವೆ.

ಮಹಾದೇವರಾಜನು ಗಂಗಾದೇವಿಯೊಡನೆ ಕಲ್ಯಾಣಕ್ಕೆ ಬಂದ ಮೇಲೆ ಬಸವಾದಿ ಪ್ರಮಥರ ದರ್ಶನ ಪಡೆದು ಅವರಪ್ಪಣೆಯಂತೆ ಭಕ್ತರ ಮನೆಗೆ ಕಟ್ಟಿಗೆ ಹೊತ್ತು ಬಂದ ದ್ರವ್ಯದಿಂದ ಜಂಗಮದಾಸೋಹ ಮಾಡುವ ಕಟ್ಟಿಗೆಯ ಕಾಯಕವ ಕೈಕೊಂಡುದು ಸತ್ಯಸಂಗತಿಯೆಂದೇ ಹೇಳಬೇಕು. ಮೋಳಿಗೆ ಎಂದರೆ 'ಕಟ್ಟಿಗೆಯ ಹೊರೆ'ಯ ಕಾಯಕವ ಮಾಡುತ್ತಿದ್ದುದರಿಂದಲೇ ಇವರಿಗೆ ಮೋಳಿಗೆಯ ಮಾರಯ್ಯ, ಮೋಳಿಗೆ ಮಾರಯ್ಯ, ಮೋಳಿಗೆಯ್ಯ ಎಂಬ ಹೆಸರು ಬಂದಿವೆ.[೧] ಇವರು ಮೋಳಿಗೆಯ ಕಾಯಕ ಮಾಡಿಕೊಂಡಿದ್ದ ವಿಷಯದಲ್ಲಿ ಇವರ ಜೀವನ ಚರಿತೆಯನ್ನು ತಿಳಿಸುವ ಎಲ್ಲ ಗ್ರಂಥಗಳ ಅಭಿಪ್ರಾಯ ಒಂದೇ. ಮಾರಯ್ಯ ಮಹಾದೇವಿಯಮ್ಮನವರ ಹಲವಾರು ವಚನಗಳು ಮಾರಯ್ಯನವರು ಕಟ್ಟಿಗೆಯ ಕಾಯಕ ಮಾಡಿಕೊಂಡಿದ್ದ ವಿಷಯವನ್ನು ತಿಳಿಸುತ್ತವೆ:—

೧. ನಿಮ್ಮ ಕಾಷ್ಟದ ಸೇವೆಯವನಯ್ಯಾ.

ಮೋ. ಮಾ. ವ. ೪೧೬, ಪು. ೧೦೫

೨. ಮರ್ತ್ಯದ ಮಹಗಣಂಗಳ ಕಟ್ಟಿಗೆಯ
ಹೊತ್ತು ಸತ್ತವರಿಗೆನ್ನೆತ್ತಣ ಮುಕ್ತಿಯೋ
ಷಿಕಳಂಕ ಮಲ್ಲಿಕಾರ್ಜುನಾ ?

ಮೋ. ಮಾ. ವ. ೪೭೯, ಪು. ೧೩೪

---

೧ ಶಿವಶರಣ ವಿಲಾಸ ಇವರ ಹೆಸರು ಕಟ್ಟಿಗೆ ಮಾರೈಯ್ಯನೆಂಬು ಹೇಳುತ್ತದೆ. ಶಿ. ವಿ. ಸಂ. ೯೩

ಎಂಬಿವೇ ಮೊದಲಾದ ಮಾರಯ್ಯನವರ ವಚನ ಪ್ರಮಾಣವಿರಲು ಅವರ ಕಾಯಕದ ವಿಷಯದಲ್ಲಿ ಸಂಶಯಕ್ಕೆ ಆಸ್ಪದವೆಲ್ಲಿ ?

ಮಾರಯ್ಯನವರು ಶಿವಗಣಂಗಳ ಮನೆಗೆ ಕಟ್ಟಿಗೆ ಹಾಕಿ ಬಂದ ಪಡಿಪದಾರ್ಥದಿಂದ ಜಂಗಮದಾಸೋಹ ಮಾಡಿಕೊಂಡು ಹೋಗುತ್ತಿರುವಾಗ ಪ್ರಚ್ಛನ್ನವೇಷದಲ್ಲಿ ಬಸವಣ್ಣ ಅವರ ಮನೆಗೆ ಬಂದು ಲಿಂಗಾವಸರ ಮಾಡಿಕೊಂಡು ಮಜ್ಜನಸಾಲೆಯೊತ್ತಿನಲ್ಲಿ ಹೊನ್ನಿನ ಜಾಳಿಗೆಗಳನಿಟ್ಟು ಹೋದ ಸಂಗತಿಯನ್ನು ಎಲ್ಲ ಗ್ರಂಥಗಳು[೧] ಹೇಳುತ್ತವೆ:—

> ೧. ಬಡವನೆಂದು ನಿಮ್ಮವರು ನಿದಾನವನೀವರಯ್ಯಾ.
> ನಾ ಬಡವನಾದಡೆ ನೀ ಬಡವನೇ ಎನ್ನ ನಿಕಳಂಕ
> ಮಲ್ಲಿಕಾರ್ಜುನಾ.
>
> ಮೋ. ಮಾ. ವ. ೧೮೫, ಪು. ೪೫
>
> ೨. ಇಂತಪ್ಪ ಮಹಾಪ್ರಣಮಂಗಳೇ ಬಸವಣ್ಣನಾಗಿ
> ಆ ಬಸವಣ್ಣನೆ ಮಹಾಪ್ರಣಮಂಗಳಾಗಿ ತನ್ನ ಮಠಕ್ಕೆ
> ತಾನೆ ಬಂದು ಭಕ್ತಿವಸ್ತುವನಿತ್ತಡೆ ಇವ ನಾನು
> ನಿಃಕಳಂಕ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯಾ.
>
> ಮೋ. ಮಾ. ವ. ೮೦, ಪು. ೨೦

ಎಂಬಿವೇ ಮುಂತಾದ ಮಾರಯ್ಯನವರ ವಚನಗಳು ಬಸವಣ್ಣ ಮಾರಯ್ಯನವರ ಮಠಕ್ಕೆ ಬಂದು ಬಡವರೆಂಬ ಕನಿಕರದಿಂದ ಹೊಂಜಾಳಿಗೆಯ ನಿರಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೇಳುತ್ತಿವೆ.

ಮಾರಯ್ಯನವರು ಮನೆಗೆ ಬಂದು ಸ್ನಾನಮಾಡಿ ಲಿಂಗಾರ್ಚನೆ ಮಾಡಿಕೊಳ್ಳುವಾಗ ಮಜ್ಜನಸಾಲೆಯೊತ್ತಿನಲ್ಲಿರುವ ಹೊಂಜಾಳಿಗೆಗಳನ್ನು ನೋಡಿ ಬಸವಣ್ಣನ ಮಾಟವಿದೆಂದರಿದು ಜಾಳಿಗೆಗಳನ್ನು ಜಂಗಮರಿಗೆ ಕೊಟ್ಟು ಬಸವಣ್ಣನರಮನೆಯ ಜಂಗಮಕ್ಕೆ ಬಿನ್ನಹ ಮಾಡಿ ಬಿಜಯಂಗೈಸಿಕೊಂಡು ಬಂದು ತನ್ನ ಮನೆಯಲ್ಲಿ ಅವರಿಗೆಲ್ಲ ಆರೋಗಣೆ ಮಾಡಿಸಿ ಅವರ

---

೧ ಶಿವಶರಣ ವಿಲಾಸದಲ್ಲಿ ಬಸವಣ್ಣ ಮಾರಯ್ಯನ ಮನೆಗೆ ಬಂದು ಹೊಂಜಾಳಿಗೆಯನಿರಿಸಿ ಹೋದ ಸಂದರ್ಭವೇ ಇಲ್ಲ.

ಪಾದೋದಕವನ್ನು ತಾ ತಂದ ಕಟ್ಟಿಗೆ ಹೊರೆಯ ಮೇಲೆ ಸಿಂಪಡಿಸಿ ಕಟ್ಟಿಗೆ ಯನ್ನೆಲ್ಲ ಕನಕ ಮಾಡಿ ಜಂಗಮಗಣಕ್ಕೆಲ್ಲ ಚಿನ್ನದ ದಂಡಗಳನ್ನು ಕೊಟ್ಟ ಸಂಗತಿ ಎಲ್ಲ ಗ್ರಂಥಗಳು ಹೇಳುತ್ತವೆ. ಮಾರಯ್ಯನವರ ಜೀವನದಲ್ಲಿ ಇದೊಂದು ಅತ್ಯದ್ಭುತ ಸಂಗತಿಯೆಂದೂ ಅಘಟಿತ ಘಟನೆಯೆಂದೂ ತೆಲುಗು ಬಸವಪುರಾಣ ಮೊದಲಾದ ಎಲ್ಲ ಗ್ರಂಥಗಳು ಮಾರಯ್ಯನವರ ಈ ಅಮಾನುಷ ಕೃತಿಯನ್ನು ಕೊಂಡಾಡಿವೆ. ಕಟ್ಟಿಗೆ ಕನಕವಾದ 'ಪವಾಡ' ಸತ್ಯ ಸಂಗತಿಯೆಂದು ಇತಿಹಾಸ ಮನ್ನಿಸಬಹುದೇ? ಮಾರಯ್ಯ ತನ್ನ ಹುಲ್ಲು ಗುಡಿಸಲಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಸಂಖ್ಯೆಯ ಗಣಂಗಳನ್ನು ಉಣಿಸಿ ತಣಿಸಿರಬಹುದೇ? ಇದು ಸತ್ಯವೇ? ಇಲ್ಲವೇ ಅಂಥ ಪರಂಪರೆಯ ಬರಡು ನಂಬುಗೆಯೆ? ಮತ್ತು

೧ ಹುತ್ತದಲ್ಲಿ ಕೈಯನಿಕ್ಕಿ ಸರ್ಪನ ತೆಗೆವಾಗ, ಸರ್ಪನ
ಒಪ್ಪತಪ್ಪಿ ಮತ್ತೆ ವಸ್ತುವಿನ ನೇವಳ ಅಭರಣವಾ
ಹಲ್ಲಿ ಅದಾರ ದೃಷ್ಟ? ಮತ್ತೆ ನಿರ್ಧನಿಕ ವಿಶ್ವಾಸದಿಂದ
ಬಸವಣ್ಣ ಮುಂತಾದ ಲಕ್ಷದ ಮೇಲೆ ತೊಂಬತ್ತಾರು
ಸಾವಿರ ಜಂಗಮಕ್ಕೆ ಕೃತ್ಯ ತಪ್ಪದೆ ಇಕ್ಕುವಾಗ
ಅದಾಗ ವಿಶ್ವಾಸ ಹೇಳಾ? ನಾ ಹೊತ್ತ ಕಟ್ಟಿಗೆಯ
ಸರಬು ಮತ್ತೆ ಸುವರ್ಣದಂಡವಾಹಾಗ ಅದಾರ
ನಿಶ್ಚಯದ ವಿಶ್ವಾಸ? ಅವು ತಮ್ಮ ಚಿತ್ತದ ದೃಢತೆಯಿಂದ...

ಮೋ. ಮಾ. ವ. ೨೪೨, ಪು. ೫೮

೨ ಎನ್ನ ಕಾಯಕದ ಕಾಷ್ಠ ಚಿನ್ನವಾದಲ್ಲಿ, ಮತ್ತಾವಾವ
ಗುಣ ಅವಗುಣ ಹಿಂಗಿ ಲೇಸಾದಲ್ಲಿ ಅದು ತನ್ನಯ ವಿಶ್ವಾಸದಿಂದ...

ಮೋ. ಮಾ. ವ. ೫೭೫, ಪು. ೧೫೩

೩ ಕಾಷ್ಠದ ಸುವರ್ಣವ ಮಾಡಿದೆನೆಂಬ ಘಾತುಕತನವೇ ನಿಮ್ಮ ಭಕ್ತಿ....

ಮ. ವ. ೨೩, ಪು. ೨೭೫

ಹೀಗೆ ಮಾರಯ್ಯ ಅವರ ರಾಣಿ ಮಹಾದೇವಿಯ ವಚನ ಪ್ರತ್ಯಕ್ಷ ನುಡಿಯುತ್ತಿರಲು ಜಂಗಮಕೋಟಿಯ ತೃಪ್ತಿ ಕನಕದಂಡಗಳನ್ನು ಪೊಳ್ಳು ಪವಾಡಗಳೆಂದು ಹೇಳುವುದೆಂತು? ಇದಲ್ಲದೆ ಬಸವಣ್ಣ ಮೊದಲಾದ ಅನೇಕ ಶಿವಶರಣರು ತಾವು ರಚಿಸಿದ ಪವಾಡಗಳನ್ನು ಹೇಳಿಕೊಂಡಿಲ್ಲವೇ? ಅವರ ನುಡಿ ಹುಸಿಯೆ? ಇಲ್ಲವೇ 'ಪವಾಡ'ದ ವಚನಗಳೆಲ್ಲ ಪ್ರಕ್ಷಿಪ್ತ ವಚನ

ಗಳೆಂದೆನ್ನಬಹುದೇ? ಅಂಥ ಭಕ್ತರು ಶರಣರ ಮೇಲೆ ಪವಾಡದ ಹೊರೆ ಹೇರಿ ಮಹಾಶರಣರೆಂದು ಕರೆದು ಹುಚ್ಚು ತಲೆಗೇರಿ ಕುಣಿದಾಡಿದರೆ ಅಂಥ ಸಮಾಜದಲ್ಲಿ ಹುಟ್ಟಿಬೆಳೆದ 'ಕಣ್ಣು ಕಾಣದ ಗಾವಿಲ' ಕಬ್ಬಿಗರು ಪವಾಡವೇ ಶರಣತತ್ವದ ತಲೆಮಣಿಯೆಂದು ದಣಿಯದೆ ಬಣ್ಣಿಸಿ ಹುಚ್ಚರಂತೆ ಹಾಡಿರಬಹುದೇ? ಅಂತೂ ಪವಾಡದ ಮಾಟ ದಿಟವೇ ಇಲ್ಲವೇ ಸಟೆಯೋ ಎಂಬ ಪ್ರಶ್ನೆಗೆ ಉತ್ತರ ದೊರೆತರೆ ಮಾರಯ್ಯನವರ ಸರ್ಪ ನೇವಳವಾದ ಪವಾಡ, ಕಟ್ಟಿಗೆ ಕನಕವಾದ ಪವಾಡ ಮೊದಲಾದುವು ಐತಿಹಾಸಿಕ ಸತ್ಯ ಇಲ್ಲವೆ ಅಸತ್ಯವೆಂದು ನಿರ್ಧರವಾಗಿ ಹೇಳಬಹುದು. ಅಲ್ಲಿಯವರೆಗೆ ಪವಾಡಗಳ ವಿಷಯ.ದಲ್ಲಿ ಮೌನವೇ ಉತ್ತರವೆಂದಿರಬಹುದು. ೧

ಮಾರಯ್ಯನವರು ಶರಣರ ಸಂಗಮಾಡಿ ತಮ್ಮ ಅನುಭಾವವನ್ನು ಬೆಳಗಿಕೊಳ್ಳುತ್ತಿದ್ದರೆಂಬುದು ಅವರ ಅನೇಕ ವಚನಗಳಿಂದ ತಿಳಿಯುತ್ತದೆ. ಅವರು ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮಡಿವಾಳ ಮಾಚಯ್ಯ ಘಟ್ಟಿವಾಳಯ್ಯ ಮೊದಲಾದ ಶಿವಜ್ಞಾನಿಗಳ ಒಡನಾಟದಲ್ಲಿದ್ದು ತಮ್ಮ ಹಲವಾರು ಸಂದೇಹಗಳನ್ನು ಪರಿಹರಿಸಿಕೊಂಡು ಮನದ ಮಾಲಿನ್ಯವನ್ನು ಕಳೆದುಕೊಂಡು ದಿವ್ಯಪಥದಲ್ಲಿ ಮುಂದೆ ಮುಂದೆ ಸಾಗುತ್ತಿದ್ದರೆಂಬುದಕ್ಕೆ ಅವರ ವಚನಗಳೇ ಸಾಕ್ಷಿ:—

೧ ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣ !
ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ !
ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯ ಬಸವಣ್ಣ !
ಎನ್ನ ಮನಕ್ಕೆ ಯಕಾರವಾಗಿ ಬಂದೆಯಯ್ಯ ಬಸವಣ್ಣ !
ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣ !
. . . . . . . . . . . . .

ಮೋ. ಮಾ. ವ. ೮೦, ಪು. ೨೦

ಎನ್ನರಿವು ಮರವು ಬಸವಂಗರ್ಪಿತ ಎನ್ನ ಆಚಾರ ವಿಚಾರ
ಬಸವಂಗರ್ಪಿತ.... ಇಂತು ಬಸವಣ್ಣಂಗೆ ಎನ್ನ ನಿವೇದಿಸಿ

---

೧ ತಮ್ಮ ಗುಡಿಸಲ ಸುತ್ತು ಅಗುಳಿಸಿ ಬಂಗಾರ ತರತರವಾಗಿ ಏಳುವುದು, ನವರತ್ನ ಕನಕ ರಚಿಸುವುದು, ಗುಡಿಸಲನ್ನು ರತ್ನಮಯವಾಗಿ ಮಾಡುವುದು ಎಂಬಿವೇ ಮುಂತಾದ ಪವಾಡಗಳನ್ನು ಮಾರಯ್ಯನವರು ರಚಿಸಿದರೆಂದು ಚೋರಬಸವರಾಪುಣ ಮೋಳಿಗೆಯ್ಯನ ಪುರಾಣ ಮೊದಲಾದ ಗ್ರಂಥಗಳು ತಿಳಿಸುತ್ತವೆ.

ದೆನಾಗಿ ಉಭಯುವೆಂಬುದು ಇಲ್ಲವಾದೆ, ನಿರಾಲಂಬವಸ್ತಿ
ನಿಜನಿವಾಸಿಯಾಗಿರ್ದೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ

ಮೋ. ಮಾ. ವ. ೪೫, ಪು. ೧೧೪

೩ ನೆನಹಿನ ನಿಧಿಯು ನೋಡಾ! ಎನ್ನ ಅರಿವಿನ ಘನವ ನೋಡಾ!
ಅಹಾ ಎನ್ನ ಪುಣ್ಯವೆ! ಅಹಾ ಎನ್ನ ಭಾಗ್ಯವೆ! ಅಹಾ ಎನ್ನ
ಕಂಗಳ ಮನೆಯು ಮಾಡಿಕೊಂಡಿಪ್ಪ ನಿತ್ಯದ ಬೆಳಗೆ!
ಎನ್ನ ಧ್ಯಾನದೊಳಗಣ ದೃಢವೆ! ಎನ್ನ ಸುಖದೊಳಗಣ
ಸುಗ್ಗಿಯೆ! ನಿಃಕಳಂಕ ಮಲ್ಲಿಕಾರ್ಜುನ ನಿಮ್ಮ ಶರಣ
ಪ್ರಭುವಿನ ಶ್ರೀಪಾದಕ್ಕೆನಮೋ ನಮೋ ಎನುತಿರ್ದೆನು.

ಮೋ. ಮಾ. ವ. ೨೫೨, ಪು. ೬೧

೪ ಇಂತೀ ಆರುಸ್ಥಲವನರಿದು, ಮತ್ತಿದರೊಳಗಾದ
ನಾನಾಸ್ಥಲಂಗಳ ತಿಳಿದು ನಿಂದ ಬಸವಣ್ಣಂಗೆ ಚೆನ್ನ
ಬಸವಣ್ಣಂಗೆ ಪ್ರಭು ಮಡಿವಾಳಯ್ಯಂಗೆ ನಮೋ
ನಮೋ ಎನ್ನುತ್ತಿದ್ದೆ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೪೯೩, ಪು. ೧೨೭

೫ ತನು ನಿರ್ವಾಣವೋ? ಮನ ನಿರ್ವಾಣವೋ? ಭಾವ
ನಿರ್ವಾಣವೋ?... ಲೆಕ್ಕವಿಲ್ಲದ ಆಶೆ ಮನದೊಳಗೆ
ಹೊಕ್ಕು ತಿರುಗಾಡುತಿಹ ಚಿಕ್ಕಮಕ್ಕಳಿಗೆಲ್ಲಿ
ಯಾವುದೋ ನಿರ್ವಾಣ ಘಟ್ಟವಾಳಂಗಲ್ಲದೆ ನಿಃಕಳಂಕ
ಮಲ್ಲಿಕಾರ್ಜುನಾ.

ಮೋ. ಮಾ. ವ. ೧೩೦, ಪು. ೩೨

ಎಂಬಿವೇ ಮುಂತಾದ ವಚನಗಳಲ್ಲಿ ಮಾರಯ್ಯನವರ ಸದುಹೃದಯ ಕರಗಿ ಶರಣರ ಶ್ರೀಪಾದುಗಳೆಡೆಗೆ ಹೆದ್ದೊರೆಯಾಗಿ ಹರಿದಂತಿದೆ. ಹೀಗಿದ್ದರೂ ಮಾರಯ್ಯನವರು ಶರಣರೊಡನಾಟದಲ್ಲಿಯೇ ಕಾಲ ಕಳೆಯುತ್ತಿದ್ದರೆಂದು ಹೇಳಲಿಕ್ಕೆ ಬರುವುದಿಲ್ಲ. ಅವರ ದಿವ್ಯ ವ್ಯಕ್ತಿತ್ವದಲ್ಲಿ ಅಸಹಾಯಶೂರತನ ಅಲ್ಲಲ್ಲಿ ಒಡೆದು ತೋರುತ್ತದೆ. 'ಲೋಕಾಂತ'ಕ್ಕಿಂತ ಏಕಾಂತ ಅವರಿಗೆ ಹೆಚ್ಚು ಸೇರುತ್ತಿತ್ತೆಂಬುದು ಅವರ ವಚನಗಳಿಂದ ಸ್ಪಷ್ಟವಾಗಿ ಹೊಳೆಯುತ್ತದೆ. ಏಕಾಂಗಧೀರರಾಗಿ ಸುಜ್ಞಾನ ಪ್ರಧಾನ ಜೀವಿಗಳಾಗಿದ್ದ ಮಾರಯ್ಯನವರು ·ಕ್ಷೀರಕ್ಕೆ ಕ್ಷೀರ ಕೂಡಿದಂತಿದ್ದ ಶರಣರ ಸಂಗದಲ್ಲಿ ಹಲವಾರು ಸಾರೆ ಇದ್ದು ಶಿವಾನುಭವ ಮಾಡುತ್ತಿದ್ದರೂ ಅವರು ಹೇಳಿದುದೆಲ್ಲ ಸತ್ಯ ಅವರ

ನಡೆಯೆಲ್ಲ ಸನ್ಮಾರ್ಗವೆಂದು ಸ್ವೀಕರಿಸಲಿಲ್ಲ. ಬಸವಣ್ಣ ಮೊದಲಾದವರ ನಡೆ ನುಡಿ ತಪ್ಪೆಂದು ತೋರಿದಾಗ ಸ್ಪಷ್ಟವಾಗಿ ಇದ್ದುದನ್ನು ಇದ್ದಂತೆ ನುಡಿದಿದ್ದಾರೆ. ಅದರಿಂದ ಶರಣ ಸಮಾಜದಲ್ಲಿ ಆಕ್ರೋಶವುಂಟಾದರೂ ಅದಕ್ಕೆ ಎಳ್ಳಷ್ಟು ಹೆದರದೆ

> ತನ್ನಲ್ಲಿ ಬಂದ ಗುಣದೋಷವ ಅನ್ಯರು ನುಡಿದರೆಂದು
> ಭಿನ್ನವ ಮಾಡಿ ನೋವನ್ನಕ್ಕ ಭಕ್ತಂಗೆ ಸತ್ಯವಿಲ್ಲ,
> ವಿರಕ್ತಂಗೆ ಜ್ಞಾನವಿಲ್ಲ, ನಾನು ಇವನಾಗಿ ನೊಂದಹರೆಂಬ
> ಭಾವ ಎನಗಿಲ್ಲ. ಕಣ್ಣಿನೊಳಗಣ ಕಸ, ಕಾಲೊಳಗಣ ಮುಳ್ಳು
> ಆವ ಬಗೆಯಿಂದ ಹೋದರದು ಲೇಸು ನಿಃಕಳಂಕ
> ಮಲ್ಲಿಕಾರ್ಜುನಾ.

ಮೋ. ಮಾ. ವ. ೨೦೬, ಪು. ೪೯

ಎಂದು ನಿಷ್ಠುರವಾಗಿ ನುಡಿದು ಸಮಾಜದ ಕುಂದು ಕೊರತೆಗಳನ್ನು ಬಯಲಿಗೆಳೆದು ಅದರ ಸ್ವಾಸ್ಥ್ಯಕ್ಕೆ ಹಾದಿ ಮಾಡಿಕೊಡಲು ಎಂದಿಗೂ ಹವಣಿಸಿದ್ದಾರೆ.

ಮಾರಯ್ಯನವರು ಲಿಂಗೈಕ್ಯರಾದ ಕಾಲ ದೇಶಗಳನ್ನು ನಿರ್ದಿಷ್ಟಗೊಳಿಸುವುದು ಕಷ್ಟವೆಂದೆನಿಸಿದರೂ ಅವರ ವಚನ, ಇನ್ನುಳಿದ ಗ್ರಂಥ,ಐತಿಹಾಸಿಕ ಅವಶೇಷ ಇವುಗಳ ಸಹಾಯದಿಂದ ಐತಿಹಾಸಿಕ ದೃಷ್ಟಿಗೆ ಸತ್ಯವೆನಿಸಬಹುದಾದ ಒಂದು ನಿರ್ಣಯಕ್ಕೆ ಬರಬಹುದೆಂದು ತೋರುತ್ತದೆ. ಮಾರಯ್ಯನವರ ಜೀವನ ಚರಿತೆಯನ್ನು ಹೇಳುವ ಗ್ರಂಥಗಳಲ್ಲಿ ಅವರು ಐಕ್ಯವಾದ ಕಾಲದೇಶಗಳ ಬಗೆಗೆ ಭಿನ್ನಾಭಿಪ್ರಾಯವಿದೆ. ಮೋಳಿಗೆಯ್ಯನ ಪುರಾಣ, ಶೂನ್ಯ ಸಂಪಾದನೆಯಂತಹ ಗ್ರಂಥಗಳು ಬಸವಣ್ಣ ಮೊದಲಾದವರಿಗಿಂತ ಮೊದಲೇ ಮಾರಯ್ಯನವರು ಕಲ್ಯಾಣದಲ್ಲಿ ನಿರ್ವಯಲನೈದಿದರೆಂದು ಸ್ಪಷ್ಟವಾಗಿ ಇಲ್ಲವೆ ಧ್ವನಿತವಾಗಿ ತಿಳಿಸುತ್ತಿದ್ದರೆ ಶಿವಶರಣವಿಲಾಸ, ಶಿವಶರಣ ಲೀಲಾಮೃತ ಮೊದಲಾದುವು ಬಸವಣ್ಣನವರು ಐಕ್ಯವಾದ ಮೇಲೆ ಚೆನ್ನಬಸವಣ್ಣ ಮೊದಲಾದ ಶರಣಗಣದೊಡನೆ ಮಾರಯ್ಯನವರು ಉಳುವೆಗೆ ಹೋಗಿ ಅಲ್ಲಿಯೇ ನಿರವಯಲಾದರೆಂದು ಹೇಳುತ್ತಿವೆ. ಅಂತು ಮಾರಯ್ಯನವರ ಚರಿತಗ್ರಂಥಗಳನ್ನೆಲ್ಲ ಪರಿಶೀಲಿಸಿದರೆ ಎರಡು ಪ್ರಶ್ನೆ ನಮ್ಮನ್ನು ಎದುರಿಸುತ್ತವೆ:—

೧ ಮಾರಯ್ಯನವರು ಶಿವೈಕ್ಯರಾದುದು ಬಸವಣ್ಣನವರಿಗಿಂತ ಮೊದಲೇ ಇಲ್ಲವೆ ಆ ಮೇಲೆಯೇ ?

೨ ಮಾರಯ್ಯನವರು ಐಕ್ಯರಾದುದು ಕಲ್ಯಾಣದಲ್ಲಿಯೇ ಇಲ್ಲವೆ
ಬೇರೊಂದು ತಾಣದಲ್ಲಿಯೋ ?

ಮಾರಯ್ಯನವರ ವಚನಗಳನ್ನು ಅಭ್ಯಾಸಮಾಡಿ ನೋಡಿದರೆ ಮೊದಲನೆಯ ಪ್ರಶ್ನೆ ತಾನೇ ಮಾಯವಾಗುತ್ತದೆ. ಬಸವಣ್ಣನವರು ಕಪ್ಪಡಿ ಸಂಗಮನಾಥನಲ್ಲಿ ಐಕ್ಯವಾದ ಮೇಲೆ ಮಾರಯ್ಯನವರು ಹಲಕಾಲ ಜೀವಿಸಿದ್ದರೆಂಬ ಮಾತು ಮನವರಿಕೆಯಾಗುತ್ತದೆ. ಮತ್ತೂ ಲಿಂಗೈಕ್ಯರಾಗುವ ಹೊತ್ತಿಗೆ ಇವರು ಸಾಕಷ್ಟು ಮುಪ್ಪಿನವರಾಗಿದ್ದರೆಂಬ ಮಾತೂ ಅಷ್ಟೇ ಸ್ಪಷ್ಟವಾಗಿ ತಿಳಿಯುತ್ತದೆ:-

೧ ಬಸವೇಶ್ವರನೆಂಬ ಗಣನಾಥನಾಮಮಂ...
ಪಡೆದು ಭಕ್ತರಿಗೆ ಮುಖ್ಯನಾಗಿ ಭಕ್ತಿಯ ತೋರಿ...
ಶುದ್ಧ ಶೈವ ಕಪ್ಪಡಿಯ ಸಂಗಮನಾಥನಲ್ಲಿ ಐಕ್ಯವಾದ...

ನೋ. ಮಾ. ವ. ೪೯೦, ಪು. ೧೨೬

೨ ಊರು ಕೆಟ್ಟು ಸೂರೆಯಾಡುವಲ್ಲಿ ಆರಿಗಾರೂ ಇಲ್ಲ.
ಬಸವಣ್ಣ ಸಂಗಮಕ್ಕೆ, ಚೆನ್ನ ಬಸವಣ್ಣ ಉಳುವಿಗೆ,
ಪ್ರಭು ಕದಳಿಗೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ
ತಮ್ಮ ಅಕ್ಷಯ ಭಾವಕ್ಕೆ ಮುಕ್ತಿಯನೆಯ್ದಿದರು.
ನನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೪೪೮, ಪು. ೧೧೪

ಎಂಬಿವೇ ಮುಂತಾದ ಮಾರಯ್ಯನವರ ಹಲವಾರು ವಚನಗಳು ಬಸವಣ್ಣ ಚೆನ್ನಬಸವಣ್ಣ ಪ್ರಭುದೇವ ಮೊದಲಾದವರು ಕಪ್ಪಡಿಸಂಗಮ ಉಳುವೆ ಶ್ರೀಶೈಲದ ಕದಳಿಯ ಬನ ಮೊದಲಾದ ತಮ್ಮ ತಮ್ಮ ಇಚ್ಛೆಯ ಲಕ್ಷ್ಯ ಭಾವದಲ್ಲಿ ಠಾವಿಗೆ ಹೋದ ಮೇಲೆ ಮಾರಯ್ಯನವರು ಕಲ್ಯಾಣವಲ್ಲಿಯೇ ಉಳಿದಿದ್ದರೆಂಬ ಸಂಗತಿಯನ್ನು ಸಾರಿ ಹೇಳುವಂತಿವೆ. ಬಿಜ್ಜಳರಾಯನ ಕೊಲೆಯಾದ ಮೇಲೆ ಕಲ್ಯಾಣದಲ್ಲುಳಿವುದು ಕಷ್ಟವಾಗಿದ್ದರೆ ಕಲ್ಯಾಣಕ್ಕೆ ಸಮೀಪವಾಗಿರುವ ಸುತ್ತು ಮುತ್ತಣ ಪ್ರದೇಶದಲ್ಲಿ ಉಳಿದಿರಬಹುದು ಮಾರಯ್ಯನವರು. 'ಊರು ಸುಟ್ಟು ಸೂರೆಯಾಡುವಲ್ಲಿ ಆರಿಗಾರೂ ಇಲ್ಲ ಎಂಬ ಮಾರಯ್ಯನವರ ನುಡಿ ಸುಟ್ಟು ಸೂರೆಯಾದ ಕಲ್ಯಾಣ ಪಟ್ಟಣದ ಭೀಷಣ ದುರಂತವನ್ನು ಹೇಳಿ ಬಸವಾದಿ ಪ್ರಮಥರೆಲ್ಲ ಕಲ್ಯಾಣ ಬಿಟ್ಟು ಬೇರೆ ಬೇರೆ ಕಡೆ ಹೋಗಿದ್ದರೆಂಬ ಕಠೋರ ಸತ್ಯವನ್ನೂ ಬಿಚ್ಚಿ ಹೇಳುತ್ತಿದೆ.

ಬಸವಣ್ಣ ಮೊದಲಾದವರು ಕಲ್ಯಾಣ ಬಿಟ್ಟು ಹೋದ ಮೇಲೆ ಮಾರಯ್ಯನವರು ಹಲಕಾಲ ಜೀವಿಸಿದ್ದರೆಂದೂ ಅವರು ಮುಪ್ಪಿನ ಮುದುಕರಾಗಿ ಲಿಂಗೈಕ್ಯರಾದರೆಂದೂ ಅವರ ವಚನಗಳೇ ನಿರ್ಧಾರವಾಗಿ ಸಾಕ್ಷಿ ನುಡಿವಂತಿವೆ:—

೧ ಎನಗೆ ಮರ್ತ್ಯದ ಮಣಿಹ ಕೃತ್ಯವಿನ್ನೆಷ್ಟು ದಿನ ಹೇಳಾ ?

ಮೋ. ಮಾ. ವ. ೨೪೯, ಪು. ೬೦

೨ ನಿಮಗೆ ಮರ್ತ್ಯದ ಮಣಿಹವೆಲ್ಲಿಯು ಪರಿಯಂತರ !
ಎನಗೆ ಕಟ್ಟುಗುತ್ತಿಗೆಯೇ ? ನಾ ಕಟ್ಟಿಗೆಯ ಹೊತ್ತು
ಶಿವಭಕ್ತರ ಮನೆಗೆ ನೀವು ಕೊಟ್ಟ ಕಾಯಕದ ಕೃತ್ಯ
ಇನ್ನೆಷ್ಟು ದಿನ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೯೬ ಪು. ೨೨.

ಎಂಬಿವೇ ಮೊದಲಾದ ಮಾರಯ್ಯನವರ ವಚನಗಳು ಮರ್ತ್ಯದ ಮಣಿಹ ಶಿವಭಕ್ತರ ಮನೆಗೆ ಕಟ್ಟಿಗೆ ಹೊತ್ತು ಹಾಕುವ ಕಾಯಕ ಮಾಡಿ ಮಾಡಿ ಮುಪ್ಪಾಗಿ, ತಮ್ಮ ಮಣಿಹ ಪೂರೈಸುವುದೆಂದು? ಕಟ್ಟಿಗೆಯ ಕಾಯಕ ಒಬ್ಬರಿಗೇ 'ಬರಕೊಟ್ಟದ್ದೇ?' ಆ ಕಾಯಕದ ಕಟ್ಟುಗುತ್ತಿಗೆ ಹೊತ್ತವರು ತಾವೊಬ್ಬರೇ? ಎಂಬ ದುಡಿದು ಹಣ್ಣಾದ ದೇಹ ಮನದ ಬೇಸರದ ಭಾವನೆಯನ್ನು ಹಿಸುಕಾಡುವಂತಿವೆ. ಶರಣರೆಲ್ಲ ಬಯಲಾದ ಮೇಲೆ ತಾವು ಬದುಕಿರುವುದಿನ್ನೇಕೆ? ಇನ್ನೆಷ್ಟು ಕಾಲ? ಎಂಬ ಆತುರವನ್ನೂ ಅವರ ವಚನಗಳು ವ್ಯಕ್ತವಾಗಿ ಹೇಳುವಂತಿವೆ. ಮತ್ತು

ಪಾಪ ಪುಣ್ಯವೆಂದು ಹೇಳುವ ಕೂಪರಪ್ಪ ಭಕ್ತರು ಕೇಳಿರಣ್ಣಾ !
ಎನಗೆ ನನ್ನ ಕಾಣದೆ ನಿಂದಿಸುವನಲ್ಲ. ಕಂಡು ನುಡಿವನಲ್ಲ.
ಅಂದಗಾರಿಕೆಯಲ್ಲಿ ನಡೆವನಲ್ಲ........
ಎನಗಂದಂದಿಂಗೆ ನೂರಿಪ್ಪತ್ತು ಸಂದಿತ್ತು........

ಮೋ. ಮಾ. ವ. ೧೬೦, ಪು. ೩೮

ತಮ್ಮ ಜೀವನದ ಲೆಕ್ಕಮಾಡಿ ಭಕ್ತರಿಗೆ ಒಪ್ಪಿಸುವ ಮಾರಯ್ಯನವರ ಈ ವಚನ ಅವರ ವಯೋಮಾನವನ್ನು ಸ್ಪಷ್ಟವಾಗಿ ಹೇಳುತ್ತದೆ. ಶಿವೈಕ್ಯರಾಗುವ ಹೊತ್ತಿಗೆ ಅವರು ನೂರಿಪ್ಪತ್ತು ವರ್ಷಕ್ಕೆ ಮೀರಿರಬಹುದೆಂದು ತೋರುತ್ತದೆ. ನೂರಿಪ್ಪತ್ತರ ವಯೋಮಾನ ಇಂದು ೧೨ನೆಯ ಶತಮಾನದಲ್ಲಿ ಹೆಚ್ಚು

ಅಸಂಭವವೆಂದು ಯಾರೂ ಸಂಶಯುಪಡಬೇಕಿಲ್ಲ ನೂರು ನೂರಿಪ್ಪತ್ತು ವರ್ಷ ಮೀರಿ ಬಾಳುವವರು ಇಂದು ಕಡಿಮೆ ಎಂದು ಹೇಳಬಹುದಾದರೂ ಹಿಂದೆ ಬಾಳಿದವರು ಎಷ್ಟೋ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂತು ಮಾರಯ್ಯನವರು ನೂರಿಪ್ಪತ್ತು ವರ್ಷಪಾದರೂ ಬಾಳಿ ಪ್ರಭುದೇವರು ಬಸವಣ್ಣ ಚೆನ್ನಬಸವಣ್ಣ ಮೊದಲಾದ ಶಿವಶರಣರು ಬಯಲಾದ ಮೇಲೆ ಲಿಂಗೈಕ್ಯರಾದರೆಂಬುದು ಇತಿಹಾಸ ಒಪ್ಪತಕ್ಕ ಮಾತಾಗಿದೆ.

ನಮ್ಮ ಮುಂದಿರುವ ಮತ್ತೊಂದು ಪ್ರಶ್ನೆಯೆಂದರೆ ಮಾರಯ್ಯನವರು ಲಿಂಗೈಕ್ಯರಾದ ಸ್ಥಾನ. ಈ ವಿಷಯವಲ್ಲಿ ಶಿವಶರಣವಿಲಾಸ ಶರಣ ಲೀಲಾಮೃತ ಕಾಲಜ್ಞಾನದ ವಚನಗಳು ಮಾರಯ್ಯನವರು ಉಳುವೆಯಲ್ಲಿ ಐಕ್ಯರಾದರೆಂದು ಹೇಳುವ ಮಾತಿನಲ್ಲಿ ಸತ್ಯಾರ್ಥವಿಲ್ಲವೆಂದು ಹೇಳಬಹುದು. ಬಸವಣ್ಣನವರು ಕಪ್ಪಡಿಸಂಗಮಕ್ಕೆ ಹೋದ ಮೇಲೆ ಶರಣಗಣಂಗಳ ತಂಡವೊಂದು ಚೆನ್ನಬಸವಣ್ಣನವರೊಡನೆ ಉಳುವೆಗೆ ಹೋದುದು ನಿಜ. ಅಂತೆಯೇ ಹಲಕೆಲವು ಶರಣರು ತಮ್ಮ ಕುರಿತ ಠಾವುಗಳಲ್ಲಿ ಲಿಂಗೈಕ್ಯರಾದುದೂ ನಿಜ. ಮಡಿವಾಳ ಮಾಚಯ್ಯನವರು ಹಿಪ್ಪರಿಗೆಯಲ್ಲಿ ಸಮಾಧಿ ಹೊಂದಿದರೆ ಸಿದ್ಧರಾಮಯ್ಯನವರು ಸೊಲ್ಲಾಪುರದಲ್ಲಿ ಶಿವೈಕ್ಯರಾದರು. ಇನ್ನುಳಿದವರು ತಾವಿದ್ದ ಠಾಣದಲ್ಲಿಯೇ ಬಯಲಾದರು. ಮಾರಯ್ಯನವರು ಕೊನೆಯ ಈ ಗುಂಪಿಗೆ ಸೇರಿದವರೆಂದು ತೋರುತ್ತದೆ. ಶ್ರೀಮಾನ್ ಹಳಕಟ್ಟಿಯವರು:—

> ...ಶಿವಶರಣರು ಉಳುವಿಗೆ ಹೋದ ಬಳಿಕ ಸಹ ಅವನು (ಮಾರಯ್ಯನು) ಅವರೊಡನೆ ಕಲ್ಯಾಣ ಬಿಟ್ಟು ಬೇರೆ ಕಡೆಗೆ ಹೋದಂತೆ ತೋರುವದಿಲ್ಲ. ಅವನು ಕಲ್ಯಾಣ ಪಟ್ಟಣದ ಸಮೀಪದಲ್ಲಿಯೇ ವಾಸಮಾಡಿಕೊಂಡು ಅಲ್ಲಿಯೇ ಐಕ್ಯ ಹೊಂದಿದನೆಂದು ತೋರುತ್ತಿದೆ. ಅವನ ಹೆಸರಿನ ಒಂದು ಸ್ಥಾನವು ಕಲ್ಯಾಣದಿಂದ ಹುಮನಾಬಾದಿಗೆ ಹೋಗುವ ಹಾದಿಯಲ್ಲಿ ೮–೧೦ ಮೈಲುಗಳ ಮೇಲೆ ಈಗಲೂ ಇರುತ್ತದೆ. ಅಲ್ಲಿಯೇ ಅವನು ಶಿವೈಕ್ಯನಾಗಿರಬಹುದೆಂದು ತೋರುತ್ತದೆ.
>
> ಶಿ. ಶ. ಚ., ಭಾ. ೨, ಪು. ೨೨೯

ಎಂದು ಹೇಳುವ ಮಾತು ಸತ್ಯ ಸಂಗತಿಯೆಂದೇ ತೋರುತ್ತದೆ. ಇದಲ್ಲದೆ ಶ್ರೀಯುತ ವೀರಭದ್ರಪ್ಪ ಹಾಲಬಾವಿ ಬಿ. ಎ., ಎಲ್‌ಎಲ್.ಬಿ., ನಿವೃತ್ತ

೧ನೆಯ ವರ್ಗ ನ್ಯಾಯಾಧೀಶ ಇವರು ೧೯೩೭ ಫೆಬ್ರುವರಿ ಶಿವಾನುಭವ ೫ನೆಯ ಸಂಚಿಕೆಯಲ್ಲಿ ಕಲ್ಯಾಣ ಪಟ್ಟಣದ ವಿಷಯಕ್ಕೆ ಬರೆದ ಲೇಖನದಲ್ಲಿ:—

"ಕಲ್ಯಾಣದ ಪೂರ್ವದಿಕ್ಕಿಗೆ ಸುಮಾರು ೧೨ ಮೈಲು ಅಂತರದ ಮೇಲೆ ಶ್ರೀ ಮೋಳಿಗಿ ಮಾರಯ್ಯನ ಗವಿಯು ಈಗ್ಯೂ ಒಳ್ಳೆ ಸ್ಥಿತಿಯಲ್ಲಿ ಇದೆ ಅದರ ಹತ್ತಿರ ಒಂದು ಹಳೇ ಹೆಸರು ಗೊತ್ತಿಲ್ಲದ ದೊಡ್ಡ ಮರವಿದೆ. ಇದು ಮಾರಯ್ಯನು ತಂದಿಟ್ಟ ಕಟ್ಟಿಗೆಯ ಹೊರೆಯು ಚಿಗಿತು ಬೆಳೆದಿರುವವೆಂದು ಜನರು ಹೇಳುತ್ತಾರೆ."

ಹೀಗೆ ಮೋಳಿಗೆ ಮಾರಯ್ಯನವರ ಗವಿ ಮತ್ತು ಅವರ ಕಾಯಕದ ಮರದ ಬಗೆಗೆ ಬರೆಯುತ್ತಾರೆ. ಮಾರಯ್ಯನವರು ಮರೆಯಾಗಿದ್ದರೂ ಅವರ ಕುರುಹು ಇಂದಿಗೂ ಉಳಿದಿದೆ. ಅದನ್ನು ಸಂಪ್ರದಾಯವು ಮರೆಯದೆ ನೆನಪಿಟ್ಟು ಕೊಂಡು ಬಂದಂತೆ ತೋರುತ್ತದೆ. ಇವರಿಬ್ಬರೂ ಹೇಳುವ ಮಾರಯ್ಯನವರ ಸ್ಥಾನ ಒಂದೇ ಎಂದು ತೋರುತ್ತದೆ. ಇದೇ ತಾಣದಲ್ಲಿ ಮಾರಯ್ಯನವರು ಮಹದೇವಿಯಮ್ಮನವರು ಒಂದಾಗಿ ಲಿಂಗಾಂಗ ಸಾಮರಸ್ಯ ಪಡೆದರೆಂದು ಹೇಳಬಹುದು.

ಮಾರಯ್ಯನವರು ಕಲ್ಯಾಣ ಬಿಟ್ಟು ಹೋಗದೆ ತಾವು ನೆಲಸಿದ್ದ ತಾಣದಲ್ಲಿಯೇ ಬಯಲಾಗಿರಬಹುದೆಂಬುದಕ್ಕೆ ಶೂನ್ಯಸಂಪಾದನೆಯಲ್ಲಿ ಮೋಳಿಗೆ ಮಾರಯ್ಯನವರು ತಮ್ಮ ಅರ್ಧಾಂಗಿ ಮಹಾದೇವಿಯಮ್ಮನವ ರೊಡನೆ 'ಬಸವಣ್ಣ ಮೊದಲಾದವರು ಕಲ್ಯಾಣ ಬಿಟ್ಟು ತಮ್ಮ ತಮ್ಮ ಲಕ್ಷ್ಯಭಾವದಲ್ಲಿ ಮುಕ್ತಿಯನ್ನೈದಿದರು. ನನಗೊಂದು ಬಟ್ಟೆಯ ಹೇಳಾ! ಎಂದು ಮುಂತಾಗಿ ಮಾಡಿದ ಸಂಭಾಷಣೆ ಸಾಕಷ್ಟು ಪುಷ್ಟಿ ಕೊಡುತ್ತದೆ. 'ಅಲ್ಲಿ ಇಲ್ಲಿ ಎಂದು ಹಲುಬಲೇಕೆ?' 'ಎನ್ನಯ್ಯಪ್ರಿಯ ಇಮ್ಮಡಿನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೆ!' ಎಂದು ಪರಮ ತತ್ವಾರ್ಥ ವನ್ನು ಕೈಹಿಡಿದ ಮಡದಿ ನುಡಿಯಲು ಅದೇ ಪರಮ ಪ್ರಸಾದವೆಂದು ಕೈಕೊಂಡು ಮೋಳಿಗೆ ಮಾರಯ್ಯನವರು ತಮ್ಮ ಮುಕ್ತಿಕಾಂತೆ ಮಹಾ ದೇವಿಯಮ್ಮನವರೊಡನೆ ಕಲ್ಯಾಣದಲ್ಲಿ ಹಲವಾರು ಕಾಲ ತಾವು ನೆಲಸಿದ್ದ ತಾಣದಲ್ಲಿಯೇ ನಿರ್ವಯಲನ್ನೈದಿರಬಹುದು.

---

# ಮಾರಯ್ಯನವರ ಅಂತರಂಗ ಜೀವನ

ನಿಜಾಂತರಂಗದಿಂದ ಜ್ಯೋತಿರ್ಮಯ ಲಿಂಗವನೆ ನುಡಿವ ಶಿವಶರಣರ ನುಡಿಗಡಣ. ಮರ್ತ್ಯಲೋಕದ ಕತ್ತಲೆಯನ್ನು ಭೇದಿಸಿ ಕಳೆದು ಮಾನವ ಕೋಟಿಗೆ ನಿಜದ ಬೆಳಗಿನ ನಿಲವನ್ನು ತೋರಿ ಉದ್ಧರಿಸಲೆಂದು ಹಗಲಿರುಳು ಹೆಣಗಿದ ಕಲ್ಯಾಣದ ಬಸವಣ್ಣನವರು ಮತ್ತು ಶರಣಗಣಂಗಳು. ಇಂತಿವರ ಹಿನ್ನೆಲೆಯಲ್ಲಿ ಒಡೆದು ಮೂಡಿ ತೋರುವ ಮೋಳಿಗೆಯ ಮಾರಯ್ಯನವರ ಬಾಹ್ಯಜೀವನವನ್ನು ಕಂಡುಕೊಂಡ ಮೇಲೆ ಅವರ ಬಾಹ್ಯಜೀವನದ ಹೊರಗಣ ಹೊದಿಕೆಯನ್ನು ಸಾವಧಾನವಾಗಿ ಸಾವಕಾಶವಾಗಿ ತೆಗೆದು ಆಂತರ್ಯದಲ್ಲಿ ಪ್ರವೇಶ ಮಾಡಿ ಸಾಧ್ಯವಿದ್ದಮಟ್ಟಿಗೆ ಅವರ ಅಂತರಂಗ ಜೀವನವನ್ನು ನೋಡಿ ತಿಳಿದುಕೊಳ್ಳುವುದು ಇನ್ನುಳಿದಿರುವ ನಮ್ಮ ಮುಂದಿನ ಕೆಲಸ.

...ಬೆಳಗಿನ ಕಳೆಯುನೊಳಗೊಂಡಿಪ್ಪ ಮಹಾತ್ಮನ ತ್ರಿಭು
ವನಾತೀತನೆಂದರಿಯದೆ, ಬೀಗವ ತೆಗೆದಲ್ಲಿಯೇ
ಕಂಡಿತ್ತು ಆಭರಣದಿರವು ನಿಃಕಳಂಕ ಮಲ್ಲಿಕಾರ್ಜುನ

ಮೋ. ಮಾ. ವ. ೫೩೭, ಪು. ೧೪೦

ಎಂದು ಮಾರಯ್ಯನವರೇ ಹೇಳುವಂತೆ ಆಭರಣವನ್ನು ಕಾಣಬೇಕಿದ್ದರೆ ಆಭರಣವಿದ್ದ ಪೆಟ್ಟಿಗೆಯ ಬೀಗ ತೆಗೆಯಬೇಕು. ಆ ಮೇಲೆ ಪೆಟ್ಟಿಗೆ ತೆಗೆದು ನೋಡಿದರೆ ಚಿದಾಭರಣನಾದ ನಿಜಶರಣ ನಮ್ಮ ಕಣ್ಣಿಗೆ ಹೊಳೆಯುತ್ತಾನೆ. ಮಾರಯ್ಯನವರ ಬಾಹ್ಯ ಜೀವನವೆಂಬ ಭದ್ರವಾದ ಪೆಟ್ಟಿಗೆ ತೆಗೆದು ಒಳಗೆ ನೋಡಿದರೆ ಅವರ ನಿಜಾಂತರಂಗ ಜೀವನ ಜ್ಯೋತಿರ್ಲಿಂಗದಂತೆ ಥಳಿಥಳಿಸಿ ಹೊಳೆವಂತೆ ತೋರುತ್ತದೆ.

ಮಾರಯ್ಯನವರ ಲಿಂಗಜೀವನ ಓತಪ್ರೋತವಾಗಿ ಹೆಣೆದುಕೊಂಡಂತಿದೆ ಅವರ ಸ್ವಾನುಭಾವಪೂರ್ಣವಾದ ವಚನಗಳಲ್ಲಿ. ಅಂತೆಯೇ ಮಾರಯ್ಯನವರ ನಿಜಜೀವನದ ನಿಲವನ್ನು ನೆಲೆಯನ್ನು ತಿಳಿಯಬೇಕಾದರೆ ಅವರ ಅನುಭಾವವಚನಗಳೇ ಪರಮಸಾಧನ. ಅವರ ನಿಜ ಅರ್ಧಾಂಗಿ ಮಹಾದೇವಿಯಮ್ಮನವರ ವಚನಗಳೂ ಸಾಕಷ್ಟು ಸಹಾಯವನ್ನು ಈ

ನಮ್ಮ ಕೆಲಸದಲ್ಲಿ ನೀಡುತ್ತವೆಯೆಂಬುದೂ ಸ್ಪಷ್ಟ. ಇವರಿಬ್ಬರ ವಚನಗಳನ್ನು ಬಿನ್ನಾಣದಿಂದ ಬಿಟ್ಟು ಮಾರಯ್ಯನವರ ಅಂತರಂಗ ಜೀವನ, ಲಿಂಗ ಜೀವನ, ನಿಜ ಜೀವನ ಹೇಗೆ ಅರಳಿ ಹೂವಾಗಿ ಲಿಂಗಜ್ಯೋತಿಯಿಂದ ತೊಳಗಿ ಬೆಳಗಿ ಲಿಂಗವಾಸನೆಯಿಂದ ಮಘಮಘಿಸಿ ಲಿಂಗಲೀಲೆಯಲ್ಲಿ ನಲಿದು ಒಲೆದಾಡುತ್ತದೆ ಎಂಬುದನ್ನು ನೋಡಿದರೆ ನಾವು ಕೃತಕೃತ್ಯರು, ಕೃತಾರ್ಥರು.

ಮರವೆಯ ಮಾನವನು ಎಂದಿಗೂ ಮರವೆಯಲ್ಲಿ ಮುಳುಗಿ ಮಾನವನಾಗಿಯೇ ಉಳಿದು ಬಾಳಿ ಸತ್ತು ಹಾಳಾಗಿ ಹೋಗುವಂತೆ ತೋರುತ್ತಿದ್ದರೂ ಮಾನವ ಜೀವನದ ಸದುಹೃದಯದಲ್ಲಿ ಎಂದಿಗೂ ಕುಂದದ ನಂದಬಾರದ 'ನಂದಾದೀವಿಗೆ' ಮಾನವನನ್ನು ಸುತ್ತುಮುತ್ತಿದ್ದ ಕತ್ತಲೆ ಮರವೆ ಮಾಯೆ ಹುಟ್ಟು ಸಾವು ಪ್ರಪಂಚ ಸಂಸಾರ ಬಂಧನ ಎಂಬಿವನ್ನೆಲ್ಲ ನೋಡಿ ನೋಡಿಯೂ 'ತಮ್ಮಂಥ ಘನ ಜ್ಯೋತಿ ಕಿರಿದೆನ್ನಬಹುದೆ?' ಎಂದು ಕಾಲ ಕಾಲಾಂತರದಿಂದ ನಕ್ಕು ಬೆಳಗುತ್ತ ಬಂದಿದೆ. ಬಸವಣ್ಣನ ಕತ್ತಲೆಯನ್ನು ನುಂಗಿ ತಾನೇ ತಾನಾಗಿ ಬೆಳಗಿದ ನಂದಾದೀವಿಗೆ ಕೂಡಲ ಸಂಗಮದೇವ. ಅದೇ ನಿತ್ಯ ನಿರಂಜನ ಜ್ಯೋತಿ ನಿಃಕಳಂಕ ಮಲ್ಲಿಕಾರ್ಜುನ ಮೋಳಿಗೆ ಮಾರಯ್ಯನವರ ಮಾಯಾಂಧಕಾರವನ್ನೆಲ್ಲ ನಿಶ್ಶೇಷವಾಗಿ ನಾಶಮಾಡಿ ಅವರ ಜೀವನವನ್ನೆಲ್ಲ ತುಂಬಿ ಸೂಸಿ ತೊಳಗಿ ಬೆಳಗುತ್ತಿದೆ.

ಮಾರಯ್ಯನವರು ಮೆಲ್ಲಗೆ ಅರಳಿ ನಿಃಕಳಂಕ ಮಲ್ಲಿಕಾರ್ಜುನನಾಗುವ ಚಿತ್ರವನ್ನು ಹೀಗೆ ರೇಖಿಸಬಹುದು:

ಮಾರಯ್ಯನವರನ್ನು ಹೊದ್ದಿದ ಸಂಸಾರ ಭವಬಂಧನ ಮಾಯಾಜಾಲ ಅವರ ಮೈಗೆ ಹೊಂದಿಕೆಯಾಗದೆ ಹೋಗಲು ಅದನ್ನು ಹಾಗೆ ತೆಗೆದೊಗೆವ ಪ್ರಯತ್ನ ನಡೆದುದು ಕೆಳಗಣ ವಚನಗಳಲ್ಲಿ ಸ್ಪಷ್ಟವಾಗಿ ತೋರುವಂತಿದೆ:—

> **ಎಲೆ ಆತ್ಮನೇ ಪಾತಕದ ಹೊಕ್ಕುಳದಲೇಕೆ ಹುಟ್ಟುವೆ ?**
> **ಹೇಸಿದರೂ ಉಣ್ಣಬೇಕು ವಿಷವ ! ಅನುಸರಿಸಬೇಕು ಹುಸಿಯು !**
> **ಇದೆಲ್ಲದರ ಘುಸಣೆಗೊಳಗಾಗದಂತೆ ಎನ್ನಸುವ ಕೊಂಡೊಯ್ಯ**
> **ನಿಃಕಳಂಕ ಮಲ್ಲಿಕಾರ್ಜುನಾ !**
>
> **ಮೋ. ಮಾ. ವ. ೩೪, ಪು. ೧೦**

> **ಮಾಯಾತ್ಮನು ಹಾಯುವೆಂಬ ಭವಜಾಲವಲ್ಲಿ ಬಂದು**
> **ಘೋರ ಸಂಸಾರವ ಕಂಡು ನಾಚದೇಕೆನ್ನ ಮನ ? ಹೇಸದೇ**

**ಕೆನ್ನ ಮನ ?... ಸಂಸಾರವೆಂಬ ಡಾಗು ಎನ್ನ ಮತ್ತ**
**ತನದಲ್ಲಿ ಕೊಂಗಿತ್ತು ನಿ:ಕಳಂಕ ಮಲ್ಲಿಕಾರ್ಜುನಾ.**

**ಮೋ. ಮಾ. ವ. ೧೮೩, ಪು. ೪೭**

ವಿಷಯ ಸಂಸಾರದ ರುಚಿ ಮಾರಯ್ಯನವರಿಗೆ ಸೊಗಸಿಲ್ಲ. ಬಂಧನವಡೆದ ಮದಗಜದಂತೆ ಮಾಯಾಜಾಲದ ಕರಿಯನೂಲಿನ 'ಜೇಲುಖಾನೆ' ಅವರ ಸ್ವಾಸ್ಥ್ಯವನ್ನು ಅವರ ಸರ್ವತಂತ್ರ ಸ್ವಾತಂತ್ರ್ಯವನ್ನು ಹಿಸುಕಿದಂತಾಗಿದೆ. ಆದಕ್ಕೆ ಅವರು ಹೇಸಿ 'ಕೇಡಿಲ್ಲದ ಪದವಿ'ಯಲ್ಲಿ ಮನವನಿರಿಸಿ ತಮ್ಮ ನಿಜವ ನರಿದು ನಿಜವಾಸಿಯಾಗಿರಬೇಕೆಂದರೆ ಮನದ ಚಾಂಚಲ್ಯವೊಂದು. ಮನಸ್ಸು ಒಮ್ಮೆ ಪ್ರಾಪಂಚಿಕ ಸುಖದ ಭವ್ಯಭವನವನ್ನು ಕಟ್ಟಿ ಅಲ್ಲಿದ್ದುಕೊಂಡು ಸಕಲ ಸುಖವಿಲಾಸಗಳನ್ನು ಮನವಾರೆ ಭೋಗಿಸಬಿಡಬೇಕೆನ್ನುತ್ತದೆ. ಅದೇ ಮನಸ್ಸು ಮತ್ತೊಮ್ಮೆ ಎಚ್ಚತ್ತು ಐಹಿಕ ಸುಖ ಅನಿತ್ಯ, ಅಪಥ್ಯ, ಅಲ್ಪ, ಆತ್ಮ ವಿಘಾತಕವೆಂದು ತಿಳಿದು ನೋಡಿ ನಿತ್ಯಾನಂದದ ನಿರಾಳ ನಿಲಯವನ್ನು ಕಟ್ಟಿ ಅಲ್ಲಿಯೇ ಇದ್ದು ಬದುಕಿ ಬಾಳಬೇಕೆಂದು ನಿರ್ಧರಿಸುತ್ತದೆ. ಮನಸ್ಸಿನ ಈ ಎಡೆಯಾಟದಲ್ಲಿ ಸಿಕ್ಕಿ 'ಅಲ್ಲಿಗೆ ಹೊಲಬ ಕಾಣದೆ ಇಲ್ಲಿಗೆ ನೆಲೆಯ ಕಾಣದೆ ತಲ್ಲಣ'ಗೊಂಡಿದ್ದಾರೆ ಮಾರಯ್ಯನವರು. ಆದರೆ ಒಂದು ಮಾತು ಮಾತ್ರ ಅವರಿಗೆ ಸ್ಫುಟವಾಗಿ ಹೊಳೆದಂತೆ ತೋರುತ್ತದೆ. ಪಂಚಭೂತಾಶ್ರಯವಾದ ದೇಹ ಅನಿತ್ಯ. ಅದರ ಮುಖವಾಗಿ ದೊರೆವ ಸುಖ ಅದೂ ಅನಿತ್ಯ. ಇಂತಹ ಅನಿತ್ಯದೇಹಸುಖಕ್ಕಾಗಿ ಶಾಶ್ವತವಾದ ನಿಜಾನಂದವನ್ನು ಬಲಿಗೊಡುವುದೇ ? ನಿತ್ಯಾನಂದ ನಿಜಾನಂದಸ್ವರೂಪವಾದ ನಿಜಲಿಂಗವನರಿಯದೇ ವ್ಯರ್ಥ ಮೃತ್ಯುವಿನ ಬಾಯತುತ್ತಾಗಿ ಹೋಗುವುದೇ ? ಎಂಬ ಇಂತಿವೇ ಮೊದಲಾದ ವಿಚಾರ ಮಾರಯ್ಯನವರ ತಲೆಯಲ್ಲಿ ಮಿಂಚಿ ಹೊಳೆದಿವೆ:—

**ಪೃಥ್ವಿ ಅಪ್ಪು ತೇಜ ವಾಯು ಆಕಾಶದಿಂದ ಹೊದುವ**
**ಹುಟ್ಟುವ ದೇಹದ ಅಂದಗಾರಿಕೆಯಲ್ಲಿ ಬಂದುದನರಿಯಾ!**
**ಬಂದಂತೆ ಅದು ಹಿಂಗಿತ್ತೆಂದರಿಯಾ! ಮುಂದಣ**
**ನಿಜಲಿಂಗವನರಿಯಾ ನಿಃಕಳಂಕ ಮಲ್ಲಿಕಾರ್ಜುನಾ !**

**ಮೋ. ಮಾ. ವ. ೩೯, ಪು. ೧೧**

ಹುಟ್ಟಿದ ಒಡಲು ಹೊಂದಲೇಬೇಕು. ಒಡಲು ಸತ್ತರೆ ಸಾಯಬೇಕೇ? ಘಟ ಮಠಾದಿಗಳು ನಾಶವಾದರೆ ಅವನ್ನೆಲ್ಲ ಅವಗ್ರಹಿಸಿರುವ ಆಕಾಶವೂ

ನಾಶವಾಗಲೇಕೆ ? ನಾನೆಂಬುದೇನು ? ನನ್ನ ನಿಜಸ್ವರೂಪವೇನು ? ದೇಹವೇ ನಾನು ? ಅಲ್ಲ. ಇಂದ್ರಿಯ ಕರಣಾದಿಗಳೇ ? ಅಲ್ಲ. ಅವೆಲ್ಲವನ್ನು ಬೇರೆ ಸಾಕ್ಷಿಕನಾಗಿ ಅರಿವ ನಾನು ಅವೆಲ್ಲಕ್ಕೆ ವಿಲಕ್ಷಣನಾಗಿರಬಹುದೇನೋ ? ಹಾಗಿದ್ದರೆ ನನ್ನ ನಿಜಸ್ವರೂಪವನ್ನು ಕುರುಹಿಟ್ಟು ತೋರುವವರಾರು ? ನನ್ನನ್ನು ಸತ್‌ಪಥಕ್ಕೆ ಹಚ್ಚುವವರಾರು ? ಪರಮ ಶಿವಪಥವ ಬಲ್ಲವರಾರು ? ಸದ್ಗುರುವೇ ?

ಅಹುದು. 'ಶಿವಪಥವನರಿವಡೆ ಗುರುಪಥವೆ ಮೊದಲು.' ಶಿವ ಪಥವ ತೋರಿ ಪರಶಿವಪದದಲ್ಲಿ ನಿಲಿಸುವಾತ ಸದ್‌ಗುರು. ಮರವೆಯೆಂಬ ಕತ್ತಲೆ ಮುಚ್ಚಿ ಮುಸುಕಿದ ಭವವೆಂಬ ಘೋರಾರಣ್ಯದಲ್ಲಿ ಮುಂದುಗಾಣದೆ ಸುತ್ತಿಸುತ್ತಿ ತಿರುಗಿ ಬೇಸತ್ತು ಬಳಲಿ ಬೆಂಡಾಗಿ 'ಐದರ ಬೇಗೆಯಲ್ಲಿ ಬೆಂದು ಗಾರಾದ' ಭವಜೀವಿಯು 'ಭವಘೋರಕ್ಕಾರದೆ ಭವದಾಳಿಯ ತೊಡೆದು' ಶಿವಪಥ ಹಿಡಿದು ನಡೆದು ಸದ್‌ಗತಿ ಹೊಂದಬೇಕಿದ್ದರೆ ಸದ್‌ಗುರುವ ನಾಶ್ರಯಿಸಲೇ ಬೇಕು. ಶಿವಪಥವ ಬಲ್ಲಾತ ಗುರು. ಶಿವತತ್ವವನರಿದಾತ ಗುರು. ಅಜ್ಞಾನಾಂಧನಾದ ಶಿಷ್ಯನಿಗೆ ಶಿವಜ್ಞಾನಾಂಜನ ಹಚ್ಚಿ ನೆಲದ ಮರೆಯ ನಿಧಾನ 'ನಿಃಕಳಂಕ ಮಲ್ಲಿಕಾರ್ಜುನ'ನನ್ನು ಪ್ರತ್ಯಕ್ಷ ತೋರಬಲ್ಲಾತ ಗುರು. 'ಮಹತ್ತರವಪ್ಪ ಜ್ಯೋತಿರ್ಮಯಲಿಂಗವ ಕೈಯಲ್ಲಿ ಕೊಡ' ಬಲ್ಲಾತ ಗುರು. ಅಂಗವಿದ್ದು ನಿರಂಗವಾಗಿರುವ ಹದನ ತಿಳಿಸುವಾತ ಗುರು:—

> ....ಮತ್ತೆ ಸದ್ಗುರುವಾದರೆ ಅ (ಅ ?) ವ ಬದ್ಧನಾಗದಿರಬೇಕು.
> ತಂತ್ರದಲ್ಲಿ ಹೋಹ ಯಂತ್ರದಂತಿರಬೇಕು. ಮಂದಾರದಲ್ಲಿ
> ತೋರುವ ಸುಗಂಧದಂತಿರಬೇಕು.

ಮೋ. ಮಾ. ವ. ೫೯೯, ಪು. ೧೬೦

ಇಂತಹ ಸದ್ಗುರುವಿನ ಕಾರುಣ್ಯಾಮೃತದ ಸೋನೆ ಸುರಿದರೆ ಅಂಗವೆಂಬ ಹೊಲದಲ್ಲಿ ಲಿಂಗಬೀಜವಂಕುರಿಸಿ ಪಲ್ಲವಿಸಿ ವಿಶ್ವವಿಸ್ತಾರವಾಗಿ ವಿಶ್ವಾಧಿಕವಾಗಿ ಹಬ್ಬಿ ಪರಮಫಲಭರಿತವಾಗಲಿಕ್ಕಿಲ್ಲವೇ ? ಗುರುವಿನಡಿ ಸೇರಬೇಕು. ಆದರೆ ಗುರು ಸದ್ಗುರುವಾಗಿರಬೇಕು. ಇಲ್ಲದಿದ್ದರೆ

> ...ಗುರು ಶಿಷ್ಯಸಂಬಂಧವಾಗಬಾರದು. ಇದನರಿಯದಿದ್ದರೆ
> ಅಂಧಕನ ಕೈಯ ಅಂಧಕ ಹಿಡಿದಂತೆ ಪಂಗುಳನಲ್ಲಿ

ಚಂದವನರಸುವಂತೆ. ಸ್ವಯಾನಂದ ಭರಿತ ನಿಃಕಳಂಕ
ಮಲ್ಲಿಕಾರ್ಜುನಾ.

ಮೋ. ಮಾ. ವ. ೫೯೯, ಪು. ೧೬೦

ಸಾರಾಸಾರವನ್ನು ಸ್ಪಷ್ಟವಾಗಿ ತಿಳಿಯಬಲ್ಲ ಮಾರಯ್ಯನವರಿಗೆ 'ತನ್ನ ರೋಗಕ್ಕೆ ನಿರ್ವಾಹವ ಕಾಣದೆ ಇದಿರ ರೋಗವ ಮಾಣಿಸಿಹೆ'ನೆಂದು ಜಗದಲ್ಲಿ ಸುಳಿವ ಗುರುಗಳಿಂದೇನು? ಆತನೇ ತನ್ನ ಗುರುವಿನ ಕುರುಹನ್ನು ಹೀಗೆ ಹೇಳುತ್ತಾನೆ.:—

...ಎನ್ನ ಗುರು ಭವರೋಗ ವೈದ್ಯ, ಪರಶಿವ ಮೂರ್ತಿ
ಪರಬ್ರಹ್ಮ ಗುರು ತಾನೆ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೬೧೬, ಪು. ೧೬೫

ಇಂತಹ ಪರಮಗುರು ಮಾರಯ್ಯನವರಿಗೆ ಕರುಣಿಸಿ ಕೊಟ್ಟ ಇಷ್ಟಲಿಂಗ ಅದೇ ಕರಸ್ಥಲದ ಪರಬ್ರಹ್ಮ. ಮಾನವನ ಹೃದಯದಲ್ಲಿ ಹುದುಗಿ ಆತನಿಗೆ ಗೊತ್ತಿಲ್ಲದಂತೆ ಬೆಳಗುವ ಸ್ವಯಂಜ್ಯೋತಿಯದು. ಆ ಜ್ಯೋತಿಯನ್ನೇ ಪ್ರಭಾವಿಸಿ ಶಿಷ್ಯನ ಕರಸ್ಥಲಕ್ಕೆ ತಂದುಕೊಟ್ಟು ಆತನ ಸರ್ವಾಂಗವನ್ನೆಲ್ಲ ಲಿಂಗಜ್ಯೋತಿಯಿಂದ ತುಂಬಿದಾತ ಶ್ರೀಗುರು. 'ಅಂತರ್ಬಾಹ್ಯದಲ್ಲಿ ಭರಿತನಾಗಿ ಸರ್ವಾಂಗದ ಲಿಂಗವ ಮಾಡಿದ ಕೂಡಲ ಚೆನ್ನಸಂಗ ಶ್ರೀಗುರುಲಿಂಗವು' (ವ. ಶಾ. ಸಾ., ಭಾ೨., ಪು. ೩೫೭) ಎಂದು ಚೆನ್ನಬಸವಣ್ಣನವರು ಹೇಳುವಂತೆ, ಗುರುಕಾರುಣ್ಯ ಪಡೆದ ಜೀವಿ ಮಾನವನಲ್ಲ. ಜ್ಯೋತಿಯನಪ್ಪಿದ ಮೇಲೆ ಹುಲ್ಲು ಹುಲ್ಲಲ್ಲ. ಅದೂ ಜ್ಯೋತಿ. ಪರುಷ ಮುಟ್ಟಿದ ಮೇಲೆ ಕಬ್ಬುನವಿಲ್ಲ. ಗಿಳಿಯ ಹೊಟ್ಟೆಯಲ್ಲಿ ಗಿಳಿಮರಿ ಹುಟ್ಟುವಂತೆ ಕೋಳಿ ಕಾಗೆಯ ಮರಿ ಹುಟ್ಟಲಿಲ್ಲ. 'ಗುರು ದೈವಾತ್ ಪರಂ ನಾಸ್ತಿ' ಎಂದೆನಿಸುವ ಪರಮದ್ವೈವ ಪರಂಜ್ಯೋತಿ ಸ್ವರೂಪ ಸದ್ಗುರುವಿನ ಕಾರುಣ ಕರಪಲ್ಲವದೊಳಗೆ ಉದಯವಾದ ಶಿಷ್ಯ ಆತ ಪರಮಜ್ಯೋತಿಯ ಮರಿ, ಪರಬ್ರಹ್ಮದ ಶಿಶು. ದಿವ್ಯದ ಬೆಂಕಿ ಹತ್ತಿ ಮಾನವನನ್ನು ಸುಟ್ಟು ಧ್ವಂಸಮಾಡಿ ತಾನೇ ತಾನಾಗಿ ಪ್ರಜ್ವಲಿಸುವ ಬೆಳಗು ಆತ. ಮಾನವನಳಿದು ದೇವನಾಗುವ ಅಂಗಗುಣವಳಿದು ಲಿಂಗವಾಗಿ ಬೆಳಗುವ ಈ ಲಿಂಗವಿಜ್ಞಾನವನ್ನು ತಿಳಿಸುವ ಮಾರಯ್ಯನವರ 'ಹುಟ್ಟದ ಮುನ್ನವೇ ಸತ್ತಿತ್ತು ಆ ಶಿಶು....' (ಮೋ. ಮಾ. ವ. ೮೧೨, ಪು. ೨೬೧) ಎಂಬ ವಚನಕ್ಕೆ ಟೀಕೆ ಬರೆದ ಮಹಾನುಭಾವರ ಅಭಿಪ್ರಾಯವನ್ನು ಸಂಗ್ರಹಿಸಿ ಹೀಗೆ ಹೇಳಬಹುದು:—

**ಚಿತ್ಕಲಾಂಶಿಕನಾದ ಆತ್ಮನು ದೇಹಸಂಬಂಧವಾಗಿರ್ದಲ್ಲಿ ಶಿವಾಜ್ಞೆಯಿಂದ ಶಿವಜ್ಞಾನ ಪ್ರಭಾವಿಸಿದಾಕ್ಷಣವೆ ಜೀವಭಾವ ನಷ್ಟವಾಯಿತ್ತು. ಜೀವಭಾವ ನಷ್ಟವಾಗಿ ಶಿವಭಾವ ಘಟಿಸಿ ಗುರೂಪಾವಸ್ಥೆಯು ಮೂಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ಆತ್ಮಾಂತರ್ಗತವಾಗಿರ್ದ ಮಹಾಘನಲಿಂಗವ ಭಾವ ಮನ ದೃಕಿಂಗೆ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗಸ್ವರೂಪವಾಗಿ ತಂದು ಕೊಡಲು ಶರಣನ ಸರ್ವಾಂಗವು ಲಿಂಗಸ್ವರೂಪವಾಯಿತ್ತು......**

ಮಾರಯ್ಯನವರಿಗಾದ ಲಿಂಗದೀಕ್ಷೆಯ ಮರ್ಮವನ್ನು ಸೂಚಿಸುವಂತಿದೆ ಅವರ ಬೆಡಗಿನ ವಚನದ ಟೀಕೆ. ಮಾರಯ್ಯನವರಿಗಂಟಿದ ಮಾನವ್ಯವೆಂಬ ಕತ್ತಲೆ ಹರಿದು ನಿಃಕಳಂಕಮಲ್ಲಿಕಾರ್ಜುನನಾಗಿ ಪ್ರಜ್ವಲಿಸಿ ತೊಳಗಿ ಬೆಳಗಲು ಇದೇ ಇಂತಹ ಲಿಂಗದೀಕ್ಷೆಯೇ ಕಾರಣವಾಯ್ತೆಂಬುದರಲ್ಲಿ ಸಂಶಯವಿಲ್ಲ.

ಲಿಂಗದೀಕ್ಷೆ ಪಡೆದ ಜೀವನ ಲಿಂಗಜ್ಯೋತಿಯಿಂದ ಪ್ರಜ್ವಲಿತವಾದ ಜೀವನ. 'ಉದಕದೊಳಗೆ ಬೈಚಿಟ್ಟ ಬೈಕೆಯ ಕಿಚ್ಚಿನಂತೆ' ಮಾನವನಲ್ಲಿ ಗೋಪ್ಯವಾಗಿ ಹುದುಗಿರುವ ಕಿಚ್ಚು ನಿಃಕಳಂಕ ಮಲ್ಲಿಕಾರ್ಜುನಲಿಂಗ. ಪರ ಶಿವಕೃಪೆಯಿಂದ ಶ್ರೀಗುರುಕಾರುಣ್ಯದಿಂದ ಆ ಬೆಡಗಿನ ಕಿಚ್ಚೇ ಬಿನ್ನಾಣದಿಂದ ಸಚ್ಛಿಷ್ಯನ ಕರಸ್ಥಲವನಿಂಬುಗೊಂಡ ಮೇಲೆ ಇನ್ನೇನು ? ಮೊದಲಾಯ್ತು ಮಾರಯ್ಯನವರ ಮಹಾಂತ ಲಿಂಗಜೀವನ ಅವರ ಲಿಂಗಪೂಜೆ ಅವರ ಲಿಂಗ ಧ್ಯಾನ ಅವರ ಲಿಂಗಾನಂದ ಸರ್ವತೋಮುಖವಾಗಿ ಹರಿವ ಅವರ ಲಿಂಗ ವ್ಯವಹಾರ. ಅವರ ಹುಲ್ಲುಗುಡಿಸಲ ಹೊಕ್ಕು ನೋಡಬೇಕು ಅವರ ಲಿಂಗ ಪೂಜೆಯ ಪರಮಾನಂದ ಸಂಭ್ರಮವನ್ನು! ಅವರ ನಿಜನಿಷ್ಠೆಗೆ ಅಂತಿಂತಹ ನಾಡಾಡಿ ಪೂಜೆ ಸೊಗಸುವುದೇ ?

**ಕಾಯದ ಕೈಯಲ್ಲಿ ಲಿಂಗಪೂಜೆ ಮನದ ಕೈಯಲ್ಲಿ ಸಂಸಾರ**
**ಎಂತಹದಯ್ಯಾ ಲಿಂಗಪೂಜೆ........**

**ಮೋ. ಮಾ. ವ. ೯೬, ಪು. ೨೪**

ವಂಚಿಸಿ ಮಾಡುವ ರೂಢಿಯ ಪೂಜೆ, ಆಡಂಬರದ ಪೂಜೆಯೊಂದು ಪೂಜೆಯೇ ? ಮನವನ್ನೆಲ್ಲ ಸಂಸಾರಕ್ಕೆ ಮಾರುಗೊಟ್ಟು ತನುವಿನ ಕೈಯಲ್ಲಿ ಲಿಂಗವ ಪೂಜಿಸ ಬಹುದೇ ? ಅದೊಂದು ಜಾರತನದ ಪೂಜೆ, ಚೋರತನದ ಮಾಟ. ಅದು ಶಿವಪಥಕ್ಕೆ ಎಂದೆಂದಿಗೂ ಸಲ್ಲದು. ನಳನಳಿಸುವ ತೋಳುಗ ಳಿಂದ ಪತಿಯನಾಲಿಂಗಿಸಿ ಮನದ ನೇಹದಲ್ಲಿ ಜಾರ ಪುರಷನನ್ನು ಬಿಗಿಯಪ್ಪಿದ

'ಮ್ಯಾನಿಸಗಳ್ಳಿ' ಜಾರೆಯ ಆಟ ! ತನಗೂ ಸುಖವಿಲ್ಲ. ಗಂಡನಿಗೂ ಸುಖವಿಲ್ಲ. ಇಂತಹ ಆಟದಿಂದೇನು ? ಇಂತಹ ಪೂಜೆ ಕೋಟಿ ಕೋಟಿ ಮಾಡಿದರೇನು ? ಲಿಂಗ ಕರಗಲಿಲ್ಲ. ತಾನು ಕರಗಲಿಲ್ಲ. ಅಂಗಕ್ಕೆ ಲಿಂಗ ವೇಧಿಸಲಿಲ್ಲ. ಅಂಗವ ಭಂಗವಳಿಯಲಿಲ್ಲ.

> ಎಸೆವರ ಬಲ್ಲೆ. ಎಚ್ಚ ಬಾಣ ತಿರುಗಿ ಬಪ್ಪಂತೆ ಎಸೆವರ ಕಾಣೆ.
> ಪೂಜಿಸುವರ ಬಲ್ಲೆ. ಪೂಜಿಸಿದ ಲಿಂಗ ಅಭಿಮುಖವಾಗಿ ಸರ್ವಾಂಗ
> ದಲ್ಲಿ ವೇಧಿಸುವರ ಕಾಣೆ........
>
> ಮ. ವ. ೧೧, ಪು. ೨೭೨

ಎಂದು ಹೇಳುವ ಮಹಾದೇವಿಯಮ್ಮನವರ ಮಾತು ಅಂದಿನ ತಾಮಸ ಪೂಜೆಯ ಪ್ರಚಾರವನ್ನು ಅಲ್ಲಗಳೆದು ನಿಷ್ಠೆತುಂಬಿದ ನಿಜ ಪೂಜೆಯನ್ನು ಎತ್ತಿ ತೋರುತ್ತಿದೆ.

ಲಿಂಗಪೂಜೆ ಮಾಡಬೇಕು ಕೈತುಂಬಿ. ಲಿಂಗಪೂಜೆ ಮಾಡಬೇಕು ಕಣ್ಣುತುಂಬಿ. ಲಿಂಗಪೂಜೆ ಮಾಡಬೇಕು ಮನ ಭಾವ ಹೃದಯ ತುಂಬಿ. ಲಿಂಗಪೂಜೆ ಮಾಡಬೇಕು ಲಿಂಗ ಅಂಗವನ್ನೆಲ್ಲ ತುಂಬಿ ಸೂಸಿ ಹರಿವಂತೆ. ಲಿಂಗಪೂಜೆ ಮಾಡಬೇಕು ಸರ್ವಾಂಗವೆಲ್ಲ ಲಿಂಗ ಲಿಂಗವೇ ಆಗುವಂತೆ. ಇಂತಹ ಪೂಜೆ ಲಿಂಗವನಪ್ಪಿ ಅಗಲದೆ ಸಮರಸವಾಗಿ ಬೆಳಗಬಲ್ಲುದು. ಇಂತಹ ಪೂಜೆ ಅಂಗದ ಅವಗುಣವನ್ನೆಲ್ಲ ಹಿಂಗಿಸಿ ಲಿಂಗದ ಗುಣವ ಪೂರೈಸಬಲ್ಲುದು. ಇದೇ ಮಾತನ್ನು ಮಾರಯ್ಯನವರು ತಮ್ಮ ಅನುಭವ ತೇಜದಿಂದ ಬೆಳಗಿದ್ದಾರೆ:—

> ಅನಲನೆಂಬ ಗಂಡಂಗೆ ತೃಣವೆಂಬ ಹೆಂಡತಿ ಮೋಹದಿಂದ
> ಅಪ್ಪಲಾಗಿ ಬೇಯ್ವ ಆಕೆಯ ಕರಚರಣಾದಿಗಳು ಆ ಗಂಡನಲ್ಲಿ
> ಒಪ್ಪವಿಟ್ಟಂತಿರಬೇಕು. ಇಂತಪ್ಪ ಇಷ್ಟಲಿಂಗವ ದೃಷ್ಟದಲ್ಲಿ
> ಹಿಡಿದುದಕೆ ಇದೇ ದೃಷ್ಟ. ಹೀಗಲ್ಲದೆ ಲೌಕಿಕಾರ್ಚನೆಯ
> ಮಾಡುವ ಪೂಜಕರ ಮೆಚ್ಚೆನೆಂದ ನಚ್ಚಿನಗೃಹಿಣಿಯ
> ಮಚ್ಚನೊಡೆಯ ನಿಃಕಳಂಕ ಮಲ್ಲಿಕಾರ್ಜುನ.
>
> ಮೋ. ಮಾ. ವ. ೨೫೧, ಪು. ೬೧

ಅರಗಿನ ನಲ್ಲೆ ಉರಿಯ ನಲ್ಲನನಪ್ಪಿದರೆ ಅಂಗಾಂಗವೆಲ್ಲ ಕರಗಿ ಉರಿಯಾಗಿ ಬೆಳಗುವಂತೆ ಅಂಗಸತಿ ಲಿಂಗಪತಿಯನಪ್ಪಿದರೆ ಲಿಂಗವಾಗಬೇಕಲ್ಲದೆ ಬೇರೆ ಗತಿಯಿಲ್ಲ. ಲಿಂಗಪೂಜೆಯ ಪರಮಾರ್ಥವಿದೇ.

ಇಂತಿದು ಇಷ್ಟಲಿಂಗದ ದೃಷ್ಟ ಪೂಜೆ, ದೃಷ್ಟಯೋಗ. ಈ ಸಾಕಾರ ಪೂಜೆ ನಿರಾಕಾರ ಪೂಜೆಯಾಗಿ ಪರಿಣಮಿಸುವ ರೀತಿ ನೀತಿ ಮಾರಯ್ಯನವರ ಜೀವನದಲ್ಲಿ ಹಲವಾರು ಕಡೆ ತೋರುತ್ತದೆ. ಕುರುಹಿನ ಲಿಂಗಕ್ಕೆ ಕುರುಹಿನ ಪತ್ರಿ ಪುಷ್ಪದ ಪೂಜೆ ಬೇಕು. ಆದರೆ ನಿರ್ವಯಲಾದ ಮಹಾ ಬೆಳಗಾದ ನಿರಾಳಲಿಂಗವನ್ನು ಈ ಪೂಜೆ ಮುಟ್ಟಲಾರದು. ಅದಕ್ಕೆ ಸಲುವಳಿಯಾಗುವುದು ನಿಷ್ಕಳದ ಪೂಜೆ. ಏಕೆಂದರೆ ಮಾರಯ್ಯನವರೇ ಕೇಳುವಂತೆ

ಆದಿಶೂನ್ಯಲಿಂಗಕ್ಕೆ ಮಜ್ಜನವಾವುದೋ ? ಕುಸುಮಂಭರಿತ
ಲಿಂಗಕ್ಕೆ ಪೂಜೆಯಾವುದೋ ? ಪರಿಪೂರ್ಣಲಿಂಗಕ್ಕೆ
ನೈವೇದ್ಯವಾವುದೋ ? ..........

ಮೋ. ಮಾ. ವ. ೨೬೭, ಪೃ. ೬೬

ಬಯಲಿಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುವುದೆಂತು ? ವಿಶ್ವಕುಸುಮದಲ್ಲಿ ಪರಿಮಳವಾಗಿ ತುಂಬಿರುವ ಪರಿಮಳ ಲಿಂಗಕ್ಕೆ ಪತ್ರಿಪುಷ್ಪದ ಪೂಜೆ ಏಕೆ ? ಅಣುರೇಣು ತೃಣಕಾಷ್ಠದಲ್ಲಿ ಪರಿಪೂರ್ಣವಾಗಿರುವ ಪರಿಪೂರ್ಣವಸ್ತುವಿಗೆ ಹಸಿದು ಬರಿದಾದ ಹೊಟ್ಟೆಯೆಲ್ಲಿ ? ಆದರ ತೃಪ್ತಿಯೆತ್ತ ? ಮಾರಯ್ಯನವರ ಇಷ್ಟಲಿಂಗದ ಪೂಜೆ ನಿಷ್ಕಳದ ನಿರಾಳಪೂಜೆಯಾಗುವ ಪರಮಸಂಭ್ರಮ ಮೇಲಿನ ವಚನದಲ್ಲಿ ಮಿಂಚುವುದಿಲ್ಲವೇ ?

ಈ ತೆರನಾದ ಲಿಂಗಪೂಜೆಯ ಸಂಭ್ರಮ, ಆಮೇಲೆ ಜಂಗಮ ದಾಸೋಹದ ಆನಂದ. ಗುರುಲಿಂಗಜಂಗಮದ ಅರ್ಚನೆ, ಆ ಮೇಲೆ ಅರ್ಪಣ. ಗುರುಲಿಂಗಜಂಗಮದ ಸಂತೃಪ್ತಿಯಾಗಬೇಕಾದರೆ ಪಡಿ ಪದಾರ್ಥ ಬೇಕಲ್ಲವೇ? ಪಡಿ ಪದಾರ್ಥ ದೊರೆಯ ಬೇಕಾದರೆ ಕಾಯ ಕಷ್ಟಮಾಡಿ ದುಡಿಯಬೇಕು. ಮೈ ಮುರಿದು ದುಡಿಯದೆ ಅನ್ಯರ ರಕ್ತ ಸುಟ್ಟು ಬೆವರು ಹರಿದು ತನಗೆ ಹೇಗೋ ದೊರೆತ ದುಡ್ಡು ತರುವ ಪಡಿ ಪದಾರ್ಥ ಅದು ಗುರುಲಿಂಗಜಂಗಮ ಕ್ಕೆಂದೂ ಅರ್ಪಿತವಾಗಬಾರದು. ತನ್ನ ದುಡಿಮೆ ತನ್ನ ಶ್ರಮ ತನ್ನ ಕಾಯ ಕಷ್ಟವನ್ನು ಅರ್ಪಿತ ಮಾಡುವ ಅಧಿಕಾರ ತನಗಲ್ಲದೆ ಅನ್ಯರು ದುಡಿದು ಗಳಿಸಿದ ಫಲವನ್ನು ತನ್ನದೆಂದು ಅರ್ಪಿಸ ಹೋದರೆ ಅದು ಅನರ್ಪಿತ. ಅದರಿಂದ ಸಂತೃಪ್ತಿಯಿಲ್ಲ.

........ಕಾರೆಯ ಸೊಪ್ಪು ಹರೂ ಕಾಯಕದಿಂದ ಬಂದುದು ಲಿಂಗ
ಕ್ಕರ್ಪಿತವಲ್ಲದೆ ದುರಾಸೆಯಿಂ ಬಂದುದು ಅನರ್ಪಿತ. ಇದು ಕಾರಣ
ಸತ್ಯಶುದ್ಧ ಕಾಯಕದ ನಿತ್ಯದ್ರವ್ಯ ಚಂದೇಶ್ವರಲಿಂಗಕ್ಕೆ ನೈವೇದ್ಯ
ಕೇಳಯ್ಯ ಶೂ. ಸಂ., ಪು. ೨೫೩

ಸತ್ಯಶುದ್ಧ ಕಾಯಕದಿಂದ ಬಂದ ದ್ರವ್ಯವೇ ಗುರುಲಿಂಗಜಂಗಮಕ್ಕೆ ಸಮರ್ಪಿತ ವಾಗಬಲ್ಲುದೆಂದು ನುಲಿಯ ಚಂದಯ್ಯನವರ ವಚನ ಶರಣರ ಕಾಯಕದ ನಿಜ ತತ್ವವನ್ನು ಸಾರಿ ಹೇಳುತ್ತಿದೆ. ಸತ್ಯಶುದ್ಧ ಕಾಯಕವೇ ಮೂರ್ತಿವೆತ್ತಂತಿದ್ದಾರೆ ಮಾರಯ್ಯನವರು. ಮೊದಲು ಅರಸನಾಗಿದ್ದು ಸಕಲ ಸುಖ ವಿಲಾಸದಲ್ಲಿದ್ದು ಕಲ್ಯಾಣಕ್ಕೆ ಬಂದ ಮೇಲೆ ಹುಲ್ಲುಗುಡಿಸಲಲ್ಲಿದ್ದು ಕಾಡಿಗೆ ಹೋಗಿ ಕಟ್ಟಿಗೆ ಕಡಿದು ಹೊರೆ ಹೊತ್ತು ತಂದು ಮಾರಿ ಬಂದ ದ್ರವ್ಯದಿಂದ ಲಿಂಗಜಂಗಮದಾಸೋಹ ನಡೆಸಿಕೊಂಡು ಹೋದುದನ್ನು ನೋಡಿದರೆ ಕಾಯಕದ ನಿಜತತ್ವ ಅವರಲ್ಲಿ ಸಂಪೂರ್ಣ ಅಳವಟ್ಟುದು ತೋರಿ ಬರುತ್ತದೆ.

........ ತನ್ನ ಸುಬುದ್ಧಿಯಿಂದ ಸುಕಾಯಕದಿಂದ ಗುರುಲಿಂಗಜಂಗಮಕ್ಕೆ
ತನುಮನಧನ ಸವೆಯಿಸಿ ಚಿತ್ತಶುದ್ಧನಾಗಿಹುವದೇ ವ್ರತ ........
ಮೋ. ಮಾ. ವ. ೨೬೪, ಪು. ೬೫

ಎಂದಿರುವ ಮಾರಯ್ಯನವರ ವಚನ ಅವರ ಕಾಯಕವೆಂಬ ವ್ರತದಲ್ಲಿದ್ದ ಅಚಲವಾದ ನಿಷ್ಠೆಯನ್ನು ಸ್ಪಷ್ಟವಾಗಿ ಹೇಳುತ್ತದೆ. ಮಾರಯ್ಯನವರ ಕಾಯಕದ ತತ್ವದಲ್ಲಿ ಬುದ್ಧಿಯು "ಹರಾಮಿಗೆ" ಅನುವಿಲ್ಲ. ಕಾಯಕಷ್ಟ ಕಡಮೆಯೆಂಬ ನೀಚ ಭಾವನೆಗೆ ಆಸ್ಪದವಿಲ್ಲ.

ಅಂತೂ ಮೈಮುರಿದು ದುಡಿಯಬೇಕು. ಯಾರಿಗಾಗಿ ? ಗೇಣು ಹೊಟ್ಟೆ ಗಾಗಿಯೇ ? ತನ್ನ ಬಟ್ಟೆಬರೆಗಾಗಿಯೇ ? ಮಡದಿ ಮಕ್ಕಳು ಬಂಧುಬಳಗಕ್ಕಾ ಗಿಯೇ ? ಎಂತಹ ಕೀಳು ಕಲ್ಪನೆ ! ಅಲ್ಪ ವಿಚಾರ ! ಕಂಗೆಟ್ಟ ನೀಚ ಸ್ವಾರ್ಥ ಸಡಿ ಫಡಾ ! ತನ್ನೊಡಲು ಮಡದಿ ಮಕ್ಕಳಿಗಾಗಿ ದುಡಿದುಡಿದು ಹಣ್ಣಾಗಿ ಸತ್ತು ಮಣ್ಣುಪಾಲಾಗಬೇಕೇ ?

........ ಒಡಲು ಭೂಮಿಯ ಸಂಗ, ಒಡವೆ ತಾನೇನಪ್ಪುದೋ ?
ಕೈವಿಡಿದ ಮಡದಿ ಪರರ ಸಂಗ, ಪ್ರಾಣ ವಾಯುವಿನ
ಸಂಗ, ಸಾವಿಂಗೆ ಸಂಗಡ ಯಾರೂ ಇಲ್ಲ ಕಾಣಾ ನಿಃಕಳಂಕ
ಮಲ್ಲಿಕಾರ್ಜುನಾ ........ ಮೋ. ಮಾ. ವ. ೬೪. ಪು. ೧೭

ನಶ್ವರಕ್ಕಾಗಿ ದುಡಿದು ತಾನೂ ಹಾಳಾಗಲೇಕೆ ? ದುಡಿಯಬೇಕು ಕೇಡಿಲ್ಲದ ಪದವಿಯನ್ನು ಕೊಡುವ ಸತ್ ಚಿತ್ ಆನಂದ ಸ್ವರೂಪರಾದ ಗುರುಲಿಂಗ ಜಂಗಮಕ್ಕಾಗಿ. ಶ್ರೀಗುರುಕಾರುಣ್ಯ ಪಡೆದು ಶಿವಪಥವಿಡಿದು ನಡೆವಲ್ಲಿ ಸತ್ ಕಾಯಕವನಂಗೀಕರಿಸಿದ ಮೇಲೆ ಕಾಯಕದ ಪ್ರಾಪ್ತಿ ಲಿಂಗಜಂಗಮದ ಸೊತ್ತು.

ಲಿಂಗಜಂಗಮಕ್ಕೆ ಅರ್ಪಿತವಾಗಬೇಕಾದ ಆ ಸೊತ್ತನ್ನು ಕದ್ದು ತನ್ನ ಒಡಲು ತನ್ನ ಮಡದಿಮಕ್ಕಳಿಗಿಕ್ಕಿದರೆ ಶರಣರ ಪಥಕ್ಕೆ ದೂರ.

'ಹೊತ್ತಾರೆ ಎದ್ದು ಕಣ್ಣ ಹೊಸೆವುತ ಎನ್ನೊಡಲಿಗೆಂದು ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ' ಎಂಬುದು ಬಸವಣ್ಣನವರ ಭಾಷೆಯಲ್ಲವೇ ? ಅದೇ ಶರಣಗಣಂಗಳಲ್ಲಿ ಒಪ್ಪಿಕೊಂಡ ಕಾಯಕದ ತತ್ವವಲ್ಲವೇ ? ಹೊಲೆ ಹೊಲೆಯರ ಮನೆಗೆ ಹೋಗಿ ಯಾದರೂ ಕಾಯಕಷ್ಟ ಮಾಡಿ ಪಡಿ ತಂದು ಗುರುಲಿಂಗಜಂಗಮದ ಸಂತೃಪ್ತಿ, ಅವರ ಸರ್ವಾನಂದಕ್ಕಾಗಿ ಬಸವಣ್ಣನವರ ಎದೆ ಹಗಲಿರುಳು ಕುದಿಯಲಿಲ್ಲವೇ ? ಮಾರಯ್ಯನವರದೂ ಅಷ್ಟೇ ಖಂಡಿತ ಭಾಷೆ. ಅದನ್ನು ಮೀರಿದ ಕ್ರಿಯೆ.

ಮಹಾರಾಣಿಯವೆಯು ಬಿಟ್ಟುಬಂದು ಮತ್ತೆ ಒಡೆಯರು ಭಕ್ತರಲ್ಲಿ
ಕಾಣಿವಾಸವೆಂದು ಕಟ್ಟುಮಟ್ಟುಂಟೇ ? ಖಂಡಿತ ಕಾಯಕವ
ನಂಗೀಕರಿಸಿದ ಭಕ್ತಂಗೆ ಮತ್ತೆ ಹೆಂಡತಿ ಮಕ್ಕಳು ಬಂಧುಗಳೆಂದು
ಜಂಗಮಕ್ಕೆ ತಂದ ದ್ರವ್ಯವನವರಿಗಿಕ್ಕಿ ತಾನುಂಡನಾದರೆ
ತಿಂಗಳಲಿ ಸತ್ತ ಹುಳಿತ ನಾಯ ಕಾಗೆ ತಿಂದು, ಆ ಕಾಗೆಯ ಕೊಂದು
ತಿಂದ ಭಂಡಂಗೆ ಕಡೆ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವೆ ನೀವೆ ಬಲ್ಲಿರಿ.

ಮೋ. ಮಾ ವ ೨೪೦, ಪು. ೫೭

ಸತ್ಯ ಶುದ್ಧ ಕಾಯಕದ ನಿತ್ಯದ್ರವ್ಯ ಜಂಗಮದಾಸೋಹಕ್ಕೇ ಸಲ್ಲ ಬೇಕೆಂಬುದು ಶರಣರ ಕಾಯಕದ ಸತ್ಯಾರ್ಥ. ದಾಸೋಹಕ್ಕೆ ಸಲ್ಲ ಬೇಕಾದ ದ್ರವ್ಯವನ್ನು ಸ್ವಾರ್ಥಾಂಧನಾಗಿ ಹೆಂಡಿರು ಮಕ್ಕಳಿಗಿಕ್ಕಿದರೆ ಆ ಭಕ್ತ ಗುರು ಲಿಂಗಜಂಗಮಕ್ಕೆ ದೂರ, ಶರಣಪಥಕ್ಕೆ ಸಲ್ಲ.

ಇನ್ನು ಸತ್‌ಕಾಯಕವನಂಗೀಕರಿಸಿದ ಸದ್‌ಭಕ್ತ ದುಡಿದಷ್ಟು ಫಲವನ್ನೇ ಕೊಂಡು ದಾಸೋಹಭಾವದಿಂದ ಗುರುಲಿಂಗಜಂಗಮಕ್ಕೆ ಸಮರ್ಪಿಸ ಬೇಕಲ್ಲದೆ ಒಂದು ದುಡಿದು ಹತ್ತು ತಂದು ದಾಸೋಹಕ್ಕೆ ಹಾಕಿದರೆ ಅದು

ಮೋಸ, ಆತ್ಮವಂಚನೆ. ದುರಾಶೆಯಿಂದ ಬಂದ ಧನ ಕಿಲ್ಮಿಷ ಧನ, ಹೊಲೆ ದುಡ್ಡು. ಅಂತಹ ದುಡ್ಡು ಪರಮಪಾವನ ಲಿಂಗಜಂಗಮಕ್ಕೆ ಸಲ್ಲೀತೆ ? ಆಸೆ ಅನ್ಯಾಯ ವಂಚನೆ ಅಪ್ರಮಾಣ ತುಂಬಿ ಹೊಲಸು ನಾರುವ ದುಡ್ಡು ದ್ರವ್ಯ ಪಾಪಿಯ ದುಡ್ಡು. ಅದು ಪ್ರಾಯಶ್ಚಿತ್ತಕ್ಕೆ ಸಲ್ಲಬೇಕು. ಕಾಯಕಷ್ಟ ಮಾಡದೆ ಅನಾಯಾಸವಾಗಿ ಬಂದ ಧನವೂ ಲಿಂಗಜಂಗಮಾರ್ಚನೆಗೆ ಸಲ್ಲದು, ಸಲ್ಲದು. ಮಾರಯ್ಯನವರ ಮಠಕ್ಕೆ ಬಸವಣ್ಣ ಬಂದು ಎರಡು ಹೊಂಜಾಳಿಗೆಯನಿರಿಸಿ ಹೋದರೆ ಮಾರಯ್ಯನವರ ಮನ ಆ ದುಡ್ಡನ್ನು ಮುಟ್ಟಿತೇ ? ಇಂತಹ ಮನ ಇದ್ದರೆ ಕಾಶ್ಮೀರದ ಆಧಿಪತ್ಯದಲ್ಲಿದ್ದು ಜಂಗಮದಾಸೋಹವನ್ನು ಬಿಟ್ಟು ಕಲ್ಯಾಣಕ್ಕಾದರೂ ಏಕೆ ಬರುತ್ತಿದ್ದರು ? ಸ್ವತಂತ್ರಧೀರ ಮಹಾಮಹಿಮ ಮಾರಯ್ಯನವರ ಮನೆಯಲ್ಲಿ ಕಾರುಣ್ಯದಿಂದ ಹೊಂಜಾಳಿಯನಿರಿಸಿದ ಬಸವಣ್ಣನವರಿಗೆ ಚೆನ್ನಬಸವಣ್ಣನವರು

> ...... ಈ ಮಹಾಮಹಿಮರಿಗೆ ಜಗದ ಜತ್ತಿಗೆಯ
> ಹಾದರಗಿತ್ತಿಯ ಹದಿನೆಂಟು ಜಾತಿಯ ಮನೆಯಲ್ಲಿ
> ತೊತ್ತಾಗಿ ಹುಟ್ಟಿದ ಶಿವದ್ರೋಹಿಯ ಲಿಂಗವಂತರ ಮನೆಯ
> ಹೊಗಿಸುವರೇ ?
>
> ಶೂ. ಸಂ., ಪು. ೨೩೮

ಎಂದು ಬುದ್ಧಿ ಹೇಳಲಿಲ್ಲವೇ ?

> ಭವಘೋರಕ್ಕಾರದೆ ಭವದಾಳಿಯ ತೊಡೆದೆನಯ್ಯಾ. ಬಡವ
> ನೆಂದು ನಿಮ್ಮವರು ನಿಧಾನವನೀವರಯ್ಯಾ. ನಾ ಬಡವನಾದಡೆ
> ನೀ ಬಡವನೇ ಎನ್ನ ನಿಃಕಳಂಕ ಮಲ್ಲಿಕಾರ್ಜುನಾ ?
>
> ಮೋ. ಮಾ. ವ. ೧೮೫, ಪು. ೪೫

ಎಂದು ಮಾರಯ್ಯನವರೂ ಅತ್ಯಂತ ದುಃಖದಿಂದ ಪ್ರತಿಭಟಿಸಲಿಲ್ಲವೇ ? 'ಅರಸಿಂಗೆ ಬಡತನವಲ್ಲದೆ ಭಕ್ತಂಗೆ ಬಡತನವೇ ?' ಎಂಬುದು ಸತ್ಯ ಕಾಯಕದ ಶಾಶ್ವತಸೂತ್ರವಲ್ಲವೇ ? ಮಾರಯ್ಯನವರ ಕಾಯಕದ ಕಟ್ಟಿಗೆ ಸುವರ್ಣದಂಡವಾದ ಕತೆ ಆತನ ಸದಾನಂದ ಶ್ರೀಮಂತಿಕೆಯನ್ನು ಸ್ವಚ್ಛವಾಗಿ ಕನ್ನಡಿಸುವುದಿಲ್ಲವೇ ? ಅಂತೆಯೇ ನಿತ್ಯ ಕಾಯಕದ ಸತ್ಯ ಶರಣರು ಹಣ ಗಳಿಸಿ ಹೂಳಿಡಬೇಕಿಲ್ಲ. 'ಇಂದಿಂಗೆಂತೋ ನಾಳಿಂಗೆಂತೋ ?' ಎಂಬ ಸಂದೇಹ ಸೂತಕ ಅವರ ಮನವನ್ನೆಂದಿಗೂ ಮೈಲಿಗೆ ಮಾಡಲಿಲ್ಲ.

For where your leasure is, there will your heart be also

Take therefore no thought for the morrow : for the morrow shall take thought for things of itself

ಎಂಬೀ ಕ್ರೈಸ್ತನ ವಚನಗಳೂ ದಿವ್ಯ ಪಥದಲ್ಲಿ ನಡೆದ ಧೀರರ ವಿಚಾರ ಬಹು ಮಟ್ಟಿಗೆ ಒಂದೇ ಎಂಬುದನ್ನು ತೋರುತ್ತವೆಯಲ್ಲವೇ ?

ಇಂದಿಗೆ ನಾಳಿಗೆ ಎಂಬ ಸಂದೇಹ, ಇದೆ ಎಂಬ ಸಂತೋಷ, ಇಲ್ಲವೆಂಬ ಚಿಂತೆ ಮಾರಯ್ಯನವರ ಮನದ ಧ್ಯಾನವನ್ನೆಂದೂ ಕಿರಿದು ಮಾಡಿಲ್ಲ. ಈ ತೆರ ನಾದ ಭಾವ ಲಿಂಗಸಿದ್ಧಿಗೆಷ್ಟು ದೂರವೆಂಬುದು ಅವರಿಗೆ ಸ್ಪಷ್ಟ ಗೊತ್ತಿತ್ತು ಇಂತಹ ಅಳಿಮನದ ಭಕ್ತಿ ಜಂಗಮಕ್ಕೆ ಅರ್ಪಣವಾಗಲರಿಯದು. ಅರ್ಪಣ ವಿಲ್ಲದೆ ಪ್ರಸಾದವಿಲ್ಲ. ಪ್ರಸಾದವಿಲ್ಲದೆ ತನ್ನ ನಿಜ ತಿಳಿಯಲಿಲ್ಲ. ಎಂಬ ವಿಚಾರ ಕೆಳಗಣ ವಚನದಲ್ಲಿ ಸ್ಫುಟವಾಗಿ ಮೂಡಿದೆ:—

> ........ ಇಂದಿಗೆ ನಾಳಿಗೆಂದು ಸಂದೇಹವ ಮಾಡಿದಡೆ ಲಿಂಗಕ್ಕೆ
> ದೂರ, ಜಂಗಮಕ್ಕೆ ಸಲ್ಲ, ಪ್ರಸಾದವಿಲ್ಲ. ಇದಕ್ಕೆ ಗೆಲ್ಲ ಸೋಲ
> ಬೇಡ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವೇ ಸಾಕ್ಷಿ.
>
> ಮೋ. ಮಾ. ವ. ೮೮, ಪು. ೨೨.

ಮಾರಯ್ಯನವರ ಲಿಂಗಪೂಜೆ, ಆ ಮೇಲೆ ಸತ್ಯ ಶುದ್ಧ ನಿಜ ಕಾಯಕ ದಿಂದ ಬಂದ ಪಡಿಪದಾರ್ಥವನೆಲ್ಲ ಸದ್ಭಕ್ತಿಯಿಂದ ನೀಡಿ ಮಾಡುವ ಜಂಗಮದಾಸೋಹ. ಜಂಗಮಾರ್ಚನೆ, ಜಂಗಮದಾಸೋಹ್ಯ ಜಂಗಮ ಪ್ರಸಾದದ ಮಹಿಮೆಯನ್ನು ಕಾಶ್ಮೀರದರಸಾಗಿದ್ದಾಗಳೇ ನೆರೆಯರಿದ ಮಾರ ಯ್ಯನವರ ಜಂಗಮ ಭಕ್ತಿ, ಅವರ ನಿಷ್ಠೆ ಕಲ್ಯಾಣದಲ್ಲಿ ನಿಸ್ಸೀಮವಾಗಿರಬೇಕು- ತನು ದಂಡಿಸಿ ಮನ ಕರಗಿ ಭಾವ ಉಕ್ಕೇರಿ ಮಾಡುವ ಜಂಗಮ ಭಕ್ತಿ ಇಲ್ಲಿಯದು. ಕಾಯಕಷ್ಟವಿಲ್ಲದ ಭಾಂಡಾರದ ಭಕ್ತಿ ಅಲ್ಲಿಯದು ! ಕಲ್ಯಾ ಣದ ಹುಲ್ಲು ಗುಡಿಸಲ ಅಂಬಕಳ ಬಸವಣ್ಣನವರ ಮನೆಯ ರಸ ರಸಾಯನ ದೂಟವನ್ನು ಮೀರಿ ಮೆರೆದಿತ್ತು. ಮಾರಯ್ಯನವರ ಸತ್ಯ ಭಕ್ತಿ ಅವರ ಅಚಲನಿಷ್ಠೆ ಅವರದೇ.

ಮಾರಯ್ಯನವರ ತನು ಮನ ಧನ ಅವರ ಅರ್ಥ ಪ್ರಾಣ ಅಭಿಮಾನ

ಎಲ್ಲ ಎಲ್ಲ ಲಿಂಗಜಂಗಮಕ್ಕೆ ಸಮರ್ಪಣ. ಎಂತಹ ಜಂಗಮಕ್ಕೆ? ಮಾರ ಯ್ಯನವರ ಭಕ್ತಿ ಯಾವಾಗಳೂ ಸಾರಾಸಾರ ವಿವೇಕದಿಂದ ತುಂಬಿ ಹರಿದಿದೆ. ಆವರದು ಅಂಥ ಭಕ್ತಿ ಇಲ್ಲವೆ ಅಜ್ಞಾನ ಭಕ್ತಿಯಲ್ಲ. ಅಜ್ಞಾನಾಂಧ ಭಕ್ತ ತಾಮಸ ಜಂಗಮದ ಬೆನ್ನು ಹತ್ತಿದರೆ ಅವರಿಬ್ಬರು ಕೆಟ್ಟ ಕೇಡಿಂಗೆ ಕಡೆ ಮೊದಲಿಲ್ಲ. ಅದು ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ.

ಸಾಕಾರ ಶಿವಜ್ಞಾನವೇ ಸುಜ್ಞಾನ ಜಂಗಮ. ಇಂತಹ ಜಂಗಮವೇ ಲಿಂಗ, ಲಿಂಗವೇ ಜಂಗಮ. ನಿಜ ಜ್ಞಾನದಲ್ಲಿ ನಿಂದು ಸುಳಿದಾಡುವ ಸುಜ್ಞಾನಸ್ಥಲದ ಜಂಗಮ ಪರಸ್ಥಲದ ಪರಶಿವಲಿಂಗ ಬೇರೆಂದು ಹೇಳಬಾರದು. ಭವಪಾಶ ದಲ್ಲಿ ಸಿಕ್ಕು ತೊಳಲಿ ಬಳಲುತ್ತಿರುವ ಭಕ್ತರನ್ನು ತೆಗೆದು ಮೇಲಕ್ಕೆತ್ತಿ ಲಿಂಗ ಪಥದಲ್ಲಿ ನಡೆಸಿ ಮಹಾಲಿಂಗ ಪದದಲ್ಲಿ ನಿಲಿಸುವಾತ ಜಂಗಮ. ಲೋಕ ಹಿತಾರ್ಥವಾಗಿ, ಲೋಕೋಪಕಾರಾರ್ಥವಾಗಿ ಚರಿಸಿ ಭಕ್ತರ ಭಕ್ತಿ ಭಿಕ್ಷೆಯನ್ನು ಸ್ವೀಕರಿಸಿ ನಿಜಾನಂದದಲ್ಲಿ ನಲಿದಾಡುವಾತ ಜಂಗಮ. ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಮಲದ ವಾಸನೆಯ ಸೋಂಕಿಲ್ಲದೆ, ಸ್ತುತಿಯಲ್ಲಿ ನಿಲ್ಲದೆ ನಿಂದೆಗೆ ಓಡದೆ, ದ್ವಂದ್ವಕ್ಕೆ ಅತೀತನಾಗಿ ನಿತ್ಯನಿರಂಜನನಾಗಿ, 'ನಿಂದಡೆ ನೆಳಲಿಲ್ಲ ನಡೆದರೆ ಹಜ್ಜೆಯಿಲ್ಲ'ದಂತೆ ಹಮ್ಮು ಬಿಮ್ಮಿಲ್ಲದೆ ನಡೆದಾ ಡುವಾತ ಜಂಗಮ. ಆತನೇ ಜಂಗಮಲಿಂಗ. ಪರಮಾನಂದ ಪರಿಣಾಮದೊಳ ಗೋಲ್ಾಡುತ್ತಿರುವ ಆತನಿಗೆ ವಿಷಯ ಸುಖದ ಅಳಿಯಾಸೆಯೆಲ್ಲಿ? 'ಅಮೃತ ಸಾಗರದೊಳಗಿರ್ದು ಆಕಳ ಚಿಂತೆಯೆ?' 'ಮೇರುಮಂದಿರದಲ್ಲಿದ್ದು ಜಲಗರವಬಯಸುವರೇ?' ಚೆನ್ನಬಸವಣ್ಣನವರು ನಿಜಜಂಗಮಸ್ಥಲದಲ್ಲಿ ನಿಂದು ಚರಿಸಾಡುವ ಪ್ರಭುದೇವರ ಸಂಚಾರದ ಮರ್ಮವನ್ನು ಸಾರವಾಗಿ ಹೀಗೆ ಹೇಳಿದ್ದಾರೆಃ—

> ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ,
> ಮಣ್ಣಿಂಗೆ ಬಂದಾತನಲ್ಲ, ಅಶನಕ್ಕೆ ಬಂದಾತನಲ್ಲ,
> ವ್ಯಸನಕ್ಕೆ ಬಂದಾತನಲ್ಲ, ಕೂಡಲ ಚನ್ನಸಂಗಯ್ಯ
> ಭಕ್ತಿಯ ಪಥವ ತೋರ ಬಂದನಯ್ಯ ಪ್ರಭು ದೇವರು.

**ವ. ಶಾ. ಸಾ., ಭಾ. ೧, ಪೃ. ೫೪೦.**

ಭಕ್ತರ ಭವಪಾಶವನ್ನು ಹರಿದೊಗೆದು ನಿಜಭಕ್ತಿಯ ನಿಲವನ್ನು ತೋರುವ ಸುಜ್ಞಾನ ಜಂಗಮವೇ ಮಾರಯ್ಯನವರ ಮನಕ್ಕೆ ಮಹಾಮಂಗಳ.

ಭಕ್ತರು ಭವಪಾಶದಲ್ಲಿದ್ದಹರೆಂದು ಅವರ ತೆಗೆವುದಕ್ಕೆ
ಸುಳಿವ ಜಂಗಮದ ಇರವೆಂತೆಂದಡೆ........

ಮೋ. ಮಾ. ವ. ೧೭೩, ಪು. ೪೧

...... ಇಂತೀ ವೇಷವಧರಿಸಿ ಭಕ್ತನೆಂಬ ಭೂಮಿಯಲ್ಲಿ
ಸಕಲ ಕರಣಂಗಳ ತೀರ್ಥಯಾತ್ರೆಯಂ ಮಾಡುತ್ತ ಕಳೆದುಳಿಯ
ಬಲ್ಲಡೆ ಆತನೆ ಲಿಂಗಜಂಗಮ ನಿಃಕಳಂಕ ಮಲ್ಲಿಕಾರ್ಜುನಾ.

ನೋ. ಮಾ. ವ. ೫೮೧, ಪು. ೧೫೪

........ ಸುತ್ತಿ ಸುಳಿದಾಡುವ ಕಣ್ಣು ಕಿತ್ತು ನಿಶ್ಚಯದ ನಿಜದಲ್ಲಿ
ಚರಿಸುವ ಜ್ಞಾನಜಂಗಮಕ್ಕೆ ನಮೋ ನಮೋ ಎಂಬೆ
ನಿಃಕಳಂಕ ಮಲ್ಲಿಕಾರ್ಜುನಾ.

ನೋ. ಮಾ. ವ. ೫೪೫, ಪು. ೧೫೬

ಇಂತೀ ಜಂಗಮ ಸುಜ್ಞಾನದಲ್ಲಿ ಸುಳಿವ ನಿರಂಜನ ಜಂಗಮ. ಇಂತಹ ಜಂಗಮಕ್ಕೆ ಆಶೆಯೇ ? 'ಆಶೆ ಭವಿ ಜಂಗಮಕ್ಕೆ' ಎಂದು ಮಾರಯ್ಯನವರು ಹಲವಾರು ಸಾರೆ ಸಾರಿ ಸಾರಿ ಹೇಳಿದ್ದಾರೆ. 'ಹಿರಿಯರು ಇಕ್ಕುವ ದಾತಾರನ ಬಾಗಿಲು ಕಾಯ್ದು ಚಿಕ್ಕಳರಾದರು' ಎಂದು ತಾಮಸ ಜಂಗಮವನ್ನು ಅಲ್ಲಗಳೆದಿದ್ದಾರೆ. ಅಲ್ಲದೆ ಅವರು ನೋಡುತ್ತಿರುವಂತೆ ಎಷ್ಟೋ ಜಂಗಮರು ಭಕ್ತರ ಮನೆಗೆ ಹೂ ಕಾಯಿ ನೀರು ಕಟ್ಟಿಗೆ ತಂದು ಅವರ ಮನೆಯಲ್ಲಿ ಜಂಗಮವೆಂದು ಪೂಜಿಸಿಕೊಂಡು ಹೊಟ್ಟೆತುಂಬ ಉಂಡು ನಾಚಿಕೆಗೆಟ್ಟು ಈಶನ ವೇಷವ ಹೊತ್ತು ಮನೆ ಮನೆಗೆ ತಿರುಗಾಡುತ್ತಿದ್ದರು. ಅಂತಹ ವೇಷಗಳ್ಳರನ್ನು 'ಹೆಬ್ಬೊಟ್ಟೆಯ ಡೊಂಬರ'ನ್ನು ಕಂಡು ಮಾರಯ್ಯನವರು ನೊಂದುಕೊಂಡು ಉರಿದೆದ್ದಿದ್ದಾರೆ. ಘಟ್ಟಿವಾಳಯ್ಯ ಪ್ರಭುದೇವರು ಮೊದಲಾದವರಂತೆ ನಿಷ್ಠುರ ನುಡಿವ ಅವರು ಅಂತಹ ತಾಮಸ ಜಂಗಮವನ್ನು ಏನೂ ಉಳಿಸಿಲ್ಲ. ಕರ್ತನ ಸೇವೆಯನ್ನು ಭೃತ್ಯ ಮಾಡಬೇಕಲ್ಲದೆ ಭೃತ್ಯನ ಮನೆಯಲ್ಲಿ ದುಡಿದು ಹೊಟ್ಟೆ ಹೊರೆವ ಜಂಗಮವ ಕರ್ತನೆನ್ನಬಹುದೇ ? ಇಂತಹ ಕೀಳು ಜಂಗಮ ಇತ್ತಿತ್ತ, ನಿಜಜ್ಞಾನವೆಂಬುದು ಅತ್ತತ್ತ, ಆಚೆ ಕಡೆ:—

ಭಕ್ತಿ ಮಂದಿರದಲ್ಲಿ ಪೂಜಿಸಿಕೊಂಬ ಜಂಗಮವ ನೋಡಯ್ಯಾ !
ಜಂಗಮವೆಂಬುದಕ್ಕೆ ನಾಚಿಕೆ ಅಯ್ಯಾ ! ಭಕ್ತರ ಮಂದಿರಕ್ಕೆ ಹೂ
ಕಾಯಿ ಹಣ್ಣು ಹುಲ್ಲು ಹೊರೆ ಕಟ್ಟಿಗೆ ಬೊಕ್ಕಸ ಪರಿಚಾರಿಕತನ

ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ
ಒಡೆಯರೆನಿಸಿಕೊಂಬ ತುಡುಗುಣಿಗೆಲ್ಲಿಯದೋ ನಿಜ
ಜಂಗಮಸ್ಥಲ ? ಹೊಟ್ಟೆಯ ಕಕ್ಕುಲತೆಗೆ ಕಷ್ಟ ಜೀವವ
ಹೊರೆವ ಹೆಬ್ಬೊಟ್ಟೆಯ ಡೊಂಬರ ಕಂಡು ಬಟ್ಟ ಬಯಲಾದೆಯೋ
ನಿಃಕಳಂಕ ಮಲ್ಲಿಕಾರ್ಜುನಾ?

ಮೋ. ಮಾ. ವ. ೧೮೦, ಪು. ೪೩

ಇನ್ನು ಕರದಲ್ಲಿ ಕಪ್ಪರ ದಂಡ, ಕಿವಿಯಲ್ಲಿ ಕುಂಡಲಿ, ಶಿರದಲ್ಲಿ ಜಟಾ ಬಂಧ, ಹಣೆಯಲ್ಲಿ ತ್ರಿಪುಂಡ್ರ, ಕೊರಳಲ್ಲಿ ರುದ್ರಾಕ್ಷಿ ಮೊದಲಾದ ಈಶಲಾಂಛನವ ಹೊತ್ತು ತನ್ನ ತಾ ಮರೆದು ಅನ್ಯರಿಗೆ ಅರಿವ ಹೇಳಿಹೆನೆಂಬ ವೇಷಧಾರಿಗಳಿಗೆ 'ಗ್ರಾಸವಲ್ಲದೆ ನೀವಿಲ್ಲ.' ತಾನೇ ಮರೆದು ಮಲಗಿದ್ದು ಎರಡನೆಯವರನ್ನು ಎಬ್ಬಿಸುವುದೆಂತು? ಹೊಟ್ಟೆಯ ಪಾಡಿಗಾಗಿ ಜಗದ ಕರ್ತನ ವೇಷವನ್ನು ಬಳಸಿಕೊಳ್ಳುವುದೇ ? ದೇಹದಲ್ಲಿ ಜಗದೀಶನ ವೇಷವ ಧರಿಸಿ ಮನದಲ್ಲಿ ಹೊನ್ನು ಹೆಣ್ಣು ಮಣ್ಣಿನ ಆಸೆಯ ಸೋನೆ ಸುರಿದು ವಿಷಯ ಸುಖದ ಕೆಸರಲ್ಲಿ ಬಿದ್ದೆದ್ದು ಗಾಸಿಗೊಳ್ಳುತ್ತಿರುವ ಜಂಗಮವೊಂದು ಜಂಗಮವೇ? ಈಶನ ವೇಷದ ಮರೆಯಲ್ಲಿದ್ದು ಅನ್ಯರ ವಂಚಿಸಿ ಹಿರಿಯರೆನಿಸಿಕೊಂಡು ಬಾಳುವೆನೆಂದಿರುವುದು ನೆಲವ ವಂಚಿಸಿ ಅಡಗಿ ಪಾರಾಗುವೆನೆಂಬ ಕಳ್ಳನ ಲೆಕ್ಕದಂತೆಃ—

........ಅರಿವ ಮನ ಪಾಶಕ್ಕೆ ಸಿಕ್ಕಿ ಪಾಷಂಡಿಗಳಪ್ಪ ಪಾಶವ
ಹೊತ್ತು ತಿರುಗುವ ವೇಷಧಾರಿಗಳೆಲ್ಲರು ಜಂಗಮವಲ್ಲದೆ
ಜ್ಞಾನಜಂಗಮವಲ್ಲ. ಕರದಲ್ಲಿ ಕಪ್ಪರವಿಲ್ಲ. ಕೈಯಲ್ಲಿ ಕಟ್ಟಿಗೆ ಇಲ್ಲ.
ಕರ್ಣದಲ್ಲಿ ಮುದ್ರೆ ಇಲ್ಲ. ಶಿರದಲ್ಲಿ ಜಟಾಬಂಧವಿಲ್ಲ. ಕಕ್ಷೆಯಲ್ಲಿ
ಭಸ್ಮಗಂಟಿಕೆ ಇಲ್ಲ. ಇಂತಿವೆಲ್ಲವು ರುದ್ರನ ವೇಷವ ಹೊತ್ತು
ಗ್ರಾಸಕ್ಕೆ ತಿರುಗುವ ಘಾತಕರೆಲ್ಲರು ಜಂಗಮವೇ? ........

ಮೋ. ಮಾ. ವ. ೫೮೩, ಪು. ೧೫೫

ಇಂತಹ ಅಜ್ಞಾನ ಜಂಗಮವನ್ನು ನೋಡಿ ಮಾರಯ್ಯನವರ ಮನಕ್ಕೆ ಹೇಸಿಕೆ. ಆದರೆ ನಿರಾಳದಲ್ಲಿ ನಿಂದು ಸುಜ್ಞಾನದಲ್ಲಿ ಸುಳಿದು ಭಕ್ತಿ ಭಿಕ್ಷವ ಕೊಂಡು

ಭಕ್ತರ ಪಾವನವ ಮಾಡುವ ಜಂಗಮು ನಿಃಕಳಂಕ ಮಲ್ಲಿಕಾರ್ಜುನ ತಾನೇ ಎಂದು ಮಾರಯ್ಯನವರ ನಿರ್ಧರ ಮತಃ—

> ...... ಮನದಾಶೆಯ ಬಿಟ್ಟು ರೋಷವ ಕಿತ್ತು ಮಹದಾಶ್ರಿತನಾಗಿ
> ನಾನೆಂಬುದ ತಾನರಿದು ನಾನೀನೆಂಬ ಉಭಯವನೇನೆಂದರಿಯದೆ
> ತಾನು ತಾನಾದ ನಿಃಕಳಂಕ ಮಲ್ಲಿಕಾರ್ಜುನ.
>
> ಮೋ. ಮಾ. ವ. ೫೮೩, ಪು. ೧೫೫

ಇಂತಹ ನಿರಾಶಾಭರಿತ ಜಂಗಮು, ಆತ್ಮಜ್ಞಾನವಳವಟ್ಟು ತಂಗಾಳಿಯಂತೆ ತೀಡಿ ಸುಳಿದಾಡುವ ನಿಜ ಜಂಗಮುವನ್ನು ಕಂಡು ಮಾರಯ್ಯನವರು ಪರಮ ಭಕ್ತಿ ಪರಮಾನಂದದಿಂದ ಉಕ್ಕಿದ್ದಾರೆ. ಇಂತಹ ಜಂಗಮುದಿಂದಲೇ ಜಗತ್ತು ಪಾವನವೆಂದು ಹಿಗ್ಗಿ ಹೊರೆಯೇರಿದ್ದಾರೆ. ಇಂತಹ ಜಂಗಮು ಮನೆಗೆ ಬಂದರೆ ಸದ್‌ಭಕ್ತಿಯಿಂದ ತನುಮನವೆಲ್ಲ ಬಾಗಿ ಗುಡಿಗಟ್ಟಿ ಸರ್ವಾಂಗ ಪುಳಕಿತ ನಾಗಿ ಇದಿರೆದ್ದು ಅವರ ಶ್ರೀ ಪಾದಂಗಳಲ್ಲಿ ಹೊಡೆಗೆಡೆದು ಪಾದಾರ್ಚನೆ ಮಾಡಿ ಒಳಗೆ ಬಿಜಯಂಗೈಸಿಕೊಂಡು ಬಂದು ಆಸನದಲ್ಲಿ ಕುಳ್ಳಿರಿಸಿ ಆನಂದ ದಿಂದ ಜಂಗಮಾರ್ಚನೆ ಮಾಡಿ ತಾ ತಂದ ಕಾಯಕದ ಪಡಿಪದಾರ್ಥವನ್ನೆಲ್ಲ ಎಡೆಮಾಡಿ ಅರ್ಥ ಪ್ರಾಣ ಅಭಿಮಾನದೊಡನೆ ತನ್ನನ್ನೇ ಸಮರ್ಪಿಸಿ ಜಂಗಮು ಸಂತೃಪ್ತಿ ಮಾಡಿ ಜಂಗಮು ಪ್ರಸಾದವನ್ನು ಕೊಂಡು ಮಾರಯ್ಯ ನವರ ಜೀವನ ಪರಮಾನಂದ ಪ್ರಸನ್ನವಾಗಿ ತೊಳಗಿ ಬೆಳಗುತ್ತದೆ. ಅದೋ ಅವರ ಸತ್ಯಜೀವನ ಹೀಗೆ ನುಡಿಯುತ್ತಿದೆ:—

> ಭಕ್ತಿ ಎಂಬ ಪಾಶವ ಹೊತ್ತು ಮಾಡುವ ಭಕ್ತನ ಸತ್ಯವು
> ಹೇಗೆಂದಡೆ, ಲಾಂಛನವ ಹೊತ್ತು ಜಂಗಮು ಬಂದರೆ ಮುಯ್ಯಾಂತು
> ಅಡಿಗೆರಗಿ ಮೃಡನೆಂದೆ ಪ್ರಮಾಣಿಸಿ, ಮನದಲ್ಲಿ
> ಒಡಗೂಡಿ ಗುಡಿಗಟ್ಟಿ ಪುಳಕಂಗಳೇರಿ, ಎರಡಿಲ್ಲದೆ
> ತ್ರಿವಿಧಕ್ಕೆ ಬಿಡುವಿಲ್ಲದೆ ಒಡೆಯಂಗೆ ಒಡವೆಯ ಕೊಟ್ಟು
> ಅಡಿ ಎಡೆಯಲ್ಲಿಪ್ಪ ದೃಢ ಚಿತ್ತಂಗೆ ಎಡದೆರಹಿಲ್ಲದೆ
> ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ.
>
> ಮೋ. ಮಾ. ವ. ೧೭೭, ಪು ೪೩

ನಿಜಭಕ್ತಿಯ ನಿರ್ಭರಾನಂದ ಎಷ್ಟು ಸ್ವಚ್ಛವಾಗಿ ಪ್ರತಿಫಲಿಸಿದೆ ಈ ಸತ್ಯವಚ ನದಲ್ಲಿ! ಈ ನಿರ್ಭರಾನಂದವೆಂಬ ಸುಪ್ರಸನ್ನ ಗಂಭೀರ ಗಗನವನ್ನು ಹೊಳು

ಹುಸಿ ಕಪಟ ವಂಚನೆ ಡಂಬು ಡಬ್ಬು ಎಂಬ ತುಣುಕು ಮೋಡವಾದರೂ ಲುಪಿತಗೊಳಿಸಿಲ್ಲ. ಇಷ್ಟೇ ಅಲ್ಲ. ಅಲ್ಲಿ 'ಮಾಡುವಾತನಾ' ನೆಂಬ ಹಮ್ಮು ಬಿಮ್ಮು ಮಿಂಚಿ ಹೊಳೆದಂತೆ ತೋರುವುದಿಲ್ಲ. ಅವರ ಭಕ್ತಿಯ ಮಾಟ ಕೂಟ ಸಹಜಮಾಟ ಸ್ಥಲದ ಮಟ್ಟಕ್ಕೇರಿ ಅಲ್ಲಿಯೇ ಲೀಲೆಯಾಡಿದೆಯೆಂಬುದನ್ನು ಅವರ ಅನೇಕ ವಚನಗಳು ಸಾರಿ ಹೇಳುತ್ತಿವೆ:—

> ...... ಲಾಂಛನಕ್ಕೆ ನಮಿಸಿ ಅಪ್ಯಾಯನಕ್ಕೆ ನೀಡಿ, ತಾ ತಪ್ಪಿಪ್ಪ
> ಭಕ್ತನ ಒಪ್ಪಕ್ಕೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ.
>
> ಮೋ. ಮಾ. ವ. ೬೭೨, ಪು. ೧೬೮

'ಮಾಡುವ ಮಾಟದೊಳಗೆ ತಾನಿಲ್ಲದಿರಬೇಕು' ಎಂಬ ಬಸವಣ್ಣ ನವರ ನಿಜಭಕ್ತಿಯ ವೀಣೆ ಮಾರಯ್ಯನವರ ಮಾತನ್ನೇ ನುಡಿಯುತ್ತಿದೆ. ಇಂತಹ ನಿಜಭಕ್ತಿ ಸುಜ್ಞಾನವೇ ರೂಹುಗೊಂಡು ಚರಿಸಾಡುವಂತಿರುವ ಜಂಗಮಲಿಂಗವ ಮುಟ್ಟಿ ತಾನೂ ಸುಜ್ಞಾನವಾಗಿ ಬೆಳಗಬಲ್ಲುದಲ್ಲದೆ ವಂಚ ನೆಯಭಕ್ತಿ, ಹಮ್ಮಿನ ಭಕ್ತಿಯಿಂದೇನು ? ಮಣ್ಣ ಬೆಕ್ಕು ನನ್ನಿಯ ಮೂಷಕನ ಮುಟ್ಟದುದುಂಟೇ ?

ಶ್ರೀಗುರುಲಿಂಗಜಂಗಮಕ್ಕೆ ತನುಮನಧನವ ಸಮರ್ಪಿಸಿ ತ್ರಿವಿಧ ಪ್ರಸಾದವನಾಸ್ವಾದಿಸಿ ಅಂತರಂಗ ಬಹಿರಂಗ ಸರ್ವಾಂಗವೆಲ್ಲ ಸುಪ್ರಸನ್ನ ವಾಗಿ ಚತುರ್ವಿಧ ಸಾರಾಯಸಂಪತ್ತಿಯಿಂದ ಲಿಂಗಶೋಭನವಾಗಿ ಬೆಳಗಿ ಶೇಷ ಪ್ರಸಾದದ ಪರಮಾನಂದ ಪರಿಣಾಮದೊಳಗೋಲಾಡುತ್ತ ಸಾವ ಕೆಡುವ ಸೀಮೆಯಾಚೆ ಅತ್ತತ್ತ ಬಾಳಿ ಬದುಕಬೇಕೆಂದಿರುವ ಶರಣನ ಶಿವಾನುಭಾವ ಪ್ರಸಂಗವಿನ್ನು. ಅರ್ಪಣ, ಪ್ರಸಾದ, ಆ ಮೇಲೆ ಶಿವಾನುಭಾವ– ಇದು ಶರಣ ಜೀವನದ ನಿತ್ಯಕ್ರಮ. ಶರಣರು ಹೇಳುವಂತೆ 'ಅನುಭಾವವೆಂದರೆ ನೆಲದ ಮರೆಯ ನಿಧಾನ, ಅನುಭಾವವೆಂಬುದು ಅಂತರಂಗದ ರತ್ನ.' ಸ್ವಾನು ಭಾವವಿಲ್ಲದ ಮಾನವ 'ಶ್ವಾನ–ಸೂಕರರಂತೆ ಹೊಟ್ಟೆ ಹೊರೆದುಕೊಂಡು' ವ್ಯರ್ಥ ಕೆಟ್ಟು ಹೋಗುತ್ತಿರುವುದು ಪ್ರತಿನಿತ್ಯದ ನಮ್ಮ ಅನುಭವವಲ್ಲವೇ ? ಹೆಂಡಿರು ಮಕ್ಕಳು ಮನೆ ಮಾರು ಧನ ಧಾನ್ಯ ಏನಿದ್ದರೇನು ? ತನ್ನನೆ ಮರೆದು ಕಳೆದುಕೊಂಡು ಎಲ್ಲ ಎಲ್ಲವ ಗಳಿಸಿ ಕೂಡಿಟ್ಟುಕೊಳ್ಳುವುದು ಯಾರಿಗಾಗಿ ?

For what is a man profited, if he shall gain
the whole world and lose his own soul ?

ಎಂಬ ಕ್ರೈಸ್ತನ ಅಮರ ವಚನವೂ ಇದೇ ಪ್ರಶ್ನೆಯನ್ನು ಕೇಳುತ್ತಿಲ್ಲವೇ ? ನನಗಾಗಿ ಇಷ್ಟೆಲ್ಲ ಖಟಾಟೋಪವೇ ? ನಾನುಂಬುದೆಷ್ಟು ? ತಿಂಬುದೆಷ್ಟು ?

> ಆನೆ ಕುದುರೆ ಬಂಡಿ ಭಂಡಾರವಿದ್ದಡೇನೊ ? ತಾನುಂಬುದು
> ಪಡಿಯಕ್ಕಿ, ಒಂದಾವಿನ ಹಾಲು, ಮಲಗುವದರ್ಧಮಂಚ.
> ಈ ಹುರುಳಿಲ್ಲದ ಸಿರಿಯನಚ್ಚಿ ಕೆಡಬೇಡ ಮನುಜಾ
>
> ಮೋ. ಮಾ. ವ. ೬೪, ಪು. ೧೭

ಪ್ರಪಂಚವೆಂಬ ಪರಮ ಗಂಭೀರ ಮಹಾಸಾಗರದಲ್ಲಿ ಸೀರ್ಪನಿಯಂತಿದ್ದ ನನಗಾಗಿ ಇಷ್ಟೊಂದು 'ರಾಡಿ'ಯೇ ? ಅಂತೆಯೇ ಮಣ್ಣಬೊಂಬೆಯಂಥ ದೇಹ ನಾನೆಂದು ನಂಬಿ ಕೆಡದೆ ಕೇಡಿಲ್ಲದ ಪದವಿಯಲ್ಲಿ ನಿಲಿಸುವ ಆತ್ಮಾನುಭವಕ್ಕಾಗಿ ಶರಣರು ಪ್ರತಿನಿತ್ಯ ಹೆಣಗಿದ್ದಾರೆ.

ಶರಣರ ಮತದಂತೆ 'ಅನುಭಾವವೆಂಬುದು ಆತ್ಮವಿದ್ಯೆ. ಅನುಭಾವವೆಂಬುದು ತಾನಾರೆಂಬುದ ತೋರುವದು. ಅನುಭಾವವೆಂಬುದು ನಿಜನಿವಾಸದಲ್ಲಿರಿಸುವದು.' (ವ. ಶಾ. ಸಾ., ಭಾ. ೧೨, ಪು. ೨೦೯). ತನ್ನ ನಿಜವನರಿವುದೇ ಆತ್ಮವಿದ್ಯೆ. ಈ ವಿದ್ಯೆ ದ್ವೈತಬುದ್ಧಿಯ ಹವಣಲ್ಲ. ತನಗಿದಿರಿಟ್ಟು ತನಗನ್ಯವಾದ ತನ್ನಿಂದ ಭಿನ್ನವಾದ ಬೇರೊಂದು ವಸ್ತುವನ್ನು ನೋಡಬಲ್ಲ ಬುದ್ಧಿ ತನ್ನ ತಾನೇ ಕಾಣಲರಿಯದು. ಆದರೆ ಅರಿವುದು ಅರುಹಿಸಿಕೊಂಬುದು ಎಂಬ ಭಿನ್ನಭಾವವಿಲ್ಲದ ಐಕ್ಯಾನುಭಾವ ತಾನಾರೆಂಬುದನರಿದು ತನ್ನ ತಾನನುಭವಿಸಿ 'ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂತ್ ವಿಜಾನತಃ' ಎಂಬ ಈಶಾವಾಸ್ಯೋಪನಿಷದ್‌ವಚನದಂತೆ ಎಲ್ಲ ತಾನೇ ಎಂಬ ಆತ್ಮವಿಜ್ಞಾನದಲ್ಲಿ ವಿರಮಿಸಬಲ್ಲುದು. ಆತ್ಮವಿದ್ಯೆಯೆಂಬ ಸ್ವಯಂಜ್ಯೋತಿ ಮುಟ್ಟೆ ನಾನೀನೆಂಬುದೆಲ್ಲ ಕರಗಿ ತಾನೇ ತಾನಾಗಿ ಬೆಳಗಬಲ್ಲುದು. ಇದ್ದುದೆಲ್ಲ ಕಣ್ಣಾಗಿ ನೋಡಿದರೆ ಒಳಗೆ ಹೊರಗೆ ಅದು ಇದು ನಾನು ನೀನೆಂಬುದೆಲ್ಲಿ ? ಅಜ್ಞಾನ ಅನೇಕ ಸುಜ್ಞಾನ ಒಂದೇ. ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪನಾದ ತಾನು ಮಾಯಾವರಣವನ್ನು ಹೊದ್ದುಕೊಂಡು ತನ್ನ ತಾ ಮರೆದು ಮಲಗಿ ಮಾನವ ದೇಹದಲ್ಲಿ ಜೀವಾತ್ಮನಾಗಿ

ಕಳೆಗೊಂಡು ಏಳುತ್ತಿಪೆ. ಆದರೇನು ? ಮಾಯೆಯ ಮಾಟ ! ನಾನಷ್ಟೇ ಮುಸುಕು ಮುಂಕಾಗಿ ನಿದ್ದೆ ತಿಳಿದೆಚ್ಚಂತಿದೆ. ಎಚ್ಚತ್ತ ನಾನೇ ನಾನೆಲ್ಲ ಎಂದು ಗೋಡೆ ಕಟ್ಟಿಕೊಂಡು ತನ್ನ ನಿಜದಿರುವಿಗೇ ತಾನೆರವಾಗಿ ಎಲ್ಲ ತಾನಾದರೂ ನಾನೇ ತಾನೆಂಬ ಭ್ರಮೆಗೊಂಡು ಎಲ್ಲ ಎಲ್ಲವನ್ನೂ ತಾನಲ್ಲವೆಂದು ನೇತಿಗಳೆದು ಮಾಯಾಪ್ರಕೃತಿಯ ಇಂದ್ರಜಾಲದ ಮನೆ ದೇಹದಲ್ಲಿ ವಾಸ ಮಾಡಿ ಅದರ ಗುಣಧರ್ಮವೆಲ್ಲ ತನ್ನವೆಂದೇ ಬಗೆದು ಬಣ್ಣಿಸಬಾರದ ಬವಣೆಗೊಳಗಾಗಿದೆ ಜೀವಾತ್ಮ. ನಾನಾರೆಂಬುದನರಿದು ಮೆಲ್ಲಗೆ ಮಾಯಾವರಣವ ನೋಸರಿಸಿ ತನ್ನ ನಿಜಸ್ವರೂಪವನ್ನು ಕಂಡು ತನ್ನ ನಿಜದಲ್ಲಿಯೇ ನಿಂದು ನಿಜಾನಂದಲೀಲಾಲೋಲನಾಗಿರಬಲ್ಲಾತ ಶರಣ. ಶರಣನ ಚರಿತ್ರ ತನ್ನರಿವಿನ ವಿಕಾಸ.

ಮಾರಯ್ಯನವರ ಅರಿವು ಅರಳುವುದು ಹೀಗೆ: —

> **ಅರಿದಲ್ಲಿ ಜ್ಞಾನ ಮರೆದಲ್ಲಿ ಅಜ್ಞಾನ. ನಾನಾರೆಂಬುದನರಿದಲ್ಲಿಯೇ**
> **ಒಂದು ಗುಣ ನಿಂದಿತ್ತು. ತನ್ನ ಮರೆದಲ್ಲಿಯೇ ನಾನಾ ಸಂಚಲವಾಯಿತ್ತು.**
> **ಇದಕ್ಕಿದೇ ದೃಷ್ಟ ದ್ವಯವಿಡಿದುದಕ್ಕೆ. ಎರಡಿಲ್ಲದೆ ಮೀರಲಿಲ್ಲವಾಗಿ**
> **ಜಗವನರಿವುದಕ್ಕೆ ದಿವಾರಾತ್ರಿಯಲ್ಲದೆ ಮೀರಿ ತೋರಲಿಲ್ಲವಾಗಿ**
> **ಸಂಸಾರವ ಹರಿವುದಕ್ಕೆ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲವಾಗಿ.**
>
> **ನೋ. ಮಾ. ವ. ೧, ಪು. ೧**

ತನ್ನ ನಿಜದಿರುವಿನ ಮರವೆಯೇ ಅಜ್ಞಾನ. ನಾನಾ ಸಂಚಲವೇ ಅಜ್ಞಾನ. 'ಏಕಮೇವಾದ್ವಿತೀಯಂ' ಎಂದೆನಿಸುವ ತನಗೆ ಇದಿರಿಟ್ಟು ತೋರುವ ಬೇರೊಂದನ್ನು ಕಾಂಬುದೇ ಅಜ್ಞಾನ. ಹಗಲಿರುಳಿನ ಬೆಳಗು ಕತ್ತಲೆಯಲ್ಲಿ ಪ್ರಕಾಶವಾಗಿ ಪ್ರಕಟವಾಗುವ ಜಗತ್ತೇ ಸತ್ಯವೆಂದಿರುವುದೂ ಅಜ್ಞಾನ. ಇಂಥಹ ಅಂಧಕಾರದಲ್ಲಿ ಗೊತ್ತು ಗುರಿಯಿಲ್ಲದೆ ಕಡೆ ಮೊದಲಿಲ್ಲದೆ ತಿರುಗಿ ತಿರುಗಿ ಸತ್ತು ಹುಟ್ಟಿ ಕಷ್ಟ ಪಡುತ್ತಿರುವ ಮಾನವನ ಜೀವಭಾವದ ಸಂಸಾರ ಅದೂ ಅಜ್ಞಾನ. ತನ್ನ ತಾನರಿದು ತಾನಾರೆಂದು ತಿಳಿದು ನೋಡಿ ದೇಶ ಕಾಲ ವಸ್ತುವಿನ ಸೀಮೆ ಸಂಬಂಧವಿಲ್ಲದೆ ಎಲ್ಲಿ ಎಲ್ಲಿ ತಾನೊಂದೇ ಎಲ್ಲ ಎಲ್ಲ ತಾನೊಂದೇ ಅಂದಿಂದು ಮುಂದೆಂದು ತಾನೊಂದೇ ತನಗಿದಿರಿಲ್ಲ ತನಗೆರಡಿಲ್ಲವೆಂಬುದೇ ಸತ್ಯ ಸತ್ಯವೆಂದು ಕಂಡು ನೋಡಿ, ನಿತ್ಯೋದಿತ

ಸ್ವಯಂಪ್ರಕಾಶದಲ್ಲಿ ಕರಗಿ ತನ್ನಲ್ಲಿ ಸಮರಸವಾಗಿ ಬೆಳಗುವ ಜಗವೆಲ್ಲ ತಾನಾಗಿ, ಘಟದ ಸಂಚಲು, ಸಂಸಾರ ಪರವಾಕಾಶಸ್ವರೂಪನಾದ ತನಗೆಲ್ಲಿ, ಎಂದು ನಿಶ್ಚಯದ ನಿಜನಿವಾಸದಲ್ಲಿ ನಿಲಿಸುವುದು ಸುಜ್ಞಾನ. ಅದೇ ಆತ್ಮ ಜ್ಞಾನ. ಅದೇ ತನ್ನ ನಿಜದರಿವು. ತನ್ನ ತಾನರಿದರೆ 'ತಾನೇ ನಿಃಕಳಂಕ ಮಲ್ಲಿಕಾರ್ಜುನ' ನೆಂಬ ಅರಿವು ಮಾರಯ್ಯನವರಿಗಿದೆ.:—

> ಮನಕ್ಕೆ ಕುರುಹುದೋರದೆ ತನ್ನ ತಾನರಿದಲ್ಲಿ ನಿಃಕಳಂಕ
> ಮಲ್ಲಿಕಾರ್ಜುನ ಭಿನ್ನರೂಪನಲ್ಲ.
>
> ಮೋ. ಮಾ. ವ. ೨೭, ಪು ೮

My Me is God nor do I recognize any other
Me except my God Himself.

ತನ್ನ ಬಿಟ್ಟು ನಿಃಕಳಂಕ ಮಲ್ಲಿಕಾರ್ಜುನದೇವನಿಲ್ಲ. ಆ ದೇವನಿಲ್ಲದೆ ತಾನಿಲ್ಲ ಎಂಬ ಮಾರಯ್ಯನವರ ವಚನಕ್ಕೂ ಜೆನೋವಾದ ಸೇಂಟ ಕ್ಯಾಥರಿನ್‌ಳ ವಚನಕ್ಕೂ ಇರುವ ವ್ಯತ್ಯಾಸವೇನು ?

> ...... ತನ್ನಿಂದಧಿಕವಾದ ವಸ್ತು ಒಂದಿಲ್ಲವಾಗಿ ತಾನೆ ಸಚ್ಚಿದಾನಂದ
> ನಿತ್ಯಪರಿಪೂರ್ಣನುಯನಾದ ಪರಶಿವತತ್ವನೋಡಾ ಅಪ್ರಮಾಣ ಕೂಡಲ
> ಸಂಗಮದೇವಾ.

ಎಂಬ ಮತ್ತೊಬ್ಬ ಶರಣರ ಅಮರವಾಣಿ ಅದೇ ಮಾತನ್ನು ಅದೇ ತತ್ವವನ್ನು ಉದ್ಘೋಷಿಸುತ್ತದೆಯಲ್ಲವೆ ?

ಮಾಯಾನಿರ್ಮಿತವಾದ ವಿಷಯಸಂಸಾರಜಾಲವ ಹರಿದಲ್ಲದೆ ಮಾನವನ ಬಿಡುಗಡೆಯಿಲ್ಲ. ಜಾಲವನ್ನು ಕಿತ್ತೊಗೆವ ಸಮರ್ಥ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲ. ನಿಃಕಳಂಕ ಮಲ್ಲಿಕಾರ್ಜುನ ತಾನಲ್ಲದೆ ಬೇರೆ ಅಲ್ಲ. ಈ ತರ್ಕಸರಣಿ ಸತ್ಯಸಮ್ಮತವಾಗಿದ್ದರೆ ಪರಮ ಪರಂಜ್ಯೋತಿ ನಿಃಕಳಂಕ ಮಲ್ಲಿಕಾರ್ಜುನನಾದ ತನಗೂ ಕತ್ತಲೆಯಲ್ಲಿ ಸುತ್ತಿ ತಿರುಗುವ ನನಗೂ ಏನೋ ಎಲ್ಲಿಯೋ ಸಂಬಂಧ ತಪ್ಪಿರಬೇಕು. ತಾನೇ ತನ್ನ ವಿನೋದಕ್ಕಾಗಿ ತನ್ನ ಮರೆತು ನಾನಾಗಿ ಸಂಸಾರವೆಂಬ ಮಹಾನಾಟಕದ ನಟನಾಗಿ ಆಡುತ್ತಿರಬಹುದು. ಮರೆದ ತಾನೇ ನಾನಾಗಿದೆ. ಅರಿದ ನಾನೇ ತಾನಾಗುತ್ತದೆ. ಮರವೆ ನಾನು. ಅರಿವು ತಾನು.

ವಿಶ್ವರೂಪ ವಿಶ್ವಾಧಿಕ ಪರಮಾಕಾಶ ಪರಮಪ್ರಕಾಶನಾದ ತನಗೆಲ್ಲ ಮರವೆಯೆಂಬ ಕರೆ ಕಂಬಳಿಯ ಹೊದಿಸಿ ದೇಹೇಂದ್ರಿಯ ಕರಣಗಳಾನೆಂಬ ಜೀವಭಾವ ಮಬ್ಬಿನಲ್ಲಿ ಕಣ್ಣು ತೆರೆದು ನೋಡಿದರೆ ತನ್ನ ವಿಕಾರಸ್ವರೂಪ ನಾನು, ನನಗಿದಿರಿಟ್ಟು ತೋರುವ ಕತ್ತಲೆಯ ಜಗವಲ್ಲದೆ ಬೇರೇನು ಕಾಣಬೇಕು? 'ಕಾಳೋದರವೆಂಬ ಮಹಾತಮದಲ್ಲಿ ಒಂದು ಜೀವಭಾವ ವೆಂಬ ಮಾಯೆ ಹುಟ್ಟಿ' ನಾನು ಜಗವೆಂಬ ದ್ವೈತಭಾವದಲ್ಲಿ ಆಡುತ್ತಿದೆ. ದೇಹವೆಂಬ ಚೋಹವ ತೊಟ್ಟು ಭಾವದ ಭ್ರಮೆ ಮನದ ವಿಕಾರ ಕಾಯದ ಕಳವಳದಲ್ಲಿ ಸುತ್ತಿಸುಳಿವ ಜೀವಭಾವದ ಮಾನವನಿಗೆ ಸುಳಿವಿಗೊಳಗಲ್ಲದ ನಿತ್ಯಪರಿಪೂರ್ಣನಾದ ನಿಃಕಳಂಕ ಮಲ್ಲಿಕಾರ್ಜುನ ಗೊತ್ತಾಗುವುದೆಂತು?:—

**ಶರೀರದ ನೆಲಮನೆಯಲ್ಲಿದ್ದು ನೆರೆವಸ್ತುವನರಿವುದಕ್ಕೆ ಕುರುಹಾವುದು?**
**ಸಂಚಾರದ ಪ್ರಕೃತಿಯ ನಿಳಯದಲ್ಲಿದ್ದು ನೆರೆಸುಳುಹಿಗೆ**
**ಒಳಗಲ್ಲದವನ ಅರಿವ ಪರಿ ಇನ್ನೆಂತೋ? ಅರಿದೆನೆಂಬುದು**
**ಅದು ತಾ ಅರಿವೋ, ಮರವೆಯ ತೆರನೋ ಇದು ಎನಗೆ**
**ಅರಿಯಬಾರದು. ಅರಿವೆಡೆಗೆ ಕುರುಹು ಹೇಳಾ ಎನ್ನೊಡೆಯ**
**ನಿಃಕಳಂಕ ಮಲ್ಲಿಕಾರ್ಜುನಾ.**

**ಮೋ. ಮಾ. ವ. ೨೨, ಪು. ೫೩**

ಶರೀರವೆಂಬ ನೆಲಮನೆಯಲ್ಲಿ ಕುಳಿತುಕೊಂಡು ಎಲ್ಲೆಲ್ಲಿ ಪರಿಪೂರ್ಣ ವಾದ ಪರವಸ್ತು ನಿಃಕಳಂಕ ಮಲ್ಲಿಕಾರ್ಜುನನ ನಿಲವನರಿವುದೆಂತು? ನಿಮಿಷ ನಿಮಿಷಾರ್ಧವೆಡೆಬಿಡದೆ ಸಂಚರಿಸುತ್ತಿರುವ ಪ್ರಕೃತಿಯ ಮಾಟದ ಮನೆಯಲ್ಲಿ ಕುಳಿತು ಸಂಸ್ಕೃತಿಗೊಳಗಾದ ಮಾನವನಿಗೆ ವಿಶ್ವವ್ಯಾಪಿಯಾಗಿ ಗಮನಕ್ಕೆಡೆ ದೆರಹಿಲ್ಲದ ನಿತ್ಯನಿಶ್ಚಲವಾದ ಪರಬ್ರಹ್ಮ ಉಳಿವುದೆಂತು? ಇನ್ನು ಅರಿದಿಹೆ ಅರಿದಿಹೆನೆಂಬುದೇನು? ಅದೂ, ಅದು ಅಜ್ಞಾನಾವರಣವನ್ನು ಹೊದ್ದು ಕೊಂಡಿರುವ ಪ್ರಕೃತಿಯಲ್ಲಿ ಮೂಡಿದ ಮರವೆಯೋ? ಇದ ಬಲ್ಲವರಾರು?

ಅಂತೂ ತನ್ನಲ್ಲಿ ತನ್ನಿಂದ ತಾನೇ ನಿಃಕಳಂಕ ಮಲ್ಲಿಕಾರ್ಜುನ ನೆಂದರಿದು ಹೊದ್ದಿದ ಸಂಸಾರವ ಹರಿದೊಗೆದು ನಿಜದಲ್ಲಿ ನಿಂದು 'ಸ್ವಲೀಲಾ ನಂದ ಕ್ರೀವಿಡಿದಾಚರಿಸಬೇಕು' ಈ ಗುರಿಯನ್ನು ಮುಟ್ಟಬೇಕಾದರೆ ಮೊದಲು ಪ್ರಕೃತಿಯೆಂಬ ಕುಂಭಕ್ಕೆ ಹೊರಗಾಗಿ ನಿಲ್ಲಲು ಹವಣಿಸಬೇಕು. 'ಅಂಗವ

ಕಳೆದು ಲಿಂಗವನರಿಯಬಾರದು.' ಅದೂ ನಿಜ. ಬಣ್ಣವ ಕಳೆದು ಬಂಗಾರವ ನೋಡಬಹುದೇ ? ರತ್ನದ ಶಿಲೆಯ ತೆಗೆದು ರತ್ನದ ಕಾಂತಿಯ ಕಾಣ ಬಹುದೇ ? ಲಿಂಗವನರಿವುದಕ್ಕೆ ಅಂಗಬೇಕು. ಆದರೆ ಅಂಗವಿಲ್ಲದಿರಬೇಕು. ಅಂಗವಿದ್ದೂ ನಿರಂಗವಾಗಿರಬೇಕು ಲಿಂಗವನರಿವುದಕ್ಕೆ. ತೊಟ್ಟ ದೇಹವ ಕಳೆದು ಕರಣೇಂದ್ರಿಯಗಳ ಬಿಚ್ಚಿ ತೆಗೆದು ಜೀವಭಾವವ ಸಡಿಲಿಸಿ ಬೇರ್ಪಡಿಸಿ ಬರಿಬತ್ತಲೆಯಾಗದಿದ್ದರೆ ಲಿಂಗವನರಿಯಲಿಲ್ಲ. ಸಂಸಾರ ಹರಿಯಲಿಲ್ಲ. ತನು ಮನ ಭಾವವನೆಲ್ಲ ಬಿಚ್ಚಿ ಬೇರ್ಪಡಿಸಿ ತೆಗೆದಿಡುವ ಬಿನ್ನಾಣ ಮಾನವನ ಹವಣಲ್ಲ. ಪ್ರಕೃತಿಯ ಕುಂಭದಲ್ಲಿಯೇ ಜೀವಿಸಿರುವ 'ಚಟ' ಬಿದ್ದ ಮಾನವನಿಗೆ ಅದನುಳಿದು ಬಾಳುವ ಆಶೆ ಅಪೇಕ್ಷೆ ಇಲ್ಲ. ಕಾಯವೇ ಕೈಲಾಸ ವಾಗಿ ಜೀವವೇ ಪರಶಿವಲಿಂಗವಾಗಿ ಬೆಳಗಿ ಬಾಳುವ 'ಗುಹ್ಯಾತ್ ಗುಹ್ಯ ತರ' ವಾದ ಆತ್ಮವಿದ್ಯೆ, ಬ್ರಹ್ಮವಿದ್ಯೆ, ಲಿಂಗಾಂಗ ಸಾಮರಸ್ಯ ವಿಜ್ಞಾನವನ್ನು ಸಾಧಿಸಲು ಮಾರಯ್ಯನಂತಹ ಶರಣರು ಅನೇಕ ಪ್ರಯೋಗ ಮಾಡಿದ್ದಾರೆ :-

> **ನೇತಿಗಳೆದು ಕಾಯುಕರಣ ಕಾರ್ಯಂಗಳ**
> **ಭೂತಕಾರಣ ಪಂಚಕವನುಳಿದು ।**
> **ನೇತಿ ಭೀತಿಯು ಮೀರಿ ನಿಂದು ನೋಡಲು ಪರಂ**
> **ಜ್ಯೋತಿಸ್ಸ್ವರೂಪ ನೀನಾಗುತಿಂತು ॥**

ಎಂದು ಪರಮಾತ್ಮವಿಜ್ಞಾನಿಗಳಾದ ನಿಜಗುಣಶಿವಯೋಗಿಗಳೂ ಹೇಳುವುದು ಇಂತಹ ಪ್ರಯೋಗದ ಫಲಿತಾಂಶವನ್ನೇ. ಮಾನವನ ಪೃಥಕ್ಕರಣ ಮಾಡಿ ವಿವರಿಸಿ ನೋಡಿ ತಾನಲ್ಲದೆ ತನಗಂಟಿದ ವಿಷಯವಿಕಾರವೆಂಬ ಮಲ ಮೋಹ ಕಾಯ ಕರಣ ಭೂತವನ್ನೆಲ್ಲ 'ನೇತಿ ನೇತಿ' ಎಂದು ತೆಗೆದಿಟ್ಟು ಎಲ್ಲ ತಿಳಿಯಾಗಿ ಉಳಿದ ಉಳಿಮೆ ಪರಂಜ್ಯೋತಿ ಸ್ವರೂಪ, ಅದೇ ಮಾರಯ್ಯನವರ ನಿಃಕಳಂಕ ಮಲ್ಲಿಕಾರ್ಜುನ.

ನಿಃಕಳಂಕ ಮಲ್ಲಿಕಾರ್ಜುನನ ಸ್ವರೂಪವಾದ ತನ್ನನ್ನು ಹುಡುಕಿ ಕೊಂಡು ದೂರದೂರ ಹೋಗಬೇಕಿಲ್ಲ, ವೇದ ಶಾಸ್ತ್ರವನೋದಬೇಕಿಲ್ಲ. 'ಎಲ್ಲಿ ತನ್ನನರಿದಲ್ಲಿಯೇ ತಾನು ನಿಃಕಳಂಕ ಮಲ್ಲಿಕಾರ್ಜುನ.'
(ಮೋ. ಮಾ. ವ. ೩೫, ಪು, ೮೮)
ಎಂಬುದು ಮಾರಯ್ಯನವರ ನಿರ್ಧರ. ಏಕೆಂದರೆ:—

ಓದಿನಲ್ಲಿ ಕಾಬರೆ ಅಕ್ಷರಜ್ಞನಲ್ಲ. ವಾದಿನಲ್ಲಿ ಕಾಬರೆ
ಗಂಧರ್ವನಲ್ಲ. ಬಯಲಿನಲ್ಲಿ ಕಾಬರೆ ಭೂಮಿಯಾಕಾಶ
ಮಧ್ಯದಲ್ಲಿ ಇಪ್ಪವನಲ್ಲ. ಅರಸಿದಡೆ ಎಲ್ಲಿಯೂ ಇಲ್ಲ.
ಅರಸದಿದ್ದಡೆ ಅಲ್ಲಿಹ. ನಿನ್ನ ಬಲ್ಲವರಾರೋ ನಿಃಕಳಂಕ
ಮಲ್ಲಿಕಾರ್ಜುನಾ ?

ಮೋ. ಪಾ. ವ. ೬, ಪು. ೨

ವೇದ ಶಾಸ್ತ್ರ ಆಗಮ ಪುರಾಣ ಕಾವ್ಯ ವಿಜ್ಞಾನಗಳಿಂದ ಹುಟ್ಟುವ ಜ್ಞಾನ ಬುದ್ಧಿಯಿಂದುರಿವ ಬೆಳಗು. ಉಪಾಧಿಯ ಈ ಬೆಳಗು ಸಂದೇಹವೆಂಬ ಗಾಳಿಯ ಪ್ರಳಯಕ್ಕೆ ಒಳಗು. ಆದರೆ ಬಿರುಗಾಳಿ ಬೀಸಿ ರನ್ನದೀವಿಗೆಯನಾರಿಸಬಲ್ಲುದೇ? ಆತ್ಮಜ್ಯೋತಿ ಅದು ಸ್ವಯಂಜ್ಯೋತಿ, ನಿರುಪಾಧಿಕ ಜ್ಯೋತಿ. ಅದನ್ನು ನಂದಿಸಬಲ್ಲ ಗಾಳಿಯಿಲ್ಲ. ಬೀಸುವ ಗಾಳಿಯ ಪ್ರಾಣವಾಯುವದು. ಎಲ್ಲ ಗಾಳಿಯ ಹುಟ್ಟು ಅದರಲ್ಲಿ. ಅದರಿಂದ ಇಂತಹ ಸ್ವಯಂಜ್ಯೋತಿಯೇ ನಾನೇನೆಂಬ ಅರಿವು. ಮರವೆಯೆಂಬ ದ್ವೈತ ಬುದ್ಧಿಯ ಮೂಲ ಚೈತನ್ಯ. ಈ ಮೂಲ ಚೈತನ್ಯ ಜ್ಯೋತಿ ತಾನೇ ತಾನಾಗಿರಲು ಅದನ್ನು ಹುಡುಕುವುದೆಲ್ಲಿ?

The Inner Light is beyond praise and blame,
Like space it knows no boundaries,
Yet it is even here, within us, ever retaining its
serenity and fullness.

It is only when you hunt for it that you lose it,
You can not take hold of it, but equally you can not
get rid of it.

ಎಂದು ಹೇಳುವ ಚೈನಾದೇಶದ ಅನುಭಾವಿಯ ಅನುಭವ ಮಾರಯ್ಯನವರ ಅನುಭವ ಒಂದೇ ಎಂಬಂತಿವೆಯಲ್ಲವೇ ?

ಹಿಂಗುವದಕ್ಕೆ ಠಾವಿಲ್ಲದ ನಿಃಕಳಂಕ ಮಲ್ಲಿಕಾರ್ಜುನನಾದ ತಾನು ಎಲ್ಲೆಲ್ಲಿ ತನ್ಮಯನಾಗಿದ್ದು ತನಗೆ ತಾ ತೋರದಿರಲೇಕೆ ? ಕಣ್ಣಿನ ಕಣ್ಣು ತಾನಾಗಿ ಕಣ್ಣಿಗೇ ಮರೆಯಾಗಿರುವ ಮಾಟವೇನು ? ಮನದ ಮನ

ತಾನಾಗಿ ಮನದ ನೆನಹಿಗೆ ನಿಲುಕದ ಇರವೇನು? ಭಾವದ ಭಾವ ಭಾವಲಿಂಗ ತಾನಾಗಿ ಭಾವದ ಆಲಿಂಗನವನ್ನು ಮೀರಿ ಜಾರುವುದೇಕೆ? ಮಾನವ ಮರೆಯ ಮಹಾದೇವ ತಾನಾಗಿ ಆಳಿಯಾಸೆಯ ಮಾನವನಾಗಿ ತಾನಿನ್ನೂ ಉಳಿದಿರಲೇಕೆ ?

......ಹಸುವಿಂಗಸು ನೀನೇ. ವಿಷಯಕ್ಕೆ ಮನ ನೀನೇ.
ಭೋಗಿಸುವದಕ್ಕೆ ಅಂಗ ನೀನೇ. ಸ್ಫಟಿಕದ ಘಟದೊಳಗಿದ್ದ
ಬಹುರಂಗಿಗನಂತೆ ಎನ್ನಂಗವುಯ ನೀನಾಗಿ ಹಿಂಗಲೇಕೆ
ನಿಃಕಳಂಕ ಮಲ್ಲಿಕಾರ್ಜುನಾ ?

ಮೋ. ಮಾ. ವ. ೫೨, ಪು. ೧೪

ಎಲ್ಲೆಲ್ಲಿ ತುಂಬಿರುವ ನಿಃಕಳಂಕ ಮಲ್ಲಿಕಾರ್ಜುನ ತಾನೆಲ್ಲಿಯೂ ಕಾಣದಿರಲು ಕಾರಣ ನಾನು ಒಳಗೆ ಸತ್ತು ಹೊರಗಾಡುವ ನಾನು ಬಾಹ್ಯ ವಿಷಯ ಪ್ರಪಂಚವನ್ನು ನೆಯ್ದು ಅಲ್ಲಿ ಸಿಕ್ಕು ಪಾರಾಗಲರಿಯದೆ ಒದ್ದಾಡಿ ಕೊಂಡಿರುವುದೇ ಸುಖ ಶಾಂತಿ ಎಂದಿರುವ ಮನ. ತನ್ನ ಮನೆ ಮರೆದು ಮನೆಮನೆ ತಿರುಗಿ ವಿಷಯ ಸ್ಪರ್ಶಸುಖವೆಂಬ ಭಿಕ್ಷೆ ಬೇಡಿ ಉಂಡು 'ಬಿಡಾಡಿ'ಯಾಗಿ ತಿರುಗುವ ಇಂದ್ರಿಯ. ಹೊರಗೆ ಹರಿವ ಇಂದ್ರಿಯ ಮನ ಭಾವ ಒಂದಾಗಿ ಒಳಗಡೆ ತಿರುಗಿ ತಮ್ಮ ಮೂಲ ಉಗಮಸ್ಥಾನವೆಡೆಗೆ ನಡೆದರೆ ಅವೆಲ್ಲ ಮುಟ್ಟುವುದು ತಮ್ಮ ಚೈತನ್ಯ ಜ್ಯೋತಿ ಕೇಂದ್ರವನ್ನು, ಸ್ವಯಂಜ್ಯೋತಿ ಪರಂಜ್ಯೋತಿ ಲಿಂಗವನ್ನು, ತನ್ನ ನಿಜದ ನಿಲವನ್ನು. ಕರಸ್ಥಲದ ಇಷ್ಟಲಿಂಗದಲ್ಲಿ ದೃಷ್ಟಿ, ದೃಷ್ಟಿಯಲ್ಲಿ ಮನ, ಮನದಲ್ಲಿ ಭಾವ, ಆ ಭಾವದಲ್ಲಿ ನೆಲಸಿದ ಪರಶಿವಲಿಂಗ ಪರಮಾತ್ಮ ಪರವಸ್ತು ಪರತತ್ವ ಪರಂಜ್ಯೋತಿ. ಇಂತಹ ಜ್ಯೋತಿ ಮುಟ್ಟಿದ ನಾನು ಸುಟ್ಟು ತಾನಾಗಿ ತೊಳಗಿ ಬೆಳಗುತ್ತದೆ. ಮನವೆಲ್ಲ ಮಹಾಲಿಂಗದ ಮಹಾಮನೆಯಾಗುತ್ತದೆ. ಇಂದ್ರಿಯಗಳೆಲ್ಲ ಮಹಾಲಿಂಗದೇವನಾದ ತನ್ನ ವಿಶ್ವವ್ಯಾಪಾರಕ್ಕೆ ಮುಖದ್ವಾರಗಳಾಗುತ್ತವೆ. ಇಂತಹ ಲಿಂಗಸಂಗವಾಗಿ ಲಿಂಗವೇ ತಾನಾಗಿ ಬೆಳಗಿದ ಮೇಲೆ ಅರಿವುದೇನು? ಅರುಹಿಸಿಕೊಂಬುದೇನು ? :—

"......ಉರಿ ಸೋಂಕಿದ ಕರ್ಪುರಕ್ಕೆ ನಿಲ್ಲುವುದಕ್ಕೆನೆಲೆವುನೆ
ಇನ್ನಾವುದೋ ? ....ಲಿಂಗ ಸೋಂಕಿದ ಮನಕ್ಕೆ ಲಿಂಗವನರಿವುದಕ್ಕೆ

ನೆಲೆಗೊಂಬ ಠಾವಿನ್ನಾವುದೋ ? ಇಂತೀ ಗುಣಂಗಳಲ್ಲಿ ಕಳೆದುಳಿದ
ಮಹಾತ್ಮಂಗೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೩೧೫, ಪು. ೮೦

ಉರಿಯ ಗಂಡನ ಕಪ್ಪುರದ ಕಾಂತೆ ನೆರೆದು ತಾನಳಿದು ಉರಿಯಾಗಿ ತಾನುಳಿವಂತೆ ಲಿಂಗವನರಿದು ಅಪ್ಪಿ ಅಂಗ ಗುಣವಳಿದು ಲಿಂಗವಾಗಿ ಬೆಳಗುವ ಶರಣ ಆತ ಪರಂಜ್ಯೋತಿ ಪ್ರಕಾಶ. ಅಂಗವಿದ್ದೂ ನಿರಂಗನಾತ !

...ಅರಿದವನಂಗ ದಗ್ಧ ಪಟದಂತೆ ಬೆಂದ ನುಲಿಯಂತೆ
ಬೆಳಗಿನ ರೂಪಿನಂತೆ ಉದಕದ ಪ್ರತಿಬಿಂಬದಂತೆ.

ಮೋ. ಮಾ. ವ. ೩೧೦, ಪು. ೭೩

ಭೌತಿಕ ದೇಹದ ಗುಣಧರ್ಮವಿಲ್ಲದ ಆತ ನಿರ್ದೇಹಿ, ನಿರ್ಮನ, ನಿರ್ಭಾವ. ಆತನ ತನುಮನವೆಲ್ಲ ಕರಗಿ ಸುಟ್ಟು ಹೋಗಿದೆ. ತನುವಿದ್ದರೇನು ಅದು ಲಿಂಗತನು. ಮನವಿದ್ದರೇನು ಲಿಂಗದ ಮನ. ಭಾವವಿದ್ದರೇನು ? ಅದು ಪರಶಿವತಾನಾದ ಸ್ವಯಂಭಾವಃ—

ಕರಗಿದ ಬಂಗಾರಕ್ಕೆ ಕರಚರಣಾದಿಗಳು ಇಲ್ಲದಂತೆ
ಆತ ಕುರುಹಡಗಿದ ಷಟ್ಸ್ಥಲಬ್ರಹ್ಮ ನಿಃಕಳಂಕ
ಮಲ್ಲಿಕಾರ್ಜುನ.

ಮೋ. ಮಾ. ವ. ೫೨೬, ಪು. ೧೩೬

ಕರ್ಪುರದ ಗಿರಿಯ ಉರಿಕೊಂಡ ಬಳಿಕ ಕರ್ಪುರದ ಕುರುಹುಂಟೇ ? ಕರ್ಪುರಕ್ಕೆ ಇದ್ದಿಲುಂಟೇ ? ಸರ್ವಾಂಗಲಿಂಗವನಪ್ಪಿದ ಶರಣನ ತನು ನಷ್ಟ, ತನುವಿನ ಕುರುಹೂ ನಷ್ಟ, ಆತನ ಮನ ನಷ್ಟ, ಮನದ ಕುರುಹೂ ನಷ್ಟ, ಜೀವಭಾವ ನಷ್ಟ, ಆ ಭಾವದ ಕುರುಹೂ ನಷ್ಟ. ನಾನೆಂಬುದೂ ನಷ್ಟ, 'ನಾನಿ'ನ ಕುರುಹೂ ನಷ್ಟ. ನಾನೆಂಬುದು ನಷ್ಟವಾದ ಮೇಲೆ ನೀನೆಂಬುದೆಲ್ಲಿ ? ನಿಃಕಳಂಕ ಮಲ್ಲಿಕಾರ್ಜುನನೆಲ್ಲಿ ? ನಾನಿದ್ದರೆ ನೀನು 'ನಾ ಸತ್ತಬಳಿಕ ನೀನೆಲ್ಲಿಯವ ಹೇಳಾ' ( ವ. ಶಾ. ಸಾ., ಭಾ. ೧೨, ಪು. ೫೭೩ ) ಎಂದು ಪ್ರಭುದೇವರು ಗುಹೇಶ್ವರಲಿಂಗಕ್ಕೆ ಇದೇ ಪ್ರಶ್ನೆ ಕೇಳುತ್ತಾರೆ. ನಾನೆಂಬರಿವಿನ ತಳಹದಿಯ ಮೇಲೆ ನೀನೆಂಬ, ವಿಶ್ವಪ್ರಪಂಚವೆಂಬ ಕಟ್ಟಡ. ತಳಹದಿಯೇ ಬಯಲಾದರೆ ಕಟ್ಟಡದ ಮಾತೇಕೆ ? 'ನಾನೆಂಬುದು ಬಯಲಾದರೆ ನೀನೆಂಬುದೂ ಬಯಲು' ಎಂಬುದು ಆತ್ಮವಿಜ್ಞಾನ. ನಾನೇ ನೀನೆಂಬ,

ನಾನೇ ನಿಃಕಳಂಕ ಮಲ್ಲಿಕಾರ್ಜುನನೆಂಬ 'ಚಿದಾನಂದ ರೂಪಃ ಶಿವೋಽಹಂ' ಎಂಬ ಚಿದಹಂಕಾರವಳಿದು ನಷ್ಟವಾದ ಮೇಲೆ, ನಾನೇ ಪರವಸ್ತುವೆಂಬ ಅರಿವು ಕರಿಗೊಂಡು ಕುರುಹಡಗಿದ ಮೇಲೆ ನಾನೆಂಬುದೆಲ್ಲಿ ? ಪರವೆಂಬು ದೆಲ್ಲಿ ? :—

ಕುರುಹು ನಷ್ಟವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನ ನಾವು ನಷ್ಟ.

ಮೋ. ಮಾ. ವ. ೫೧೦, ಪು. ೧೩೨

ನಾನೆಂಬುದು ಬಯಲು, ನೀನೆಂಬುದು ಬಯಲು, ಮಾರಯ್ಯ ಬಯಲು ನಿಃಕಳಂಕ ಮಲ್ಲಿಕಾರ್ಜುನ ಬಯಲು. ಎಲ್ಲ ಎಲ್ಲ ಬಯಲು ಎಲ್ಲ ಎಲ್ಲ ಬೆಳಗು. ಮಾತು ಮನ ಭಾವ ಕಲ್ಪನೆಯಾಚೆ ನಿರುಪಾಧಿಕವಾಗಿ ತಾನೇ ತಾನಾಗಿ ಬೆಳಗುವ ಸ್ವಯಂಜ್ಯೋತಿ. ಅಲ್ಲಿ ಶಬ್ದವೆಲ್ಲ ಮುಗ್ಧ, 'ನಿಶ್ಶಬ್ದಂ ಬ್ರಹ್ಮಮುಚ್ಯತೆ':—

...ಏನು ಎನಲಿಲ್ಲ, ಅದು ತಾನೇ ಅದು ತಾನೇನೂ ಇಲ್ಲ
ನಿಃಕಳಂಕ ಮಲ್ಲಿಕಾರ್ಜುನಾ !

ಮೋ. ಮಾ. ವ. ೪೩೪, ಪು. ೧೧೦

ಇನ್ನು ಮಾರಯ್ಯನವರ ದಾಂಪತ್ಯಜೀವನ. ಮಾರಯ್ಯನವರು ಶರಣ ಪಥವಿಡಿದು ನಡೆದು ನಿಜಲಿಂಗಸಿದ್ಧಿಯನ್ನು ಪಡೆವಲ್ಲಿ ಕಲ್ಯಾಣ, ಬಸವಣ್ಣ ನವರು, ಶರಣಗಣಂಗಳು, ಅವರ ಅನುಭಾವ ಮೂಲಕಾರಣ. ಅವೇ ಮುಖ್ಯ ಕಾರಣವೆಂಬುದು ಮಾರಯ್ಯನವರ ಲಿಂಗಜೀವನವನ್ನು ಸಾಂಗವಾಗಿ ಪರಿ ಶೀಲಿಸಿದರೆ ಸ್ಪಷ್ಟವಾಗಿ ಕಂಡುಬರುತ್ತದೆ. ಅವರ ಜೀವನಪ್ರವಾಹದಲ್ಲಿ ಇನ್ನೂ ಆಳವಾಗಿ ಮುಳುಗಿ ನೋಡಿದರೆ ಆ ಪ್ರವಾಹದ ಪ್ರಬಲ ಪ್ರೇರಕ ಶಕ್ತಿಗಳಲ್ಲಿ ಅವರ ಪರಮಪುಣ್ಯಾಂಗನೆ ಮಹಾದೇವಿಯಮ್ಮನವರೂ ಒಂದು ಮಹಾಶಕ್ತಿಯೆಂದು ಹೇಳಲೇಬೇಕಾಗುತ್ತದೆ. ಲಿಂಗಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯವನ್ನು ಪಡೆವ ಈ ದಂಪತಿಗಳ ಪರಮ ಸುಂದರವಾದ 'ಬೆರಸಿ ಬೇರೆನಿಸದೆರಡಾಲಿಕಲ್ಲುಗಳೇಕಸುರಸವಾದಂತಿ'ರುವ ಸಮರತಿ ಸಮಸುಖ ಸಮರಸ ಜೀವನವನ್ನು ಮಾನವನ ಕಲ್ಪನೆ ಕಲ್ಪಿಸಿ ಕಾಣದು, ಮಾನವನ ನಾಲಗೆ ಬಣ್ಣಿಸಿ ನುಡಿಯದು. ಅದು ಮಾನವ ಹೃದಯಕ್ಕೆ ಬುದ್ಧಿಗೆ ಅಗಮ್ಯ ಅಗೋಚರ.

ಮಾರಯ್ಯನವರ ಸತ್ಯನಿಷ್ಠ ನ್ಯಾಯನಿಷ್ಠುರವಾದ ಪರಮ ಸ್ವತಂತ್ರ ವೀರ ಧೀರ ಜೀವನವನ್ನು ಸಾಧ್ಯವಿದ್ದಮಟ್ಟಿಗೆ ಕಂಡು ಕೊಂಡಿದ್ದೇವೆ. ಮಾರಯ್ಯನವರ ನೈಷ್ಠುರ್ಯ, ಕಂಡುದನ್ನು ಕಂಡಂತೆ ನುಡಿವ ಕೆಂಡದಂತಹ ಮಾತು ನೆರೆಹೊರೆಯವರ ವಿಷಯದಲ್ಲಷ್ಟೇ ಅಲ್ಲ, ತನ್ನ ಹೆಂಡಿರುಮಕ್ಕಳಲ್ಲಿದ್ದ ಕುಂದುಕೊರತೆ ಎಳ್ಳಷ್ಟು ತೋರಿದರೂ ಅವನ್ನು ಕೆಡೆನುಡಿದರಿಷ್ಟೇ ಅಲ್ಲ, ತಮ್ಮ ಶಿವಾಚಾರಕ್ಕೆ ಅನುಸಾರವಾಗಿ ನಡೆಯದಿದ್ದರೆ ತಮ್ಮರ್ಪಣೆಯನ್ನು 'ಹಸಾದ' ವೆಂದು ಕೈಕೊಳ್ಳದಿದ್ದರೆ ಅಂತಹ ಹೆಂಡಿರು ಮಕ್ಕಳೇಕೆ? ಅಂತಹ ಬಂಧು ಬಾಂಧವರ ಸಮಯ ಸಂಬಂಧವೇಕೆಂದು ಮಾರಯ್ಯನವರು ಸಿಡಿದೆದ್ದು ಗುಡುಗಿದ ಸಂದರ್ಭ ಹಲವಾರು:—

> ಭಕ್ತಿ ಜ್ಞಾನಕ್ರಿಯೆಯು ಮೂಟಂಗಳಲ್ಲಿ
> ಚಿತ್ತಶುದ್ಧವಿಲ್ಲದ ಸತಿಯಾದರೂ ಒಲ್ಲೆ. ಪುತ್ರ ಬಂಧುಗಳಾದರೂ ಒಲ್ಲೆ.
>
> ಮೋ. ಮಾ. ವ. ೨೪೦, ಪು. ೫೭

> ... ಸತಿ ಸುತ ಬಂಧುಗಳು ತಪ್ಪಿದಲ್ಲಿ ಭಕ್ತಿಗೆ ಅನುಸರಣೆಯ
> ಮಾಡಿದಡೆ, ಲಿಂಗಕ್ಕೆ ಮಜ್ಜನಕ್ಕೆರೆದಡೆ, ಜಂಗಮಪ್ರಸಾದವ
> ಕೊಂಡಡೆ, ಆ ಅಂಗ ಧರೆಯಲ್ಲಿ ಐಂದಿತ್ತಾದರೆ, ನಾ ನಿಂದ
> ಕಾಯಕಕ್ಕೆ ಭಂಗ, ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಃಕಳಂಕ
> ಮಲ್ಲಿಕಾರ್ಜುನಾ.
>
> ಮೋ. ಮಾ. ವ. ೨೨೪, ಪು. ೫೪

> ಆಚಾರ ಅನುಸರಣೆಯಾಗದಲ್ಲಿ ಸತಿಸುತ ಪಿತಮಾತೆ ಸರ್ವ
> ಚೇತನ ಬಂಧುಗಳಾದರೂ ಗುರುಲಿಂಗಜಂಗಮವಾದರೂ ಒಪ್ಪೇನು....
>
> ಮೋ. ಮಾ. ವ. ೬೨, ಪು. ೧೬

> ಹೀಗಿರು ಎಂದರೆ ಹಾಗಿರದ್ದರೆ ಅವಳು ಸತಿಯಲ್ಲ ನಾನು
> ಪತಿಯಲ್ಲ ... ಸತಿಪತಿ ಇಬ್ಬರು ಏಕವಾದಲ್ಲಿ ನಿಃಕಳಂಕ
> ಮಲ್ಲಿಕಾರ್ಜುನ ಹೆಡಗುಡಿಗೊಳಗಾದ.
>
> ಮೋ. ಮಾ. ವ. ೨೪೧, ಪು. ೫೮

ಇಂತಿವೇ ಮೊದಲಾದ ವಚನಗಳಲ್ಲಿ ಮಾರಯ್ಯನವರ ವಜ್ರಹೃದಯ ಸ್ಪಷ್ಟ ವಾಗಿ ಪ್ರತಿಫಲಿತವಾಗಿದೆ. ಇಂತಹ ಗಂಡರ ಕೂಡಿ ಬಾಳುವೆ ಮಾಡುವುದೆಷ್ಟು ಕಷ್ಟವೆಂಬುದು ಹೆಣ್ಣನೆದೆಗೇ ಗೊತ್ತು. ಆದರೂ ಹುಸಿ ತಪ್ಪು ಅವಿನಯ

ಅಜ್ಞಾನವನ್ನು ನೋಡಿ ಕೆಂಡಕೆಂಡವಾಗುತ್ತಿದ್ದ ಮಾರಯ್ಯನವರು ನನ್ನಿ ಒಪ್ಪು ವಿನಯಜ್ಞಾನವನ್ನು ನೋಡಿ ಹಿಗ್ಗಿ ಹೊರೆಯೇರಿ ನಲಿದಾಡಿ ತಲೆ ಬಾಗುತ್ತಿದ್ದರು. ಶಿವಪಥದಲ್ಲಿ ನಡೆದು ಶಿವಜ್ಞಾನವನರಿದ ಗುರುವಿರಲಿ ಲಿಂಗ ಜಂಗಮವಿರಲಿ ತನ್ನ ಕೈ ಹಿಡಿದ ಹೆಂಡತಿಯೇ ಆಗಿರಲಿ ಅವರೆಲ್ಲ ಮಾರಯ್ಯನವರಿಗೆ ಸನ್ಮಾನ್ಯರೇ. ಲಿಂಗಾಂಗಸಂಗಿಗಳಾದ ಅವರಲ್ಲಿ ತನ್ನ ತಪ್ಪನೊಪ್ಪಿಕೊಂಡು ತನ್ನ ಸಂದೇಹ ಸಮಸ್ಯೆಗಳನ್ನೆಲ್ಲ ಅವರಿಂದ ಪರಿಹರಿಸಿಕೊಳ್ಳಲು ಅವರು ಎಂದೂ ಹಿಂದೆ ಮುಂದೆ ನೋಡಿಲ್ಲ. ಮಹಾದೇವಿಯಮ್ಮ ತನ್ನ ಭಕ್ತಿಯ ಶಕ್ತಿ, ತನ್ನ ಮುಕ್ತಿಕಾಂತೆ ತನ್ನ ಚಿದಂಗನೆ ಎಂಬರಿವು ಮಾರಯ್ಯನವರಿಗೆ ಸಂಪೂರ್ಣ ಇದೆ. ಪ್ರಜ್ವಲಿಸುವ ಮಹಾಲಿಂಗದ ಸರ್ವಮಂಗಲ ಪ್ರಕಾಶದಲ್ಲಿ ಎಚ್ಚತ್ತು ಬಾಳುವ ಸತಿಪತಿಗಳ ಸಾಮರಸ್ಯ ಜೀವನವೇ ಲಿಂಗಾಂಗಸಾಮರಸ್ಯದ ಒಳದಿರುಳೆಂದು ಮಾರಯ್ಯಮಹಾದೇವಿಯಮ್ಮನವರ ಸಮರಸೈಕ್ಯಜೀವನ ಸಾರಿ ಘೋರಿಡುವಂತಿದೆ. ಸರಸ ಸಮರಸ ದಾಂಪತ್ಯಜೀವನದ ಅರ್ಥ ಮತ್ತಿನ್ನೇನು ?

ಇಂತಹ ಸಾಮರಸ್ಯಜೀವನದಲ್ಲಿ ಮೊದಲು ಮಾರಯ್ಯನವರ ಪುಣ್ಯವನಿತೆ ಮಹಾದೇವಿಯಮ್ಮನವರ ಲಿಂಗಜೀವನ ವಿಕಾಸಕ್ರಮವನ್ನು ಬುದ್ಧಿಯ ಮೈತೊಳೆದು ಪರಿಶುದ್ಧಚಿತ್ತರಾಗಿ ಪ್ರಸನ್ನ ದೃಷ್ಟಿಯಿಂದ ತಿಳಿದು ನೋಡಿ ಆ ಮೇಲೆ ಅವರ ದಿವ್ಯದಾಂಪತ್ಯ ಜೀವನದ ಸಾರಸೌಂದರ್ಯವನ್ನು ಅನುಭವಿಸಿ ಆನಂದರಸದೊಳಗೋಲಾಡಿ ತೇಲಾಡಬಹುದು.

'ಎತ್ತು ಎರೆಗೆಳೆದರೆ ಕೋಣ ಕೆರೆಗೆಳೆಯಿತೆ'ಂಬ ವಿಷಮ ವಿರಸ 'ಚಂಡಿ' ಜೀವನ, 'ಅಂತೂ ಇಂತೂ ನಡದದ, ಮಾಡಿಕೊಂಡ ತಪ್ಪಿಗೆ ಉಣಬೇಕು, ಹಣ್ಯಾಗ ಬರದದ್ದ ತಪ್ಪಿಸಲಿಕ್ಕೆ ಯಾರಿಗಾಗ್ತದ ?' ಎಂಬ ನಿರಾಶೆಗೆ ದೂರಾಶೆಯನುಣಿಸಿ, 'ಎಲ್ಲಾರ ಮನ್ಯಾಗೂ ಇದ ಹಾಡು' ಎಂದು ಹೇಗೋ ಏನೋ ಸಮಾಧಾನ ಹೇಳಿ ನಡೆದಿರುವ ಲೋಕಸಾಮಾನ್ಯಜೀವನ, ಗಂಡ ಶಿಷ್ಟನಿರಲಿ ದುಷ್ಟನಿರಲಿ ಅದನ್ನೇನೂ ವಿಚಾರಿಸುವ ಅಧಿಕಾರ ತನಗಿಲ್ಲೆಂದು ಆತನ ನೆಳಲಾಗಿ ಹಿಂಬಾಲಿಸಿ ನಡೆದು ಸ್ವರ್ಗ ಕೈಲಾಸ ವೈಕುಂಠ ಸೇರಿ ಸುಖವಾಗಿರಬೇಕೆಂದಿರುವ ಸಮಾಜಕ್ಕೆ ಆದರ್ಶರೆನಿಸುವ ಮಹಾಪತಿವ್ರತೆಯರ ಕೈಹಿಡಿದು ನಡೆವ ಆದರ್ಶ ಜೀವನ, ಇಲ್ಲವೆ ಹೆಂಡತಿಯೇ ಪರದೈವೆಂದಿರುವ

ರುವ 'ಮಹಾಸತಿವ್ರತ' ಜೀವನ ಇಂತಿವೇ ಮೊದಲಾದ ವಿವಿಧ ದಾಂಪತ್ಯ ಜೀವನವನ್ನು ನೋಡಿ 'ನಾನ್ಯಃ ಪಂಥಾ ವಿದ್ಯತೇಽಯನಾಯ' ಎಂಬ ನಿರ್ಣಯಕ್ಕೆ ಬಂದು ಯಾವುದೊಂದು ಪಡಿಯಚ್ಚಿಗೆ ಬಿದ್ದು ಬಾಳುವ ನಾವು ಶರಣಪಥವಿಡಿದು ನಡೆದ ಮಾರಯ್ಯ ಮಹಾದೇವಿಯಮ್ಮನವರಂತಹ ಲಿಂಗ ಶರಣರ ಸಮರಸದ ಬಾಳುವೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅತ್ಯವಶ್ಯ. ದಾಂಪತ್ಯಜೀವನ ದಿವ್ಯಪಥದಲ್ಲಿ ಕಾಲ್ತೊಡಕೇ, ಇಲ್ಲವೇ ಪ್ರಬಲ ವಾದ ಪ್ರಚೋದಕ ಶಕ್ತಿಯೋ ? ಮನೆ ಮಾಡಬೇಕೇ ? ಗುಡ್ಡ ಸೇರಬೇಕೇ ? ಎಂಬಿಂತಹ ಹಲವಾರು ಜಟಿಲಸಮಸ್ಯೆಗಳನ್ನು ಬಿಡಿಸುವಲ್ಲಿ ಶರಣರ ದಾಂಪತ್ಯಜೀವನ ಪರೋಪಕಾರ ಮಾಡಬಹುದೆಂದೆನಿಸುತ್ತದೆ.

ಮಹಾದೇವಿಯಮ್ಮನವರ ಸ್ವಾನುಭಾವ ವಚನಗಳನ್ನು ಪರಿಶೀಲಿಸಿದರೆ ಅಮ್ಮನವರು ಸಂಸಾರದ ದಂದುಗದಲ್ಲಿ ಸಿಕ್ಕು 'ಇಲ್ಲಿಗೆ ನೆಲೆಯ ಕಾಣದೆ ಅಲ್ಲಿಗೆ ಹೊಲಬು ದೋರದೆ' ಎಳತಟಗೊಂಡು ಅತ್ತ ಇತ್ತ ತಿರುಗಿ ತೊಳಲಿ ಬಳಲಿದಂತೆ ತೋರುವುದಿಲ್ಲ. ಮಾರಯ್ಯನವರ ಎಡೆಯಾಟ ಅವರ ಸಂದೇಹ ಸಂಸಾರ ಅವರ ಸಂಕಲ್ಪ ವಿಕಲ್ಪ ಇವರಲ್ಲಿ ತೋರುವುದಿಲ್ಲ. ವಚನಗಳಿಂದೊಡ ಮೂಡುವ ಇವರ ಮಂಗಲ ಮೂರ್ತಿ ಲಿಂಗ ಜೀವನವನ್ನು ಜೀವಿಸಲು ಸನ್ನದ್ಧವಾದಂತೆ ತೋರುತ್ತದೆ. ಮಾರಯ್ಯನವರಿಗಿಂತ ಇವರೇ ಮೊದಲು ಲಿಂಗಸಿದ್ಧಿ ಪಡೆದಿರಬಹುದೆಂದೆನಿಸುತ್ತದೆ. ಕಷ್ಟ ನಷ್ಟಕ್ಕೊಳಗಾದ ಮಾರಯ್ಯ ನವರ ಅನುಭಾವದಲ್ಲಿ ಕೆಚ್ಚಿರಬಹುದು. ಆದರೆ ಅಮ್ಮನವರ ಸ್ವಾನುಭಾವ ನಿರ್ಮಲವಾಗಿ ಸುಪ್ರಸನ್ನವಾಗಿ ಬೆಳಗುತ್ತದೆ.

ಸಕಲ ಭೋಗೋಪಭೋಗಗಳನ್ನೆಲ್ಲ ಕಳೆದುಳಿದು ಕಾಶ್ಮೀರದರ ಸೊತ್ತಿಗೆ ಬಿಟ್ಟು ಬರುವಾಗ ಮಾರಯ್ಯನವರ ಅಪ್ಪಣೆಯಂತೆ ತೊಟ್ಟ ಬಟ್ಟೆಯನ್ನೆಲ್ಲ ತೆಗೆದೊಗೆದು ದಿಗಂಬರಿಯಾಗಲು ಹಿಂದೆ ಮುಂದೆ ನೋಡದೆ ಗಂಡನೊಡನೆ ಕಲ್ಯಾಣಕ್ಕೆ ಬಂದು ಅಂಗಸಂಗಕ್ಕೆಡೆಗೊಡದೆ ಸರ್ವಾಂಗ ಲಿಂಗಸಂಗಿಯಾಗಿ ಬಾಳಿ ಬದುಕಿ ನಿತ್ಯತ್ವದಲ್ಲಿ ನಿಂದ ಮಹಾದೇವಿಯಮ್ಮ ನವರ ಮಹಾಬೆಳಗಿನ ಮೂರ್ತಿ ಅವರ ಅನುಭಾವಗೀತಾಮೃತಸಾಗರದಿಂದ ಉದಯವಾಗುವುದಿಂತುಃ—

'ಅಂಗಸಂಗಿಗಳಿಗೆ ಭಕ್ತಿ ವಿರಕ್ತಿ ಎಲ್ಲಿಯದೋ ?'

ಎಂದು ಕೇಳುವ ಅವರ ಸದಮಲ ಭಕ್ತಿಯಿಂದ ಪ್ರಜ್ವಲಿತವಾದ ವೀರ ವಿರಕ್ತಿಗೆ ಅಂಗದ ಸಂಗ ಸೊಗಸಿಲ್ಲ, ಜೀವ ಭಾವದ ಹೊಲಸು ಹೊಲೆ ಒಗ್ಗಿಲ್ಲ. ಬೆಳುದಿಂಗಳನ್ನುಂಡು ಬದುಕುವ ಚಕೋರಂಗೆ ಹೆಂಡ ಆಗಿಬಂದೀತೇ ? ಹಾಲುಗಡಲ ಹಂಸೆ ಮಜ್ಜಿಗೆಯ ಮೇಲಿದ್ದೀತೇ ? 'ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ' ಲಿಂಗಸಂಗದಲ್ಲಿ ಪರಮಾನಂದಾಮೃತ ರಸಸಾಗರದಲ್ಲಿ ಬಾಳಿ ಬದುಕುವ ಶಿವಾಪೇಕ್ಷೆಯುಳ್ಳ ಅಮ್ಮನವರು ಅಲ್ಪ ಸುಖದ ಅಳಿಯಾಸೆಗೆ ಒಡಲಾಗಿ ತಮ್ಮ ಮಹಾಂತ ಲಿಂಗಜೀವನವನ್ನು ಮರೆದು ಅಜ್ಞಾನ ದುಃಖ ನೀಚ ವಿಷಮ ಮೋಹ ಅಂಧಕಾರ ತುಂಬಿ ಮಹಾಪೂರವಾಗಿ ಹರಿವ ಮಲಿನ ಜೀವನವನ್ನು ಜೀವಿಸಲು ಬಯಸ ಬಹುದೇ ? ಬಯಲಿಗೆ ಸೆರೆಮನೆಯ ಸಂಗ ಸುಖವೇ ? ಸೂರ್ಯನ ಮನೆಯಲ್ಲಿ ಸೊಡರ ಸಡಗರವೇ ?

ಅಮ್ಮನವರ ಶಿವಭಾವಕ್ಕೆ ಪ್ರಪಂಚದ ಲೇಪವಾಗಿಲ್ಲ. ಇಷ್ಟೇ ಅಲ್ಲ, ವಿಷಮ ಸಂಸಾರ ಸಾಗರದಲ್ಲಿ 'ರಾಡಿಯಾಟ'ವನಾಡುತ್ತ ದುಃಖವೇ ಸುಖ, ಅಜ್ಞಾನವೇ ಜ್ಞಾನವೆಂದು ಹಿಂದು ಮುಂದನರಿಯದೆ ಬಡಿದಾಡಿ ತಿಂದುಂಡು ಸಾವುದೇ ಸಾರ್ಥಕವೆಂದಿರುವ ಮರೆದ ಮಾನವ ಕೋಟಿಯನ್ನು ಸುತ್ತು ಮುತ್ತು ನೋಡಿ ಬೆರಗಾಗಿ 'ಇಂತಹ ಬಾಳು ಬಾಳೇ ? ಮರೆಯ ಲಿಂಗವಾದ ಮಾನವನಿಗಿದು ಚೆಲುವೇ ? ವಿಷಯ ಸುಖ ಮುಚ್ಚಿದ ಮನ ಲಿಂಗವ ಮುಟ್ಟಬಲ್ಲುದೇ ? ಅಜ್ಞಾನದಲ್ಲಿ ಹೊಳಿಸಿಕೊಂಡು ತರ್ಕಕ್ಕೆ ಹೋರುವ ಭಿನ್ನ ಭಾವದ ಬುದ್ಧಿ ಶಿವಜ್ಞಾನ ಸ್ವಂಯಜ್ಯೋತಿಯನೆತ್ತ ಬಲ್ಲುದು ? ಃ —

'ಸಂಸಾರ ಸಾಗರದಿಂದಲುದಿಸಿದ ಸುಖವೇ ದುಃಖವೆಂದರಿಯದೆ
ಆ ಸುಖವನೇ ಮೆಚ್ಚಿ ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ,
ಅಲ್ಲಿ ತನ್ನ ಮರೆದು ತನಗಿಲ್ಲದ ಭ್ರಮೆಯು ತನ್ನದೆಂದು
ಅಂತಪ್ಪ ಘೋರದೊಳಗೋಲಾಡುತ್ತಿಪ್ಪ ಮುಳುಗಾಡುತ್ತಿಪ್ಪ
ಅಜ್ಞಾನಿ ಜೀವಿಗಳು ನಿಮ್ಮನೆತ್ತ ಬಲ್ಲರಯ್ಯಾ ಎನ್ನಯ್ಯ
ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ?

ಮ. ವ. ೬೫, ಪು, ೨೮೬

ಮಹಾದೇವಿಯಮ್ಮನವರ ವಿಷಯವಿರಕ್ತಿ ಎಷ್ಟು ತೀವ್ರ ತೀಕ್ಷ್ಣವೋ ಅಷ್ಟೇ ತೀವ್ರ ಅಷ್ಟೇ ತೀಕ್ಷ್ಣ ಅವರ ಲಿಂಗಭಕ್ತಿ. ಅವರ ವಿರಕ್ತಿಭಕ್ತಿಗೆ ಬೀಜವಾದ ವಿವೇಕ ಬುದ್ಧಿ ನಿಜಭಕ್ತಿಯ ನಿತ್ಯತತ್ವವನ್ನು ತಿಳಿದುನೋಡಿದೆ. ಅವರ ಭಾವವೆಲ್ಲ ಭಕ್ತಿಯಲ್ಲಿ ತೊಯ್ದು ಮೃದುಮಧುರ ಗಂಭೀರವಾಗಿದೆ. ಅಂತಹ ಸದ್‌ಭಾವ ಸಂಪದದಿಂದಲೇ ಹರಿಯಬಲ್ಲುವು ಇಂತಹ ಅಮರ ಗೀತೆಗಳು:—

...ಪೂಜಿಸುವರ ಬಲ್ಲೆ. ಪೂಜಿಸಿದ ಲಿಂಗ ಅಭಿಮುಖವಾಗಿ
ಸರ್ವಾಂಗದಲ್ಲಿ ವೇಧಿಸುವರ ಕಾಣೆ....

ಮ. ವ. ೧೧, ಪು, ೨೭೨

ಅಗ್ಗಣಿ ಪತ್ರಿ ಪುಷ್ಪ ಗಂಧ ಅಕ್ಷತೆ ಧೂಪ ದೀಪದ ಬಂಡಿ ಬಂಡಿ ಪೂಜೆ ಮಾಡಬಹುದು. ಆದರೇನು? ಪತ್ರಿ ಪುಷ್ಪದ ಪೂಜೆ ಪರಿಮಳ ಲಿಂಗವ ಮುಟ್ಟುವುದೆಂತು? ಮಾಡಿದ ಪೂಜೆಯ ಕೊಂಡು ಮೆಚ್ಚಿ ತಲೆದೂಗಿ ಲಿಂಗಯ್ಯನ ಮನ ಕರಗಿ ಆತನ ಪರಮಾನಂದ ಪ್ರಕಾಶದ ಮಹಾಪೂರ ಮೇರೆದಪ್ಪಿ ಪೂಜಿಸುವ ಭಕ್ತನ ಮೇಲೆ 'ಸಾಸಿವೆಯ ಮೇಲೆ ಸಾಗರ ಹರಿವಂತೆ' ಹರಿದು, ಆತನ ಕೈಕಾಲು ಕಣ್ಣು ಕಿವಿ ಆತನ ಪ್ರಾಣ ಮನ ಭಾವ ಆತನ ಎಲ್ಲ ಎಲ್ಲವನ್ನು ತನ್ನ ಪರಮಾನಂದ ಪ್ರಭೆಯಿಂದ ತುಂಬಿ, ಆತನ ಕೋಟಿ ಕೋಟಿ ಕತ್ತಲೆಯನ್ನು ಕಳೆದು ಅಂಗವನೆಲ್ಲ ಲಿಂಗ ವೇಧಿಸುವು ದೆಂತು? ಪೂಜಿಸಿ ಫಲವೇನು ಲಿಂಗದೇವನ? ನಲ್ಲನ ಮನ ಮುಟ್ಟದ ಸರ್ವಾಂಗಸುಂದರಿಯ ವಿಭ್ರಮ ವಿಲಾಸದಿಂದೇನು? ಅರಸನರಿಯದ ಬಿಟ್ಟಿ ಮಾಡಿದರೆ ತನಗೇನು? ನಡೆದಂತೆ ನುಡಿವ ನುಡಿದಂತೆ ನಡೆವ 'ಕ್ರಿಜ್ಞಾನ ನಿರುತವಾದಂಗಲ್ಲದೆ' ಲಿಂಗಯ್ಯನೊಲುಮೆ ಇಲ್ಲ. ಸತ್ಯ ಸನ್‌ಮಾರ್ಗ ಭಕ್ತಿ ವಿಶ್ವಾಸದಲ್ಲಿ ತಪ್ಪದೆ ಶಿವನಿರುವ. ಮಾಡುವ ಪೂಜೆಯಲ್ಲಿ ಭಕ್ತಿವಿಶ್ವಾಸ ಜ್ಞಾನ ಕ್ರಿಯೆ ಇಲ್ಲದಿದ್ದರೆ ಅದೊಂದು ಪೂಜೆಯೆ? 'ಎನಿಸು ಕಾಲ ಕಲ್ಲು ನೀರೊಳ ಗಿದ್ದಡೇನು ನೆನೆದು ಮೃದುವಾಗಬಲ್ಲುದೇ?' ಎಂದು ಬಸವಣ್ಣನವರು ಕೇಳು ವಂತೆ ಮಹಾದೇವಿಯಮ್ಮನವರೂ 'ಸದಾಚಾರ ಸದ್‌ಭಕ್ತಿಯಿಲ್ಲದ ಪೂಜೆ ವ್ಯರ್ಥ, ಅದು ಪರವಸ್ತು ಪರಶಿವಲಿಂಗವ ಮುಟ್ಟಲಾರದು' ಎಂದುದು:—

> ಕಲ್ಲ ಬಿತ್ತಿ ನೀರನೆರೆದಲ್ಲಿ ಪಲ್ಲವಿಸುವುದೇ ದಿಟದ ಬೀಜದ
> ವೃಕ್ಷದಂತೆ? ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರುಭಕ್ತಿ
> ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತಲೆ ಉಳಿಯಿತ್ತು.
> ಮತ್ತೆ ನಿಜವಸ್ತುವಿನ ಸುದ್ದಿ ನಿಮಗೆತ್ತಣದೋ ? ಎನ್ನಯ್ಯ
> ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ವಿಶ್ವಾಸ ಬೇಕು.
>
> ಮ. ವ, ೧೭, ಪು. ೨೭೪

ಭಕ್ತಿ ವಿಶ್ವಾಸವಿಲ್ಲದ ಪೂಜೆ ಕಲ್ಲಿನ ಬೀಜ ಬಿತ್ತಿ ಕಲ್ಲುಮರನ ಬೆಳೆಸ ಬೇಕೆನ್ನುವ ಮರುಳನ ಮಾಟ ! ಭಕ್ತಿ ವಿಶ್ವಾಸ ತುಂಬಿದ ಪೂಜೆ ಪಲ್ಲವಿಸುವ ಕ್ರಮವನ್ನು ಅಮ್ಮನವರು 'ಅಂಗಕ್ರಿಯೆಯನರಿವಲ್ಲಿ ಸ್ಥಾಣುವಿನ ಛಾಯ ತಿಲದಂತೆ' ಎಂದು ಸಾರವಾಗಿ ಹೇಳಿದ್ದಾರೆ. ಈ ಮಾತಿನ ಮರೆಯ ಜ್ಯೋತಿಯನ್ನು ಟೀಕಾಕಾರರು ಹೀಗೆ ಪ್ರಕಟಮಾಡಿದ್ದಾರೆ:—

> ಎಳ್ಳನು ಗಾಣದಲ್ಲಿಕ್ಕಿ ಕ್ರೀಯಿಂದ ಬಾಧಿಸಿದಡೆ
> ತಿಲದಲ್ಲಿರ್ದ ತೈಲ ಪ್ರತ್ಯಕ್ಷವಾಗಿ ಕೈಸಾರುವಂತೆ
> ಆತ್ಮಾಂಗವ ಶಿವಕ್ರೀಯಿಂದ ಬಾಧಿಸಿದಡೆ ಆತ್ಮಾಂತರ್ಗತ
> ವಾಗಿರ್ದ ಚಿಲ್ಲಿಂಗವು ಪ್ರತ್ಯಕ್ಷವಾಗಿ ಕರಸ್ಥಲದಲ್ಲಿ
> ಕಾಣಬಹುದು.

ಕರಸ್ಥಲದ ಇಷ್ಟಲಿಂಗ ಪರಸ್ಥಲದ ಪರಮಜ್ಯೋತಿಯಾಗಿ ಪ್ರಜ್ವಲಿಸಿ ತೊಳಗಿ ಬೆಳಗಿ ಅಂಗದತ್ತ ಅಭಿಮುಖವಾಗಿ ಹರಿದು ಕರ್ಪುರದ ಅರಣ್ಯವನ್ನು ಧಗಿಲ್‌ಧಗಿಲೆಂದು ಕೇಸುರಿ ಕೊಳ್ಳುವಂತೆ ಭಕ್ತನ ಸರ್ವಾಂಗವನ್ನೆಲ್ಲ ಚುಚ್ಚಿ ನಾಂಟಿ ಸುಟ್ಟು ಆತನನ್ನು ಬೆಳಗು ಮಾಡಿ ಬೆಳಗಿದರೆ ಅದು ಲಿಂಗಪೂಜೆ. ಇಂತಹ ಪೂಜೆಯ ಮಾಟ ಅಮ್ಮನವರ ನಿತ್ಯಾನುಭವ. ಇಂತಹ ಪೂಜೆ ಲಿಂಗಯ್ಯನನೊಲಿಸುವುದಕ್ಕಾಗಿ ಆತನ ಮೆಚ್ಚಿಗಾಗಿ ಹಿಂಡು ಜನ ಮೆಚ್ಚಿ ಕೊಂಡಾಡಿರಬೇಕೆಂದು ಇಂತಹ ಪರಮಪೂಜೆಯನ್ನು ಬೀದಿಯಲ್ಲಿ ಬಿತ್ತರಿಸು ವುದೇ ? ಮನದನ್ನೆಯೂಟ ತನ್ನ ನಲ್ಲನಿಗಾಗಿ. ನಲ್ಲನ ಮರೆದು ಬಲು ಚೆಲುವೆಯೆಂದು ಬೀದಿಯ ಜನದೊಡನೆ ಚಿನ್ನಾಟವೇ ? ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯ ಗತಿಯೇನು ? ಪ್ರಕಟ ಪೂಜೆಯಿಂದೇನು? ಖ್ಯಾತಿಯ ಮಾಟವೇಕೆ ? ಪರಶಿವಲಿಂಗದ ಪೂಜೆಯ ಮಾರಿ ಹೊಟ್ಟೆ ಹೊರೆವುದೇ ? ಕೀರ್ತಿಯ ಗಳಿಸುವುದೇ? :—

ಕುಟಿಲದಿಂದ ಘಟವ ಹೊರೆವಂಗೆ ಪ್ರಕಟ ಪೂಜೆಯು
ಲ್ಲದೆ ಅಘಟಿತಂಗುಂಟೇ ಅಖಿಳರ ಮೆಚ್ಚಿನ ಪೂಜೆ?

ಮ. ವ. ೧೫ ಪು. ೨೭೩.

ನಿಜಭಕ್ತಿಯ ಸೂಕ್ಷ್ಮವನ್ನು ಚೆನ್ನಾಗಿ ತಿಳಿದ ಅಮ್ಮನವರ ಸ್ವಾನುಭಾವ ಪೂಜೆ ಲೋಕದ ಆಟ ನೋಡಿ ಛೀ ಎಂದು ಅಲ್ಲಗಳೆದಿದೆ. ಅವರ ನಿಜಲಿಂಗ ಪೂಜೆಯರಳಿ ಹೂವಾಗಿ ಹೀಗೆ ಹಾಡುತ್ತಿದೆ.—

> ಹೃತ್ಕಮಲ ಮಧ್ಯದಲ್ಲಿಪ್ಪ ಲಿಂಗವ ಸರ್ವಾಂಗದಲ್ಲಿ ವೇಧಿಸಿ,
> ಪರಿಪೂರ್ಣವಪ್ಪ ಲಿಂಗವ ಅಂತರ್ಮುಖದಿಂದ ಬಾಹ್ಯಕ್ಕೆ
> ತಂದು, ಪಂಚಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ
> ಮೂರ್ತಿಗೊಳ್ಳಲಿಕ್ಕಾಗಿ, ಕಂಗಳು ತುಂಬಿ ಬಾಹ್ಯದೃಷ್ಟಿ
> ಅರತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ, ದೃಕ್ಕಿಂಗೆ
> ತೋರುವದೆಲ್ಲವು ಲಿಂಗಮಯವಾಗಿ, ....ಇಂತಪ್ಪ ವ್ಯವಧಾನ
> ಸರ್ವಾಂಗಲಿಂಗಿಯ ವಿವರ. ಇಷ್ಟವನರಿದು ಉಭಯದ
> ಗುಟ್ಟು ಕೆಟ್ಟಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ
> ಮಲ್ಲಿಕಾರ್ಜುನನೆಂಬುದಕ್ಕೆ ಇದಿರೆಡೆ ಇಲ್ಲ.

ಮ. ವ. ೬೭, ಪು. ೨೮೭

ಇಷ್ಟಲಿಂಗದಲ್ಲಿ ನಟ್ಟ ದೃಷ್ಟಿ ಲಿಂಗದೃಷ್ಟಿಯಾದ ಮೇಲೆ ವಿಶ್ವವೆಲ್ಲ ಲಿಂಗ ಮಯ. ತಾನು ತಾನೂ ಲಿಂಗಮಯ. 'ಸರ್ವಂ ಖಲ್ವಿದಂ ಬ್ರಹ್ಮ' ಎಂದ ಮೇಲೆ ಪೂಜಿಸುವ ಭಕ್ತನಾರು ? ಪೂಜೆಗೊಂಬ ದೇವನಾರು ? ಪೂಜಿಸುವ ಮಹಾದೇವಿಯಮ್ಮನಿಲ್ಲ. ಇದಿರಿದ್ದು ಪೂಜೆಗೊಂಬ 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ'ನಿಲ್ಲ. ಇಂತಿದೇ ಶಿವಾದ್ವೈತ ಭಕ್ತಿಯ ನಿಜ ಪೂಜೆ, ಇದೇ ಅಮ್ಮನವರ ನಿತ್ಯ ನಿರ್ಮಾಳ ಮಾಟ.

ಇಂತಹ ಮಾಟದ ಮಹಾದೇವಿಯಮ್ಮನವರಲ್ಲಿ ಅಂಗದಿಚ್ಛೆಯ ಭೋಗೋಪಭೋಗವೆಲ್ಲಿ ? ಅಂಗದಿಚ್ಛೆಗೆ ವಿಷಯ ಸುಖದ ಬೆಂಬತ್ತಿ ಹರಿದು ವಿಷಯವ ತಿಂದು ತೇಗುವ ಅಂಗಸಂಗಿಗಳೆತ್ತ ? ಲಿಂಗಾಣತಿಯಿಂದ ಬಂದು ದನೆಲ್ಲ ಲಿಂಗಕ್ಕರ್ಪಿಸಿ ಲಿಂಗ ಪ್ರಸಾದವ ಸ್ವೀಕರಿಸಿ ಲಿಂಗಸುಖ ಪ್ರಸನ್ನ ಪ್ರಸಾದದ ಪರಮಾನಂದ ಪರಿಣಾಮದೊಳಗೋಲಾಡಿದ ಮಹಾದೇವಿಯ ಮ್ಮನವರಂತಹ ಲಿಂಗಭೋಗೋಪಭೋಗಿಗಳೆತ್ತ ? 'ಅಂಗದಿಚ್ಛೆ ಅನರ್ಪಿತ

ಲಿಂಗದಿಚ್ಛೆ ಪ್ರಸಾದ' ಎಂದಿರುವ ಶರಣರ ಪ್ರಸನ್ನ ತತ್ವ ಅಮ್ಮನವರ ಅಂಗಾಂಗದಲ್ಲೆಲ್ಲ ತುಂಬಿ ಸೂಸುತ್ತಿದೆ. ಉರಿಗೂಡಿ ಕರಗಿ ಉರಿಯಾಗುತ್ತಿರುವ ಅರಗಿನ ಪುತ್ಥಳಿಗೆ ಕಣ್ಣು ಕಿವಿಯೆಲ್ಲಿ ? ಮೂಗು ಮುಖವೆಲ್ಲಿ ? ನಾನೆಂಬ ಅರಗೇ ಕರಗಿ ಉರಿಯಾಗುತ್ತಿರುವಲ್ಲಿ ನಾನೆಲ್ಲಿ ? ನನ್ನ ಇಚ್ಛೆಯೆಲ್ಲಿ ? ನಾನು ಭೋಗಿಸುವುದೆಂತು ? ಉರಿಯುಂಡುದೇ ಅರಗಿನ ತೃಪ್ತಿ, ಅದೇ ಅದರ ಭೋಗಭಾಗ್ಯ. ತಾಯಿ ಉಂಡರೆ ಹೊಟ್ಟೆಯ ಕೂಸು ತಣಿವಂತೆ ಲಿಂಗದ ಭೋಗವೇ ಅಂಗದ ಸಂತೃಪ್ತಿ. ಲಿಂಗಮುಖವಾಗಿಯೇ ಅಂಗದ ಭೋಗೋಪಭೋಗ. ಅದೇ ಲಿಂಗಭೋಗೋಪಭೋಗ. ಈ ಹದನನರಿಯದೆ ಹೊಟ್ಟೆ ಹಸಿದುಂಡು ಕಾಮನ ಕಾಲುಂದೊತ್ತಾಗಿ ಬಾಳಿ ಕಾಲನ ಬಾಯಿದುತ್ತಾಗಿ ಸತ್ತು ಹುಟ್ಟುವರೆಲ್ಲ ಲಿಂಗ ಕಟ್ಟಿಕೊಂಡು ಲಿಂಗಾಂಗಿಗಳೆಂದು ಲಿಂಗಭೋಗೋಪಭೋಗಿಗಳೆಂದು ಡಂಗುರ ಸಾರುತ್ತ ಹೋಗುವ ಲಿಂಗಜೀವಿಗಳೆತ್ತ ಬಲ್ಲರು ಲಿಂಗ ಭೋಗೋಪಭೋಗಿ ಶರಣನ ಲಿಂಗ ಸ ಖವ ? :—

> ಲಿಂಗಭೋಗೋಪಭೋಗಿ ಎಂದು ತಾ ಮುನ್ನ ಬಿಟ್ಟುದ
> ಮುಟ್ಟಬಹುದೇ ? ತನ್ನ ಸುಖಕ್ಕೆ ತಾ ಭೋಗಿಸಿ ಲಿಂಗ
> ಮುಂತಾಗಿ ಕೂಡಿದೆನೆನಬಹುದೇ ? ಲಿಂಗದಂಗವನರಿತು
> ತಾ ಕೂಡಬಲ್ಲಡೆ ತನ್ನ ಇಂದ್ರಿಯಂಗಳ ಇಚ್ಛೆ ಉಂಟೇ ?
> ........ಲಿಂಗಭೋಗೋಪಭೋಗಿ ತಾನಾದಡೆ ಉರಿಗೂಡಿ
> ಕರಗುವ ಕರ್ಪುರದ ಇರವಿನಂತಿರಬೇಕು. ಎನ್ನಯ್ಯ
> ಪ್ರಿಯ ಇದು ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನ
> ಸಂಗಗೂಡಿ ಸುಖಿಸುವ ಲಿಂಗಾಂಗಿಯ ಇರವು.
>
> ಮ. ವ. ೫೬, ಪು. ೨೮೪

ಇಂತಹ ಲಿಂಗಾಂಗಿ ಇಂತಹ ಲಿಂಗಭೋಗೋಪಭೋಗಿಯಾದ ಮಹಾದೇವಿಯಮ್ಮನವರ ಲಿಂಗಪತಿ ಮಾರಯ್ಯನವರ ಸತಿಪತಿ ಜೀವನದ ಸಮರಸಾನಂದ ಸುಖಭೋಗ ಅಮ್ಮನವರಿಗೇ ಗೊತ್ತು, ಮಾರಯ್ಯನವರಿಗೇ ಗೊತ್ತು, 'ಕಾಮನನುರುಹಿ ಕಾಮಿನಿಯೊಡವೆರೆ'ದ ಜಾಣರದೇವ ಮಹಾಲಿಂಗದೇವನಿಗೇ ಗೊತ್ತು. ಈ ಸುಖದ ಮರ್ಮ ಮಾನವರ ಹವಣಲ್ಲ, ತರ್ಕಬುದ್ಧಿಯ ವಶವಲ್ಲ, ಪ್ರೇಮವೆಂಬ ಕಾಮದ ಕೈಮಾತಲ್ಲ. 'ಹುತ್ತದ ಡೊಂಕು

ಹಾವಿಗೆ ಸಸಿನ.' ಅದರಂತೆ ನಿಜ ಲಿಂಗಸಂಗಿಗಳ ದಿವ್ಯಪ್ರೇಮವಿಲಾಸ ಜೀವನ ಲಿಂಗಕ್ಕೆ ಸಸಿನ.

> **ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ. ಹೆಣ್ಣು ಪ್ರತ್ಯಕ್ಷ**
> **ಕಪಿಲ ಸಿದ್ಧಮಲ್ಲಿಕಾರ್ಜುನ ನೋಡಾ.**

ಎಂದು ಸಿದ್ಧರಾಮಯ್ಯನವರು ಹೇಳುವ ಮಾತೊಂದು ಮಾತಲ್ಲ, ಅದು ತತ್ವಜ್ಯೋತಿಯೆಂಬಂತೆ ಬೆಳಗುತ್ತಿದೆ. ಈ ಜ್ಯೋತಿಯೇ ಗಟ್ಟಿಗೊಂಡು ಮೂರ್ತಿಯಾಗಿ ನಿಂದು ರಾರಾಜಿಸುವಂತಿದ್ದಾರೆ ಮಾರಯ್ಯನವರ ಪುಣ್ಯದ ಪುಂಜ ಮಹಾದೇವಿಯಮ್ಮ. ಅಂಗದ ಕತ್ತಲೆಯ ಕಳೆದು ಲಿಂಗದ ಬೆಳಗಿನಲ್ಲಿ ಬಾಳುವ ಆಮ್ಮ ಹೆಣ್ಣಲ್ಲ. ಮೊಲೆ ಮುಡಿ, ಗಡ್ಡಮೀಸೆ ಕಾಯದ ಗುಣಧರ್ಮ. ಕಾಯವ ತೊಟ್ಟು ಅದರ ಗುಣಧರ್ಮ ಕರ್ಮದ ಲೇಪವೇ ಇಲ್ಲದ ಶರಣ ನಿರ್ಲೇಪ, ನಿರಂಜನ, ನಿರಾಕಾರ. ಆತ ಇಲ್ಲವೆ ಅದು ಹೆಣ್ಣಲ್ಲ ಗಂಡೂ ಅಲ್ಲ. ಮಾರಯ್ಯ ಶರಣ, ಮಹಾದೇವಿಯಮ್ಮ ಅದೂ ಶರಣ. ತನುವೆಲ್ಲ ಪುಲಕ ಗದ್ಗದ, ಮನವೆಲ್ಲ ಮಂಗಲ ಪ್ರಸನ್ನ, ಭಾವವೆಲ್ಲ ನಿರ್ಭರ ಭಕ್ತಿ ಆನಂದ. ಇಂತಹ ಭಕ್ತಿಯರಳಿ ಗಂಡನ ತೊತ್ತುಗೆಲಸ ಮಾಡಿ

> **... ನಿಮ್ಮ ಭಕ್ತಿಸೂತ್ರದಿಂದ ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದ**
> **ದಲ್ಲಿ ಅಡಗಿತ್ತು. ಎನಗೆ ಭಿನ್ನದ ಮಾತಿಲ್ಲ. ಎನ್ನಯ್ಯ ಪ್ರಿಯ**
> **ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬವರು ನೀವೇ.**
>
> **ಮ. ವ. ೩೦, ಪು. ೨೭೭**

ಎಂಬ ನಿಶ್ಚಯಲ್ಲಿ ನಿಂದು ನಿಜಪಥದಲ್ಲಿ ಮುಂದೆ ಮುಂದೆ ನಡೆದು ನಾನು, ಪತಿ, ಲಿಂಗವೆಂಬ ಭಿನ್ನಭಾವದ ಬೇರೆಲ್ಲ ಕಿತ್ತು ಉರುಳಿ ತಾನೇ ತಾನಾಗಿ

> **ನೀ ನಷ್ಟವಾದಲ್ಲಿ ಎನ್ನ ಭಾವ ನಷ್ಟ. ಭಾವ ನಷ್ಟವಾದಲ್ಲಿ ಎನ್ನಯ್ಯ**
> **ನಿಲ್ಲ ನೀನು ಪ್ರಿಯನಲ್ಲ ಇಮ್ಮಡಿ ದೇವನಲ್ಲ. ನಿಃಕಳಂಕ ಮಲ್ಲಿಕಾರ್ಜುನ**
> **ನೆಂಬ ಭಾವ ಎಲ್ಲಿ ಅಡಗಿತ್ತೆಂದರಿಯೆ.**
>
> **ಮ. ವ. ೮, ಪು. ೨೭೧**

ಎಂಬ ನಿರ್ಭಾವದಲ್ಲಿ ನೆಲಸಿ ನಿಂದ ಮಹಾದೇವಿಯಮ್ಮನ ಹೆಣ್ಣೆನ್ನಬಹುದೇ? ಮಾರಯ್ಯನವರ ಹೆಂಡತಿ ಅವರಿಗಿಂತ ಕಡಿಮೆಯೆಂದು ಹೇಳಬಹುದೇ ? ಗಂಡು ಹೆಚ್ಚು ಹೆಣ್ಣು ಕಡಿಮೆ ಎಂಬ ಕೀಳು ಕಲ್ಪನೆ ಶರಣ ಸಮ್ಮತವಲ್ಲ. 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ' ಎಂಬುದೇ ಶರಣರ ಸತ್ಯ

ದರ್ಶನ. ಮಹಾದೇವಿಯಕ್ಕ, ನೀಲಮ್ಮ, ಮುಕ್ತಾಯಕ್ಕ, ಆಯ್ದಕ್ಕಿ ಮಾರಯ್ಯನವರ ಪುಣ್ಯಾಂಗನೆ ಲಕ್ಕಮ್ಮ ಇಂತಿವರೇ ಮೊದಲಾದವರ ಜೀವನ ಚರಿತೆಯನ್ನು ಪರಿಶೀಲಿಸಿದರೆ ಶರಣಸಮಾಜದಲ್ಲಿ ಹೆಣ್ಣು ಗಂಡಿನ ಸ್ಥಾನ ಮಾನ ಬೇರೆ ಬೇರಲ್ಲವೆಂಬುದು ಹೊಳೆಯುತ್ತದೆ. ಹೆಣ್ಣು ಗಂಡಿನ ಮರೆಯ ಮಹಾ ಚೈತನ್ಯ ಒಂದೇ ಎಂಬರಿವು ಶರಣರ ಮನದಲ್ಲಿ ಎಂದಿಗೂ ತಿಳಿಯಾಗಿ ಬೆಳಗಿದೆ. ಲಿಂಗ ಪಥವಿಡಿದು ನಡೆವಲ್ಲಿ ಹೆಂಡತಿ ತಪ್ಪಿದರೆ ಗಂಡ ಎಚ್ಚರಕೊಟ್ಟು ಕೈಹಿಡಿದು ನಡೆದಿದ್ದಾನೆ, ಗಂಡ ಎಡವಿದರೆ ಹೆಂಡತಿ ಹಾದಿಗೆ ಹಚ್ಚಿ ಗಂಡನನ್ನು ನಡೆಸಿಕೊಂಡು ಮುಂದೆ ಮುಂದೆ ನಡೆದಿದ್ದಾಳೆ. ಆಧ್ಯಾತ್ಮ ಪಥದಲ್ಲಿ ಬರುವ ಸಂದೇಹ ಸಮಸ್ಯೆ ಗಂಡಾಂತರಗಳನ್ನೆಲ್ಲ ಪರಿಹರಿಸಿ ಗಂಡನಿಗೆ ನಿಜಗತಿದೋರುವ ಹೆಂಡಿರ ಚಿತ್ರ ಪರಮರಮಣೀಯವೇ.

ಮಾರಯ್ಯನವರ ಜೀವನ ಬುದ್ಧಿಪ್ರಧಾನ ಜೀವನ. ಅರಿದು ಆಚರಿಸುವ ಜೀವನ. ಜೀವನದಲ್ಲಿ ಸಂದೇಹ ಸಂಕಲ್ಪ ಎಡರು ತೊಡಕು ತಲೆದೋರಿದಾಗ ತಮ್ಮ ಹೆಂಡತಿಯ ಮುಂದೆ ಅವನ್ನೆಲ್ಲ ಇರಿಸಿ ಪರಿಹರಿಸಿಕೊಳ್ಳಲು ಅವರು ಹಿಂದೆ ಮುಂದೆ ನೋಡಿಲ್ಲ. ಹೆಣ್ಣಾದರೇನು ? ಹೆಂಡತಿಯಾದರೇನು ? ಕಿರಿಯರಾದರೇನು ? ಯಾರಾದರೇನು ? ಅರಿದವರೇ ಹಿರಿಯರಲ್ಲವೇ ? ಅರಿದವರೇ ಪರಿಪೂಜ್ಯರಲ್ಲವೇ ? ಮರವೆಗೆ ಅರಿವೇ ಶರಣಲ್ಲವೇ ? ಮರವೆಗೆ ತಿಳಿಯದಿದ್ದರೆ ಅರಿವನಾಶ್ರಯಿಸಲೇಬೇಕಲ್ಲವೇ ? ಅರಿವು ಮರವೆಯಲ್ಲಿ ಸಿಕ್ಕು ಮುಂದೆ ನಡೆಯಲಾರದ ಮಾರಯ್ಯನವರ ನಯ ವಿನಯ ಸಂಪದವಿದು:—

> **ಸತ್ವಗೆಟ್ಟಲ್ಲಿ ಶಾಸ್ತ್ರವನೂರಿ ನಡೆಯಬೇಕು. ಮಹತ್ತತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ ಮಹಾಪ್ರಸಾದವೆಂದು ಕೈಕೊಳ್ಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದಕಾರಣ ಎನ್ನ ಸತ್ಯಕ್ಕೆ ನೀ ಸತಿಯಾದಕಾರಣ ಎನ್ನ ಸುಖದುಃಖ ನಿನ್ನ ಸುಖದುಃಖ, ಅನ್ಯವಿಲ್ಲ, ಇದಕ್ಕೆ ಭಿನ್ನ ಭೇದವೇನು ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ.**
>
> **ಮಾ. ವ. ೪೨೩, ಪು. ೧೦೬**

**ಹೆಂಡತಿಯಾದರೇನು ? ಮಗನಾದರೇನು ? ಹೊಲೆಮಾದಿಗನಾದರೇನು ?**

ನಿಜತತ್ವವ ನೀಡಿದರೆ ಮಹಾಪ್ರಸಾದವೆಂದು ಕೈಕೊಳ್ಳಬೇಕು. ಯಾವ ನೊಣವಾದರೇನು ಜೇನು ತ್ಯಾಜ್ಯವೇ ? ಕೆಚ್ಚಲ ಹಾಲು ಹೇಯವೇ ?

ಬಸವಣ್ಣ ಚೆನ್ನಬಸವಣ್ಣ ಮೊದಲಾದವರು ತಮ್ಮ ತಮ್ಮ 'ಲಕ್ಷ್ಯಭಾವ' ದಲ್ಲಿ ಲಿಂಗೈಕ್ಯರಾದ ಮೇಲೆ ಮಾರಯ್ಯನವರಿಗೂ ಲಿಂಗೈಕ್ಯರಾದಿಹೆವೆಂಬ ತವಕ. 'ನನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ' ಎಂದು ಮಹಾದೇವಿಯಮ್ಮನವರಿಗೆ ಅವರ ಬಿನ್ನಹ. ನಿಜಲಿಂಗದ ನಿಲು ಕಡೆಯ ತೋರುವ ಭಾರ ಅಮ್ಮನವರ ಮೇಲೆ. 'ನಿಃಕಳಂಕ ಮಲ್ಲಿಕಾರ್ಜುನ' ನಿರುವ ಠಾವು ಕಪ್ಪಡಿಸಂಗಮ, ಉಳುವೆಯೆ ? ಮೇರು ಮಂದಿರ ಕೈಲಾಸ ಪರ್ವತವೇ ? ಮಾರಯ್ಯನವರು ಯಾವ ಲಕ್ಷ್ಯಭಾವದಲ್ಲಿ ಮುಕ್ತಿಯ ನೈದಬೇಕು? ಎಲ್ಲಿ ಕೂಟಸ್ಥವಾಗಿರಬೇಕು ? ಮಹತ್ತರ ಪ್ರಶ್ನೆ. ಇಂತಹ ಪ್ರಶ್ನೆ ಮಾರಯ್ಯನವರಲ್ಲಿ ಹೇಗೆ ಹುಟ್ಟಿತೋ ತಿಳಿಯದು. ಬಸವಣ್ಣ ಮೊದ ಲಾದವರು ಅವಸಾನ ಕಾಲದಲ್ಲಿ ಕಲ್ಯಾಣ ಬಿಟ್ಟು ಬೇರೆ ಬೇರೆ ಸ್ಥಾನಗಳಲ್ಲಿ ಲಿಂಗೈಕ್ಯರಾದುದರಿಂದಲೇ ಮಾರಯ್ಯನವರಿಗೂ ಈ ಪ್ರಶ್ನೆ ಉದ್ಭವಿಸಿರ ಬಹುದು. ಮಹಾಂತ ಶರಣರಾದ ಮಾರಯ್ಯನವರಿಗೆ ಈ ಸಂಶಯ ಬಂದರೆ ಪರಿಹರಿಸುವರಾರು ? 'ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರು? ಅರಿದವ ಮರೆದವನಾದಡೆ ಅರಿಕೆಯ ಹೇಳುವರಾರು ?'

ಇಂತಹ ಗಂಭೀರ ಪ್ರಸಂಗದಲ್ಲಿ ಮುಂದೆ ಬಂದು ಲೀಲಾಜಾಲವಾಗಿ ತೊಡಕು ಬಿಡಿಸಿ ಗಂಡನ ಕೈಹಿಡಿದು ಮುಂದೆ ಮುಂದೆ ನಡೆಸುತ್ತಾಳೆ '**ಮಹಾದೇವಿ**' ಯಮ್ಮ. ಮರ್ತ್ಯ ಕೈಲಾಸ, ಇಹಲೋಕ ಪರಲೋಕ, ಸಕಲ ನಿಃಕಲ, ಸ್ವಯ ಲಯ, ಸಂಗ ನಿಸ್ಸಂಗ–ಎಂಬಿವನ್ನೆಲ್ಲ ವಿವರವಾಗಿ ನೋಡಿ ನಿರ್ಧರವಾಗಿ ನುಡಿವ ಅಮ್ಮನವರ ಮಾತು ನಿಜಲಿಂಗದ ತತ್ವಾರ್ಥವನ್ನು ಇಂತು ಪ್ರಕಾಶ ಮಾಡುತ್ತಿವೆ:—

ಲಿಂಗದಲ್ಲಿ ಐಕ್ಯವಾಗಬೇಕು. ಯಾರು? ನೀನು, ಮಾರಯ್ಯ. ಲಿಂಗೈಕ್ಯವಾಗುವ ಠಾವ ಹೇಳಬೇಕು. ಯಾರು? ನಾನು ನಿನ್ನ ಕೈಹಿಡಿದ ಹೆಂಡತಿ ಮಹಾದೇವಿ. ಕೇಳುವ ನೀನಾರು? ಹೇಳುವ ನಾನಾರು? ಸಂಗ ಮಾಡುವ ಲಿಂಗವೆಲ್ಲಿ? ಇಲ್ಲಿಯ ವರೆಗೆ ನೀನೆಲ್ಲಿದ್ದೆ? ನಾನೆಲ್ಲಿ ಬಾಳಿದೆ? ಲಿಂಗಯ್ಯನೆಲ್ಲಿ ಕುಳಿತಿದ್ದ?

....ಕಣ್ಣಿಲಿ ನೋಡಿ, ಕಣ್ಣ ಮರದು ನಿಂದು ಆ ಭಿನ್ನ
ಭಾವದಂತೆ ಆದಿರಲ್ಲಾ. ಅದು ನಿಮ್ಮ ಗುಣವಲ್ಲ ಎನ್ನ ಗುಣ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.

ಮ. ವ ೬೪. ಪು ೨೮೬

ಮರವೆಯೆಂಬ ಜವನಿಕೆಯನೋಸರಿಸಿ ಕಣ್ಣಿನ ಕಣ್ಣಾದ ಲಿಂಗದೃಷ್ಟಿ ತೆರೆದು 'ತಾನೇ ಲಿಂಗ, ಲಿಂಗವೇ ತಾನು' ಎಂಬುದ ಕಂಡು ನೋಡಿ ಮತ್ತೆ ಕಣ್ಣು ಮುಚ್ಚಿ ಭಿನ್ನ ಭಾವದಿಂದ ಇದಿರಿಟ್ಟು ಲಿಂಗವ ಕಂಡು ಕೂಡಿಹೆನೆಂಬ ಮಾಯಾ ಮೋಹವೆಲ್ಲಿಯದು ನಿಃಕಳಂಕ ಮಲ್ಲಿಕಾರ್ಜುನ ಸ್ವರೂಪರಾದ ನಿಮಗೆ? ಆ ಮೋಹ ನಿಮ್ಮ ಗುಣವಲ್ಲ, ನನ್ನ ಗುಣ, ಮಾಯಾಪ್ರಕೃತಿಯ ಗುಣ ಧರ್ಮ. ಮುಳ್ಮೊರಲು ತೆರಹಿಲ್ಲದೆ ವಿಶ್ವಬ್ರಂಹ್ಮಾಂಡವನ್ನೆಲ್ಲ ವ್ಯಾಪಿಸಿ ಮೀರಿ ಮೆರೆವ ಲಿಂಗವನಗಲಿ ನೀವಿದ್ದ ಠಾವಾವುದು? ನಾನಿದ್ದ ತಾಣವಾವುದು?ಃ—

...ಬೆಳಗಿನ ಮುಖದಿಂದ ಬೆಳಗಿನ ಕಳೆಯನರಿವಂತೆ
ನಿನ್ನಿಂದ ನೀನೇ ತಿಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ
ಮಲ್ಲಿಕಾರ್ಜುನನ ಭಿನ್ನಭಾವವಿಲ್ಲದೆ.

ಮ. ವ. ೪೧, ಪು೨೮೦

ಎನ್ನಯ್ಯ ಪ್ರಿಯ, ನೀನೇ ತಿಳಿದು ತಿಳಿಯಾಗಿ ನಿನ್ನ ನಿಜವ ನೀ ನೋಡು. ಇದರಲ್ಲಿ ನಾ ಹೇಳುವುದೇನು? ಹೇಳಬಾರದ ಘನವ ಹೇಳಲೆಂತು? ಮದುವೆ ಮಾಡಿಕೊಡಬಹುದು, ಸಂಗದ ಸುಖವ ತಾನಲ್ಲದೆ ಅನ್ಯರು ಮಾಡಿ ಕೊಡಬಹುದೇ? ಕಣ್ಣು ಮುಚ್ಚಿ ಚೆಲುವಿಕೆಯ ಕುಡಿಯಬಹುದೇ? ಕಿವಿ ಮುಚ್ಚಿಕೊಂಡರೆ ರಸಗಾನದ ಮಾಧುರ್ಯವ ನೀಡುವರಾರು? ನೀನೇ ಎದ್ದೇಳು, ನೀನೇ ಬೆಳಗಾಗು, ನಿನ್ನಿಂದ ನೀನೇ ತಿಳಿದು ನೋಡು, ನೀನೇ ಜ್ಯೋತಿರ್ಲಿಂಗ, ನೀನೇ ಬೆಳಗಿನ ಬೆಳಗು ಮಹಾಬೆಳಗು.

ಇನ್ನು 'ಕಾಯವೆರಸಿ ಕೈಲಾಸಕ್ಕೆ ಹೋಹೆನೆಂಬರು. ಇದು ಕ್ರಮವಲ್ಲ.' 'ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ.' 'ಕಾಯಬೆರಸಿ ಕೈಲಾಸಕ್ಕೆ ಅಯ್ದಿಹೆನೆಂಬುದು ಭಕ್ತಂಗೆ ನಿಹಿತವಲ್ಲ.' ದುಡಿದು ಕೂಲಿ ಬೇಡುವುದು ತಪ್ಪಲ್ಲ, ಆದರೆ ಅದು ವ್ಯವಹಾರ. ಇಂತಹ ದುಡಿಮೆ ದುಡ್ಡಿಗಾಗಿ, ಒಡೆಯನಿಗಾಗಿ ಅಲ್ಲ, ಒಡೆಯನನೊಲಿಸುವದಕ್ಕಲ್ಲ. ಇಂತಹ

ದುಡಿತ ದುಡ್ಡು ಗಳಿಸಬಹುದು. ಒಡೆಯನ ಗಳಿಸಲಿಲ್ಲ, ಒಡೆಯನೊಲುಮೆ ಪಡೆದು ತಾನೂ ಒಡೆಯನಾಗಿ ಬಾಳಲಿಲ್ಲ. ಕಾಯವೆರಸಿ ಕೈಲಾಸಕ್ಕೆ ಹೋಗಬೇಕೆಂದು ಶಿವಭಕ್ತಿಯ ಮಾಡುವುದೇ ? ಮಾಡಿರಬಹುದು ಇಂತಹ ವ್ಯವಹಾರ ಭಕ್ತಿಯನ್ನು ಶೈವ ಪುರಾತನರು. ಅವರ ಭಕ್ತಿಗೆ ತಕ್ಕ ಗಣ ಪದವಿಯ ನೀಡಿರಬಹುದು ಕೈಲಾಸದ ಶಿವಮೂರ್ತಿ. ಶರಣಮಾರ್ಗವಿಡಿದು ನಡೆವ ನಿಜಲಿಂಗಭಕ್ತರಿಗೆ ಈ ಮಾತು ಸೊಗಸೀತೇ ? ಕೈಕೂಲಿಯ ಕೈಲಾಸಕ್ಕಾಗಿ ಭಕ್ತಿಯ ಮಾಟವೇ ? ನಿಜಭಕ್ತಿಯ ಮಾರಾಟವೇ ? ತಾಯ ಮಾರಿ ತೊತ್ತು ಕೊಳ್ಳುವುದೇ ? ಬಣ್ಣ ಬಣ್ಣದ ಗಾಜಿನ ಮನೆಯ ಕಟ್ಟಿಸಲೆಂದು ನವರತ್ನರಾಶಿಯ ತೂರಿಕೊಳ್ಳುವುದೇ ? ಲಿಂಗಭಕ್ತಿಯ ಮಾಡಿ ಮೇಲೆ ಕೈಲಾಸವ ಬೇಡಲೇಕೆ ? ಬೇಡುವಾತ ಭಕ್ತನೇ ? ಅಲ್ಲಲ್ಲ. ಬೇಡಿಸಿ ಕೊಂಬಾತ ದೇವನೇ? ಆತನೆಂಥ ದೇವ ! ಬೇಡದೆ ಮಾಡುವಾತ ಆತ ಭಕ್ತ, ಬೇಡಿಸಿ ಕಾಡಿಸಿಕೊಳ್ಳದೆ ಬೇಡದುದನೀವಾತ ಆತ ದೇವ. ನಿಜರಮಣಿ ಚಿತ್ತ ರಮಣನಿಗೆ ಮಾಡುವ ಮಾಟ ಆತನೊಲುಮೆಗಾಗಿ, ಆತನ ಸಂಗ ಸಾಮರಸ್ಯಕ್ಕಾಗಿ. ಹೊಟ್ಟೆಬಟ್ಟೆಗಾಗಿ ಹಾರನೂಪುರಕ್ಕಾಗಿ ಕಾಮತೃಪ್ತಿಗಾಗಿ ಸಂತತಿಸಂವರ್ಧನಕ್ಕಾಗಿ ಹೂಡುವ ಮಾಟಗಾರ್ತಿಯ ಆಟ ಪರಮ ಗಂಭೀರ ಸತ್ಯ ಪ್ರೇಮದ ಸಮರಸಾನಂದವನೆತ್ತ ಬಲ್ಲುದು? ಕೈಲಾಸದ ಭಕ್ತರಿಗೆ ಕೈಲಾಸವಲ್ಲದೆ ನಿಜಲಿಂಗ ನಿಲುಕುವುದೇ ? ಕೂಲಿಯ ಭಕ್ತರಿಗೆ ಲಿಂಗಾಂಗಸಾಮರಸ್ಯದ ಪರಮಾನಂದ ಸಾಮ್ರಾಜ್ಯದ ಸುದ್ದಿಯೇಕೆ ? ಕೂಲಿಯೆತ್ತ ? ಲಿಂಗವೆತ್ತ ? ನಿಜಭಕ್ತಿಯ ನಿಲವೇನು ? ಕೈಲಾಸದ ಸಂದಿಗೊಂದಿಯೆತ್ತ ?

ಕಟ್ಟಿಗೆಯ ಹೊನ್ನು ಮಾಡಿದ 'ಪವಾಡ ಪುರುಷ' ನಾನು ಪುಷ್ಪಕ ವಿಮಾನದಲ್ಲಿ ಕುಳಿತು ಕಾಯವೆರಸಿ ಕೈಲಾಸಕ್ಕೆ ಹೋಗಬೇಕೆನ್ನುವಿಯಾ? ಈ ಮಾತು ನಿಜಲಿಂಗಭಕ್ತರಿಗೆ ಸಲ್ಲೀತೇ? ಪವಾಡ, ಅದ್ಭುತಗಳ ಹುಡುಗಾಟ ಮಾಡಿ ಮರ್ತ್ಯಲೋಕ ಬಿಟ್ಟು ಬೆಳ್ಳಿಯ ಬೆಟ್ಟದಲ್ಲಿ ಕುಳಿತು ಸಾವ ವಂಚಿಸಿಹೆನೆಂಬುದು ಆತ್ಮಘಾತವಲ್ಲವೇ ? ನಿಜಭಕ್ತಿಯ ನಿರ್ವಾಣಸುಖವೆಲ್ಲಿ? ಪವಾಡ ಮಾಡುವ ಡೊಂಬರಾಟವೆಲ್ಲಿ? ಮತ್ತೆ 'ಸಕಲ ದೇಶ ಕೋಶ ಸಿರಿ ಸಂಪದವನುಳಿದು ವೈರಾಗ್ಯ ತಾಳಿ ಕಲ್ಯಾಣಕ್ಕೆ ಬಂದ ನನಗೆ ಕೈಲಾಸದ

ಪ್ರತಿಫಲ ಬೇಡವೇ?' ಎಂದರೆ ವೈರಾಗ್ಯಕ್ಕೆ ಪ್ರತಿಯಾಗಿ ಕೈಲಾಸ ಪಡೆವುದು ಕೂಲಿಮಾಡುವ ಭಕ್ತಿಯಲ್ಲದೆ ನಿಜಭಕ್ತಿಯುಪ್ಪುದೇ? :—

**ಕಾಷ್ಠವ ಸುವರ್ಣವ ಮಾಡಿದೆನೆಂಬ ಘಾತಕತನವೇ**
**ನಿಮ್ಮ ಭಕ್ತಿ? ಸಕಲ ದೇಶ ಕೋಶ ವಾಸ ಭಾಂಡಾರ ಸವಾಲಕ್ಷ**
**ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬ ಕೈ**
**ಕೂಲಿಯೇ ನಿಮ್ಮ ಭಕ್ತಿ ?**

**ಮ. ವ. ೨೩, ಪು. ೨೭೫**

ಮುಂದೆ, ದೇಹದೊಡನೆ ಕೈಲಾಸಕ್ಕೆ ಹೋಗುವರಾರು ? ನೀನು, ನಿನ್ನ ದೇಹ. ನೀನಾರು? ನಿನ್ನ ದೇಹವೇನು? ದೇಹವೇ ನಾನೆಂದಿರುವುದು ಭ್ರಮೆಯಲ್ಲವೇ ? ಮಕರಂದದ ಮನೆ ಪುಷ್ಪ, ಪುಷ್ಪವೇ ಮಕರಂದವೇ ? ರತ್ನಕಾಂತಿಯ ಅರಮನೆ ರತ್ನಶಿಲೆ. ಕಾಂತಿಯೇ ಶಿಲೆಯೆಂದು ಭ್ರಮಿಸು ವುದೇ ? ಅದರಂತೆ ಮಾನವದೇಹ ಅರಿವಿನ ಅರಮನೆ, ಅರಮನೆಯೇ ಅರಸ ನಲ್ಲ. ಅರಿವೆಂಬರಸು ತಾನಾದರೆ ದೇಹವೆಂಬರಮನೆಯ ಹೊತ್ತುಕೊಂಡು ಅಲ್ಲಿ ಇಲ್ಲಿ ತಿರುಗಲಿಲ್ಲ. ಅರಿದ ಮಾನವನೇನು ಆವೆ ಇಲ್ಲವೆ ಬಸವನ ಹುಳವೇ? :—

**ಕಾಯದ ಭ್ರಮೆಯಿಂದ ಕೈಲಾಸ, ಜೀವದ ಭ್ರಮೆಯಿಂದ**
**ಮಹದ ಕೂಟವೆಂಬುದು. ಕಾಯದ ಜೀವದ ಭೇದವನರಿತಲ್ಲಿ**
**ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ. ಇದು ನಿಶ್ಚಯದ**
**ಕೂಟ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ.**

**ಮ. ವ. ೧೮, ಪು. ೨೭೪**

ನಾನೇ ದೇಹವೆಂಬ ಹೊಲಿಗೆಯನುಚ್ಚಿ ದೇಹವ ಕಳೆದರೆ ಕೈಲಾಸವೆಂದು ಹಂಬಲಿಸಿ ಹಲುಬಲು ಮತ್ತೆ ಕಾರಣವೇನು ? ಇದಲ್ಲದೆ ನಿನಗೀಗ ದೇಹವಾದರೂ ಎಲ್ಲಿದೆ ? ಸತ್ಯ ಸದ್ಭಕ್ತನಿಗೆ ನನ್ನದೆಂಬುದೇನಾದರೂ ಉಂಟೇ ? ಶ್ರೀಗುರುವಿಗೆ ತನು ಸಮರ್ಪಣ, ಮಹಾಲಿಂಗಕ್ಕೆ ಮನ ಸಮರ್ಪಣ, ನಿರಂಜನ ಜಂಗಮಕ್ಕೆ ಧನ ಸಮರ್ಪಣ, ಮತ್ತೆ ಮೇಲೆ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ. ಇಂತಹ ಸತ್ಯಭಕ್ತಿಯ ನಿತ್ಯಸಮರ್ಪಣ ಮಾಟದಲ್ಲಿ ನನ್ನದು ನಿನ್ನದೆಂದುಳಿವುದೇನು? 'ತನುವಿಲ್ಲದ

ಭಕ್ತ, ಮನವಿಲ್ಲದ ಭಕ್ತ, ಧನವಿಲ್ಲದ ಭಕ್ತ' ಎಂದು ಮುಂತಾಗಿ ತನು, ಮನ, ಧನವಲ್ಲದೆ ಅಹಂಕಾರ ಮಮಕಾರ ಮೊದಲಾದುವನ್ನು ಸಮರ್ಪಿಸಿದಾತ ಸದ್ಭಕ್ತನೆಂದು ಚೆನ್ನಬಸವಣ್ಣನವರ ಅನುಭಾವ ವಚನವಲ್ಲವೆ? ಇಂತಹ ಸದ್ಭಕ್ತಿಯ ಮರ್ಮವನರಿದು ಆಚರಿಸಿದ ನೀವು ಕೈಲಾಸಕ್ಕೆ ಹೋದಿಹೆನೆಂದರೆ ಮುಂದೆ ಮಾತಾಡುವುದೇನು? :—

> **ಗುರುವಿಂಗೆ ತನು ಹೋಯಿತ್ತು, ಜಂಗಮಕ್ಕೆ ಧನ ಹೋಯಿತ್ತು, ಲಿಂಗಕ್ಕೆ ಮನ ಹೋಯಿತ್ತು, ಇಂತೀ ಎಲ್ಲ ಲಕ್ಷದಲ್ಲಿ ಲಕ್ಷಿಸಿ ನೀವು ಕೈಲಾಸಕ್ಕೆ ಹೋದಿಹೆನೆಂಬ ಕಲ್ಲೆದೆಗೆ ನಾನಂಜುವೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.**

**ಮ. ವ. ೪೪, ಪು. ೨೪೧.**

ಆ ಮೇಲೆ, ಕೈಲಾಸವೆಂಬುದೆಲ್ಲಿದೆ? ಪರಲೋಕದಲ್ಲಿ, ದೇವಲೋಕದಲ್ಲಿ, ರಜತಾಚಲದ ಮೇಲೆಯೆ? ಬ್ರಹ್ಮಾಂಡದ ಹರಹಿನ ಸಂದಿಗೊಂದಿಯಲ್ಲೆಲ್ಲೋ ಕೈಲಾಸವಿದ್ದರೂ ಇರಬಹುದು. ಆದರೆ ಅಲ್ಲಿದ್ದ ಕೈಲಾಸ ಇಲ್ಲಿ ಮರ್ತ್ಯಲೋಕ ದಲ್ಲಿ ಇಲ್ಲವೇ? ಅಣುರೇಣು ತೃಣಕಾಷ್ಠದಲ್ಲಿ 'ಅತ್ಯತಿಷ್ಠದ್ದಶಾಂಗುಲಂ' ಎನಿಪ ಪರಮತತ್ವವು ತುಂಬಿ ತುಳುಕುತ್ತಿದೆಯಲ್ಲವೇ? ಅಣುರೇಣು ತೃಣ ಕಾಷ್ಠವೆಲ್ಲ ಪಶು ಪಕ್ಷಿ ಪುಷ್ಪ ವೃಕ್ಷವೆಲ್ಲ, ಪೃಥ್ವಿ ಚಂದ್ರ ನಕ್ಷತ್ರಮಂಡಲವೆಲ್ಲ, ದೇವ ದಾನವ ಮಾನವ ಕಿನ್ನರ ಕಿಂಪುರುಷರೆಲ್ಲ, ಆ ಪರಾತ್ಪರ ತತ್ವವು ವಾಸಮಾಡುವ ಅನಂತ ಮಂದಿರಗಳಲ್ಲವೇ? ಕಾಡ ಹೂವೊಂದು ಕೈಲಾಸ ವಲ್ಲವೇ? ಶಿವಮಂದಿರವಲ್ಲವೇ? ಅಲ್ಲಿ ಪರಶಿವ ತತ್ವವರಳುತ್ತಿಲ್ಲವೇ? ಹಾರುವ ಹಕ್ಕಿಯೊಂದು ಕೈಲಾಸವಲ್ಲವೆಂದು ಹೇಗೆ ಹೇಳಬೇಕು? ತತ್ತಿ ಯೊಡೆದು ಹಕ್ಕಿಯಾಗಿ ಹಾರಾಡುವ ಚೈತನ್ಯ ಪರತತ್ವವಲ್ಲದೆ ಮತ್ತೇನು? ವಿಶ್ವವಸ್ತು ಭೂತಪ್ರಾಣಿಗಳೆಲ್ಲ ಪರಮೇಶನ ವಿವಿಧ ವಿಚಿತ್ರ ಅನಂತ ಅದ್ಭುತ ನಿವಾಸಸ್ಥಾನಗಳು. ಎಲ್ಲೆಲ್ಲಿ ವಾಸಮಾಡಿ ಲೀಲೆಯಾಡುವ ದೇವ ಲಿಂಗದೇವ. ಇಂತಹ ಅನಂತ ಕೋಟಿ ಶಿವಮಂದಿರಗಳಲ್ಲಿ ಕೈಲಾಸವೊಂದು. ಗುಡ್ಡ ಬೆಟ್ಟ ಕೈಲಾಸವಾದ ಮೇಲೆ ಮಾನವ ಕೈಲಾಸವಲ್ಲವೆಂದು ಹೇಳುವರಾರು? ಪ್ರಜ್ವಲಿಸಿ ತೊಳಗಿ ಬೆಳಗುವ ಜ್ಯೋತಿರ್ಮಯಲಿಂಗ, ಸರ್ವಾಂಗವನ್ನೆಲ್ಲ ತುಂಬಿ ಬೆಳಗುವ ಶರಣನ ಕಾಯ ಪ್ರತ್ಯಕ್ಷ ಕೈಲಾಸ, ಪರಮ ಕೈಲಾಸ.

ಇಸ್ನುಳಿದ ಕೈಲಾಸಗಳಿಗೆ ಲಿಂಗಮೂರ್ತಿ ವಾಸಮಾಡುವ ಕೈಲಾಸ ತಾವೆಂಬ ಪ್ರಜ್ಞೆಯಿಲ್ಲ. ಶರಣಸಿಗಾ ಅರಿವು ತೆರಹಿಲ್ಲದಿದೆ :—

> ನೆನೆ ನೆನೆ ಎಂದಡೆ ಏನ ನೆನೆವನಯ್ಯಾ? ಎನ್ನ ಕಾಯವೇ ಕೈಲಾಸವಾಯಿತ್ತು. ಎನ್ನ ಮನವೇ ಲಿಂಗವಾಯಿತ್ತು. ಎನ್ನ ತನುವೇ ಸಜ್ಜೆಯಾಯಿತ್ತು. ನೆನೆವಡೆ ದೇವರುಂಟೇ? ನೋಡುವಡೆ ಭಕ್ತರುಂಟೇ? ಗುಹೇಶ್ವರ ಲಿಂಗ ಲೀಯವಾಯಿತ್ತು.
>
> ವ. ಶಾ. ಸಾ. ಭಾ. ೨, ಪು. ೫೦೯.

ಮನವೇ ಲಿಂಗ ತನುವೇ ಲಿಂಗದೇವನ ಶಯ್ಯೆ ಕಾಯವೇ ಕೈಲಾಸವೆಂದು ಪ್ರಮಥರ ಪ್ರತ್ಯಕ್ಷ ಅನುಭವವಿರಲು ಕಾಯ ಬೆರಸಿ ಕೈಲಾಸಕ್ಕೆ ಹೋಗುವೆನೆಂಬ ಕಲ್ಲು ಬುದ್ಧಿಗೆ ಹೇಳಬೇಕೇನು :—

> ........ ಘನಲಿಂಗ ಕರಸ್ಥಲದೊಳಗಿಪ್ಪ ಅನುವನರಿಯದೆ ಇಲ್ಲಿ ಕರ್ಮ ಅಲ್ಲಿ ನಿಃಕರ್ಮವೇ? ಹೇಮದ ಮಾಟದ ಒಳಹೊರಗಿನಂತೆ ಮರ್ತ್ಯ ಕೈಲಾಸವೆಂಬ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ .......
>
> ಮ. ವ. ೬೯, ಪು. ೨೪೮

ಚಿನ್ನಕ್ಕೆ ಒಳಹೊರಗೆ ಮೇಲೆ ಕೆಳಗೆಂಬುದುಂಟೇ ? ಕಡಿದತ್ತ ಚಿನ್ನ ನೋಡಿದತ್ತ ಚಿನ್ನ. ಒಳಗೆ ಹೊರಗೆ ಕಬ್ಬುನವೆಂಬುದೆಲ್ಲಿ ? ಆತ್ಮ ನಿಶ್ಚಯವಾದಲ್ಲಿ ಮರ್ತ್ಯ ಕೈಲಾಸವೆಂಬುದು ಬೇರಿಲ್ಲ. ಇದಲ್ಲದೆ,

> ಸಕಲದಲ್ಲಿ ಅಳಿದು ನಿಃಕಲದಲ್ಲಿ ಉಳಿದ ಮತ್ತೆ ಸಕಲವ ಕೂಡಿಹೆನೆಂಬ ನಿಃಕಲ ಉಂಟೇ ಅಯ್ಯಾ? ನಿಃಕಲದೊಳಗೆ ಸಕಲವಡಗಿ ಆ ಗುಣ ಉಪದೃಷ್ಟಕ್ಕೆ ಈಡಿಲ್ಲದಲ್ಲಿ ಅಖಿಳ ಜಗವೆಂಬುದು ಹೊರಗು. ಆ ಗುಣ ನಿನ್ನ ಸದ್ಭಾವ ನಿಜವಾದಲ್ಲಿ ನಿನ್ನಂಗವೇ ಕೈಲಾಸ. ಆ ಲಿಂಗದ ಕೂಟವೇ ನಿರ್ಯಾಣ. ಇದು ನಿಸ್ಸಂಗದ ಸಂಗ. ನಿಮ್ಮ ನೀವೇ ತಿಳಿದು ಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.
>
> ಮ. ವ. ೫೮, ಪು. ೨೪೪

ದೇಹಾದಿ ಸಕಲಪ್ರಪಂಚವನತಿಗಳೆದು ನಿಃಕಲ ಪರವಸ್ತು ತಾನಾಗಿ ನಿಂದು ಮತ್ತೆ ಸಕಲ ಪ್ರಪಂಚದ ಕೈಲಾಸದಲ್ಲಿ ಕೂಡಿಹೆನೆಂಬ ಬುದ್ಧಿಯೇಕೆ ? ಮೈ

ತೊಳೆದುಕೊಂಡು ಸ್ವಚ್ಛವಾಗಿ ಮತ್ತೆ ಕೆಸರಿನಲ್ಲಿ ಉರುಳಾಡುವುದೇ? ಸರ್ವಾಂಗರಸವಾದ ರಸಫಲಕ್ಕೆ ಮತ್ತೆ ಗೊಬ್ಬರದ ಹಂಬಲವೇ? ತನ್ನಂಗವೇ ಕೈಲಾಸ ತಾನೇ ನಿಃಕಲ ನಿರಾಳಲಿಂಗವಾದ ಬಳಿಕ ಮತ್ತೆ ಕೈಲಾಸಕ್ಕೆ ಹೋಗುವೆನೆಂಬ ಹುಚ್ಚೇಕೆ? 'ಅಮೃತಸಾಗರದೊಳಗಿರ್ದು ಆಕಳ ಚಿಂತೆಯೇಕೆ?' 'ಇಲ್ಲಿ'ಯೇ ಮುಸುಕು ತೆಗೆದು 'ಅಲ್ಲಿ' ಯಾದರೆ ಮತ್ತೆ 'ಅಲ್ಲಿ'ಗೆ ಹೋಗಲೆಂದೇನು? '.ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೇ' ಎಂದ ಮೇಲೆ ಆತನಿರುವ ನಿಜ ಕೈಲಾಸವಲ್ಲದ ಠಾವಾವುದು? ನಿಜದ ನಿಲವಿಂತಿರಲು

> ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ?
> ಪರುಷರಸ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ?
> ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋಗರದ ಹೊರೆಯ ಹೊರ
> ಲೇತಕ್ಕೆ? ನಿತ್ಯ ಅನಿತ್ಯವ ತಿಳಿದು ಮರ್ತ್ಯ ಕೈಲಾಸ
> ವೆಂಬುದು ಭಕ್ತರಿಗೆ ಮುಕ್ತಿಯಲ್ಲ. ನಿಶ್ಚಯವ ತಾನರಿತು
> ಅತ್ತಣ ಇತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ
> ಆ ಬಚ್ಚಬಯಲ ಬೆಳಗ ನಿನ್ನ ನೀನೇ ನೋಡ
> ಕಾಯೆನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ.
>
> ಮ. ವ. ೨೫, ಪು. ೨೬

ಕರಸ್ಥಲದಲ್ಲಿ ಸಕಲ ವಿಸ್ತಾರವಾದ ರೂಹನೊಳಕೊಂಡ ಸ್ವಯಂಜ್ಯೋತಿ ಲಿಂಗವ ಹಿಡಿದು ಅತ್ತ ಇತ್ತ ಎಂಬ ಕತ್ತಲೆಯ ಕೈಲಾಸವೆನಲೇಕೆ? ಮನದ ಕೈಯಲ್ಲಿ ಮಹಾಘನ ಲಿಂಗವ ಹಿಡಿದು ಕೈಲಾಸದ ಕೂಲಿಯ ಮಾಡಲೇಕೆ? ನಿತ್ಯತೃಪ್ತ ನಿರಾಳಲಿಂಗ ಭಾವವನಿಂಬುಗೊಂಡಿರಲು ಕೈಲಾಸದ ಬುತ್ತಿಯ ಭಾರವ ಹೊತ್ತು ತಿರುಗಲೇಕೆ? ನಿತ್ಯನಿಜಕೈಲಾಸವಾಸಿಯಾಗಿದ್ದು ಮತ್ತೆ ಗಣಪದವಿಯ ಕ್ಷಣಿಕ ಕೈಲಾಸದಿಂದೇನು? ಕಾಯದ ಜೀವದ ಹೊಲಿಗೆಯ ಬಿಚ್ಚಿ ನಿರಂಗನಾಗಿ ನಿಂದು ನಿಸ್ಸಂಗದ ಸಂಗ ಮಾಡಿ 'ಬಟ್ಟಬಯಲ ಬೆಳಗಾಗು' ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ!

ಮತ್ತೆ ಮುಂದೆ, ಲಿಂಗೈಕ್ಯವಾದಿಹೆನೆಂಬುದೇಕೆ? ಸಂಗವೆಂಬುದೆಲ್ಲಿ? ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬ ಸೊಲ್ಲೇಕೆ?

ನೀವೇಕೆ ? 'ಮುನ್ನ ನೀನಾರೆಂದಿದ್ದೆ !' ನೀನೆಲ್ಲಿದ್ದೆ ? ನಾನೆಲ್ಲಿದ್ದೆ ? ಹೇಳುವ ರಾರು ? ಕೇಳುವರಾರು ? ಹೇಳುವುದೇನು ? ಕೇಳುವುದೇನು ? ಎಲ್ಲ ಎಲ್ಲ ನೀವೇ. ಎಲ್ಲೆಲ್ಲಿ ನೀವೇ. ಎಂದೆಂದು ನೀವೇ. ನಾನೆಂಬುದು ನೀವೇ ನೀನೆಂಬುದು ನೀವೇ. ಎನ್ನಯ್ಯ ಪ್ರಿಯ ನೀವೇ. ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನ ನೀವೇ. ನಿಮ್ಮ ನಿಜವ ತಿಳಿದು ನೋಡಿ. ನೀವೇ ನಿಜವಸ್ತು. ತಾನೇ ತಾನಾದ ನಿಜವನೇನೆಂದು ಹೇಳುವುದು? 'ಅದು ತಾನೇ, ಅದು ತಾನೇನೂ ಅಲ್ಲ.' ನಾನಿಲ್ಲದೆ ನೀವಿಲ್ಲದೆ ಅಂಗವಿಲ್ಲದೆ ಲಿಂಗವಿಲ್ಲದೆ ಸಂಗವಿಲ್ಲದೆ ನಾಮ ಸೀಮೆಯಡಗಿ ಸ್ಥಳಕುಳವ ಮೀರಿ ನೆರೆ ಮೆರೆವ ನಿರಾಳದ ನಿಜ ನಿಲವ ನಿಮ್ಮ ನೀವೇ ತಿಳಿದು ನೋಡಿ:—

> ಇಂತು ಮಹದೇವಿಯಮ್ಮನು ಲಿಂಗೈಕ್ಯದ ನಿರ್ಣಯವ
> ಬಿನ್ನೈಸಲು ಆ ಮೋಳಿಗೆ ಮಾರಿ ತಂದೆಗಳು ಘನಲಿಂಗದಲ್ಲಿ
> ತಮಗೆ ಸಮರಸಭಾವವ ತಿಳಿದು ನಿಶ್ಚೈಸಿದ ಪ್ರಸ್ತಾವದ ವಚನ.
>
> ಶೂ. ಸಂ., ಪು. ೨೪೮

> ವಿಶ್ವಾಸದ ಹರವರಿಯಲ್ಲಿ ವಿಶ್ವಮಯ ಸ್ಥಲಕುಳಂಗಳಾದವು.
> ಅದು ನಾನಾ ತಟಾಕಂಗಳಲ್ಲಿ ತೋರುವ ದಿನಕರನಂತೆ ಹಲವುಮಯ
> ತೋರುವುದಲ್ಲಿಗಲ್ಲಿಗೆ ಒಲವರವಿಲ್ಲದೆ. ಆ ಅರುಣನ ನೆಲೆ
> ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ.
> ಸ್ಥಲದ ನೆಲೆ ಒಂದೆಂದರಿತಲ್ಲಿ ಏಕಸ್ಥಲಮೂರ್ತಿ
> ನೀನೆ. ಏಕವು ಸಾಕೆಂದಲ್ಲಿ ನಿರಾಕಾರನಾದೆಯಲ್ಲಾ ನಿಃಕಳಂಕ
> ಮಲ್ಲಿಕಾರ್ಜುನಾ.
>
> ಮೊ. ಮಾ. ವ. ೭೪೫ ಪು. ೨೦೦,

ಮಹಾದೇವಿಯಮ್ಮ 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ' ಮಾರಯ್ಯನಲ್ಲಿ ಕರಗಿ ಸಮರಸವಾಗಿ, ಮಾರಯ್ಯ 'ನಿಃಕಳಂಕ ಮಲ್ಲಿಕಾ ರ್ಜುನ' ಲಿಂಗದಲ್ಲಿ ಸಮರಸೈಕ್ಯವಾಗಿ 'ಏಕವು ಸಾಕೆಂದು' ನಿಃಕಳಂಕ ಮಲ್ಲಿಕಾರ್ಜುನನೆಂಬ ಶಬ್ದವಡಗಿ ನಿರಾಕಾರ ನಿರಂಜನ ಜ್ಯೋತಿಯಾಗಿ ಬೆಳಗುವುದನ್ನು ಶಬ್ದವೇನು ಬಲ್ಲುದು ?

# ಮಾರಯ್ಯನವರ ವಚನಶೈಲಿ

ಮಾರಯ್ಯನವರ ಅಂತರಂಗ ಬಹಿರಂಗ ಜೀವನದ ಸತ್ಯಸೌಂದರ್ಯವನ್ನು ಸಾಧ್ಯವಿದ್ದ ಮಟ್ಟಿಗೆ ಪರಿಶೀಲಿಸಿ ನೋಡಿದ ಮೇಲೆ ಅವರ ಜೀವನವನ್ನು ಬಹುಮಟ್ಟಿಗೆ ಕನ್ನಡಿಸಿರುವ ಮಾರಯ್ಯನವರ ವಚನಗಳ ಶೈಲಿಯನ್ನು, ಅವರ ಮಾತಿನ ರೀತಿಯನ್ನು ಕುರಿತು ಒಂದೆರಡು ಮಾತು ಹೇಳಬಹುದು. ಮಾರಯ್ಯನವರ ವಚನಗಳು ಸಾಮಾನ್ಯವಾಗಿ ಶರಣರ ವಚನಗಳ ಸಾಂಪ್ರದಾಯಿಕ ಶೈಲಿಯ ಪಡಿಯಚ್ಚಿನಲ್ಲಿಯೇ ರೂಪುಗೊಂಡಂತೆ ತೋರಿದರೂ ಮಾರಯ್ಯನವರ ವ್ಯಕ್ತಿತ್ವದಲ್ಲಿ ತೋರುವ ಹಲಕೆಲವು ವಿಶಿಷ್ಟ ಗುಣ ಲಕ್ಷಣಗಳು ಅವರ ವಚನಗಳ ಶೈಲಿಯಲ್ಲಿಯೂ ಪಡಿಮೂಡಿದಂತಿವೆ. ಭಿನ್ನ ಭಿನ್ನ ವ್ಯಕ್ತಿತ್ವದ ಅಭಿವ್ಯಕ್ತಿಗೆ ಭಿನ್ನ ಭಿನ್ನ ಶೈಲಿ ಸಲುವಳಿಯಾಗುವುದು ನಿಸರ್ಗದ ನಿಯಮ. ವ್ಯಕ್ತಿಯ ವೈಶಿಷ್ಟ್ಯ ಮಾತಿನ ರೀತಿಯಲ್ಲಿ ಪ್ರತಿಫಲಿಸುವುದೂ ನಿತ್ಯನಿಯಮ. ಮಾರಯ್ಯನವರ ಅಂಕಿತವಾದ 'ನಿಃಕಳಂಕ ಮಲ್ಲಿಕಾರ್ಜುನಾ' ಎಂಬುದನ್ನು ತೆಗೆದಿಟ್ಟು ಅವರ ವಚನಗಳನ್ನು ಓದಿದರೂ 'ಮಾರಯ್ಯನವರ ವಚನಗಳೇ ಇವು' ಎಂದು ಹೊಳೆವಷ್ಟು ಸ್ಫುಟವಾಗಿ ಅವರ ವ್ಯಕ್ತಿತ್ವ ಮೂಡಿದಂತಿದೆ ಅವರ ಶೈಲಿಯಲ್ಲಿ. ಅಂತೆಯೇ ಅವರ ಮಾತಿನ ರೀತಿ ಓದುಗರ ಮನದ ಮೇಲೆ ಮಾರಯ್ಯನವರ ವ್ಯಕ್ತಿತ್ವವನ್ನು ಬಲವಾಗಿ ಮುದ್ರಿಸುತ್ತದೆ.

ಮಾರಯ್ಯನವರ ಶೈಲಿ ಸಾಮಾನ್ಯವಾಗಿ ಸರಳವೆಂದು ಹೇಳಬಹುದಾದರೂ ತಿಳಿವುದು ಕಷ್ಟ ಕಠಿಣವೆಂಬ ಮಾತೂ ಹಲವಾರು ಕಡೆ ಅನುಭವಕ್ಕೆ ಬರುತ್ತದೆ.

> ಗುರುವೆಂಬೆನೆ ಕಂಡ ಕಂಡವರಿಗೆ? ಲಿಂಗವ ಕೊಟ್ಟು
> ದ್ರವ್ಯಕ್ಕೆ ಹಂಗಿಗನಾದ. ಲಿಂಗವೆಂಬನೆ? ಸಂಸಾರಕ್ಕೆ
> ಅಂಗವ ಕೊಟ್ಟ. ಜಂಗಮವೆಂಬೆನೆ? ಕಂಡ ಕಂಡವರ
> ಅಂಗಳವ ಹೊಕ್ಕು ಬಂಧನಕ್ಕೊಳಗಾದ. ನಿನಗಿದರಂದ
> ವಾವುದಿಲ್ಲ ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೫೯೪, ಪು. ೧೫೮

ಎಂಬಿಂತಹ ವಚನಗಳು ಸರಳವೆಂಬಂತೆ ತೋರಿದರೂ ನಿಜವಾದ ಸಂಪೂರ್ಣ ಭಾವ ಸಾಮಾನ್ಯ ಮಾನವ ಬುದ್ಧಿಯ ಆಲಿಂಗನದಿಂದ ಜಾರಿ ಮೀರುವುದೆಂದೇ ಹೇಳಬೇಕು. ಇಂತಹ ವಚನಗಳಲ್ಲಿ ತಲೆದೋರುವುದು ಶಬ್ದ ಅರ್ಥಗಳ ಕ್ಲಿಷ್ಟತೆಯಲ್ಲ, ಸಾಮಾನ್ಯ ಹೃದಯದ ಅನುಭಾವದ ಕೊರತೆ. 'ಡ್ಯಾಫೋಡಿಲ್ಸ್'ಎಂಬ ಹೂಗಳನ್ನು ನೋಡದೆ ಶಬ್ದಾರ್ಥದಿಂದ ಅನುಭವವೆಷ್ಟಾದೀತು? ಮಾರಯ್ಯನವರ ವಚನಗಳನ್ನು ಓದುವಾಗ ಹೆಜ್ಜೆ ಹೆಜ್ಜೆಗೆ ನಮ್ಮ ಅನುಭವ ದಾರಿದ್ರ್ಯದ ಅರಿವಾಗುತ್ತದೆ. ಇದು ನಮ್ಮ ಕೊರತೆ, ಮಾರಯ್ಯನವರ ತಪ್ಪಲ್ಲ. ಆದರೆ ಅವರು ಮಾತಾಡುವ ರೀತಿಯಲ್ಲಿಯೂ ಯಾವುದೋ ಒಂದು 'ವಿಗಡ ಜಾಲ' ಹೆಣೆದುಕೊಂಡಂತೆ ತೋರುತ್ತದೆ. ಅಂತೆಯೇ ಅವರ ಅನೇಕ ವಚನಗಳ ಅರ್ಥ ಭಾವ ಸಾರ ತಿಳಿದು ತಿಳಿಯದಂತೆ ಹೊಳೆದು ಮುಸುಕಾಗಿ ಮಾಯವಾಗುತ್ತದೆ. ಮಾರಯ್ಯನವರ ಮನ ಭಾವ ಹೃದಯ ಬುದ್ಧಿಯನ್ನು ಚೆನ್ನಾಗಿ ಗಟ್ಟಿಯಾಗಿ ಎತ್ತಿಕೊಂಡು ಬಂದು ನಮಗೆ ತಿಳಿಸಿ ನಮ್ಮಲ್ಲಿಳಿಸಿ ನಮ್ಮನ್ನು ಅಷ್ಟರ ಮಟ್ಟಿಗೆ ಮಾರಯ್ಯನವರನ್ನು ಮಾಡದ ಮಾತಿನ ರೀತಿಯಲ್ಲಿ ಯಾವುದೋ ಒಂದು ಕುಂದು ಕೊರತೆ ಇದೆ ಎಂದಿನಿಸುತ್ತದೆ. ಇದಕ್ಕೆ ಕಾರಣ ಅವರು ಮೂಲ ಕನ್ನಡಿಗರಲ್ಲ, ಕಾಶ್ಮೀರದಿಂದ ಬಂದು 'ಕಲಿತ ಕನ್ನಡ' ದಲ್ಲಿ ವಚನ ಬರೆದುದರಿಂದ ಹೀಗಾಗಿರಬಹುದೇನೋ! ಅವರ ವಿಚಾರ ಸರಣಿ, ಮಾತಿನ ಓಘ, ಶಬ್ದಗಳ ಜೋಡಣೆ, ಶಬ್ದಕೋಶ ಇವನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರು ಅಚ್ಚಕನ್ನಡಿಗರಲ್ಲವೆಂದು ಹೇಳಬಹುದಾದರೂ ಅವರ ಸಾಹಸ ಅತ್ಯಪೂರ್ವವೆಂದೇ ಹೇಳಬೇಕಾಗುತ್ತದೆ.

ಮಾರಯ್ಯನವರ ಶೈಲಿಯಲ್ಲಿ ಪ್ರಾಸಾನುಪ್ರಾಸವೆನ್ನಬಹುದಾದ ವಚನಗಳು ಅನೇಕ ಕಡೆ ತೋರುತ್ತಿದ್ದರೂ ಅವರ ಶೈಲಿ ಬುದ್ಧಿಪೂರ್ವಕವಾಗಿ ಕಟೆದು ನಯಗೊಳಿಸಿದ 'ಸಂಸ್ಕೃತ' ಶೈಲಿಯೆಂದು ಹೇಳಲಿಕ್ಕೆ ಬರುವಂತಿಲ್ಲ. ಅಂತಹ ಪ್ರಾಸಾನುಪ್ರಾಸದ ರಚನೆಯ ರೀತಿ ವಚನ ಸಾಹಿತ್ಯ ಸಾಂಪ್ರದಾಯವಿತ್ತ ದಾನ. ಅಂತಹ ಸಾಂಪ್ರದಾಯದ ಸೊತ್ತನ್ನು ಅದರರಿವಿದ್ದು ಅರಿವಿಲ್ಲದಂತೆ ಉಪಯೋಗಿಸಿಕೊಂಡು ನಿರರ್ಗಳವಾಗಿ ಹರಿಯಬಿಡುತ್ತಾರೆ ಮಾರಯ್ಯನವರು. ವ್ಯಾಕರಣನಿಯಮಗಳಿವು, ವಿಚಾರಸರಣಿ ಇಂತಿರಬೇಕು, 'ಶಬ್ದ ರೂಪ

ಎಂತು ಎಂಬಿವೇ ಮುಂತಾದ ಕಟ್ಟುನಿಟ್ಟಿನ ಕಡೆಗೆ ಹಗಲೆಲ್ಲ ಹೊರಳಿ ನೋಡದೆ ಹೇಳಬೇಕೆಂಬುದನ್ನು ಹೇಳಿ ಬಿಡುತ್ತಾರೆ, ತಿಳಿದುಕೊಳ್ಳುವುದು ಬಿಡುವುದು ನಿಮ್ಮ ಕೆಲಸವೆಂದು ಹೇಳಿ ಮುಂದೆ ಹೊರಡುತ್ತಾರೆ ಮಾರಯ್ಯನವರು. ಅವರ ಶೈಲಿಯು ಈ ಓಘ ಮಾರಯ್ಯನವರ ಜೀವನ ಪ್ರವಾಹದ ಓಘದ ಪರಿಣಾಮವೆಂದು ತೋರುತ್ತದೆ.

'ಅರಿದ ಪರಂಜ್ಯೋತಿ ಪ್ರಕಾಶ' ಮಾರಯ್ಯನವರು ತೆಪ್ಪದ ಮೇಲೆ ಕುಳಿತು ಒಪ್ಪವಾಗಿ ಹೋಗುವಂತೆ,ಶಿವಜ್ಞಾನಾರೂಢರಾಗಿ ದಿವ್ಯಜೀವನವನ್ನು ಸಾಗಿಸುತ್ತಿರುವಾಗ, ಸುತ್ತು ಮುತ್ತಣ ಸಮಾಜ ಆಶೆಯೆಂಬ ಕತ್ತಲೆಯಲ್ಲಿ, ಬಲ್ಲ ಹಿರಿಯು ನಾನೆಂದು ವಾದಿಸಿ ಬೋಧಿಸುವ ಜಿಹ್ವಾಲಂಪಟದಲ್ಲಿ, ಕೀರ್ತಿ ವಾರ್ತೆಯ ಮಾಟದಲ್ಲಿ, ವೇಷ ಭೂಷಣದ ವಿಕಾರ ಆಡಂಬರದಲ್ಲಿ ಮೈ ಮರೆದು ಮುಳುಗಿ ಹೋಗುತ್ತಿದ್ದರೆ, ಅದನ್ನೆಲ್ಲ ನೋಡಿ ನೋಡದಂತೆ ಕಣ್ಣು ಮುಚ್ಚಿ ಮುಂದೆ ಮುಂದೆ ನಡೆವುದೆಂತು ? ಅವರಿಗೆ ಬುದ್ಧಿಗೊಟ್ಟು ಹಾದಿಗೆ ಹಚ್ಚಿ ಅವರ ಕತ್ತಲೆಯ ಕಳೆದು ಬೆಳಗಿನತ್ತ ಕೊಂಡೊಯ್ಯುವುದು ಅರಿದ ಶರಣರ ಕರ್ತವ್ಯವಲ್ಲವೇ ? ಮಾರಯ್ಯನವರು ಕಣ್ತೆರೆದು ಸಮಾಜದ ಕುಂದು ಕೊರತೆಗಳನ್ನು ನೋಡಿ ನಾಚಿಕೆಗೊಂಡು ಹೇಸಿಕೆಯಾಗಿ ಕೆಂಡ ಕೆಂಡವಾಗಿ ನುಡಿದಿದ್ದಾರೆ ಅನೇಕ ವಚನಗಳನ್ನು. ಇದರಿಂದ ಸಮಾಜ ರೊಚ್ಚಿಗೇಳುವುದೆಂಬುದು ಅವರಿಗೆ ಗೊತ್ತು.

> ಊರಾಡಿದಂತೆ ಆಡದಿದ್ದದೆ ಮಾರಿಹರೆನ್ನ.
> ನಾಡಲಿಹರಂತೆ ಆಡದಿರ್ದಡೆ ಬಯ್ದುಹರೆನ್ನ.
> .... .... .... .... ....

**ಮೋ. ಮಾ. ವ. ೨೦೧, ಪು. ೪೮**

ಇದು ನಿಜ. ಆದರೆ ಶರಣ ಮಾನವರಿಗಂಜಿ ನುಡಿಯಲೇಕೆ ? ಇಲ್ಲವೆ ಮೌನವಾಗಿರಲೇಕೆ ? ಸಮಯ ಸಂಪ್ರದಾಯಕ್ಕಂಜಿ ಕಾಗೆ ಬೆಳ್ಳಗೆಂದರೆ ಬತ್ತಲೆಯ ಕತ್ತೆ ನಿರ್ವಾಣಿಯೆಂದರೆ ವೇಷಗಳ್ಳರು ಶಿವಶರಣರೆಂದರೆ ಮಾತಿನ ಮಕ್ಕಳನ್ನು ತತ್ವಜ್ಞಾನಿಗಳೆಂದರೆ 'ಜಗದುತ್ಪತ್ತಿಗೆ ಒಳಗಾದವರ ಪ್ರಾಣಲಿಂಗಿ' ಗಳೆಂದರೆ ಆಗುವುದೇನು ? ಇದ್ದ ಸತ್ಯವನ್ನು ಮುಚ್ಚಿ ಇಲ್ಲದ ಗುಣವನ್ನು ನುಡಿವ ಬಣ್ಣದ ಮಾತಿನಿಂದೇನು ? ಇನ್ನು ಬೆಂಕಿಯೇ ಚಳಿಗೆ ಹೆದರಿ ನಡುಗಿದರೆ ಬೇರೆ ಗತಿಯೇನು ? 'ಲಿಂಗವ ಮುಟ್ಟಿದ ಅಂಗಕ್ಕೆ ಜಗದ ಹಂಗಿಲ್ಲ' .

'ಲಿಂಗವನರಿದವಂಗೆ ಜಗದ ಹಂಗಿಲ್ಲ' ಎಂದು ಜಗದ ಹಂಗು ಬಿಟ್ಟ ಮಾರಯ್ಯನವರಿಗೆ ಜಗದ ಅಂಜಿಕೆಯೆಲ್ಲಿ? ಎಲ್ಲ ಹಂಗು ಹರಿದ ಮೇಲೆ ಭಯವೆಲ್ಲಿ? ಭಯವೇತರದು?

....ಜಗದುತ್ಪತ್ತಿಗೆ ಒಳಗಾದವರ ಪ್ರಾಣಲಿಂಗಿಗಳೆಂಬೆನೇ?
ಎನ್ನೆನು. ಇಂತಿವರೆಲ್ಲರು ಡಾಗಿನ ಪಶುಗಳು,
ವೇಷಧಾರಿಗಳು, ಶಾಸ್ತ್ರದ ಸಂತೆಯವರು, ಪುರಾಣದ
ಪುಂಡರು, ತರ್ಕದ ಮರ್ಕಟರು, ಭವಸಾಗರದ
ಬಾಲಕರು, ತತ್ವವನರಿಯದ ಮತ್ತರು...'

ಮೋ. ಮಾ. ವ ೬೯೨. ಪು. ೧೮೩

ಮತ್ತೆ ಲಾಗಿನ ಅಣ್ಣಗಳು, ಸಜ್ಜನಗಳ್ಳರು. ಮುಯ್ಯಬಂಧುಗಳು, ಕಾಳ ಮತ್ಸ್ಯರು, ಕಸಕಡ್ಡಿಗಳು, ಹೊಟ್ಟೆಯ ಕೂಳಣ್ಣಗಳು, ಹೊತ್ತುಹೋಕರು, ಸುಗುಡರು, ಜಗದ ಭಂಡರು

ಎಂದು ತಪ್ಪು ಕಂಡು ಸಿಡಿದೆದ್ದು ಗುಡುಗುವ ನುಡಿಗಡಣ! ಮಾರಯ್ಯನವರ ಅನೇಕ ವಚನಗಳಲ್ಲಿರುವ ಈ ಕೆಂಡ ಅಜ್ಞಾನ, ಕಪಟ, ವೇಷ, ಆಡಂಬರಗಳ ಮನಕ್ಕೆ ಹತ್ತಿ ಸುಡುವಂತಿದೆ. ಅಂತಹ ಮನದ ಮಾಲಿನ್ಯವನ್ನು ಸುಟ್ಟು ಶುದ್ಧ ಮಾಡಬೇಕೆಂಬುದೇ ಮಾರಯ್ಯನವರ ಉದ್ದೇಶ. ಸಮಾಜದಲ್ಲಿರುವ ಕಸಕಡ್ಡಿಗಳನ್ನು ಕಲ್ಲು ಮುಳ್ಳುಗಳನ್ನು ಕಿತ್ತೊಗೆವಲ್ಲಿ 'ನೊಂದಾರು ಬೆಂದಾರು' ಎಂದು ಮಾರಯ್ಯನವರು ಹೆದರಿ ಇಲ್ಲವೆ ಮರುಗಿ ಹಿಂದೆಗೆದಿಲ್ಲ. ಮಾನವನೆಂಬ ಬೆಳೆ ಭೂಮಿಯಲ್ಲಿ ಹುಟ್ಟಿದ ಅವಗುಣವೆಂಬ 'ಪ್ರಳಯದ ಕಸ' 'ಆವ ಬಗೆಯಿಂದ ಹೋದರದು ಲೇಸು.' ಹೊಲ ನೊಂದೀತೆಂದು ಕಸಗೂಡಿಸುವದೇ? 'ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ'ಯಾದ ಸತ್ಯವಚನ ನುಡಿಯಬೇಕು. ಖಂಡಿತವಾಗಿ ನುಡಿಯಬೇಕು. ನಿಷ್ಠುರವಾದರೂ ನುಡಿಯಬೇಕು. ಹೀಗೆ ನುಡಿವುದರಿಂದ ಸಮಯಕ್ಕೆ ಹೊರತಾಗಬಹುದು, ಸಂಪ್ರದಾಯವಿರುದ್ಧವಾಗಬಹುದು. ಆದರೇನು? ಸತ್ಯಕ್ಕೆ ಜ್ಞಾನಕ್ಕೆ ದೂರವಾಗಬೇಕೆ?

'ಇಲ್ಲವೆಂದಡೆ ಸಮಯಕ್ಕೆ ದೂರ, ಉಂಟೆಂದರೆ ಜ್ಞಾನಕ್ಕೆ ದೂರ' ಎಂಬ ಗಂಭೀರ ಸಮಸ್ಯೆ ಮಾರಯ್ಯನವರನ್ನು ಹಲವಾರು ಸಾರೆ ಕೆಣಕಿದೆ.

ತಪ್ಪಿಗೆ ಬಣ್ಣ ಕೊಟ್ಟು ಸರಿ ಸ್ಯೆ ಎಂದು ನುಡಿದು ಸಮಯ ಸಂಪ್ರದಾಯವನ್ನಾಶ್ರಯಿಸಬೇಕೆ ? ಇಲ್ಲವೆ ಸತ್ಯವನ್ನೆ ನುಡಿದು ಸಮಯ ಸಮಾಜದಿಂದ ಹೊರಗಿಡಿಸಿಕೊಳ್ಳಬೇಕೆ ? ಎಂಬ ಇಕ್ಕಟ್ಟಿನಲ್ಲಿ ಸಿಕ್ಕಾಗ ಮಾರಯ್ಯನವರು ಎಂದೂ ಎಡೆಗೆಟ್ಟಿಲ್ಲ. ಎಂದೂ ಯಾರಿಗೂ ಹೆದರದೆ ಇದ್ದ ಸತ್ಯವನ್ನು ನಿರ್ಭಯವಾಗಿ ಬಯಲಿಗಿಟ್ಟಿದ್ದಾರೆ. ದ್ವಿತೀಯ ಶಂಭುವೆನಿಸಿದ ಬಸವಣ್ಣನಿರಲಿ, ಷಟ್ಸ್ಥಲ ಚಕ್ರವರ್ತಿ ಚೆನ್ನಬಸವಣ್ಣನಿರಲಿ, 'ಮಾಯಾ ಕೋಳಾಹಳ'ನಾದ ಅಲ್ಲಮ ಪ್ರಭುವಿರಲಿ ಯಾರಾವರೇನು? ದೊಡ್ಡವರ ದೋಷವೆಂದು ಅಪ್ಪಿಕೊಳ್ಳಬಹುದೇ ? ಮನೆಯ ದೀವಿಗೆಯೆಂದು ಮುತ್ತು ಕೊಡಬಹುದೇ ?

೧ ...ಕಾಯ ಬಸವಣ್ಣನಾದ. ಜೀವ ಚೆನ್ನಬಸವಣ್ಣನಾದ.
ಅವರರಿವು ಕಳೆ ಪರಿಪೂರ್ಣಪರಂಜ್ಯೋತಿ ಪ್ರಭುವಾದ.
ಇಂತೀ ತ್ರಿವಿಧ ಭೇದವ ತೊಟ್ಟು ಬಂದು, ಭಕ್ತಿ ಮುಕ್ತಿ
ವಿರಕ್ತಿಯಿಂದ ಮಹಾಮನೆಯ ಮಾಡಿ ಕೆಟ್ಟ ಬಸವಣ್ಣ.
ಹೇಳಿ ಕೆಟ್ಟ ಚೆನ್ನಬಸವಣ್ಣ. ಉಂಡಿಹೆನೆಂದು ಗರ್ವ
ದಲ್ಲಿ ಕುಳಿತು ಕೆಟ್ಟ ಪ್ರಭುದೇವರು. ಅಂತುಕದಲ್ಲಿರ್ದ
ಸಂಗನಬಸವಣ್ಣ. ಸಂಕಲ್ಪದಲ್ಲಿದ್ದ ಚೆನ್ನಬಸವಣ್ಣ.
ಸಂದೇಹದಂಗವ ತಾಳಿದ್ದ ಪ್ರಭುದೇವರು.
ಇಂತಿವರಂಗದಲ್ಲಿ ಲಿಂಗ ಉಂಟೆಂಬೆನೆ ಜ್ಞಾನಕ್ಕೆದೂರ.
ಇಲ್ಲವೆಂಬೆನೆ ಸಮಯಕ್ಕೆ ದೂರ....

**ಮೋ. ಮಾ. ವ. ೫೯೩, ಪು. ೧೫೮**

೨ .... ಪರಮೇಶ್ವರನನರಿದವಂಗೆ ಜಗದಾಶೆಯ ಮುಖವಿಲ್ಲವೆಂದೆ....

**ಮೋ. ಮಾ. ವ. ೧೬೭, ಪು. ೪೦**

೩ .... ಬ್ರಹ್ಮನ ಚಕ್ರದಲ್ಲಿ ಹುಟ್ಟಿ ವಿಷ್ಣುವಿನ ಚಕ್ರದಲ್ಲಿ
ಬೆಳೆದು ರುದ್ರನ ಚಕ್ರದಲ್ಲಿ ಸಾವುದನರಿಯದೆ ಬಣ್ಣ
ಬಚ್ಚಣೆಯ ಮಾತು ಕಲಿತು ಅನ್ನವನಿಕ್ಕುವರ ಪ್ರಸಂಗವ
ಹಡೆಯಬಂದ ಗನ್ನಗಾರಂಗೇಕೆ ಅರಿವು? ...

**ಮೋ. ಮಾ. ವ. ೩೩೪, ಪು. ೮೪**

೪ ಅಂದಗಾರಿಕೆಯಲ್ಲಿ ನಡೆವ ಭಂಡರಿಗೆಲ್ಲಿಯದೋ ಲಿಂಗಾರ್ಪಿತ ?....

**ಮೋ. ಮಾ. ವ. ೨೭೪, ಪು. ೬೮**

೫ ....ಜಿಹ್ವಾಲಂಪಟಕ್ಕಾಗಿ ಅನ್ಯರ ಬೋಧಿಸಲೇಕೋ ?....

**ಮೋ. ಮಾ. ವ. ೩೮೧, ಪು. ೯೬**

೬ .... ಮಾತಿನ ಮಾಲೆಯು ಕಲಿತು, ಸಂತೆಯು ಹೋತಿನಂತೆ
ಹೋರುವ ತೂತಜ್ಞಾನಿಗಳಿಗಿನ್ನೇತರ ವಿರಕ್ತಿಯೋ
ನಿಃಕಳಂಕ ಮಲ್ಲಿಕಾರ್ಜುನಾ?

ಮೋ. ಮಾ. ವ ೬೩೫, ಪು. ೧೬೦

ಎಂಬಿವೇ ಮೊದಲಾದ ಮಾರಯ್ಯನವರ ಸಿಡಿಲುನುಡಿ ಸಮಯ ಸಂಪ್ರದಾಯ ಸಮಾಜಗಳಲ್ಲಿ ಮನೆಮಾಡಿಕೊಂಡಿರುವ ಲೋಪದೋಷಗಳ ಮೇಲೆ ಬಿದ್ದು ಸುಟ್ಟು ಧ್ವಂಸ ಮಾಡುವಂತಿವೆ. ಸಮಾಜದ ಗುಣದೋಷಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ವಿಮರ್ಶಿಸಿ ಗುಣವನ್ನು ಎತ್ತಿಕೊಂಡು ಕೊನೆದಾಡಿ ದೋಷವನ್ನು ತೀಕ್ಷ್ಣವಾಗಿ ಖಂಡಿಸಿದ್ದಾರೆ. ರೋಗವಡಸಿದ ಸಮಾಜದ ಸ್ವಾಸ್ಥ್ಯವನ್ನು ಸುಲಕ್ಷಿಸಿಯೇ ಮಾರಯ್ಯನವರ ಬಾಯಿಂದ ಇಂತಹ ಕೆಂಡ ನುಡಿ ಉರಿದೆದ್ದಿವೆ. ಮುಚ್ಚು ಮರೆಯಿಲ್ಲದೆ, ದಯಾ ದಾಕ್ಷಿಣ್ಯವಿಲ್ಲದೆ ಇದ್ದ ಮಾತನ್ನು ಇದ್ದಂತೆ ನುಡಿವಾಗ ಭಾಷೆಯ ನಯ ವ್ಯಾಕರಣದ ಕಟ್ಟು ಸಮಯದ ಹಂಗೇಕೆ? ಅಂತಯೇ ಅವರ ಮಾತಿನ ಶೈಲಿ ಸಹಜ ನಿಸರ್ಗಳ ಧೀರ ಗಂಭೀರ ನ್ಯಾಯನಿಷ್ಠುರ. ಮಾರಯ್ಯನವರ ಶೈಲಿ ಮಾರಯ್ಯನವರದೇ. ಆ ಶೈಲಿಯಲ್ಲಿ ಮಾರಯ್ಯನವರ ವ್ಯಕ್ತಿತ್ವದ ಕೆಚ್ಚೇ ಅಚ್ಚಾದಂತಿದೆ. ಅಂತೆಯೇ ಒಳ್ಳೇ ಪರಿಣಾಮಕಾರಿಯಾಗಿದೆ, ಪ್ರಭಾವಶಾಲಿಯಾಗಿದೆ.

ತಮ್ಮ ಈ ಸತ್ಯವಾದಿತ್ವ ಪ್ರಾಮಾಣಿಕತನ ನಿಷ್ಠುರ ಬಿರುಸಿಗಾಗಿ ಮಾರಯ್ಯನವರ ಮನ ಒಮ್ಮೊಮ್ಮೆ ನೊಂದಿದೆ. ಸತ್ಯವನ್ನು ನಿಷ್ಠುರವಾಗಿ ನುಡಿಯ ಹೋಗಿ ತಪ್ಪು ನುಡಿದರೆ ಅನ್ಯರ ಮನ ನೋವುದಲ್ಲಾ ! ಎಂದು ಮರಮರನೆ ಮರುಗಿ ತಮ್ಮ ತಪ್ಪು ಮನ್ನಿಸಬೇಕೆಂದು ಬೇಡಿಕೊಂಡಿದ್ದಾರೆ.

ನಾ ತಪ್ಪಿ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ.
ಕಣ್ಣಿನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ?
ಇದು ಬಣ್ಣಗಾರಿಕೆಯಲ್ಲ ಸನ್ನದ್ಧರಿರವು
ನಿಃಕಳಂಕ ಮಲ್ಲಿಕಾರ್ಜುನಾ.

ಮೋ. ಮಾ. ವ. ೧೪೬, ಪು. ೩೫

ಮಾರಯ್ಯನವರ ಕುಸುಮ ಕೋಮಲ ಹೃದಯ ಅವರ ಸದುವಿನಯ ಔದಾರ್ಯಗಳು ಹಲಕೆಲವು ವಚನಗಳಲ್ಲಿ ಮಧುರವಾಗಿ ಮೂಡಿ ಸಕಲ

ಲೋಕಕ್ಕೆ ಲೇಸನೇ ಬಯಸುವ' 'ಸರ್ವಹಿತೇರತ' ವಾದ ಅವರ ಸನ್ಮಧುರ ಭಾವನೆಯನ್ನು ಅವರ ಶಿವಾಶಯವನ್ನು ತೋರಿ ಬೀರುತ್ತಿವೆ.

ಹಲವಾರು ಸಲ ತಮ್ಮ ತಪ್ಪು ಒಪ್ಪಿಕೊಂಡು ತಿರುವುಮುರುವು ನೋಡಿದ ಕಣ್ಣು ತಿದ್ದಿಕೊಂಡು ಗುಣವನ್ನು ಗುಣವೆಂದು ತಲೆಯ ಮೇಲೆ ಹೊತ್ತುಕೊಂಡು ದಣಿಯದೆ ಕುಣಿದಿದ್ದಾರೆ ಮಾರಯ್ಯನವರು. ಮಹಾಪ್ರಣವ ಬಸವಣ್ಣನೆಂದು 'ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎನು ತಿರ್ದೆನು' ಎಂದು ಅವರವರ ವ್ಯಕ್ತಿತ್ವದ ಘನವನ್ನು ಕಂಡು ಮಣಿದು ಧನ್ಯ ರಾಗಿದ್ದಾರೆ ಮಾರಯ್ಯನವರು. 'ಆಹಾ ಎನ್ನ ಕಂಗಳ ಮನೆಯ ಮಾಡಿ ಕೊಂಡಿಪ್ಪ ನಿತ್ಯದ ಬೆಳಗೆ!' ಎಂದು ಮುಂತಾಗಿ ಪ್ರಭುದೇವರನ್ನು ಕೊಂಡಾಡಿ ಕೊನರಿದ್ದಾರೆ ಮಾರಯ್ಯನವರು. ಅವರ ವ್ಯಕ್ತಿತ್ವದ ಈ ಸರಳ ಮೃದುಮಾಧುರ್ಯವೂ ಅವರ ಮಾತಿನ ರೀತಿಯಲ್ಲಿ ಮೂರ್ತಿವೆತ್ತು ನಿಂತಿದೆ.

ಮಾರಯ್ಯನವರ ತಾತ್ವಿಕ ವಿಚಾರ ಆತ್ಮಾನುಭೂತಿಯ ಪರಮ ಗಾಂಭೀರ್ಯ ಅವರ ಹಲವಾರು ವಚನಗಳಲ್ಲಿ ಸ್ಫುಟವಾಗಿ ಬೆಳಗಿ ತೋರು ತ್ತದೆ. ಸಾಗರದ ನೀರು ತಿಳಿದರೆ ತಳದ ಮುತ್ತು ಹೊಳೆದು ತೋರುವಂತೆ ಪ್ರಜ್ವಲಿಸಿ ತೊಳಗಿ ಬೆಳಗುವದಿಲ್ಲವೇ ಇಂತಹ ಮುತ್ತು ಮಾತುಗಳು! ಶಿವ ಜ್ಞಾನಸಂಪದದ ಸಿರಿನುಡಿಗಳು!

೧ ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ.
೨ ನಿನ್ನ ನೀ ತಿಳಿ ನಿಃಕಳಂಕಮಲ್ಲಿಕಾರ್ಜುನನಲ್ಲಿ.
೩ ಪೃಥ್ವಿಯ ಪ್ರಥ್ವಿ ಎಲ್ಲಿಪ್ಪುದು?
೪ ಒಪ್ಪವಲ್ಲದೆ ಆ ವಸ್ತುವನಪ್ಪುವರನಾರನು ಕಾಣೆ.
೫ ಸಚ್ಚಿದಾನಂದನ ಸಂಗ ಬಚ್ಚಬಯಲು.
೬ ಭಾವ ನಿರ್ಭಾವವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೇ.

ಎಂಬಿಂತಹ ಅನೇಕ ವಚನ ಜ್ಯೋತಿಗಳು ಮರವೆಯ ನೆಲವನ್ನು ಭೇದಿಸಿ ನಿಜಾನುಭೂತಿಯ ನಿಧಿ ನಿಧಾನವನ್ನು ತೋರಿ ದರಿದ್ರ ಮಾನವನನ್ನು ಅಖಂಡ ಶಿವಸಂಪದದ ಪರಮ ಪ್ರಭುವನ್ನು ಮಾಡುವಂತಿಲ್ಲವೇ? ಇಂತಹ ಪರಮ

ಸತ್ಯ, ಗಾಂಭೀರ್ಯವನ್ನು ತಿಳಿಯಾಗಿ ನುಡಿವ ಮಾತಿನ ರೀತಿ ಸಂಪತ್ ಸಮೃದ್ಧವಾದುದೆಂದೇ ಹೇಳಬೇಕು.

ಸಾಮಾನ್ಯವಾಗಿ ವಚನ ವಾಙ್ಮಯದಲ್ಲಿ ತೋರುವ ಅಲಂಕಾರ, ನಾಣ್ನುಡಿ, ಜಾಣ್ನುಡಿಗಳೂ ಮಾರಯ್ಯನವರ ವಚನಗಳಲ್ಲಿ ತೋರಿಬರುತ್ತವೆ. ಇಲ್ಲಿ ಮಾರಯ್ಯನವರು ವಚನ ಶೈಲಿಯ ಸಂಪ್ರದಾಯಕ್ಕೆ ಋಣಿಯಾಗಿದ್ದರೂ ತಮ್ಮ ವ್ಯಕ್ತಿತ್ವದ ವೈಶಿಷ್ಟ್ಯವನ್ನೂ 'ನವನವೋನ್ಮೇಷ'ತೆಯನ್ನೂ ಅಲ್ಲಲ್ಲಿ ವ್ಯಕ್ತ ಮಾಡಿದ್ದಾರೆ:—

೧ ಕತ್ತೆ ಬತ್ತಲೆ ಇದ್ದರೆ ನೆಟ್ಟನೆ ನಿರ್ವಾಣಿಯೆ?
೨ ಮಣ್ಣ ಬೆಕ್ಕು ನನ್ನಿಯ ಮೂಷಕನ ಮುಟ್ಟಿದುದುಂಟೇ?
೩ ಮಾತಿನ ಮಕ್ಕಳಿಗಿಲ್ಲ ಜಗದೀಶನೊಲುಮೆ.
೪ ನೆಲ ತಳವಾರನಾದಡೆ ಕಳ್ಳಂಗೆ ಹೋಗಲೆಡೆಯುಂಟೇ ?
೫ ಮೊದಲುಗೆಟ್ಟು ಲಾಭವನರಸುವ ಪರಿ ಇನ್ನೆಂತೋ ?
೬ ಮಾತಿನ ಗೆಲ್ಲ ಸೋಲದಲ್ಲಿ ಅಜಾತನ ಅರಿಯಬಾರದು.
೭ ವೇದಾಂತವ ನುಡಿವವರ ಬಲ್ಲೆ, ಸಿದ್ಧಾಂತವ ನಡೆವವರ ಕಾಣೆ.
೮ ಅರಗಿನ ಪುತ್ಥಳಿಯು ಉರಿಯ ಮನೆಯ ಹೊಕ್ಕಂತಿರಬೇಕು.
೯ ಕುರುಳಿನಲ್ಲಿ ಕೂಳ ಕಟ್ಟಿ ಕೂದಲ ಶೋಧಿಸಬಹುದೇ ಅಯ್ಯಾ ?
೧೦ ಅರಿದವನಂಗ ದಗ್ಧಪಟದಂತೆ.
೧೧ ಮಂಜಿನ ರಂಜನೆಯ ನೀರಿಗೆ ತಟಾಕ ತುಂಬಿದುದುಂಟೇ ?
೧೨ ತಾನು ಹೊಳೆಯಲ್ಲಿ ಮುಳುಗುತ್ತ ಈಸಬಲ್ಲವರ ಗಂಡನೆಂಬಂತೆ.
೧೩ ಇಷ್ಟಲಿಂಗವ ಪೂಜಿಸುವನಿರವು ಹಿಮಾಚಲದ ಶಿಲೆಯಂತಿರಬೇಕು.

ಎಂಬೀತೆರನಾದ ಅನೇಕ ಸಣ್ಣ ಸಣ್ಣ ಕಿಡನುಡಿಗಳು ದೃಷ್ಟಾಂತಗಳು ಮಾರಯ್ಯನವರ ವಿಚಾರ ಧೋರಣೆಯನ್ನು ಸ್ಪಷ್ಟಗೊಳಿಸುತ್ತವೆ. ಕಠಿಣ, ಕ್ಲಿಷ್ಟವೆಂಬುದನ್ನು ಬದಿಗೊತ್ತಿ ಮಾತೆಗೆ ಅಲಂಕಾರವಾಗಿ ಮೆರೆಯುತ್ತವೆ.

ಮಾರಯ್ಯನವರ ಭಾಷೆಯ ಸರಣಿ ಹಲವಾರು ಕಡೆ ವಿಲಕ್ಷಣ ವಾಗಿಯೂ ತೋರುತ್ತದೆ. 'ಭಕ್ತನಾದ ಮತ್ತೆ ಬಂಧುಗಳ ಬಿಡಬೇಕು.' 'ನೀಡಿದ ಮತ್ತೆ ನಿಜವಸ್ತುವಿನಲ್ಲಿರಬೇಕು.' ಇಂತಹ ವಾಕ್ಯಗಳಲ್ಲಿ ಮತ್ತೆ ಎಂಬುದು ಬಳಿಕ ಇಲ್ಲವೆ ಮೇಲೆ ಎಂಬರ್ಥದಲ್ಲಿ ಉಪಯೋಗವಾಗಿದೆ

ಎಂಬುದು ಓದಿ ನೋಡಿ ವಿಚಾರ ಮಾಡಿದ ಮೇಲೆ ಗೊತ್ತಾಗುತ್ತದೆ. ಸಾಮಾನ್ಯವಾಗಿ ಬಳಕೆಯಲ್ಲಿಲ್ಲದ ವಿಭಕ್ತಿಪಲ್ಲಟಗಳು ಇಲ್ಲಿ ಅನೇಕ. ಈ ತೆರನಾದ ಉಪಯೋಗ ಹಲವಾರು ಶರಣರು ಮಾಡಿದುದೂ ಉಂಟು. ಇದಲ್ಲದೆ ಮಾರಯ್ಯನವರ ವಾಕ್ಯ ರಚನೆಯಲ್ಲಿ ಒಂದು ವಿಚಿತ್ರ 'ಪ್ರಕಾಶ' ತೋರಿ ಬರುತ್ತದೆ. ಇದಕ್ಕೆ ಕಾರಣವೇನಿರಬಹುದೆಂಬುದನ್ನು ಈ ಮೊದಲೇ ನೋಡಿದ್ದೇವೆ.

ಮಾರಯ್ಯನವರ 'ಶಬ್ದಭಾಂಡಾರ' ಸಾಕಷ್ಟು ದೊಡ್ಡದಿದೆಯೆಂದೇ ಹೇಳಬೇಕು. ಆ ಭಾಂಡಾರದಲ್ಲಿ ತಿಳಿಯದ ಶಬ್ದಗಳೆಷ್ಟೊ! ನಿಘಂಟುಗಳಲ್ಲಿ ದೊರೆಯದವೆಷ್ಟೊ ! ಅವನ್ನು ತಿಳಿದುಕೊಂಡು ಅರ್ಥ ನಿರ್ಧರಿಸಿ ಇಂದೂ ಬಳಿಸಿಕೊಂಡರೆ ಕನ್ನಡ ಭಾಷೆ ಬೆಳೆವುದೆಂಬುದರಲ್ಲಿ, ಹೆಚ್ಚು ಶ್ರೀಮಂತವಾಗುವುದರಲ್ಲಿ ಸಂಶಯವಿಲ್ಲ. ಈ ಮಾತು ಕೇವಲ ಮಾರಯ್ಯನವರ ವಚನಕ್ಕಷ್ಟೇ ಅಲ್ಲ, ನಮ್ಮ ಎಲ್ಲ ಪ್ರಾಚೀನ ಸಾಹಿತ್ಯಕ್ಕೂ ಅನ್ವಯವಾಗುತ್ತದೆ. ಹೊಸತನ್ನು ಗಳಿಸೋಣ, ಹೊಸ ಹೊಸ ಶಬ್ದಗಳನ್ನು ಹುಟ್ಟಿಸೋಣ. ಆದರೆ ಕ್ರಮ ಪ್ರಾಪ್ತವಾದ ಮೂಲಧನವನ್ನು ಮರೆತು ದುರ್ಲಕ್ಷಿಸುವುದೇಕೆ ? ಹಳೆಯ ಶಬ್ದಗಳೆಂದು ಮೂಲಿಗಿಟ್ಟು ನಮ್ಮ ಪ್ರತಿಭಾನ ಶಕ್ತಿಯನ್ನು ಮಂಕುಗೊಳಿಸುವುದೇಕೆ ?

ಆಗು, ಚೇಗೆ, ಗಡಾವಣೆ, ಒಚ್ಚೆ, ಘಸಣೆ, ಅಡಿಗ, ಪಡಿಪುಚ್ಚ, ಕೂಟಗೆ, ಶಾಬರ, ಕೌಳಿಕ, ಅನು, ಸಂಚು, ಹಂಗು, ವಾಸಿವಟ್ಟ, ಗದಕ, ಸೊಲ್ಲುಸೊಲ್ಲಿಗೆ, ಅಚ್ಚಿಗ,ವರ್ಮ,ತತ್ತು, ಹಮ್ಮು ಬಿಮ್ಮು,ಒಳಿತು ಹೊಲ್ಲೆಹ, ಸೊಮ್ಮು ಸಂಬಂಧ, ಅಂಕಸೂನೆಗಾರ, ಬೆಲ್ಲದ ಗೊಟ್ಟು, ಠಾವು, ಮುಂಡಿಗೆ, ಬಣ್ಣಗಾರಿಕೆ, ಗುತ್ತಿಗೆಕಾರ, ಹೊತ್ತುಹೋಕರು, ನಾಟಕರು, ಅರ್ತಿಕಾರರು, ಜಾಳಿಸು, ಚಪ್ಪರಿ, ಹೊತ್ತು ಹೋರು, ಬದ್ಧಕ್ಕೆ ಹೋರಾಡು, ಹೊತ್ತು ನಿತ್ತರಿಸು,- ಎಂಬೀ ಮೊದಲಾದ ಇನ್ನೂ ಅನೇಕ ಶಬ್ದಗಳು ಮಾರಯ್ಯನವರ ವಚನಗಳಲ್ಲಿ ದೊರೆಯುತ್ತವೆ. ಇವುಗಳಲ್ಲಿ ಕೆಲವು ವಚನ ಸಾಹಿತ್ಯದಲ್ಲಿ ಇಲ್ಲವೆ ನಮ್ಮ ಪುರಾತನ ಸಾಹಿತ್ಯದಲ್ಲಿ ದೊರೆಯಬಹುದು. ಆದರೆ ಅವರಲ್ಲಿ ಅನೇಕ ಶಬ್ದಗಳ ಅರ್ಥ ನಮಗೆ ಗೊತ್ತಾಗಿಲ್ಲ. ಮತ್ತು ಅನೇಕ ಶಬ್ದ ನುಡಿಗಟ್ಟು ವಾಕ್ಯಗಳಲ್ಲಿ ನಮ್ಮ ಹಿಂದಿನ ಆಚಾರ ವಿಚಾರ, ಆಟ ನೋಟ,

ರಾಜಕೀಯ ಧಾರ್ಮಿಕ ಸಾಮಾಜಿಕ ಸಂಗತಿಗಳು 'ಫಾಸಿಲ್ಸ್' ದಂತೆ ಮರೆದೊರಗಿರಬಹುದು. ಅಂತೆಯೇ ವಿಸ್ತಾರ ಆಳ ವಿಮರ್ಶಾತ್ಮಕ ತುಲನಾತ್ಮಕ ಅಭ್ಯಾಸದಿಂದ ನಮ್ಮ ಹಿರಿಯರು ಹೂಳಿಟ್ಟ ಅಪಾರವಾದ ಅಕ್ಷಯವಾದ ಉಜ್ವಲ ನಿಧಿಯ ಅರಿವು ನಮಗಾಗಬಹುದು. ಕನ್ನಡಭಾಷೆಗಿರುವ ಶಬ್ದದಾರಿದ್ರ್ಯ ಅಳಿದುಹೋಗಿ ಭಟ್ಟಾಕಳಂಕದೇವನಂತಹರ 'ನ ಚೈಷಾ ಭಾಷಾ ಶಾಸ್ತ್ರಾನುಪಯೋಗಿನೀ' ಎಂಬ ಹೇಳಿಕೆ ಕಂದೆರೆದು ಸತ್ಯ ಸಂಗತಿಯಾದೀತು.

ಮಾರಯ್ಯನವರ ಪುಣ್ಯಾಂಗನೆ ಮಹಾದೇವಿಯಮ್ಮನವರ ವಚನಗಳ ಶೈಲಿ ಸರಳ ಮೃದು ಗಂಭೀರ ವಾಗಿದೆಯೆಂದು ಹೇಳಬಹುದು.

ಆಮೇಲೆ ಮಾರಯ್ಯನವರ ಬೆಡಗಿನ ವಚನಗಳಿಗೆ ಟೀಕೆ ಬರೆದ ಟೀಕಾಕಾರನ ಬಗೆಗೆ ಒಂದು ಮಾತು ಹೇಳಬಹುದು. ಈ ಅಜ್ಞಾತ ಅನುಭಾವಿ ಯಾರೋ ನಮಗೆ ತಿಳಿಯದು. ಆದರೆ ಅವರ ಟೀಕೆ 'ಉಜ್ಜ್ವಲ' ವಾಗಿದೆಯೆಂದೇ ಹೇಳಬೇಕು. ಅವರ ಅನುಭವ, ವೀರಶೈವ ಸಿದ್ಧಾಂತದ ಪರಿಚಯ, ವಿಚಾರದ ನಿರರ್ಗಳಸರಣಿ, ಭಾಷೆಯ ಸರಿ ಸೊಗಸು ಗಂಭೀರ, 'ಉಕ್ಕಿನ ಕಡಲೆ' ಯಂತಿದ್ದ ಬೆಡಗಿನ ವಚನಗಳನ್ನು ಕಡಿದು ಭೇದಿಸಿ ಅವರಂತರಂಗದ ಭಾವಾರ್ಥವನ್ನು ಬಯಲಿಗೆ ತಂದು ಬಿಚ್ಚಿ ಹೇಳುವ ಅವರ ಜಾಣ್ಮೆ ನಿಜವಾಗಿಯೂ ಬೆರಗುಗೊಳಿಸುವಂತಿವೆ. ಅವರ ಶೈಲಿ ಭಾಷೆಗೆ ಮುತ್ತಿಟ್ಟಂತಿದೆ. ಮಾರಯ್ಯನವರ ವಚನಗಳ ಬೆಡಗಿನ ಮೇಲೆ ಟೀಕಾಕಾರರ ಸ್ವಾನುಭೂತಿಯ ಬೆಳಗು ಬೀಳದಿದ್ದರೆ ಬೆಡಗಿನ ವಚನಗಳೆಲ್ಲ ನಮ್ಮ ಪಾಲಿಗೆ ಮುಚ್ಚಿಟ್ಟು ಮುದ್ರೆಹಾಕಿದ 'ಅನುಭವ ಭಾಂಡಾರ' ವಾಗುತ್ತಿದ್ದುವು. ತಮ್ಮನ್ನು ಮುಚ್ಚಿಟ್ಟುಕೊಂಡು ವಚನ ಸಾಹಿತ್ಯಕ್ಕೆ ನಿಜ ಸೇವೆ ಸಲ್ಲಿಸಿದ ಈ ಮಹಾತ್ಮನಾರಿರಬಹುದು? ಇದಕ್ಕೆ ಉತ್ತರ ಇತಿಹಾಸ ಸಂಶೋಧನೆಯ ಮುಂದಿರುವ ಪ್ರಶ್ನೆ.

---

ಕೊನೆಯ ಮಾತು. ಈ ಗ್ರಂಥ ಎಚ್ಚತ್ತು ನಿಚ್ಚಳವಾಗಿ ಬೆಳಕಿಗೆ ಬಂದುದು ಶ್ರೀಮಾನ್ ವೀರಭದ್ರಪ್ಪ ಬಸಪ್ಪ ಹಾಲಬಾವಿ, ನಿವೃತ್ತ ೧ನೆಯ ವರ್ಗ ನ್ಯಾಯಾಧೀಶ, ಧಾರವಾಡ, ಇವರಿಂದ. ಮುಪ್ಪಾಗಿದ್ದರೂ ಇಳಿಕೆ ಪಡೆದಿಲ್ಲ ಇವರ ಆತ್ಮತೇಜ. ಹಿರಿಯ ಸಂಸಾರ ಇವರದು. ಆದರೇನು ? ಆ ಸಂಸಾರದ ದಂದುಗದಲ್ಲಿ ಸಿಕ್ಕಿಲ್ಲ ಇವರು. ಅಂತೆಯೇ ದುಡಿಯುತ್ತಾರೆ ಹಗಲಿರುಳು 'ಕಾಯಾ ವಾಚಾ ಮನಸಾ' ಸಮಾಜದ ಸಾಂಸ್ಕೃತಿಕ ಸರ್ವೋದಯಕ್ಕಾಗಿ. ಇದಕ್ಕೆ ಶಂಕರ ದಾಸಿಮಯ್ಯನ ಪುರಾಣ, ಚೆನ್ನಬಸವ ಪುರಾಣ, ಪ್ರಭುಲಿಂಗಲೀಲೆ ಮುಂತಾದುವು, ಎಲ್ಲಕ್ಕೂ ಹೆಚ್ಚು ಈ ಗ್ರಂಥವೇ ಸಾಕ್ಷಿ. ಇಂತಹ ಮಹನೀಯರಿಗೆ ನಮ್ಮ ಸಹೃದಯದ ಅಭಿವಂದನೆಗಳು.

ಹಲವಾರು ವಚನಗ್ರಂಥಗಳನ್ನು ಪರಿಶೀಲಿಸಿ ಮಾರಯ್ಯನವರ ವಚನಗಳನ್ನೆಲ್ಲ ಹೊರದೆಗೆದು ಸಂಗ್ರಹ ಮಾಡಿಕೊಟ್ಟವರು ಕನ್ನಡ ನಾಡಿನ ಸಾಹಿತ್ಯಸಿದ್ಧರಲ್ಲಿ ಒಬ್ಬರಾಗಿ, ಕನ್ನಡಿಗರ ಹಿರಿಯ ಮನ್ನಣೆಗೆ ಪಾತ್ರರಾಗಿ, ಜೀವನದ ಹಲವಾರು ಕಷ್ಟನಷ್ಟಕ್ಕೊಳಗಾಗಿಯೂ ನಾಡಿನ ಹಲವಂದದ ಮುನ್ನಡೆಗಾಗಿ ಜೀವನವನ್ನು ಸಮರ್ಪಿಸಿ 'ಬದುಕು'ತ್ತಿರುವ 'ಸರ್ವಜ್ಞನ ವಚನಗಳ' ಸಂಪಾದಕರಾದ ರೆವ್ಹರೆಂಡ್ ಶ್ರೀ. ಉತ್ತಂಗಿ ಚೆನ್ನಪ್ಪನವರು. ಅವರೇ ಹೇಳುವಂತೆ ತಿರುಳುಗನ್ನಡ 'ತಿರುಕ'ರಿವರು. ನಮ್ಮ ನಾಡಿನ 'ತಿರುಕ'ರ ಬುದ್ಧಿ ಹೃದಯ ವೈಭವವೆಷ್ಟೆಂಬುದನ್ನು ಅವರು ತಮ್ಮ ಹಲವಾರು ಕೃತಿಗಳಿಂದ ತೋರಿಕೊಟ್ಟಿದ್ದಾರೆ. ಅವರ ಅವ್ಯಾಹತ ಪರಿಶ್ರಮದಿಂದಲೇ ಮೋಳಿಗೆಯ ಮಾರಯ್ಯನವರ ಉಪಲಬ್ಧವಿದ್ದ ವಚನಗಳೆಲ್ಲ ಒಂದೆಡೆ ಸೇರಿ ಬೆಳಕು ಕಾಣುವಂತಾದುವು. ಅವರಿಗೆ ನಾವು ತುಂಬ ಕೃತಜ್ಞರು.

ಪ್ರಸ್ತಾವನೆಯನ್ನು ಬರೆವಲ್ಲಿ ಸೂಕ್ತಸಲಹೆ ಸೂಚನೆಗಳನ್ನು ಕೊಟ್ಟ ಶ್ರೀಮಾನ್ ಚೆನ್ನಬಸಪ್ಪನವರು ಬಾಗಿ, ವ್ಹಾಯಿಸ್ ಪ್ರಿನ್ಸಿಪಾಲ್, ಲಿಂಗರಾಜ ಕಾಲೇಜ, ಬೆಳಗಾಂವಿ, ಇವರಿಗೆ ಸಲ್ಲಿಸತಕ್ಕುದೇನು ? ಅಭಿಂವದನೆಯೇ ! ಕೃತಜ್ಞತೆಯೇ! ಅಲ್ಲ. ಗಂಭೀರ ಮೌನ! ಶಾಂತಿ!

**ಸಂ. ಶಿ. ಭೂಸನೂರಮಠ.**

# ಪ್ರಸ್ತಾವನೆಯ ಒಪ್ಪೋಲೆ

| | | | | | | |
|---|---|---|---|---|---|---|
| ಪುಟ | ೩೬ | ಸಾಲು | ೧೯ | 'ನಯನಕ್ಕೆಲ್ಲ' | ಇದರ ಬದಲು | 'ನಯನವನ್ನೆಲ್ಲ' |
| ,, | ೪೪ | ,, | ೧೭–೧೮ | 'ಉತ್ತರ ಆವಶ್ಯ, ಕತೆಯೋ' | ,, | 'ಉತ್ತರದ ಆವಶ್ಯಕತೆಯೋ' |
| ,, | ೧೦೦ | ,, | ೨ | 'ಬಿಟ್ಪ್ಪ' | ,, | 'ಬಿಚ್ಚಿ' |
| ,, | ೧೦೧ | ,, | ೨ | 'ಕೊಂಡಿತ್ತು' | ,, | 'ಕೊಂಡತ್ತು' |
| ,, | ೧೦೧ | ,, | ೨೭ | 'ಸತ್ತರೆ' | ,, | 'ಸತ್ತರೆ ನಾ' |
| ,, | ೧೨೭ | ,, | ೧೩ | 'ಎಡೆಯೂಟ' | ,, | 'ಎಡೆಯಾಟ' |
| ,, | ೧೩೯ | ,, | ೨೩ | 'ಮೂಸಮಾಡಿ' | ,, | 'ವಾಸ ಮಾಡಿ' |

ಎಂದು ಓದಿರಿ

# ಪ್ರಸ್ತಾವನೆಯಲ್ಲಿ ಬಂದ ಸಂಕೇತಗಳು

| | |
|---|---|
| ಅ. . . . | ಅಧ್ಯಾಯ. |
| ಚಂ. ವ.. . . | ಚಂದಿಮರಸನ ವಚನಗಳು. |
| ಚೆ. ಪು. . . . | ಚೆನ್ನಬಸವ ಪುರಾಣ. |
| ಚೆ. ಬ. ವ. . . | ಚೆನ್ನಬಸವೇಶ್ವರ ವಚನಗಳು. |
| ತೆ. ಬ. ಪು. . . | ತೆಲಗು ಬಸವ ಪುರಾಣ. |
| ಪ. . . . | ಪದ್ಯ. |
| ಪ್ರ. ಲಿಂ. ಲೀ. . . | ಪ್ರಭುಲಿಂಗ ಲೀಲೆ. |
| ಪ್ರ. ವ. . . . | ಪ್ರಭುದೇವರ ವಚನಗಳು. |
| ಬ. ವ. . . . | ಬಸವೇಶ್ವರ ವಚನಗಳು. |
| ಬ. ರಾ. ದೇ. ರ. . . | ಬಸವರಾಜ ದೇವರ ರಗಳೆ. |
| ಭ. ಗೀ. . . . | ಭಗವದ್ಗೀತಾ. |
| ಮ. ಮಾ. ವ. . . | ಮಡಿವಾಳ ಮಾಚಿದೇವನ ವಚನಗಳು. |
| ಮ. ವ. . . . | ರಾಣಿ ಮಹದೇವಿಯಕ್ಕನ ವಚನಗಳು. |
| ಮೋ. ಪು. . . | ಮೋಳಿಗೆಯ್ಯನ ಪುರಾಣ. |
| ಮೋ. ಮಾ. ವ. . . | ಮೋಳಿಗೆಯ ಮಾರಯ್ಯನ ವಚನಗಳು. |
| ಲಿಂ. ಲೀ. ವಿ ಚಾ. . | ಲಿಂಗಲೀಲಾ ವಿಲಾಸ ಚಾರಿತ್ರ. |
| ವ. ಶಾ. ಸಾ. ಭಾ. . | ವಚನ ಶಾಸ್ತ್ರಸಾರ ಭಾಗ. |
| ವೀ. ಪು. . . . | ವೀರಶೈವಾಮೃತ ಮಹಾ ಪುರಾಣ. |
| ಶ. ಲೀ. . . . | ಶರಣ ಲೀಲಾಮೃತ. |
| ಶಿ. ವಿ. . . . | ಶಿವಶರಣ ವಿಲಾಸ. |
| ಶಿ. ಶ. ಚ. . . | ಶಿವಶರಣರ ಚರಿತ್ರೆಗಳು. |
| ಶೂ. ಸಂ. . . | ಶೂನ್ಯ ಸಂಪಾದನೆ. |
| ಶ್ಲೋ.. . . . | ಶ್ಲೋಕ. |
| ಸಂ. . . . | ಸಂಧಿ. |
| ಸಿ. ವ. . . . | ಸಿದ್ಧರಾಮನ ವಚನಗಳು. |



ಮೋಳಿಗೆಯ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯಮ್ಮ

# ಮೋಳಿಗೆಯ ಮಾರಯ್ಯನ ವಚನಗಳು

## ೧ ಈಶ್ವರ-ವಿಶ್ವ-ಜೀವ



### ೧ ಈಶ್ವರ

೧

ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬು ದಪ್ಪಿ ನುಡಿವವರ ನೋಡಾ! ವಾಯು ಒಂದಲ್ಲದೆ ದಶವಾಯುವಿಲ್ಲವೆಂದೆ. ಇಂದ್ರಿಯ ಒಂದಲ್ಲದೆ ಐದು ಇಲ್ಲವೆಂದೆ. ವ್ಯಸನ ಒಂದಲ್ಲದೆ ಏಳು ಇಲ್ಲವೆಂದೆ. ಕರಣ ಒಂದಲ್ಲದೆ ನಾಲ್ಕು ಇಲ್ಲವೆಂದೆ. ಮದ ಒಂದಲ್ಲದೆ ಎಂಟು ಇಲ್ಲವೆಂದೆ. ಆಧಾರ ಒಂದಲ್ಲದೆ ಷಡಾಧಾರವಿಲ್ಲವೆಂದೆ. ಒಂದು ಬೀಜದಲ್ಲಾದ ವೃಕ್ಷದ ಹಣ್ಣಿನ ರುಚಿಗೆ ನಾನಾ ಫಲದ ರಸದ ರುಚಿಯುಂಟೇ? ಆ ಬೀಜ ಮೊಳೆವಲ್ಲಿ ಏಕರೂಪಾಗಿ ತಲೆದೋರಿತ್ತು. ಬಲಿದ ಮತ್ತೆ ಹಲವು ರೂಪಾಗಿ ಪಲ್ಲವಿಸಿತ್ತು. ನೆಲೆಯ ಕಡಿದ ಮತ್ತೆ ಹಲವು ರೂಪೆಲ್ಲವು ನೆಲೆಯೊಳಡಗಿದವು. ಸಲೆ ಸಂದ ಹೊನ್ನಿಂಗೆ ಒಟ್ಟ ಉಂಟೇ? ಬಲುಹು ಮುರಿದವಂಗೆ ರಣದ ಸುದ್ದಿ ಏಕೋ? ಜಲದೊಳಗೆ ಮುಳುಗಿದವಂಗೆ ಇಳೆಯವರ ಸುದ್ದಿ ಏಕೋ? ಇದುಕಾರಣ ನಾನಾ ವರ್ಣದ ಹೇಮವ ಭಾವಿಸಿ ಒಂದರಲ್ಲಿ ಕಡೆಗಾಣಿಸಿದ ಮತ್ತೆ ಭಾವನೆ ಬಣ್ಣ ಒಂದಲ್ಲದೆ ಮತ್ತೆ ಭಾವಿಸಲಿಲ್ಲವಾಗಿ. ಅರಿದಲ್ಲಿ ಜ್ಞಾನ, ಮರೆದಲ್ಲಿ ಅಜ್ಞಾನ. ನಾನಾರೆಂಬುದನರಿದಲ್ಲಿಯೇ ಒಂದು ಗುಣ ನಿಂದಿತ್ತು. ತನ್ನ ಮರೆದಲ್ಲಿಯೇ ನಾನಾ ಸಂಚಲವಾಯಿತ್ತು. ಇದಕ್ಕಿದೇ ದೃಷ್ಟ. ದ್ವಯವಿಡಿದುದಕ್ಕೆ ಎರಡಿಲ್ಲದೆ ಮೀರಲಿಲ್ಲವಾಗಿ ಜಗವನರಿವುದಕ್ಕೆ ದಿವರಾತ್ರಿಯಲ್ಲದೆ ಮೀರಿ ತೋರಲಿಲ್ಲವಾಗಿ ಸಂಸಾರವ ಹರಿವುದಕ್ಕೆ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲವಾಗಿ ॥ ೧ ॥

೨

ಅಗ್ನಿ ವಾಯುವ ಧರಿಸಿ, ವಾಯು ಆಕಾಶವ ಧರಿಸಿ, ಆಕಾಶ ಅಪ್ಪುವ ಧರಿಸಿ, ಅಪ್ಪು ಪೃಥ್ವಿಯ ಧರಿಸಿ, ಆ ಪೃಥ್ವಿಗೆ ಅಪ್ಪು, ಆ ಅಪ್ಪುವಿನ ಮಧ್ಯದ ಕಮಠ, ಆ ಕಮಠನ ಮಧ್ಯದ ಶೇಷ, ಆ ಶೇಷನ ಮಧ್ಯದ ಜಗ, ಆ ಜಗದ ಆಗು ಚೇಗೆಯಲ್ಲಿ ಲೋಲನಾಗದೆ ಕಾಯಗುಣವ ಕರ್ಮದಿಂದ ಕಳೆದು, ಜೀವ ಗುಣವ ಅರಿವಿನಿಂದ ಮರೆದು, ಭಾವ ನಿರ್ಭಾವವಾದಲ್ಲಿ ನಿಃಕಳಂಕ ಮಲ್ಲಿ ಕಾರ್ಜುನ ತಾನು ತಾನೆ ॥ ೨ ॥

೩

ಅರಿವ ಮನ ಏಕವಾಗಿಯಲ್ಲದೆ ವಸ್ತುವನೊಡಗೂಡಬಾರದು. ರಜ್ಜು ಒಂದೇ ಗಡಾವಣೆಯಲ್ಲಿ ಎಂದಡೆ ಬಳಿಕಿಲ್ಲ. ಆ ಉಭಯದ ಬಿಡುಗಡೆಯನರಿದು ಅಡಗಿಯಲ್ಲದೆ ಸ್ವಯಂಭುವಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೪

ಇನ್ನೇನಹುದೆಂಬೆ? ಇನ್ನೇನುವನಲ್ಲೆಂಬೆ? ಎಲ್ಲಾ ಮಾಯೆಯನು ನೀನಾಗಿ ಹಿರಿದಹ ಗಿರಿಯ ಹತ್ತಿ ಬಿದಿರ ತರಿದವನಂತೆ ಒಂದ ಬಿಟ್ಟೊಂದು ಹಿಡಿದಡೆ ಅಲ್ಲಿಯೇ ಚೆಂದ. ಹಿಂಗುವುದಕ್ಕೆ ತಾವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೫

ಎನ್ನ ಕಂಡು ನೀನಲ್ಲದೆ ಎನಗೊಂದು ಇಲ್ಲ. ಕಾಳಗದಲ್ಲಿ ಪೌಜನಿಕ್ಕಿ ದಡೆ, ಮಾರಿದಡೆ, ಅರಸೆಂಬರಲ್ಲದೆ ಒಂಟರೆಂಬುದಿಲ್ಲ. ಅದರ ಒಚ್ಚೆ ಯಾರಿಗೆಂಬು ದನರಿ. ನಾನು ನಿನಗೆ ಕೊರತೆ ತರಬಾರದೆಂಬುದಕ್ಕೆ ನಿನಗೆ ಹೇಳಿದೆನಲ್ಲದೆ ಕೊಟ್ಟ ಜೀವಿತಕ್ಕೆ ಓಲೈಸುವಂಗೆ ರಾಜ್ಯದ ಕಟ್ಟಿಕೆ ನಿಃಕಳಂಕ ಮಲ್ಲಿ ಕಾರ್ಜುನಾ ॥ ೫ ॥

೬

ಓದಿನಲ್ಲಿ ಕಾಬರೆ ಅಕ್ಷರಜ್ಞನಲ್ಲ. ವಾದಿನಲ್ಲಿ ಕಾಬರೆ ಗಂಧರ್ವನಲ್ಲ. ಬಯಲಿನಲ್ಲಿ ಕಾಬರೆ ಭೂಮಿಯಾಕಾಶ ಮಧ್ಯದಲ್ಲಿ ಇಪ್ಪವನಲ್ಲ. ಅರಸಿದಡೆ ಎಲ್ಲಿಯೂ ಇಲ್ಲ. ಅರಸದಿದ್ದಡೆ ಅಲ್ಲಿಹ. ನಿನ್ನ ಬಲ್ಲವರಾರೋ ? ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೭

ಕಾಣಬಾರದ ಲಿಂಗವ ಕಾಬ ಪರಿ ಇನ್ನೆಂತೋ? ಕುರುಹಿಲ್ಲದ ಜ್ಞಾನವ ಕುರುಹಿಟ್ಟು ಅರಿವ ಪರಿ ಇನ್ನೆಂತೋ? ನೋಟಕ್ಕೆ ಬಾರದ ರೂಪು ಕೂಟದಲ್ಲಿ ಸುಖವನರಸುವ ಪರಿ ಇನ್ನೆಂತೋ? ಅರಿದಿಹೆನೆಂಬುವದೇನು? ಇದಿರಿಟ್ಟು ಅರುಹಿಸಿಕೊಂಡಿಹೆನೆಂಬುದೇನು? ಅರಿವಿಗೂ ಮರೆವಿಗೂ ಒಡಲಾಯಿತ್ತೆ ಲಿಂಗ? ಘಟದೊಳಗಣ ಜ್ಯೋತಿ ಮಠಕ್ಕುಂಟೇ? ಘಟಕ್ಕೆ ಮಠಕ್ಕೆ ಬೇರೆ ಉಂಟೇ? ಅರಿಯಲಿಲ್ಲವಾಗಿ, ಮರೆಯಲಿಲ್ಲವಾಗಿ, ಮರೆದು ಅರಿಯಲಿಲ್ಲವಾಗಿ ತೆರಹಿಲ್ಲದ ಮತ್ತೆ ಕುರುಹು ಅಡಗಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೭ ॥

೮

ಕಾಯದೊಳಗುಂಟೆಂದರೆ ಕರ್ಮಕಾಂಡಿಯಲ್ಲ. ಜೀವದೊಳಗುಂಟೆಂದರೆ ನಾನಾ ಯೋನಿಯುವನಲ್ಲ. ಭಾವದೊಳಗುಂಟೆಂದರೆ ನಾನಾ ಪ್ರಕೃತಿಯುವನಲ್ಲ. ಅದು ಇದ್ದಿಲು ಶುಭ್ರವಾದ ತೆರನಂತೆ ಹೊದ್ದದಾಗಿ ಬದ್ಧಕತನವಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೯

ಕಾಳೋದರವೆಂಬ ಮಹಾ ತಮದಲ್ಲಿ ಒಂದು ಜೀವಭಾವವೆಂಬ ಮಾಯೆ ಹುಟ್ಟಿ ದಿವ್ಯಜ್ಞಾನವೆಂಬ ವಸ್ತು ಕುರುಹುದೋರಿತ್ತು. ಆ ಮಾಯೆ ಇದ್ದಲ್ಲದೆ ವಸ್ತುವೆಂಬ ಭಾವವಿಲ್ಲ. ಎಂತೆನೆ—ಕಾಷ್ಠದಲ್ಲಿ ಎದ್ದ ಅಗ್ನಿ ಆ ಕಾಷ್ಠದ ನಾಮವ ಕೆಡಿಸುವಂತೆ, ಶಕ್ತಿಸಂಭವದಿಂದ ಉತ್ಪತ್ತಿಯಾದ ನಿಃಶಕ್ತಿ ಸ್ವರೂಪವು ಆಚಾರಕ್ಕನುಕೂಲವಾಗದು. ಅದು ಕ್ರಿಯಳಿದ ಶಬ್ದ. ಅನಾಚಾರವೆಂಬುದಕ್ಕೆ ಸೂಚನೆ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಹುಟ್ಟಿದಲ್ಲಿಯೇ ನಷ್ಟವಾದ ಕಾರಣ ॥ ೯ ॥

೧೦

ಕೃತಯುಗಕ್ಕೆ ಅರಸು ಶೂಲಿ. ತ್ರೇತಾಯುಗಕ್ಕೆ ಅರಸು ರಘು. ದ್ವಾಪರ ಯುಗಕ್ಕೆ ಅರಸು ಸರಸ್ವತಿಯ ಪತಿ. ಕಲಿಯುಗಕ್ಕೆ ಅರಸು ರಾಮಚಂದ್ರ, ದಶಶಿರ ರಾವಣ. ಇವರೊಳಗಾದ ಚಕ್ರವರ್ತಿಗಳು ನರಕುಲ ಜಾತಿ ಪುಣ್ಯಪಾಪವೆಂಬ ಅರಸುತನಕ್ಕೊಳಗಾದರಯ್ಯಾ. ಕೃತಯುಗದಲ್ಲಿ ಆ ಶೂಲಿ ಆಚಾರ್ಯನಾದ. ತ್ರೇತಾಯುಗದಲ್ಲಿ ಆ ರಘು ದಶಾವತಾರಿಯಾದ. ದ್ವಾಪರ

ದಲ್ಲಿ ಆ ಬ್ರಹ್ಮ ಚತುರ್ಮುಖನಾದ. ಕಲಿಯುಗದಲ್ಲಿ ಷಡುದರುಶನ ಪಲ್ಲವಿಸಿತ್ತು. ಇಷ್ಟವ ಹಚ್ಚಿಕೊಂಡರು ದೃಷ್ಟವ ಕಾಬುದಕ್ಕೆ ಮಾಟವನಿರಿಸಿ ಪ್ರಳಯಗತರಾದರಯ್ಯಾ! ಮೂರರೊಳಗಲ್ಲದ ಆರಕ್ಕೆ ಅತೀತನ ತೋರಲಿಲ್ಲದ ಘನವ ಮೀರಿ ನಿಂದವರಾರೋ? ಸೂರೆಯೊಳು ಗಾರಾದವರಿಗೆ ಮೀರಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೧೧

ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ, ಕಾದ ಲೋಹದ ಜಲದಿರವಿನಂತೆ, ನಾದವ ನುಂಗಿದ ಬಯಲಿನಂತೆ, ಚೋದ್ಯವ ಕಂಡ ಕನಸಿನಂತೆ. ಇದಾರಿಗೆ ಭೇದಕ? ಇದ ಶೋಧಿಸಬೇಕು. ಲಿಂಗದಾದಿಯ ಅಂತುವನರಿದಡೆ ಗುಣಸಂಗಿಯಲ್ಲದೆ ಯೋಗಿಯಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೧೨

ದೇವ ಹುಟ್ಟುವಾಗ ಮಾಯಿಕವ, ಕೌಳಿಕವ ಧರಿಸಿ ಬಂದನೆಂಬರು. ಅದು ಬಣ್ಣದ ಬಚ್ಚಣೆಯ ಮಾತು. ದೇವವಾದವಾದ ಮತ್ತೆ ದೇವ ನಿನಗುಂಟೇ? ಮೂರು ಲೋಕಕ್ಕಾದ ಬೇಡಿದವರಿಗಿತ್ತು. ಭಾವಕ್ಕೆ ಹೊರಗಾದವಂಗೆ ಲೀಲೆಯುಂಟೇ? ಆ ಗುಣ ಚಿಪ್ಪಿನ ಮುತ್ತಿನ ತೆರ, ಕಸ್ತುರಿಯ ಶುಕ್ಲದ ತೆರ, ಕದಳಿಯ ಕರ್ಪುರದ ತೆರ, ಬಂದುದಕ್ಕೆ ಸಂದೇಹವ ಮಾಡಲಿಲ್ಲ. ನಿರಂಗ, ನಿರಂತ, ಸುಸಂಗ, ನಿಃಕಳಂಕ ಮಲ್ಲಿಕಾರ್ಜುನಾ ಇದರಂದವ ಹೇಳಾ! ॥ ೧೨ ॥

೧೩

ನೀನೆನ್ನೊಳಗಿಹನೆಂಬೆನೆ? ಮನಧರ್ಮವ ಮರೆಯಿಸಿ ಹೀನನೊಳ್ಳಿಹನಾದಹನೆ? ನೀನೆಲ್ಲಿದ್ದಹನೆಂಬುದನರಸಿಹೆ. ಕೈದು ಕೈದ ಹಳಚಿದಲ್ಲಿ ಅಲಸಿದರುಂಟೇ? ಆಶೆ ಅಸುವಿಂಗಲ್ಲದೆ ಇದ್ದೆಸೆಯ ಹೇಳಾ! ಕುಶಲ, ತನ್ಮಯ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೧೪

ಪೃಥ್ವಿ-ಅಪ್ಪು, ಅಗ್ನಿಯ ಘಟ. ವಾಯು-ಆಕಾಶ ಅಗ್ನಿಯ ಪ್ರಾಣ. ಆ ಅಗ್ನಿ ಜಗದ ಜೀವ. ಇಂತೀ ಪಂಚ ತತ್ವವ ಧರಿಸಿ, ಉರಿಲಿಂಗವಾದೆಯಲ್ಲಾ? ನಿಃಕಳಂಕ ಮಲ್ಲಿಕಾರ್ಜುನಾ! ॥ ೧೪ ॥

೧೫

ಪೃಥ್ವಿಯಿಂದ ಅಪ್ಪು, ಅಪ್ಪುವಿನಿಂದ ಪೃಥ್ವಿ. ಅಗ್ನಿಯಿಂದ ವಾಯು, ವಾಯುವಿನಿಂದ ಅಗ್ನಿ. ಆಕಾಶದಿಂದ ಮಹದಾಕಾಶ, ಮಹದಾಕಾಶದಿಂದ ಆಕಾಶ. ನಿನ್ನಿಂದ ನಾ, ನನ್ನಿಂದ ನೀ. ನೀನಾನೆಂಬ ಭಾವ ಲೀಲೆಯುಳ್ಳನ್ನಕ್ಕ ಮತ್ತೆ ತಿಳಿದು ನೋಡಲಿಕ್ಕೆ ಮತ್ತೆಯೂ ಪರಿಪೂರ್ಣ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೧೬

ಪಿಂಡ, ಪಿಂಡಸ್ಥಲವಾದಲ್ಲಿ ಆತ್ಮನೆರಡುಂಟೇ? ಕರಚರಣ ಅವಯವಾದಿಗಳು ಹಲವಲ್ಲದೆ ಆತ್ಮ ಹಲವುಂಟೇ? ಅದು ಏಕ ರೂಪು ಅರುಣನ ಕಿರಣದಂತೆ. ನಿನ್ನ ನೀ ತಿಳಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೧೬ ॥

೧೭

ಮಹಾಜ್ಞಾನವಪ್ಪ ಅರಿವು ನಾನಾ ವಿಷಯಂಗಳಲ್ಲಿ ನೆನೆದು ಉಗಿದು ಹಾವಸೆಯಾಯಿತ್ತು. ಅರಿಯದ, ಮರೆಯದ, ದಿವ್ಯ ಜ್ಞಾನದಲ್ಲಿ ಕರಿಗೊಂಡ ಅರಿವು ತ್ರಿವಿಧ ಮಲವನೊಡಗೂಡಿ ಅವರಡಿಯೊಳಗಾಯಿತ್ತೆಂಬುದಕ್ಕೆ ಸೂಚನೆ. ಇಂತೀ ಭೇದವ ಅಭೇದ್ಯದಿಂದ ಭೇದಿಸಲಾಗಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಅಯ್ದಿತ್ತು ॥ ೧೭ ॥

೧೮

ಯುಗ ಹದಿನೆಂಟು ಸಹಸ್ರ ಕೂಡೆ ಬ್ರಹ್ಮಂಗೆ ಪರಮಾಯು. ಇಂತಹ ನವಬ್ರಹ್ಮರು ಸಹಸ್ರಕೂಡೆ ವಿಷ್ಣುವಿಗೆ ಪರಮಾಯು, ಇಂತೀ ವಿಷ್ಣು ನವ ಕೋಟಿ ಕೂಡೆ ರುದ್ರಂಗೆ ಒಂದು ಜಾವ. ಇಂತೀ ರುದ್ರರು ಏಕಾದಶ ಕೂಡೆ ಈಶ್ವರಂಗೆ ಎರಡು ಜಾವ. ಇಂತಹ ಈಶ್ವರರು ದ್ವಾದಶಕೂಡೆ ಸದಾಶಿವಂಗೆ ಮೂರು ಜಾವ. ಇಂತಹ ಸದಾಶಿವರು ಶತಸಹಸ್ರ ಕೂಡೆ ಮಹಾಪ್ರಳಯ ವಾಯಿತ್ತು. ಇಂತಹ ಪ್ರಳಯ ಹದಿನೆಂಟು ಕೂಡಿ ಮಹಾಂಧಕಾರ ಸಂದಿತ್ತು. ಇಂತಹ ಅಂಧಕಾರ ಸಂದಿಲ್ಲದೆ ತಿರುಗುವಲ್ಲಿ ಬಯಲು ಬೇರುಕೆಯ್ಯಿತ್ತು. ಅಲ್ಲಿಂದಾಚೆಯಲ್ಲಿ ನೀವೇ ಬಲ್ಲಿರಿ. ನಾನರಿಯೆನಯ್ಯಾ! ಸೊಲ್ಲಿಂಗತೀತನ ಕಲ್ಲಿಂದಾಹನೆಂಬಯ್ಯಾ! ನಂಬುಗೆಗಂಜಿ ಹಿಂದುಮುಂದಾದ ಸಂದೇಹಿ ನಾನಯ್ಯಾ!

ಎಲ್ಲಿ ಭಾವಿಸಿದಲ್ಲಿ ವಲ್ಲಭ ನೀನಾಗಿಪ್ಪೆ. ಎನ್ನ ನಲ್ಲ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೧೯

ಏಕಾಕಾಶದಿಂದ ಅಂಬು ಸಂಭ್ರಮಿಸಿತ್ತು. ಬಹು ವರ್ಣದ ಧಾತ್ರಿಯಲ್ಲಿ ಅವರವರ ವರ್ಣ ಛಾಯ ನಿಂದಿತ್ತು. ಕೂಡೆ ವೇಧಿಸಿ ವಿಚಾರಿಸಲಾಗಿ ಒಂದೇ ಗುಣ ನಿಂದಿತ್ತು. ಅದು ತಟಾಕದಲ್ಲಿ ಆಶ್ರಯಿಸಲಾಗಿ ಸ್ತೋಮವಾಯಿತ್ತು. ಕೀಳಿನಲ್ಲಿ ನಿಂದು ಜಾಳಿಸಲಾಗಿ ಸ್ತೋಮ ಬಿಟ್ಟಿತ್ತು. ಭಾವಿಸಿ ನೋಡಿಹೆನೆಂದರೆ ಪ್ರಮಾಣವಿಲ್ಲ ಕಂಡಯ್ಯ. ಇಂತೀ ಪ್ರಕಾರವಲ್ಲಿ ಜನಿಸಿದ ಪಿಂಡವ ಹಿಂಗುವ ಠಾವು ಇನ್ನಾವುದೋ ? ಒಂದು ಚಕ್ರದಲ್ಲಿ ಜನಿಸಿದ ನಾನಾ ವರ್ಣದ ಕುಂಭಗಳಿಗೆ ಸ್ಥೂಲ ಸೂಕ್ಷ್ಮದ ಅನ್ಯವ ಕಲ್ಪಿಸಲುಂಟೇ ಒಂದೇ ಗುಣದ ಬಗೆಯಲ್ಲದೆ? ಅಡಗಿದ ತತ್ವಂಗಳ ತತ್ವದ ಮುದ್ದೆಯ ತುತ್ತನೊಲ್ಲದೆ ನಿಶ್ಚಯನಾದ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯ ॥

೨೦

ವಸ್ತುವಿಪ್ಪ ಭೇದವ ಬಲ್ಲೆನೆಂದರೆ ಪರ್ಣದೊಳಗಿಪ್ಪ ಪಚ್ಚೆಯಂತೆ, ಹೊನ್ನಿನೊಳಗಿಪ್ಪ ಬಣ್ಣದಂತೆ, ಶುಕ್ತಿಯೊಳಗಿಪ್ಪ ಅಪ್ಪುವಿನಂತೆ, ಅದು ನೆಪ್ಪಿಗೆ ಬಾರದು. ಒಪ್ಪವಲ್ಲದೆ ಆ ವಸ್ತುವನಪ್ಪುವನಾರನು ಕಾಣೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೨೧

ವೇದಕ್ಕೆ ಹೋರುವರೆ ವೇದಕ್ಕತೀತ. ಶಾಸ್ತ್ರಕ್ಕೆ ಹೋರುವರೆ ಬಳಸಿನವನಲ್ಲ. ಪುರಾಣದಲ್ಲಿ ಹೋರುವರೆ ರೂಪಿನವನಲ್ಲ. ಅರ್ಚಿಸಿ ಕಾಬುದಕ್ಕೆ ಹಕ್ಕಿ ಹಂಗನ ನಿಮಿತ್ಯವೆ? ಈ ಸಚ್ಚಿದಾನಂದನ ಸಂಗ ಬಚ್ಚಬಯಲು ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೨೨

ಪರುಷದ ಪುತ್ಥಳಿಯ ಇರವಿನಂತೆ, ಪೃಥ್ವಿಯ ನುಂಗಿದ ಉದಕದಂತೆ, ಅನಲನ ನುಂಗಿದ ಶಿಲೆಯಂತೆ, ಅರುಣನ ಕಿರಣವ ಕೊಂಡ ದ್ರವ್ಯದಂತೆ. ಇನ್ನೇನುಪಮಿಸುವೆ ? ಇನ್ನಾರಿಗೆ ಹೇಳುವೆ ? ನೋಡುವದಕ್ಕೆ ಕಣ್ಣಿಲ್ಲ. ಕೇಳುವದಕ್ಕೆ ಕಿವಿ ಇಲ್ಲ. ಕೀರ್ತಿಸುವದಕ್ಕೆ ಬಾಯಿಲ್ಲ. ಏನೆಂಬುವದಕ್ಕೆ ತೆರಪಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

೨೩

ಹುಟ್ಟಿಸುವಾತ ಬ್ರಹ್ಮನಾದಡೆ ಅರ್ಚಿಸಲೇಕೊ ನಿಮ್ಮುವ? ರಕ್ಷಿಸುವಾತ ವಿಷ್ಣುವಾದಡೆ ಅರ್ಚಿಸಲೇಕೊ ನಿಮ್ಮುವ? ಕೊಂದು ಹೊದ್ದಿಸುವಾತ ರುದ್ರನಾದಡೆ ಮಹಾದ್ವಂದ್ವವ ನುಡಿಯಲೇಕೊ ನಿಮ್ಮುವ? ಇಂತೀ ಲೀಲೆಗಾದಡೂ ಆಗಲಿ ನಾ ಲೀಲೆಯುವನಲ್ಲ. ಅದರ ಒಳಹು ನೀನೇ ನಿಃಕಳಂಕ ಮಲ್ಲಿಕಾರ್ಜುನಾ ! ॥ ೨೩ ॥

## ೨ ವಿಶ್ವ

೨೪

ಅಪ್ಪುವಿನ ಯೋಗದ ಕಾಷ್ಠ ಹೊತ್ತುವಲ್ಲಿ, ಮೆತ್ತನೆ ತಮದ ಧೂಮ ಶುಷ್ಕದ ಅಪ್ಪುವಿನ ಗುಣ. ಅಪ್ಪುವರತು ಶುಷ್ಕ ತೊಟ್ಟಾರೆ ಕಿಚ್ಚು ಮುಟ್ಟುವದಕ್ಕೆ ಮುನ್ನವೆ ಹೊತ್ತಿ ಬೇವುದದು ಕಿಚ್ಚೋ, ಮತ್ತೊಂದೋ? ಇಂತೀ ಉಭಯವನರಿತು ಒಂದರಲ್ಲಿ ಒಂದದೆ ಎಂಬ ಸಂದೇಹವ ನೋಡಾ! ಅಲ್ಲವೆಂದಡೆ ಭಿನ್ನ ಭಾವ. ಅಹುದೆಂದಡೆ ಇಷ್ಟದ ದೃಷ್ಟ ಒಂದೆಯಾಗಿದೆ. ಜನ ಜಾತ್ರೆಗೆ ಹೋದವನಂತೆ ಕೂಟದಲ್ಲಿ ಗೋಷ್ಠಿ ಹರಿದಲ್ಲಿ ತಮ್ಮ ತಮ್ಮ ಮನೆಯ ಇರವಿನ ಹಾದಿ. ಇಂತಿವನರಿದು ಬಾಡಿಗೆಯ ಮನೆಗೆ ಹೊಯಿದಾಡಲೇತಕ್ಕೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೧ ॥

೨೫

ಘಟತತ್ವ ಪೃಥ್ವಿಭೇದವಾಗಿ, ಆತ್ಮತತ್ವ ಅಪ್ಪು ಭೇದವಾಗಿ, ತೇಜತತ್ವ ಅರಿವು ಭೇದವಾಗಿ, ಇಂತೀ ತ್ರಿವಿಧ ಭೇದ ವರ್ತುಳ, ಗೋಮುಖ, ಗೋಳಕಾಕಾರ ಕೂಡಿದ ಲಿಂಗವಾದಲ್ಲಿ, ಈಶ್ವರ ತತ್ವ ವಾಯು ಭೇದವಾಗಿ, ಸದಾಶಿವ ತತ್ವ ಆಕಾಶ ಭೇದವಾಗಿ, ಈ ಉಭಯ ಏಕವಾಗಿ ಅಗ್ನಿ ತತ್ವವ ಕೂಡಲಿಕ್ಕೆ ಆ ತ್ರಿವಿಧ ಏಕವಾಗಿ, ಅಪ್ಪು ತತ್ವವ ಕೂಡಲಿಕ್ಕೆ ಆ ಚತುರ್ಭಾವ ಏಕವಾಗಿ, ಪೃಥ್ವಿತತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು? ಸ್ಥಿತಿ ಎಲ್ಲಿ ನಡೆಯಿತ್ತು[೧]? ಲಯವೆಲ್ಲಿ ಸತ್ತಿತ್ತು? ಲಿಂಗಮಧ್ಯ ಸಚರಾಚರವೆಂದಲ್ಲಿ ಕಂಡು ಕಾಣೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

---

೧. ಅಡಗಿತ್ತು (ಡ)

೨೬

ಪೃಥ್ವಿ ಅಪ್ಪುವಿನ ಸಂಗದಲ್ಲಿ ಅನಲ-ಅನಿಲನೆಂಬ ಪುತ್ಥಳಿ ಹುಟ್ಟಿತ್ತು. ಆ ಪುತ್ಥಳಿಯ ಗರ್ಭದಲ್ಲಿ ಆಕಾಶ-ಮಹದಾಕಾಶವೆಂಬ ಕುರುಹುದೋರಿತ್ತು. ಅದು ನಾದಪೀಠ, ಬಿಂದುಲಿಂಗ, ಕಳೆ ವಸ್ತುವಾಗಿ ಹೊಳಹುದೋರುತ್ತದೆ. ಆ ಹೊಳಹು ಆರು ಮೂರಾದ ಭೇದವ ತಿಳಿದು ಮೂರು ಏಕವಾದಲ್ಲಿ ಐಕ್ಯವ ನರಿತಲ್ಲಿ ನಾದ, ಬಿಂದು, ಕಳೆಗೆ ಭೇದವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೨೭

ಪೃಥ್ವಿಗೆ ಹಲವು ತೆರ, ಅಪ್ಪುವಿಗೆ ನಾನಾಸಾರ, ಅಗ್ನಿಗೆ ಹಲವು ಘಟ ಕ್ಷುಧೆ, ವಾಯುವಿಗೆ ನಾನಾ ರೂಪ ಸಂಚಾರ, ಆಕಾಶಕ್ಕೆ ಬಹುವರ್ಣಚೇತನ, ಇಂತೀ ದೃಕ್ಕಿಂಗೆ ಲಕ್ಷವಿದ್ದಂತೆ ಲಕ್ಷಿಸಿ, ಕಂಡಂತೆ ಕಂಡು, ಸದ್ಗುಣ ಆರೆಂದಂತೆ ಎಂದಡೆಂದು, ಮನಕ್ಕೆ ಕುರುಹುದೋರದೆ ತನ್ನ ತಾನರಿದಲ್ಲಿ ನಿಃಕಳಂಕ ಮಲ್ಲಿ ಕಾರ್ಜುನ ಭಿನ್ನರೂಪನಲ್ಲ ॥ ೪ ॥

೨೮

ಪೃಥ್ವಿಯ ಪೃಥ್ವಿ ಎಲ್ಲಿಪ್ಪುದು? ಅಪ್ಪುವಿನ ಅಪ್ಪು ಎಲ್ಲಿಪ್ಪುದು? ತೇಜದ ತೇಜವೆಲ್ಲಿಪ್ಪುದು? ವಾಯುವಿನ ವಾಯು ಎಲ್ಲಿಪ್ಪುದು? ಆಕಾಶದ ಆಕಾಶ ಎಲ್ಲಿಪ್ಪುದು? ಇಂತೀ ಭೇದಂಗಳನರಿವುದಕ್ಕೆ ದೃಷ್ಟಃ ಆತ್ಮಕ್ಕೆ ಆತ್ಮನ ಪ್ರತಿರೂಪ ಕಂಡಲ್ಲಿ ಇಂತಿವಕ್ಕೆ ಉಭಯನಾಮ ಉಂಟು. ಪೃಥ್ವಿಗೆ ಆಧರಣೆ ಒಂದೇ ಮಯ. ಅಪ್ಪುವಿಗೆ ಸರ್ವಸಾರ ಒಂದೇ ಭೇದ. ತೇಜಕ್ಕೆ ಉಷ್ಣ ಹಲವು ಪರಿ ಇಲ್ಲ. ವಾಯುವಿಗೆ ಸಂಚಾರ ಕಡೆ ನಡು ಮೊದಲಿಲ್ಲ. ಆಕಾಶಕ್ಕೆ ಒಳಹೊರಗೆಂಬ ಉಭಯವಿಲ್ಲ. ಇಂತಿವ ತಿಳಿದಡೆ ಒಂದೇ ಭೇದ, ಹೊಲಬ ನರಿಯದಡೆ ಹಲವು ಭೇದ ಉಂಟು ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೨೯

ಕಂಬಳಿಯ ಹರಕಿನಲ್ಲಿ ಬತ್ತೀಸಕೋಟಿ ದೇವರ್ಕಳೆಲ್ಲರು ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ. ಆ ಕಂಬಳಿಯಿಂದ ಮಹಾರುದ್ರನುದಯಿಸಿದ. ಆ ಮಹಾರುದ್ರನ ಕಪಾಲದಲ್ಲಿ ಇಷ್ಟಾರ್ಥವೆಂಬ ಶಕ್ತಿ ಹುಟ್ಟಿದಳು. ಆ ಶಕ್ತಿಯ ಯೋನಿಕಮಲದ ಮಧ್ಯದಲ್ಲಿ ವಿಷ್ಣು ಹುಟ್ಟಿದ. ಆ ವಿಷ್ಣುವಿನ ನಾಭಿಕಮಲ ಮಧ್ಯದಲ್ಲಿ ಬ್ರಹ್ಮ ಹುಟ್ಟಿದ. ಆ ಬ್ರಹ್ಮನ ಸೃಷ್ಟಿಯಾಂತ ಕೈಯಲಿ ಸಕಲ

ಬಹು ರೂಪಂಗಳು ಹುಟ್ಟಿದವು. ಆಡುತ್ತಿದ್ದರಯ್ಯಾ ಕಂಬಳಿಯು ಹರಕಿನ ಮಧ್ಯದಲ್ಲಿ! ಕುರಿ ನಾಯುದು! ಕಂಬಳಿ ಹರಿಯುದು! ಇದಕ್ಕಂಜುತ್ತಿದ್ದೇನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

## ೩ ಜೀವ

೩೦

ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮನಾಗಿ ಅರಿವೇ ಕ್ರೆಯಾಗಿ ಸ್ವಸ್ಥ ಘಟಕ್ಕೆ ಸ್ವಸ್ಥ ಕ್ರೆಗಳಿಂದ ಸಿಕ್ಕು ಹರಿವುದಲ್ಲದೆ ಮತ್ತೊಂದು ಕ್ರೆಯಿಕ್ಕಿ ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು? ಇಂತೀ ಕ್ರಿಯಲ್ಲಿ ಕ್ರಿಯ ಕಂಡು ಭಾವದಲ್ಲಿ ಭ್ರಮೆಯ ಹಿಂಗಿ ಜ್ಞಾನದಲ್ಲಿ ಸಂಚಲವಿಲ್ಲದೆ ನಿಂದ ನಿಲವು ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೆ ॥ ೧ ॥

೩೧

ಉಡುಪ ತನ್ನ ಕಳೆಯ ತಾ ಕಾಣಿಸಿಕೊಂಬಂತೆ, ಸೂರ್ಯ ತನ್ನ ಬೆಳಗ ತಾನರಪುವಂತೆ, ಫಲ ತನ್ನ ರುಚಿಯ ತಾ ತೋರುವಂತೆ, ಇಂತೀ ತ್ರಿವಿಧ ಉಂಟೆನ್ನಬಾರದು, ಇಲ್ಲೆನ್ನಬಾರದು. ತನ್ನಿಂದರಿದೆನೆಂದಡೆ ಸ್ವತಂತ್ರಿಕೆ ಇಲ್ಲ. ಇದಿರಿಂದರಿದೆನೆಂದಡೆ ಪರತಂತ್ರಿಯಲ್ಲ. ಈ ಉಭಯವ ಇನ್ನಾರಿಗೆ ಹೇಳುವೆ? ಕಾಡೊಳಗೆ ಕರೆವ ಪರಿ ಇನ್ನೆಂತೊ ನಿಃಕಳಂಕ ಮಲ್ಲಿಕಾರ್ಜುನಾ! ॥ ೨ ॥

೩೨

ಉಪೇಕ್ಷೆಯಿಂದ ಉರಿವ ಬೆಳಗು ಪವನನ ಪ್ರಳಯಕ್ಕೆ[೧] ಒಳಗು. ಸ್ವಯ ಸಂಪರ್ಕದಿಂದ ಒದಗಿದ ಬೆಳಗು ಅನಿಲನ ಆಹುತಿಗೆ ಹೊರಗಾಗಿಪ್ಪುದು. ಇಂತೀ ವಾಗದ್ವೈತದ ಮಾತಿನ ಮಾಲೆ ಸ್ವಯಂಪ್ರೈತವ ಮುಟ್ಟಬಲ್ಲುದೇ? ಸ್ಥಲ-ಜ್ಞಾನ-ಯಾಚಕತ್ವವು ಸ್ಥಲಭರಿತನ ಮುಟ್ಟಬಲ್ಲುದೇ? ಇಂತೀ ಉಭಯದ ಒಳಗನರಿತು ಇಷ್ಟಕ್ಕೆ ಕ್ರಿ, ಭಾವಕ್ಕೆ ಜ್ಞಾನ ಸಂಪೂರ್ಣವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೇ ॥ ೩ ॥

---

೧ ಪ್ರಾಣಕ್ಕೆ (ಡ)

೩೩

ಎನ್ನ ಮಾಟ, ಕುರುಡ ಸಭೆಯಲ್ಲಿರ್ದು ನಗೆಯ ನಕ್ಕಂತಾಯಿತ್ತು. ಶ್ರೋತ್ರನಾಶನಲ್ಲಿ ಜಯ ಸ್ವರನ ಪಾಡಿದಂತಾಯಿತ್ತು. ಬೆಳ್ಳ, ಹಣ್ಣಿಗೆ ತಾಳಿಹ ದೃಷ್ಟದಂತಾಯಿತ್ತು. ನಾ ಬಂದ ಲೀಲೆಯನಿನ್ನಾರಿಗೆ ಹೇಳುವೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೪ ॥

೩೪

ಎಲೆ ಆತ್ಮನೆ! ಪಾತಕದ ಪೊಕ್ಕುಳವಲೇಕೆ ಹುಟ್ಟಿದೆ? ಹೇಸಿದರೂ ಉಣ್ಣಬೇಕು ವಿಷವ! ಅನುಕರಿಸಬೇಕು ಹುಸಿಯ! ಇದೆಲ್ಲವರ ಘಸಣೆಗೊಳಗಾಗದಂತೆ ಎನ್ನಸುವ ಕೊಂಡೊಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ! ॥ ೫ ॥

೩೫

ಕೀಳ ಮೇಲನರಸುವದಕ್ಕೆ ಕೊಳ್ಳಿಯ ಕಾಳಗವೆ? ಆಳು ಮೇಳವಲ್ಲಿ ವಿಧಿತನಾಗಿ ಇಹಾಗ, ಸೂಳೆಯ ಮನೆಯ ಆಳೇ? ಬಾಲರಾಳಿಯ ಜೂಜಿನ ಸೋಲುವೆಯೇ? ಇವರು ಗಾಣದಲ್ಲಿ ಬಪ್ಪ ಸಾಲಿನ ಹೆಜ್ಜೆಯಂತೆ. ಇನ್ನಾರಿಗೆ ಹೇಳುವೆ? ಮೆಟ್ಟಿದ ಹೆಜ್ಜೆಯ ಮೆಟ್ಟುವ ಕಷ್ಟ ಜೀವಿಗಳಿಗೆತ್ತಣ ಗತಿಯೋ ನಿಃಕಳಂಕ ಮಲ್ಲಿಕಾರ್ಜುನಾ? ॥ ೬ ॥

೩೬

ನಿರ್ಘಟದಲ್ಲಿ ಘಟ ಹುಟ್ಟಿ ಪ್ರಕಟಿಸುವುದ ಕಂಡೆ. ನಿರ್ವಿಕಳತೆಯಲ್ಲಿ ವಿಕಳತೆಯು ಹುಟ್ಟಿ ಉಭಯ ಗತಿ. ಆ ಉಭಯದ ಗತಿಗೆಟ್ಟವರ ಕಂಡೆ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿಯದೆ ಹೋದವರಲ್ಲಿ ॥ ೭ ॥

೩೭

ಪೂಜಿಸುವಲ್ಲಿ ಹೂ, ನೀರು ಮುಂತಾದ ಷೋಡಶೋಪಚಾರಕ್ಕೆ ನಿಲ್ಲ ಭಾವಶುದ್ಧಾತ್ಮಿಗಳಿಗಲ್ಲದೆ. ವೇದದ ಕಡೆ, ಶಾಸ್ತ್ರದ ಮೊದಲು, ಪುರಾಣದ ಸುದ್ದಿಯ ಬಲ್ಲ ಸುಮ್ಮಾನಿಗಳಲ್ಲಿ ವಚನದ ರಚನೆಗೆ ನಿಲ್ಲ ಮಹಾಜ್ಞಾನಿಗಳಲ್ಲಿಯಲ್ಲದೆ. ಘಟದಲ್ಲಿ ವೈಭವ, ಆತ್ಮನಲ್ಲಿ ನಿರೋಧ, ಆಚಾರದಲ್ಲಿ ಕರ್ಕಶ ಇಂತೀ ನಿಹಿತಾಚಾರಂಗಳಲ್ಲಿ ನಿರತನಾಗಿ ಕಾಯದ ಕರ್ಮ, ಜೀವದ ಭಾವ, ಜ್ಞಾನದ ಒಳಗನರಿಯಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೩೮

ಪೂಜೆಯಲ್ಲಿ ಮುಕ್ತನೆಂದು ಜ್ಞಾನವ ಮರೆಯಲಿಲ್ಲ. ಜ್ಞಾನವನರಿತೆನೆಂದು ಪೂಜೆಯ ಬಿಡಲಿಲ್ಲ. ಈ ಉಭಯದ ಭೇದ, ಬೆಳಗಿನಲ್ಲಿ ಉದಯಿಸಿದ ಕಳೆಯಂತೆ, ಆ ಕಳೆ ಬೆಳಗನೊಳಗೊಡಂತೆ, ಆ ಉಭಯ ವಿರಹಿತವಾದಲ್ಲಿ ಸ್ವಯ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೩೯

ಪೃಥ್ವಿ ಅಪ್ಪು ತೇಜ ವಾಯು ಆಕಾಶದಿಂದ ಹೊಂದುವ ಹುಟ್ಟುವ ದೇಹದ ಅಂದಗಾರಿಕೆಯಲ್ಲಿ ಒಂದುವನರಿಯಾ! ಬಂದಂತೆ ಅದು ಹಿಂಗಿತ್ತೆಂದರಿಯಾ! ಮುಂದಣ ನಿಜಲಿಂಗವನರಿಯಾ ನಿಃಕಳಂಕ ಮಲ್ಲಿಕಾರ್ಜುನಾ!॥೧೦॥

೪೦

ಒಳ್ಳಿ ಮರನ ಸುತ್ತಿ ಅದು ಸಾಲದೆ ಮತ್ತೊಂದಕ್ಕಲ್ಲಾಡುವಂತೆ ನಿಲ್ಲದು ಮನ ಕ್ರಿಯಲ್ಲಿ, ಸಲ್ಲದು ಮನ ನಿಶ್ಚಯದಲ್ಲಿ. ಅಲ್ಲವಗಿ ಮೆಲ್ಲಿದ ಕೋಡಗನಂತೆ ಕಲ್ಲಿಯೊಳಗಾದ ಮತ್ಸ್ಯದಂತೆ ಅಲ್ಲಿಗೆ ಹೊಲಬ ಕಾಣದೆ, ಇಲ್ಲಿಗೆ ನೆಲೆಯ ಕಾಣದೆ ತಲ್ಲಣಗೊಳ್ಳುತ್ತಿದ್ದೇನೆ. ಎನ್ನ ಭಾವದಲ್ಲಿ ನೀನಿರಾ ನಿಃಕಳಂಕ ಮಲ್ಲಿಕಾರ್ಜುನಾ! ॥ ೧೧ ॥

೪೧

ಭೂಮಿಯ ಮರೆಯ ಹೇಮ ನಾನಾ ರತ್ನಮೂಲಿಕ ದ್ರವ್ಯಗಳಂತೆ, ಅಪ್ಪುವಿನ ಮರೆಯ ಷಡುವರ್ಣದ ಟಿಪ್ಪಣದಂತೆ, ತೇಜದ ಮರೆಯ ನವ ಗುಣದ ಹೊಳಹಿನಂತೆ, ವಾಯುವಿನ ಮರೆಯ ನಾನಾ ಸುಳುಹಿನಂತೆ, ಆಕಾಶದ ವಿದ್ಯುಲ್ಲತೆಯ ಘರ್ಜನೆಯ ವೊಳಗಿನಂತೆ — ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದಕಾರಣ, ಇಂತೀ ಆತ್ಮತತ್ವಭೇದದಲ್ಲಿ ಆಗುಚೇಗೆಯನರಿಯಬೇಕು. ಆಕಾಶದ ಸೂರ್ಯ ಹಲವು ಕುಂಭದಲ್ಲಿ ತೋರುವ ತೆರ ಮರೆದಡೆ ಪ್ರತಿಷ್ಠೆ ಅರಿವಡೆ ಸ್ವಯಂಭು ನಿಃಕಳಂಕ ಮಲ್ಲಿಕಾರ್ಜುನ ॥೧೨॥

೪೨

ಯೋನಿಯಲ್ಲಿ ಹುಟ್ಟಿದ ಸಕಲ ಜೀವಂಗಳೆಲ್ಲ ಮತ್ತಾಯೋನಿಯ ಭಯಕ್ಕೊಳಗಾಗಿ ಮತ್ತಾಯೋನಿಗಾಗಿ ಜನನ, ಯೋನಿಗಾಗಿ ಮರಣ.

---

೧ ಬೆಲ್ಲವ (ಡ)

ಇಂತಿವ ತಿಳಿದ ಮತ್ತೆ ತಾವು ಅವರಲ್ಲಿ ಅಳಿವುತ್ತ ಮತ್ತೆ ಜ್ಞಾನವೆ? ಮತ್ತೆ ಶಿವ ಧ್ಯಾನವೆ? ಮತ್ತೆ ನಾನಾ ವ್ರತ ನೇಮವೆ? ಶುದ್ಧ ಭಾವವೆ? ಎಲ್ಲಿಲ್ಲಿ ನೋಡಿದಡೆ ಕಟ್ಟಿಹೋದ ಬಿರಿದಿನಂತೆ ತೊಟ್ಟುಬಿಟ್ಟ ಹಣ್ಣಿನಂತೆ ದ್ರವ ತೊಟ್ಟಾರಿದ ಫಲದಂತೆ ನಿಶ್ಚಯವಾಗಿಪ್ಪರಲ್ಲಿಯಲ್ಲದೆ ನಿಃಕಳಂಕ ಮಲ್ಲಿಕಾರ್ಜುನನು ಮತ್ತೆಲ್ಲಿಯೂ ಇಲ್ಲ. ॥ ೧೩ ॥

೪೩

ಲೀಲೆಯ ಕುರಿತು ಆಡುವರೆಲ್ಲರು ಕಾಲಸಂಹರನ ಬಂಧುಗಳು. ಲೀಲಾಂಗನಾ ಸುಖವ ಕುರಿತು ಆಡುವವರೆಲ್ಲರು ಲೋಲುವೆಯ ಬಂಧುಗಳು. ಶೈಲಾಂಗನೆಯ ಲೀಲೆಯುಲಾಡುವರೆಲ್ಲರು ಕಾಲಬಂಧುಗಳು. ಈ ಲೀಲೆಯ ಜಾಳಿಸಾ ಅಂಕಶೂನ್ಯಗಾರ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೪೪

ಲೆಕ್ಕದಲ್ಲಿ ಲೇಪಿತವಾಹರಿಗೇಕೆ ಅಜಾತನ ಸುದ್ದಿ? ಪ್ರಖ್ಯಾತದಲ್ಲಿ ನೀತಿಯ ಹೇಳಿಹೆನೆಂದು ದೇಶದಲ್ಲಿ ಸುಳಿವವರಿಗೇಕೆ ಪರದೋಷ ನಾಶನದ ಸುದ್ದಿ? ಇವರೆಲ್ಲರು ಈಶನ ಭಾಷೆಯಲಿ ಸಿಕ್ಕಿ ಭೂಗತರಾದರು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೪೫

ಲೇಸಾಯಿತ್ತಯ್ಯಾ! ನೀನೆನ್ನ ಕಂಡುದು ಎಲೆ ದೇವಾ! ಕಾರುಕನ ಬುದ್ಧಿಯಂತೆ ಅಡಿಗೆ ನೀನಾಗಿ ಹೊಡಹುವದಕ್ಕೆ ನೀನಾಗಿ ಎರಡರ ನಡುವೆ ಹೊಡಿಸಿಕೊಂಬುದಕ್ಕೆ ನೀನಾಗಿ, ತನ್ನ ವಂಶ ತನಗೆ ಹಗೆಯಾಗಿ, ಕೊಡಲಿಯ ಕಾವು ಕುಲಕ್ಕೆ ಮೃತ್ಯುವಾದಂತೆ ಇವೆಲ್ಲವು ನಿನಗಾಗಿ. ಎನ್ನ ನೀನೇಕೆ ಕಾಡಿಹೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೧೬ ॥

೪೬

ಸಾರವ ಕೂಡಿದಲ್ಲಿ ಹಣ್ಣು. ನಿಸ್ಸಾರವಾದಲ್ಲಿ ಕಾಯಿ. ಕಾಯಿ ಹಣ್ಣಹುದು. ಉಭಯದೊಡಲೊಂದೇ. ಅರಿದು ಮರೆವುದ ಹೆರೆ ಹಿಂಗಿದಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ತಾನು ತಾನೆ ॥ ೧೭ ॥

೪೭

ಸುಖ ದುಃಖಂಗಳನರಿವುದು, ಕಾಯ ಜೀವ ಒಂದಾದಲ್ಲಿ. ಅಹುದಲ್ಲವೆಂಬುದನರಿವುದು, ಜೀವ ಪರಮ ಒಂದಾದಲ್ಲಿ. ಕಂಡೆ ಕಾಣೆನೆಂಬುದು, ದೃಕ್ಕು

ದೃಶ್ಯ ಒಂದಾದಲ್ಲಿ. ಇಂತೀ ಪೂರ್ವ ಉತ್ತರದ ಮಧ್ಯದಲ್ಲಿ ನಿಶ್ಚಯವದೇಕೋ ನಿಃಕಳಂಕ ಮಲ್ಲಿಕಾರ್ಜುನಾ ? ॥ ೧೮ ॥

೪೮

ಸಂಜೀವನವ ಕೈಯಲ್ಲಿ ಹಿಡಿದಿರ್ದು ಸಾಯುವ ಹುಟ್ಟುವ ಜೀವವ ನಾ ಕಂಡೆ. ಕಂಗಳ ಮುಂದೆ ಕಡವರ ತುಂಬಿರ್ದು ದಾರಿದ್ರ್ಯದಲ್ಲಿ ನೊಂದವರ ನಾ ಕಂಡೆ. ತನ್ನಂಗದಲ್ಲಿ ಅಲಗ ಹೊರೆಯಾಗಿ ಹೊತ್ತಿರ್ದು ಕೋಲಿನ ಹೊರೆಯ ಮೊನೆಯಲ್ಲಿ ಇರಿಯಿಸಿಕೊಂಡು ಸತ್ತವರ ನಾ ಕಂಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯದೆ ಹೋದವರ ॥ ೧೯ ॥

೪೯

ಹೇಮ ಹಲವಂಗದಲ್ಲಿ ಹುಟ್ಟಿ ಬಿಟ್ಟ ಬೆಳೆಯಿತ್ತು. ಮಾಟದಿಂದಲದು ಬಹು ರೂಪಾಯಿತ್ತು. ಅದು ನಟಿಸಿದ ಮತ್ತೆ ಏಕ ರೂಪೇದೆ. ಅದರಾಟದ ತೆರನೆ ಆತ್ಮ ನಿಃಕಳಂಕ ಮಲ್ಲಿಕಾರ್ಜುನಾ ? ॥ ೨೦ ॥

## ೨ ಷಟ್ ಸ್ಥಲಗಳು

### ೧ ಭಕ್ತಸ್ಥಲ

೫೦

ಅರ್ಚನೆಯ ಮಾಡುವಲ್ಲಿ ಮಚ್ಚಿ ಬಯಸಲಾಗದು ಇಷ್ಟಾರ್ಥವ. ಲೋಕದ ಪೂಜೆಯ ಮಾಡುವಲ್ಲಿ ಪುಣ್ಯ ಲೋಕವ ಮಚ್ಚಲಾಗದು. ಇಂತೀ ಗುಣ ವಿರಹಿತನಾಗಿ ಚತುರ್ವಿಧ ಫಲ ಹೊರತೆಯಾಗಿ ನಿತ್ಯ ನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧ ಪಟದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೫೧

ದ್ವೈತವ ಹೇಳುವ ಹಿರಿಯರೆಲ್ಲರು ದ್ವೈತಕ್ಕೊಳಗಾದರು. ನಿಸ್ಸಂಸಾರವ ಹೇಳುವ ಹಿರಿಯರೆಲ್ಲರು ಸಂಸಾರದ ಸಾರವ ಚಪ್ಪರಿದು ಕೆಟ್ಟರು. ಭಕ್ತರಿಗೆ ನಿತ್ಯವಲ್ಲವೆಂದು ಹೇಳಿ ತಾವು ಅನಿತ್ಯವ ಹಿಡಿದು ಪಾಶಕ್ಕೆ ಸಿಕ್ಕಿ ಸತ್ತುದ ನರಿಯದೆ, ನಾವು ಮುಕ್ತರಾದೆವೆಂಬ ಭ್ರಷ್ಟರ ನೋಡಾ! ಎನಗಿನ್ನೆತ್ತಣ ಮುಕ್ತಿಯೆಂದಂಜಿದೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೨ ॥

೫೨

ಅನುಪಮ ಲಿಂಗವೆ ನೆನಹಿಂಗೇಕೆ ಬಾರೆ? ತನು ಮನ ಶುದ್ಧವಿಲ್ಲವೆಂದು ಅನುವಿನಲ್ಲಿ ನಿಲ್ಲೆಯಾ? ಎನ್ನ ಪಾತಕದ ಪುಂಜವ ನೆಲೆಗಳೆಯಯ್ಯಾ! ಹಸಿವಿಂಗಸು ನೀನೇ. ವಿಷಯಕ್ಕೆ ಮನ ನೀನೇ. ಭೋಗಿಸುವದಕ್ಕೆ ಅಂಗ ನೀನೇ ಸ್ಫಟಿಕದ ಘಟದೊಳಗಿದ್ದ ಬಹುರಂಗಿಗನಂತೆ. ಎನ್ನಂಗಮಯ ನೀನಾಗಿ ಹಿಂಗ ಲೇಕೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೩ ॥

೫೩

ಅಪ್ಪು ಬೆರಸಿದ ಕಟ್ಟಿಗೆಯ ಕಿಚ್ಚಿನೊಳಗಿಕ್ಕಿದರೆ ಅದು ಚಿತ್ತ ಶುದ್ಧವಾಗಿ ಹೊತ್ತಬಲ್ಲುದೇ ಕಾವಾರಿದ ಕಾಷ್ಟದಂತೆ? ಇಂತಿ ಅರ್ತಿಕಾರರಿಗೆ ಸಿಕ್ಕುವನೆ ನಿಜವಸ್ತು ನಿಃಕಳಂಕ ಮಲ್ಲಿಕಾರ್ಜುನಾ? ॥ ೪ ॥

೫೪

ಅಪ್ಪು ಷಡುವರ್ಣವ ಕೂಡಿ ಭಿನ್ನವಿಚ್ಛಿನ್ನವಿಲ್ಲದೆ ವರ್ಣಭೇದವ ಕೊಟ್ಟು ಬಿನ್ನಾಣದಿ ತಾನರಿತಂತೆ ತ್ರಿವಿಧ ಮೂರ್ತಿಯಾಗಿ ಷಟ್ಸ್ಥಲ ಬ್ರಹ್ಮ ಯಾಗಿ ನಾನಾ ತತ್ವಂಗಳಲ್ಲಿ ಕಲ್ಪಿತನಾಗಿ ಸತ್ಕ್ರಿಯಲ್ಲಿ ಭಾವಿತನಾಗಿ ನಿಃಕ್ರಿಯಲ್ಲಿ ನಿರಂಗನಾಗಿ ಕರ್ಪುರದ ಬುಡದಲ್ಲಿ ಕಿಚ್ಚು ಹುಟ್ಟಿದಂತೆ ಅದು ಹುಟ್ಟುವಲ್ಲಿ ಆ ಬುಡಕ್ಕೆ ನಿಶ್ಚಯವಾಯಿತ್ತು. ಅರಿದು ಅರುಹಿಸಿಕೊಂಬ ಉಭಯವಲ್ಲದಿಲ್ಲ. ಭಕ್ತಿಗೆ ಕ್ರಿ, ವಿರಕ್ತಿಗೆ ನಿರವಯ. ಇಂತೀ ದ್ವಂದ್ವ ಉಳ್ಳನ್ನಕ್ಕ ನೀನು. ನೀನೆಂಬನ್ನಕ್ಕ ನಾನು. ಎನ್ನ ಭಾವದಲ್ಲಿ ಮನೋ ಮೂರ್ತಿಯಾದಲ್ಲಿ ನಿಃಕಳಂಕನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ! ॥ ೫ ॥

೫೫

ಅರಿಕತ್ತರಿ ಹರಣದ ದಯದಿರವ ಬಲ್ಲುದೇ? ಬಿರು ನುಡಿವವ ಮಾನ್ಯರ ಮಾನದ ಮನ್ನಣೆಯ ಬಲ್ಲನೇ ? ಹೆತ್ತವರಿಗೆ ಕೂಸು ಹುಚ್ಚೆಂದಡೆ ಅವರರ್ತಿ ಹೆತ್ತವರಿಗಲ್ಲದೆ ಮಿಕ್ಕಿನವರಿಗುಂಟೇ ನಿಃಕಳಂಕ ಮಲ್ಲಿಕಾರ್ಜುನಾ? ॥ ೬ ॥

೫೬

ಅರಿದು ಮಾಡುವ ಮಾಟ ಮರವೆಗೆ ಬೀಜವೆಂದೆ. ಅದಕ್ಕೆ ಮರೆದರಿವು ತಪ್ಪದು. ಆ ಅರಿವಿನ ಭೇದ ಎತ್ತಿದ ದೀಪದ ಬೆಳಗಿನಂತೆ. ಅರಿದು ಮರೆಯದೆ ಮರೆದು ಅರಿಯದೆ ಇಂತೀ ಅರಿಕೆಯಲ್ಲಿ ಮಾಡುವನರಿವು ಹೊತ್ತ ದೀಪದ ನಿಶ್ಚಯದಂತೆ. ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಚೆನ್ನಬಸವಣ್ಣಾಗೆ ನಮೋ ನಮೋ ಎನುತಿರ್ದೆನು ॥ ೭ ॥

೫೭

ಅಸಿಯಾಗಲಿ ಮಸಿಯಾಗಲಿ ಕೃಷಿಯಾಗಲಿ ವಾಣಿಜ್ಯ ಮುಂತಾದ ಕ್ಕೃಷಿಯ ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ, ಭಕ್ತಿ ಎಸಕದಿಂದು ಹಸುವಿಲ್ಲದೆ, ತೃಷೆ ಇಲ್ಲದೆ, ವಿಷಯವನರಿಯದೆ, ಮಾಡುವ ಭಕ್ತಿಯಲ್ಲಿ ಹುಸಿ ಇಲ್ಲದೆ ಮಾಡುತಿಪ್ಪ ಭಕ್ತನ ಅಂಗಳವೇ ವಾರಣಾಸಿ. ಆತನ ಆಶ್ರಯವೇ ಅವಿಮುಕ್ತ ಕ್ಷೇತ್ರ. ಆತನ ಮುಖವೇ ಮೋಕ್ಷದಾಗರ. ಆತನ ಅಂಗವೇ ಲಿಂಗದ ಬೆಳಗು. ಆತನ ಪಾದವೇ ಪವಿತ್ರದ ಪುಂಜ. ಹೀಗೆ ತ್ರಿಕರಣ ಶುದ್ಧವಾದ ಭಕ್ತನಂತೆ ಒಕ್ಕುದ ಕಾಯ್ದುಕೊಂಡಿಪ್ಪ ಕುಕ್ಕುಟನಂತೆ ಮಾಡಾ. ಇದೇ ನಿಶ್ಚಯ ನಿಃಕಳಂಕ ಮಲ್ಲಿಕಾರ್ಜುನಾ! ॥ ೮ ॥

೫೮

ಅಂಗದ ಕಳವು ಕೈಯಲ್ಲಿದ್ದ ಮತ್ತೆ ಹಿಂಗುವದಕ್ಕೆ ಘಾಲಿಗೆಯೇಕೊ? ಪರರಂಗವನರಿತು ಹೆರರಂಗದಲ್ಲಿ ಸಿಕ್ಕಿ ಭಂಗಿತನಾಗಲೇಕೊ? ನದಿಯೊಳಗೆ ಮುಳುಗಿ ತನ್ನ ಒಡವೆಯ ಸುದ್ದಿಯಾಕೊ? ಇದರ ವಿಧಿ ನನಗಾಯಿತ್ತು. ಬಿಡು ಕಡುಗಲಿತನವ ನಿಃಕಳಂಕ ಮಲ್ಲಿಕಾರ್ಜುನಾ! ॥ ೯ ॥

೫೯

ಅಂದಳದ ಮುಂದೆ ವಂದಿಸಿಕೊಂಡಿಹೆನೆಂದು ತ್ರಿವಿಧವ ಹೆರೆಹಿಂಗಿ ಮಾಡುವ ನಿರ್ಬಂಧಿಗನ ನೋಡಾ! ಕಂಡ ಕಂಡವರ ಮನೆಯಲ್ಲಿ ಕೊಂಡಾಡ ಬೇಕೆಂದು ಹಿಂಡುಗೂಡಿ ಕೂಳಸಿಕ್ಕುವ ಭಂಡರಿಗೆಲ್ಲಿಯದೋ ಭಕ್ತಿ? ಇವ ರಂದಕ್ಕೆ ಅಂದೇ ಹೊರಗು. ಸಂದೇಹವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೬೦

ಆಗಮವನರಿದಲ್ಲಿ ಆಗು ಚೇಗೆಯನರಿಯಬೇಕು. ಶಾಸ್ತ್ರವನರಿದಲ್ಲಿ ಸಾವನರಿಯಬೇಕು. ಪುರಾಣವನರಿದಲ್ಲಿ ಪುಂಡರ ಸಂಗವ ಹರಿಯಬೇಕು. ಇಂತಿವನರಿದ ಚಿತ್ತಶುದ್ಧಂಗಲ್ಲದೆ ಸನುಮತವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೬೧

ಅರ್ಚನೆಯುವನರ್ಚಿಸಿದಲ್ಲಿ ಪುಣ್ಯದ ಫಲ. ಭಕ್ತಿಯಿಂ ದ್ರವ್ಯವ ಕೊಡುವದು ಮುಕ್ತಿಲೋಕದೊಳಗು. ಈ ಉಭಯದ ಭಿತ್ತಿಯನರಿದು ನಿತ್ಯವ ತಿಳಿದವಂಗೆ ಏನೂ ಎನಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨ ॥

೬೨

ಆಚಾರ ಅನುಸರಣೆಯಾಗದಲ್ಲಿ, ಲಿಂಗ ಬಾಹ್ಯವಾದಲ್ಲಿ, ತನ್ನ ವ್ರತ ನೇಮಕ್ಕೆ ಅನುಕೂಲವಾಗದೆ ಭಿನ್ನಭಾವಿಗಳಾದಲ್ಲಿ, ಸತಿ ಸುತ ಪಿತ ಮಾತೆ ಸರ್ವಚೇತನ ಬಂಧುಗಳಾದರೂ ಗುರುಲಿಂಗಜಂಗಮವಾದರೂ ಒಪ್ಪೆನು. ಇದಿರಿಂಗೆ ದೃಷ್ಟವ ತೋರಿ, ಪರಕ್ಕೆ ಕೊಂಡು ಹೋದಿಹೆನೆಂದರೂ ಆ ಕೈಲಾಸ ಎನಗೆ ಬೇಡ ಆಚಾರಕ್ಕೆ ಅನುಸರಣೆಯಾದಲ್ಲದೆ. ನೇಮಕ್ಕೆ ಕುಟಿಲವಿಲ್ಲದೆ ನಿಂದ ಸದ್ಭಕ್ತನ ಬಾಗಿಲ ಬಚ್ಚಲ ಕಲ್ಲಿನಗೆ ನಿಶ್ಚಯದ ಕೈಲಾಸ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೬೩

ಆನಂದಿಸಿ ಕಣ್ಣು ಮುಚ್ಚಿ ಆಹಾ ಎಂಬುದು ಆವೇಶ ಭಕ್ತಿ. ತಲೆದೂಗಿ ಝೊಂಪಿಸಿ ಅಂತಃಕರಣ ಕದಡಿ ಆನಂದಿಸುವದು ಭಾವ ಭಕ್ತಿ. ಬಿಂಬಿಸುವವಕ್ಕೆ ಪ್ರತಿರೂಪಿಲ್ಲದೆ ಆನಂದಾಸ್ರುಗಳು ನಿಂದು, ಮುತ್ತಿನೊಳಗಣ ಅಪ್ಪುವಿನಂತೆ ಹೆಪ್ಪಳಿಯದೆ ನಿಂದುದು ಜ್ಞಾನಭಕ್ತಿ. ಇಂತೀ ತುರೀಯಾತುರೀಯವು ಏಕ ಚಿತ್ತ ವೆಂಬುದು ನಿಹಿತವಾದಲ್ಲಿ ಸ್ಥಲಲೇಪ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೧೪ ॥

೬೪

ಆನೆ ಕುದುರೆ ಬಂಡಿ ಭಂಡಾರವಿದ್ದಡೇನೋ ತಾನುಂಬುದು ಪಡಿಯಕ್ಕಿ, ಒಂದಾವಿನ ಹಾಲು, ಮಲಗುವದರ್ಧ ಮಂಚ. ಈ ಹುರುಳಿಲ್ಲದ ಸಿರಿಯ ನಚ್ಚಿ ಕೆಡಬೇಡ ಮನುಜಾ ! ಒಡಲು ಭೂಮಿಯ ಸಂಗ, ಒಡವೆ ತಾನೇನಪ್ಪುದೋ? ಕೈವಿಡಿದ ಮಡದಿ ಪರರ ಸಂಗ, ಪ್ರಾಣ ವಾಯುವಿನ ಸಂಗ. ಸಾವಿಂಗೆ ಸಂಗಡ ವಾರೂ ಇಲ್ಲ ಕಾಣಾ ನಿಃಕಳಂಕ ಮಲ್ಲಿಕಾರ್ಜುನಾ ! ॥ ೧೫ ॥

೬೫

ಅಪರವನರಿತೆನೆಂದು ಪರಮನ ಬಿಡಲೇತಕ್ಕೆ ? ನಿಃಕ್ರಿಯವನರಿತೆನೆಂದು ಕ್ರಿಯೆಯ ಬಿಡಬೇಕೆ? ಭಕ್ತಿಯಿಂದ ಜ್ಞಾನ, ಜ್ಞಾನದಿಂದ ವೈರಾಗ್ಯ, ವೈರಾಗ್ಯ ದಿಂದ ನಿಜದ ನಿಶ್ಚಯ. ಅದಕ್ಕೆ ಸಂದಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬ ॥

೬೬

ಆರೂಢನಾದ ಮತ್ತೆ ಈ ರೂಢಿಯ ಅವತಾರವ ಹೊರಲೇಕೆ ? ಕೋಡಗನಂತೆ[೧] ಕಂಡ ಕಂಡವರಲ್ಲಿ ಹಿಂಡಿನೊಳಗೆ ಹೊಕ್ಕು ಬಂಡುಗೆಲೆಯ ಲೇತಕ್ಕೋ ? ಈ ಅಂಬಗಾರ ಅಣ್ಣಗಳ ಕಂಡು ಬಂಡಾದಿರಣ್ಣಾ! ಅರ್ತಿಗೆ ಆಡುವ ಸತ್ಯವಂತರಿಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ ! ॥ ೧೭ ॥

೬೭

ಆವಾವ ವಿಶ್ವಾಸದಲ್ಲಿ ಭಕ್ತಿಯ ಮಾಡುವಲ್ಲಿ ಸತಿ ಸುತ ಬಂಧುಗಳು ಮುಂತಾದ ಬಂಧಿತ ವಳಯ[೨]ವೆಲ್ಲವು ಭಕ್ತಿಗೆ ಏಕರೂಪವಾಗಿ, ಸತ್ಯಕ್ಕೆ ನಿಜ

೧ ರೂಢಗವಂತನಂತೆ (ಬ)

೨ ತಳವಳಯ (ಡ)

ರೂಪಾಗಿ, ಕೃತ್ಯಕ್ಕೆ ತಪ್ಪದೆ ವಸ್ತುಭಾವದಲ್ಲಿ ಇದ್ದಾತನ ಭಕ್ತಿ ನಿಃಕಳಂಕ ಮಲ್ಲಿಕಾರ್ಜುನನ ನಿಶ್ಚಯದ ನಿಜವಾಸ ॥ ೧೮ ॥

೬೮

ಆಳಿನಪಮಾನ ಆಳ್ದಂಗೆಂದಲ್ಲಿ, ಆಳ್ದನಪಮಾನ ಆಳಿಗೆ ಬಂದಲ್ಲಿ, ಉಭಯದ ನೋವು ಒಂದೆಂದು ತಿಳಿದಲ್ಲಿ, ಕರ್ತನ ಭೃತ್ಯನಾಗಿ ನುಡಿದನೆಂದು ಹೊತ್ತು ಹೋರಲೇತಕ್ಕೆ? ತನ್ನ ಮನೆ ಬೇವಲ್ಲಿ ಕೆಡಹಿಕಿತ್ತಡೆ ಕೇಡೇ? ನಾನೊಡೆಯ ಇವನಡಿಗನೆಂದು ಪಡಿ ಪುಚ್ಚವ ಮಾಡುವನ್ನಕ್ಕ ಅದು ತುಡುಗುಣಿಯ ಸವಿತ. ಅವನೊಡೆಯನಲ್ಲ ನಾನಡಿಗನಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯ ॥

೬೯

ಇರಿವ ಅಸಿ ನೋವ ಬಲ್ಲುದೆ? ಬೇಡುವಾತ ರುಜವ ಬಲ್ಲನೇ? ಕಾಡುವ ಕಾಳುಮೂಳರ ವಿಧಿ ಎನಗಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೭೦

ಇಷ್ಟಲಿಂಗದಲ್ಲಿ ತಟ್ಟುಮುಟ್ಟು ಬಲ್ಲವಂಗೆ ಇಷ್ಟವ ಮುಟ್ಟುವ ಭೇದವು ತಟ್ಟದಿಹ ಪರಿ ಇನ್ನೆಂತೋ? ಇಂತಿವರು ಮುಟ್ಟಲರಿಯರು. ತತ್ವದ ನಿಜವನರಿಯರು. ಇಂತವರಿಗಿಷ್ಟಲಿಂಗವನು ಹೊದ್ದಿಸಲೇಕೆ? ಅವರಿಗೆ ನಿಶ್ಚಯದ ನಿಜವೇಕೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೭೧

ಇಷ್ಟಲಿಂಗ ನಿದ್ರೆಯಲ್ಲಿ ಸೃಷ್ಟಿಯ ಮೇಲೆ ಬಿದ್ದು ಹೊರಳುವಾಗ ನಿಷ್ಠೆವಂತರೆಂತಾದಿರೋ? ಅದು ನಿಮಗೆ ಇಷ್ಟಲಿಂಗವೊ ಪ್ರಾಣಲಿಂಗವೊ ಕಟ್ಟಿದವನ ಕೈಯ್ಯ ಕೇಳಿಕೊಳ್ಳಿ! ಹೀಗಲ್ಲದೆ ಭಟ್ಟತನಕ್ಕೆ ಹೋರುವ ಭ್ರಷ್ಟಭಂಡರನೇನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೨೨ ॥

೭೨

ಇಷ್ಟಲಿಂಗವನರ್ಚಿಸುವನಿರವು ಹಿಮಾಚಲದ ಶಿಲೆಯಂತಿರಬೇಕು. ಕುಸುಮ ಅಪ್ಪುವಿನ ಸ್ನೇಹದಂತಿರಬೇಕು. ಅಯಸ್ಕಾಂತದ ಶಿಲೆಯ ಲೋಹದಂತಿರಬೇಕು. ಅಣಿಯೊಳಗಣ ನೇಣಿನಂತಿರಬೇಕು. ಇಷ್ಟಲಿಂಗಕ್ಕೆ ಪ್ರಾಣ

ಲಿಂಗಕ್ಕು ತತ್ತುಗೊತ್ತಲ್ಲದೆ ಬೆಚ್ಚಂತಿರಬಲ್ಲರೆ ಆತನೇ ಇಷ್ಟ-ಪ್ರಾಣ-ತೃಪ್ತ, ಮುಕ್ತನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೩ ॥

೭೩

ಇಷ್ಟಲಿಂಗವನರಿದು ಪೂಜೆಯುಮಾಡಿ ಪ್ರಾಣಲಿಂಗವನರಿದು ಪಥ್ಯವ ಕೊಂಡು ಜಂಗಮವಾದೆವೆಂಬ ಮಿಥ್ಯ ತಥ್ಯದ ಅಣ್ಣಗಳು ನೀವು ಕೇಳಿರೋ! ಕೊಟ್ಟಾತ ಗುರು, ಕೊಂಡಾತ ಶಿಷ್ಯನೆಂಬ, ಜಗದಲ್ಲಿ ಅಂದ[1]ಗಾರಿಕೆಯಲ್ಲಿ ನಡೆವ ಭಂಡರಿಗೇಕೆ ಲಿಂಗಾಂಗ ನಿಃಕಳಂಕ ಮಲ್ಲಿಕಾರ್ಜುನಾ? ॥ ೨೪ ॥

೭೪

ಇಹದಲ್ಲಿ ಸುಖಿ, ಪರದಲ್ಲಿ ಪರಿಣಾಮಿ ಎಂಬರು. ಅದು ಹುಸಿ ನಿಲ್ಲು. ಇಹದಲ್ಲಿ ದುಃಖಿ ಪರದಲ್ಲಿ ಪ್ರಕೃತಿ ಎಂದೆ. ಇಂತೀ ಇಹಪರವೆಂಬೆರಡು ಲಕ್ಷ್ಮಿಯ ಮನೆಯ ತೊತ್ತಿನ ತೊತ್ತಾದವರಿ[2]ಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ! ॥ ೨೫ ॥

೭೫

ಈದ ಪಶುವಿನ ಮೊಲೆಯಲ್ಲಿ ಕೈಯನ್ನಿಕ್ಕಿದರೆ ಕ್ಷೀರವಲ್ಲದೆ ಬಂಜೆ ಯಾವಿನ ಮೊಲೆಯಲ್ಲಿ ಉಂಟೇ? ಇದರಂದವ ತಿಳಿವುದು ಲಿಂಗಾಂಗಿಗಳು. ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನರಿವಳು. ಭಕ್ತಿಯುಳ್ಳವರು ಬಲ್ಲರು ನಿಶ್ಚಟದ ನಿಜಾಂಗಿಗಳ. ಇಂತೀ ಸತ್ಯವನರಿಯದೆ ಹೊತ್ತುಹೊತ್ತನಾಗಿ ನುಡಿವ ಮರ್ತ್ಯರಿಗೇಕೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೨೬ ॥

೭೬

ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ. ಅಸಿಗೆ ಶರೀರ ನಿಂದಲ್ಲಿಯೆ ಕಾಯಸಿದ್ಧಿ ಎಂಬೆ. ಲಿಂಗವಿಡಿದ ತನುವಿಂಗೆ ಅಂಗವ್ಯಾಪಾರವ ಬಿಟ್ಟಾಗವೆ ಲಿಂಗಸಿದ್ಧಿ ಎಂಬೆ. ಇದರಂದ ಒಂದೂ ಇಲ್ಲದಿರ್ದಡೆ ತ್ರಿಭಂಗಿಯ ತಿಂದು ಅಂದ ಗೆಡುವನಿಗೇಕೆ ಲಿಂಗದ ಸುದ್ದಿ ನಿಃಕಳಂಕ ಮಲ್ಲಿಕಾರ್ಜುನಾ? ॥ ೨೭ ॥

೭೭

ಉಂಡುಕೊಂಡಾಡುವನ್ನಬರ ವೇಶಿಯ ಮನೆಯ ದಾಸಿಯ ಬರಿಹುಂಡ ವೆಂಬೆ. ಈಶ್ವರನ ರೂಪತೊಟ್ಟು ಕೈಯಾಂತು ಬೇಡಿದರೆ ವೇಷದ ಮರೆಯ

---

೧ ಅಂಧ (ಬ)

೨ ತುತ್ತಾದವರಿಗೆ (ಡ)

ಬಲೆಯ ಬೀಸುವ ಬೇಟೆಗಾರನೆಂಬೆ. ಆಗಮವ ಕಲಿತು ಅವರಿಗೆ ಆಗಹೇಳಿ ಹೋಗಿನ ದ್ರವ್ಯಕ್ಕೆ ಕೈಯಾನುವ ಈ ಲಾಗಿನ ಅಣ್ಣಗಳ ಬಗೆಯ ಭಕ್ತಿಯಲ್ಲಿ ದೃಢಹರೆಂಬುವರಿಗೆ ಸತ್ತುಸಾಯುವ ಕುದುರೆಗೆ ಹುಲ್ಲನಡಕುವಂತಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೨೮ ॥

೭೮

ಉಂಬ ಊಟ ನಿನಗೋ ಅಶನಕ್ಕೋ ಎಂಬುದನರಿ. ಮಾಡುವ ಭಕ್ತಿ ಮಾಡುವಂಗೋ ಮಾಡಿಸಿಕೊಂಬುವಂಗೋ ಎಂಬುದ ತಿಳಿದ ಮತ್ತೆ ಹೋರಿ ಆರ್ಜವ ಮಾಡಲೇಕೆ? ಹೊನ್ನು ಹೊನ್ನಕೊಂಡು ಬಪ್ಪಂತೆ ತನ್ನ ತಾನಳಿದ ಮತ್ತೆ ಅನ್ಯವೇಕೋ ನಿಃಕಳಂಕ ಮಲ್ಲಿಕಾರ್ಜುನಾ? ॥ ೨೯ ॥

೭೯

ಉಂಬ ತಳಿಗೆಯ ಬೆಳಗಿದಡೆ ನೊಂದಿತ್ತೇ ಅದು ಎನ್ನ ಬೆಳಗಿದರೆಂದು? ಬೇವ ಮಸಿಯ ತೊಳೆವಡೆ ನೊಂದಿತ್ತೇ ಅದು ಎನ್ನ ಹೊರೆಯನೆತ್ತಿದರೆಂದು? ಅಂಥ ಮಂದರಂದವ ನುಡಿದಡೆ ನೊಂದು ಬೈಯಲೇಕೆ? ಅವರು ನೊಂದಡೂ ನೋಯಲಿ. ಹಿಂಗಬೇಕೆಂದೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೩೦ ॥

೮೦

ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯಾ ಬಸವಣ್ಣಾ! ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯಾ ಬಸವಣ್ಣಾ! ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯಾ ಬಸವಣ್ಣಾ! ಎನ್ನ ಮನಕ್ಕೆ ಯಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ನಾದಕ್ಕೆ ಅಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ಬಿಂದುವಿಗೆ ಉಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ಕಳೆಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ಭವವ ಕೊಂದಿಹೆನೆಂದು ಒಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ಶಕ್ತಿಗೆ ಸಕಾರವಾಗಿ ಬಂದೆಯಯ್ಯ ಬಸವಣ್ಣಾ! ಎನ್ನ ವರ್ಚಸ್ಸಿಗೆ ವಕಾರವಾಗಿ ಬಂದೆಯಯ್ಯ ಬಸವಣ್ಣಾ! ಇಂತಪ್ಪ ಮಹಾ ಪ್ರಣಮಂಗಳೇ ಬಸವಣ್ಣನಾಗಿ ಆ ಬಸವಣ್ಣನೆ ಮಹಾ ಪ್ರಣಮಂಗಳಾಗಿ ತನ್ನ ಮಠಕ್ಕೆ ತಾನೆ ಬಂದು ಭಕ್ತಿವಸ್ತುವನಿತ್ತಡೆ ಇವ ನಾನು ನಿಃಕಳಂಕ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯ! ॥ ೩೧ ॥

೮೧

ಎನ್ನ ವಿಶ್ವಾಸದಿಂದ ನಿನ್ನ ನೋಡಿಹೆನೆಂದಡೆ ನೀ ವಿಶ್ವಾಸಹೀನ. ನಿನ್ನ ವಿಶ್ವಾಸ ಎನ್ನಲ್ಲಿ ಕರಿಗೊಂಡು, ಎನ್ನ ದೃಢ ನಿಮ್ಮ ದೃಢವಾಗಿ ನಿಂದಲ್ಲಿ ಲಿಂಗ ಭಕ್ತ, ಭಕ್ತಲಿಂಗವೆಂಬ ಶ್ರುತಿ ತಪ್ಪದು ನಿಃಕಳಂಕ ಮಲ್ಲಿಕಾರ್ಜುನಾ ॥ ೩೨ ॥

೮೨

ಎಷ್ಟು ಪಟುಭಟರಾದರೂ ಸ್ಫಟಿಕದ ಮರೆಯಲ್ಲಿ ಅಡಗಬೇಕು. ದಿಟ ಪುಟವನರಿದಡೂ ಗುರು ಕೊಟ್ಟ ನಿಟಿಲಲೋಚನನು ಘಟಿಸಬೇಕು. ಭಿತ್ತಿಯ ಮೇಲಣ ಚಿತ್ರ ಒಪ್ಪವಿಟ್ಟಂತೆ ಗುರುಕೊಟ್ಟ ಇಷ್ಟದ ಬೆಂಬಳಿಯಲ್ಲಿ ದೃಷ್ಟವ ನರಿಯಬೇಕು. ಮೆಟ್ಟಿದುದು ಜಾರಿ, ಹಿಡಿದುದು ಮುರಿದ ಮತ್ತೆ ಎರಡೂ ಕೆಟ್ಟ ವಂಗಿನ್ನೇಕೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೩೩ ॥

೮೩

ಒಡಗೂಡಿರ್ಪ ಲಿಂಗವನರಿಯದೆ ಅಡಿ ಇಟ್ಟು ಪೊಡವಿಯೊಳಗಣ ಅಡವಿ ಗಿಡುಗಳಲ್ಲಿಪ್ಪ ಮೃಡಾಲಯಮಂ ಕಂಡು ಹೊಕ್ಕು ಸಡಗರಿಸಿಕೊಂಡು ವರವ ಹಡೆವೆನೆಂದು ಬೇಡುವುದ ಕುರಿತು ಅದು ಜರಿದು ಬೀಳೆ, ಕೊಟ್ಟ ನೊರವನೆಂದು ನಿಶ್ಚಯವ ಮಾಡಿದ ಮತ್ತೆ ನಾವರ ಕಂಡು ಅಚ್ಚುಗ ಬಡು ತ್ತಿದ್ದೇನೆ. ಇವರಿಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ? ॥ ೩೪ ॥

೮೪

ಒಡೆಯರ ಕಟ್ಟಳೆಯಾದ ಮತ್ತೆ ಒಡಗೂಡಿ ಸಹಪಂತಿಯಲ್ಲಿ ಮೃಡ ಶರಣನ ಪ್ರಸಾದವ ಕೊಳಲೊಲ್ಲದೆ ತುಡುಗುಣಿ ನಾಯಂತೆ ತೊಗಲ ಗಡಿಗೆಯ ತುಂಬುವ ಗುರುಪಾತಕರಿಗೆಲ್ಲಿಯದೋ ಒಡೆಯರ ಕಟ್ಟಳೆ? ಒಡೆಯನ ನಿರೀಕ್ಷಣದಲ್ಲಿ ಸರಿಗಮ್ಮುಗೆಯನೊಲ್ಲದೆ ಒಡೆಯಂಗೆ ಮನೋಹರವಾಗಿ ಸಡ ಗರಿಸಿ ಸಮರ್ಪಿಸಿದ ಮತ್ತೆ ತನ್ನೊಳಗಿಪ್ಪ ಆತ್ಮಂಗೆ ತೃಪ್ತಿ ಕೂರ್ಮಶಿಶು ವಿನ ಸ್ನೇಹದಂತೆ. ಹೀಗಲ್ಲದೆ ಭಕ್ತಿಗೆ ಸಲ್ಲ. ಎನಗೆ ಪರಸೇವೆ ಪರಾಙ್ಮುಖ ವೆಂದು ಒಡೆಯರಿಗೆ ಎಡೆ ಮಾಡೆಂದು ಎನಗೆ ತಳುವೆಂದಡೆ ಒಪ್ಪುವರೇ ನಿಜ ಶರಣರು? ಸತಿಯು ಕೋಣೆಯಲಿರ್ದು ಪತಿಯು ನಡುಮನೆಯಲ್ಲಿರ್ದಡೆ

ರತಿಕೂಟ ಉಂಟೇ? ಇವರ ಗಸಣೆಗಂಜಿ ವಿಶೇಷವನರಿಯದ ಪಶುಗಳಿಗೆಲ್ಲಿಯದೋ ಮುಕ್ತಿ ನಿಃಕಳಂಕ ಮಲ್ಲಿಕಾರ್ಜುನಾ? ॥ ೩೫ ॥

೮೫

ಒಡೆಯ ದೇವರಿಗೆ ಕೊಟ್ಟಲ್ಲದೆ ಕೊಳ್ಳೆನೆಂಬ ವ್ಯರ್ಥನ ಭಕ್ತರ ನೋಡಾ! ಒಡೆಯಂಗೆ ಭೆಟ್ಟಿ ಮನೆಯೊಡೆಯಂಗೆ ತುಪ್ಪ, ಕಟ್ಟು-ಮೊಸರು, ಮೃಷ್ಟಾನ್ನ. ಒಡೆಯರಿಗೆ ಕುರುಹು ತೋರಿ, ತಾ ಹಿರಿದಾಗಿ ಉಂಬ ಕಡುಗಲಿಯ ನೋಡಾ! ಇವರಡಿಯಲ್ಲಿ ಬಂದಡೆ ಇವರನೊಡಗೂಡಿ ನುಡಿದೆನಾದಡೆ ಜೇನಗಡಿಗೆಯಲ್ಲಿ ಬಿದ್ದ ಗುದಿಮಕ್ಷಿಕನಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

೮೬

ಓ ಎಂದಲ್ಲಿ ನಿರಾಕಾರವಸ್ತುವಾದೆಯಲ್ಲಾ! ಓಂ ಎಂದಲ್ಲಿ ಸಾಕಾರ ವಸ್ತುವಾದೆಯಲ್ಲಾ! ತತ್ವಮಸಿ ಎಂದಲ್ಲಿ ತತ್ವರೂಪಾಗಿ ಜಗವ ರಕ್ಷಿಸಿಹೆನೆಂದು ಕರ್ತೃರೂಪಾದೆಯಲ್ಲಾ! ನಿಮಗೆ ಮರ್ತ್ಯದ ಮಣಿಹವೆಲ್ಲಿಯ ಪರಿಯಂತರ! ಎನಗೆ ಕಟ್ಟುಗುತ್ತಿಗೆಯೇ? ನಾ ಕಟ್ಟಿಗೆಯ ಹೊತ್ತು ಶಿವಭಕ್ತರ ಮನೆಗೆ ನೀವು ಕೊಟ್ಟ ಕಾಯಕದ ಕೃತ್ಯ ಇನ್ನೆಷ್ಟುದಿನ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೮೭

ಕಟ್ಟರಸಿನೊಡನೆ ಏಕ, ಅಸತ್ಯವನಾಡಿದರೆ ಅವರು ಮುಕ್ತಿಯ ಉಸುರಿದುದಕ್ಕೆ ಎದೆ ಬಿಡುವರೇ ಅಸುವಿನೊಡೆಯರು? ಕಪಟಬುದ್ಧಿಯವ ತಪ್ಪಿ ನುಡಿವಡೆ ಒಪ್ಪವಿಟ್ಟು ಕೊಳ್ಳಾ ನಿಃಕಳಂಕ ಮಲ್ಲಿಕಾರ್ಜುನಾ! ॥ ೩೮ ॥

೮೮

ಕಟ್ಟಿಗೆ, ಕಸ, ನೀರ ಹೊತ್ತು, ಭಕ್ತರಲ್ಲದೆ ಬೇಡೆನೆಂದು, ಅವರು ಕರ್ತೃ ನಾನು ತೊತ್ತೆಂದು, ಅವರು ಒಕ್ಕುದನೀಸಿಕೊಂಡು ಬಂದು, ತನ್ನ ಕೃತ್ಯದ ನೇಮ ತಪ್ಪದೆ, ಆಗವೆ ತನ್ನ ಸತಿ ಸುತ ಬಂಧು ದೇವರು ಮುಂತಾಗಿ ಲಿಂಗಾರ್ಚನೆಯ ಮಾಡಬೇಕಲ್ಲದೆ ಇಂದಿಗೆ ನಾಳಿಗೆಂದು ಸಂದೇಹವ ಮಾಡಿವಡೆ ಲಿಂಗಕ್ಕೆ ದೂರ; ಜಂಗಮಕ್ಕೆ ಸಲ್ಲ; ಪ್ರಸಾದವಿಲ್ಲ. ಇದಕ್ಕೆ ಗೆಲ್ಲಸೋಲ ಬೇಡ ನಿಃಕಳಂಕ ಮಲ್ಲಿಕಾರ್ಜುನನ ಲಿಂಗವೇ ಸಾಕ್ಷಿ ॥ ೩೯ ॥

೮೯

ಕತ್ತೆ ಕರ್ಪುರವ ಬಲ್ಲುದೇ? ನಾಗ ನಾಣ್ಣುಡಿಯ ಬಲ್ಲುದೇ? ನಾಯಿ ಸುಭಕ್ಷವ ಬಲ್ಲುದೇ? ಮಕ್ಷಕ ಗಂಧವ ಬಲ್ಲುದೇ? ಹುಟ್ಟು ಗೊಡ್ಡು ಮಕ್ಕಳ ಗರ್ಭವ ಬಲ್ಲುದೇ? ಜಗವಲ್ಲಿ ಹೊತ್ತು ಹೋರುವ ಮಿಥ್ಯವಂತರಿಗೆ ತತ್ತ್ವದ ಸುದ್ದಿಯ ಹೇಳಿವರೆ ನಿತ್ಯ ರುದ್ರನಾದಡೂ ತಪ್ಪದನಾರನೆಂದೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೪೦ ॥

೯೦

ಕತ್ತೆ ಬತ್ತಲೆ ಇದ್ದಡೆ ನೆಟ್ಟನೆ ನಿರ್ವಾಣಿಯೆ? ಹುಚ್ಚ ಹೊಟ್ಟೆಗೆ ಕಾಣದೆ ಎತ್ತಲೆಂದರಿಯದೆ ಮರ್ತ್ಯದೊಳಗಿರ್ದಡೆ ನಿಶ್ಚಯದ ವಿರಕ್ತನೆ? ಇಂತಿವರ ತತ್ತು ಗೊತ್ತು ಬಲ್ಲವಂಗೆ ಇನ್ನೆತ್ತಣ ಮುಕ್ತಿಯೋ? ಇನ್ನೆತ್ತಣ ವಿರಕ್ತಿಯೋ? ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

೯೧

ಕದ್ದ ಕಳವ ಮರಸಿಕೊಂಡು ನಾ ಸಜ್ಜನನೆಂಬಂತೆ ಇದ್ದ ಗುಣವ ನೋಡಿ ಹೊದ್ದಿ ಸಾಧಿಸಲಾಗಿ ಕದ್ದ ಕಳವು ಕೈಯಲ್ಲಿದ್ದ ಮತ್ತೆ ಸಜ್ಜನತನ ಉಂಟೇ? ಇಂತೀ ಸಜ್ಜನಗಳ್ಳರ ಕಂಡು ಹೊದ್ದಿದೆ ಹೋದ ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೯೨

ಕಲ್ಲು ಮಣ್ಣು ಮರವಲ್ಲಿ ದೇವನಿದ್ದಹನೆಂದು ಎಲ್ಲಿಯೂ ತೊಳಲು ತಿಪ್ಪ ಅಣ್ಣಗಳು ಕೇಳಿರೊ! ಅದನಲ್ಲಲ್ಲಿಟ್ಟು ಬಲ್ಲತನದ ಕುರುಹಲ್ಲದೆ ಸೊಲ್ಲಿಂಗತೀತನರಿಯ. ಮನದಿರವೆಲ್ಲಿಹುದೋ ಅವನಲ್ಲಿಹ ನಿಃಕಳಂಕ ಮಲ್ಲಿಕಾರ್ಜುನಾ! ॥ ೪೩ ॥

೯೩

ಕಳವಿನಲಿ ಬಂದಿರಿವಾತ ಕಳ್ಳನಲ್ಲದೆ ಧೀರನಲ್ಲ. ಅಲಗಿನ ಮೊನೆಯ ಹಳಚಿದಲ್ಲಿ ಗತಿ ತಪ್ಪಿದಡೆ ಕೈಯ್ದನೆ ಸವರಿಸಿಕೊ ಎಂದಡೆ ಇದಿರಾಗಬೇಕಲ್ಲದೆ ವಾಸವಳಿದು ಬಿದ್ದವನ ಅಸುವಕೊಂದಡೆ ಆ ಕಸಕಡ್ಡಿಗಳನೇನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೪ ॥

೯೪

ಕಾಯಸೂತಕಿಗಳು ಗುರುವನರಿಯರಾಗಿ, ಭಾವಸೂತಕಿಗಳು ಲಿಂಗವನರಿಯರಾಗಿ, ತ್ರಿವಿಧ ಸೂತಕಿಗಳು ಜಂಗಮುವನರಿಯರಾಗಿ, ತನು ಶುದ್ಧ

ವಾಗಿ ಗುರುವನರಿಯಬೇಕು. ಮನಶುದ್ಧವಾಗಿ ಲಿಂಗವನರಿಯಬೇಕು. ತ್ರಿವಿಧ ಮಲಶುದ್ಧವಾಗಿ ಜಂಗಮವನರಿಯಬೇಕು. ಇಂತೀ ಸ್ಥಳಕುಳಂಗಳ ಭಾವಿಸಿ ತನುಮನಧನ ನಿರತನಾಗಿ ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧಾಂಗಭರಿತನಾಗಿಪ್ಪ ನಿಜಲಿಂಗಾಂಗಿಗೆ ಇಹಪರವೆಂಬ ಉಭಯವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೫ ॥

೯೫

ಕಾಯದ ಕರದಲ್ಲಿ ಲಿಂಗವ ಪಿಡಿದು, ಬಾಯೂರಿ ಭವಗೆಟ್ಟು, ನಾಣುಗೆಟ್ಟು, ನಾನಾರೆಂಬುದನರಿಯದೆ ಇದಿರ ಇಚ್ಛೆ ಏನೆಂದರಿಯದೆ, ಕಾಯದ ಸುಖಕ್ಕಾಗಿ ಜೀವರ ಬೇಡುವ ಜಾರರಿಗೆಲ್ಲಿಯದೋ ನಿಃಕಳಂಕ ಮಲ್ಲಿಕಾರ್ಜುನಾ! ॥ ೪೬ ॥

೯೬

ಕಾಯದ ಕಳವಳದಿಂದ ಜೀವನ ಭ್ರಾಂತಿಯಿಂದ ಅರಿದು ಮರದೆನೆಂದು ಎಡೆದೆರಹಿಲ್ಲದ ವಸ್ತುವಿಗೆ ಬೇರೊಂದೆಡೆ ಉಂಟೆಂದು ಸಂಕಲ್ಪಿಸಲೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೯೭

ಕಾಯದ ಕೈಯಲ್ಲಿ ಲಿಂಗಪೂಜೆ. ಮನದ ಕೈಯಲ್ಲಿ ಸಂಸಾರ. ಎಂತಹದಯ್ಯಾ ಲಿಂಗಪೂಜೆ ? ಎಂತಹದಯ್ಯಾ ಜಂಗಮಪೂಜೆ? ಇಂತಿಪ್ಪ ನಾಚಿಕೆಗೆಟ್ಟ ಮೂಕೊರೆಯರ ತೋರದಿರಾ ನಿಃಕಳಂಕ ಮಲ್ಲಿಕಾರ್ಜುನಾ ॥ ೪೮ ॥

೯೮

ಕಾಳಗದಲ್ಲಿ ಹೋದ ಮತ್ತೆ ಅಳುಮನ ತನಗಿಲ್ಲವೆಂದಡೆ ಅವರು ಸೀಳದಿಪ್ಪರೆ ಅವನ ಉದರವ? ಬಾಳಾಂಬಕನ ಭಕ್ತನಾಗಿ ಭಕ್ತಿಯ ತಾಳಲರಿಯನೆಂದಡೆ ಅದು ಬಾಲನ ಚಿತ್ತದ ಲೀಲೆಯಂತೆ ನಿಃಕಳಂಕ ಮಲ್ಲಿಕಾರ್ಜುನಾ! ॥ ೪೯ ॥

೯೯

ಕಾಳರಾತ್ರಿ ಎಂಬ ಕತ್ತಲೆಯ ಮನೆಯ ಹೊಕ್ಕು ಜಾಳಿಗೆಯ ಮುದ್ರೆಯ ನೋಡುವನಂತೆ, ಸಭಾಸಭೆಯಲ್ಲಿದ್ದು ನಭವನಡರಿದೆನೆಂಬಂತೆ, ಗಡಿಗೆಯಲ್ಲಿ ಸಮುದ್ರವ ತುಂಬಿ ಅಡಗಿಸಿದೆನೆಂಬಂತೆ, ಸರ್ವವನೊಡಗೂಡಿ ಹರಿದಾ

ಡುತ್ತ ಸಡಗರಿಸುತ್ತ ಲಲನೆಯರನೊಡಗೂಡುತ್ತ ರಮಣಿಗಳಲ್ಲಿ ಬಡಿ
ಹೋರಿಯಾಗುತ್ತ ಲಿಂಗವನರಿದೆನೆಂಬ ಸುಗುಡರ ನೋಡಾ! ಜಗದಲ್ಲಿ ಕನಸಿ
ನಲ್ಲಿ ತಾ ಸತ್ತನೆಂದು ಎಚ್ಚತ್ತು ಅಳುವ ಕುಚಿತ್ತನಂತೆ ನಿಃಕಳಂಕ ಮಲ್ಲಿ
ಕಾರ್ಜುನಾ ॥ ೫೦ ॥

೧೦೦

ಕುರಿ, ಕುನ್ನಿ, ಕುರು-ಹಂದಿ, ಕೋಳಿ ಮೊದಲಾದವು ಸಾಕಿದೊಡೆಯನ
ಬಲ್ಲವು ಅರಿಮರುಳರ್ಗೆ! ಅರ್ಚಿಸಿ ಪೂಜಿಸಿ ಭಾವಿಸಿ ಏಕರಿಯರಯ್ಯಾ?
ಹೋಯಿತ್ತು ಭಕ್ತಿ ಮಳಲ ಕೂಡಿದ ಎಣ್ಣೆಯಂತೆ. ಹೋಯಿತ್ತು ಪೂಜೆ
ಪುರೋಹಿತನ ಕೊಂದು ಪುರಾಣವ ಕೇಳಿದಂತೆ. ತಾ ಮಾಡುವ ಭಕ್ತಿಯ ತಾ
ಮಾಡುವ ಸತ್ವವ ತಾ ಮಾಡುವ ಸದಾಚಾರವನರಿಯದೆ ಮಾಡುವ ಭಕ್ತನ
ಮನೆಯಲ್ಲಿ ಹೊಕ್ಕುಂಡ ಜಂಗಮಕ್ಕೆ ಏಳನೆಯ ಪಾತಕ. ಆ ಜಂಗಮದ
ಪ್ರಸಾದವ ಕೊಂಡ ಭಕ್ತಂಗೆ ಹುಲಿ ಕಪಿಲೆಯ ತಿಂದು ಮಿಕ್ಕುದ ನರಿ ತಿಂದು
ಆ ಮಿಕ್ಕುದ ತಾ ತಿಂದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೧ ॥

೧೦೧

ಕುರುಡನ ಮುಂದೆ ಗುಣ ಮಣಿ ಇದ್ದರೆ ಅವನೆಡಹುವನಲ್ಲದೆ ಕಾಣ
ಲರಿಯ. ಸರಟನ ಮುಂದೆ ಸತ್ಯವಿದ್ದಡೆ ನಿಶ್ಚಯಿಸಲರಿಯ. ಬರಡಿಯ
ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ? ಅರಿವುಹೀನರ ಅಂಗದಲ್ಲಿ
ಕುರುಹು ಇರಲಾಗಿ ಅವರು ಅರಿಯಬಲ್ಲರೆ? ಇವು ಬರಿಯ ಮಾತಿನ
ಸೊಲ್ಲಿಂದೆ. ಎನ್ನೊಡೆಯಾ! ಕೈಯ ಗಡಿಗೆಯ ಬಿಡಿಸಾ ನಿಃಕಳಂಕ ಮಲ್ಲಿ
ಕಾರ್ಜುನಾ ॥ ೫೨ ॥

೧೦೨

ಕುರುವಿಡಿದು ಕಂಡಿಹೆನೆಂದಡೆ ಪುಣ್ಯವ ಮಾಡಬೇಕೆಂಬರು. ಅರಿದು
ಕಂಡಿಹೆನೆಂದಡೆ ಕಾಯದ ಕರಣಂಗಳ ಬಿಡಬೇಕೆಂಬರು. ಕೆಟ್ಟೆನಯ್ಯಾ ಚಕ್ರ
ದಂಡದಲ್ಲಿ ಸಿಕ್ಕಿದ ಮರ್ಕಟನಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೧೦೩

ಕುಲ, ಛಲ, ಪೀಠ, ನೈಷ್ಠಿಕೆ ಇದ ದೃಷ್ಟಿಸಿಕೊಂಡಿಪ್ಪ ಕೆಟ್ಟ ಮನುಜ
ರಿಗೆ ನಿಜ ತತ್ವದ ಮಾತೇಕೆ? ಅವರತ್ತ ಹೋರುವ ಮಮತತ್ವವೈಸೆ

ನಿತ್ಯತ್ವವಿಲ್ಲ ! ಇವರು ಭಕ್ತರು ಇವರು ಜಂಗಮರೆಂದಡೆ ನೊಂದು ಬಯ್ವಲೇಕೆ ಮತ್ತೆ ? ಮತ್ತೆ ನರಕ ನಿಃಕಳಂಕ ಮಲ್ಲಿಕಾರ್ಜುನಾ ॥ ೫೪ ॥

೧೦೪

ಕುಸುಮದೊಳಗಣ ಗಂಧ ಹೋದ ಮತ್ತೆ ಕುಸುಮವನಾರು ಬಲ್ಲರು ? ದರ್ಶನದಲ್ಲಿ ಜ್ಞಾನವಿಲ್ಲದ ಮತ್ತೆ ದರುಶನದವನಾರು ಬಲ್ಲರು ? ಮಾತು ಕಲಿತು ನುಡಿವರಲ್ಲಿ ನಿಜಾರ್ತನ ನೆಲೆ ಇಲ್ಲದಲ್ಲಿ ಮಾತನಾರು ಬಲ್ಲರು ? ಇಷ್ಟವನರಿಯದಿದ್ದಡೆ ಇವರೆಲ್ಲರು ಭ್ರಾಂತಯೋಗಿಗಳೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೫ ॥

೧೦೫

ಕೂಟಗೆಯ ಕೂಳನುಣಬಂದವರೆಲ್ಲರು ಅಜಾತನ ನಿಲವ ಬಲ್ಲರೇ ? ಬೇಟದ ಕಣ್ಣಿನವರೆಲ್ಲರು ಸತ್ಸಂಗವ ಬಲ್ಲರೇ ? ಈಷಣತ್ರಯವ ಕೂಡುವರೆಲ್ಲರು ಪರದೇಶಿಕನ ಕೂಡ ಬಲ್ಲರೇ ? ಆಶೆ ಎಂಬ ಕೊಳ್ಳದಲ್ಲಿದ್ದು ನಿರಾಶೆಯ ನಿರ್ಮನವ ಬಲ್ಲಡೆ ದೋಷದೂರ ನಿಜಾರ್ತ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

೧೦೬

ಕೈಯಲ್ಲಿ ಹಿಡಿದರೆ ಕಲ್ಲು ಸಿಕ್ಕಿತ್ತಲ್ಲದೆ ಲಿಂಗವಿಲ್ಲವೆಂದೆ. ಕಣ್ಣಿನಲ್ಲಿ ನೋಡಿ ಶಾಬರ ಕಳೆದೆವೆಂದಡೆ ಅದು ಕೌಳಿಕವೆಂದೆ. ಮನದಲ್ಲಿ ನೆನೆದು ಘನದಲ್ಲಿ ನಿಂದಿಹೆನೆಂದಡೆ ಭವಕ್ಕೆ ಬೀಜವೆಂದೆ. ಕೈಗೂ ಕಣ್ಣಿಗೂ ಮನಕ್ಕೂ ಬಾಹಾಗ ತೊತ್ತಿನ ಕೂಸು ಕಂಡವರ ಅಪ್ಪಾ ಅಪ್ಪಾ ಎಂಬಂತೆ ಇಂತೀ ಸುಚಿತ್ತವನರಿಯದೆ ಉದ್ದೇಶಿಸಿ[೧] ನಡೆವ ಜಗದ ಭಂಡರನೊಲ್ಲೆನೆಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೫೭ ॥

೧೦೭

ಕೊರಳ ಕಟ್ಟಿದ ನೇಣು ತಿರುಗಲಾಗಿ ತನ್ನ ಸುತ್ತಿ ತಾ ಬಿದ್ದುದಕ್ಕೆ ಕಟ್ಟಿದವನ ದೃಷ್ಟವೆಂಬುದು ಕಷ್ಟವಲ್ಲವೆ ? ತನ್ನ ಭಕ್ತಿಗೆ ತಾನೊಪ್ಪಿ ಅದರ ಚೆನ್ನವನರಿಯದೆ ಇದಿರಿನಲ್ಲಿ ಅನ್ಯಾಯವೆಂಬ ಕಳ್ಳರ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

---

೧ ಉದ್ಯೋಗಿಸಿ

೧೦೮

ಕಂಚುಗಾರನ ಕೈಯ ಮೇಣವ ಇದನಾನೆಂತು ಉಪಮಿಸುವೆ? ಅವರ ಸಂಚವ ಕಂಚುಗಾರನೆ ಬಲ್ಲ. ಸಂಚಿತಕರ್ಮ, ಪ್ರಾರಬ್ಧ ಕರ್ಮವೆಂಬಿವ ಮುಂದಕ್ಕೆ ನಾನೇನ ಬಲ್ಲೆ? ಈ ದೇಹದ ಸಂಚವನರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೯ ॥

೧೦೯

ಕೊಂಡನ್ನದಿಂದ ಅಜೀರ್ಣಬಂದಡೆ ಆ ಜ್ಞಾನ ತನಗೋ ಅನ್ನಕ್ಕೋ? ತನ್ನ ಅನುವ ತಾನರಿಯದೆ ಬಂದುಂಬ ಜಂಗಮದಲ್ಲಿ ಅಂಗವನರಸುವ ಲಿಂಗ ದೂರರಿಗೇಕೆ ಜಂಗಮ ಭಕ್ತಿ ನಿಃಕಳಂಕ ಮಲ್ಲಿಕಾರ್ಜುನಾ? ॥ ೬೦ ॥

೧೧೦

ಕ್ರೂರ, ಮೃಗ, ಜಾರ, ಚೋರ, ಸಂದಣಿಗ, ಲಂಡ, ಭಂಡ, ಚಾರ್ವಾಕ, ಸರ್ವಪಾತಕಿ, ಸುರಾಪಾನಭುಂಜಕ, ಪಣ್ಯಾಂಗನಾಸಂಗಿ, ಇಂತಿವರಲ್ಲಿ ತತ್ವಭಾವವ ಭಾವಿಸಿ ವ್ಯಕ್ತೀಕರಿಸಿದಡೆ ದೃಷ್ಟಿಯಲ್ಲಿ ಇದಿರಾದಡೆ ಹೊತ್ತು ನೋಡಿದಡೆ ನುಡಿದಡೆ ಆ ಭಕ್ತಂಗೆ ಭಕ್ತಿ ಇಲ್ಲ. ಮುಕ್ತಂಗೆ ಮುಕ್ತಿ ಇಲ್ಲ ಜ್ಞಾನಿಗೆ ಜ್ಞಾನವಿಲ್ಲ. ಸತಿಪತಿ ಸಂಯೋಗ ಸಂಗವಲ್ಲದೆ ದುಸ್ಸಂಗದಿಂದ ವ್ಯಾಪಾರದಿಂದ ನಡೆನುಡಿಯಬಹುದೇ? ಬಲ್ಲವನಾದೆಹೆನೆಂದು ಅಲ್ಲಲ್ಲಿಗೆ ನುಡಿ ವಡೆ ಆತ್ಮನಲ್ಲಿದ್ದುದೇ ದ್ರೋಹ ನಿಃಕಳಂಕ ಮಲ್ಲಿಕಾರ್ಜುನಾ ॥ ೬೧ ॥

೧೧೧

ಗಾಣದಲ್ಲಿ ಸಿಲುಕಿದ ಎಳ್ಳು ನೋಯದೆ ಎಣ್ಣೆಯ ಬಿಡುವುದೇ? ಕಾಯದಲ್ಲಿ ಸಿಲುಕಿದ ಜೀವ ನೋಯದೆ ಕರಣಂಗಳ ಬಿಡುವುದೇ? ಭಾವದಲ್ಲಿ ಸಿಲುಕಿದ ಭ ಮೆ ನೋಯದೆ ವಿಕಾರವ ಬಿಡುವುದೇ? ಇಂತಿವನರಿದಲ್ಲದೆ ಜ್ಞಾನ ಲೇಪವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೬೨ ॥

೧೧೨

ಗುಣವ ಕಂಡು ನೆನದಿಹೆನೆಂದಡೆ ಆ ನೆನಹು ನಿನ್ನ ಹಂಗು. ಹಂಗ ಬಿಟ್ಟು ಕಂಡಿಹೆನೆಂದಡೆ ಆ ದೇಹ ಕರಣಂಗಳ ಹಂಗು. ಅರಿಯಬಾರದು ಅರಿಯ ದಿರಬಾರದು. ಈ ಉಭಯದ ಭೇದವನಿನ್ನಾರಿಗೆ ಹೇಳುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೩ ॥

೧೧೩

ಗುತ್ತಿಗೆಕಾರ ನುಡಿದು ಅದ ಒಪ್ಪವಿಡಲರಿಯ. ಹೊತ್ತುಹೋಕರು ನುಡಿವಡೆ ತಪ್ಪನೊಪ್ಪವಿಡಬೇಕು ಮುಂದಣ ತಪ್ಪಿಂಗೆ ಈಡಾದ ಕಾರಣ. ಇದ ನಿಶ್ಚಯವೆಂದು ತಿಳಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೪ ॥

೧೧೪

ಗುರು ಲಿಂಗ ಜಂಗಮಕ್ಕೆ ತನು ಮನ ಧನವ ಸವೆಯಿಸಿ ದೃಢಚಿತ್ತ ವಿಲ್ಲದೆ ಪ್ರೊಡವಿಯ ಜನಂಗಳು ಮೆಚ್ಚಬೇಕೆಂದು ಮ್ರುಥನ ಭಕ್ತರಿಗೆ ನೆರೆ ನಿಷ್ಠೆಟ ಉಂಟೆಂದೆನಿಸಿಕೊಂಡಿಹೆನೆಂಬ ಧರಣಿಯ ಚೋರರಿಗೆಲ್ಲಿಯದೋ ನಿಜ ಭಕ್ತಿ ನಿಃಕಳಂಕ ಮಲ್ಲಿಕಾರ್ಜುನಾ? ॥ ೬೫ ॥

೧೧೫

ಗುರು ಲಿಂಗದ ಕುರುಪಹುದಕ್ಕೆ ಕೆಟ್ಟ ವನವೇ? ಅರಸಿಕೊಂಬುವಕ್ಕೆ ಓಡಿಹೋದ ತೊತ್ತೇ? ದೃಷ್ಟವಲ್ಲಿ ಕಾಬುದಕ್ಕೆ ನೆಟ್ಟನೆ ಗೊತ್ತೆ? ಈ ಸಂದೇಹದ ಅಚ್ಚುಗದಲ್ಲಿ ಬಿದ್ದು ಕಟ್ಟಿಸಲ್ಪ್ಯಾ! ಇದಕಿನ್ನೇನು ದೃಷ್ಟವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ! ॥ ೬೬ ॥

೧೧೬

ಗುರುವಿಂಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ, ಇಂತಿವಕೊಟ್ಟು 'ಮುಕ್ತಿಯಗಳಿಸಿಕೊಂಡಿಹೆನೆಂಬ ಮುಯ್ಯಬಂಧುಗಳಂತೆ ಬಡ್ಡಿಯಾಶೆಗೆ ಕೊಟ್ಟ ಲುಬ್ಧನಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೭ ॥

೧೧೭

ಗುರುವಿಂಗೆ ತನುವ ಕೊಟ್ಟಾಗವೆ ಬ್ರಹ್ಮನ ಬಲೆ. ಲಿಂಗಕ್ಕೆ ಮನವ ಕೊಟ್ಟಾಗವೆ ವಿಷ್ಣುವಿನ ಬಲೆ. ಜಂಗಮಕ್ಕೆ ಧನವ ಕೊಟ್ಟಾಗವೆ ರುದ್ರನ ಬಲೆ. ಇಂತಿವು ಇದಿರಿಟ್ಟ ಭೇದ ಸ್ಥೂಲ, ಸೂಕ್ಷ್ಮ, ಕಾರಣ. ಈ ಮೂರೂ ಮೂರಕ್ಕೊಡಲಾದ ಕಾರಣ ಮತ್ತೆ ಇದ ಸಾರಲೇತಕ್ಕೆ ನಿಃಕಳಂಕ ಮಲ್ಲಿ ಕಾರ್ಜುನಾ ॥ ೬೮ ॥

೧೧೮

ಘಣಾತೂರ್ಯ ಸ್ವೇಚ್ಛಾತೂರ್ಯ ಇಂತೀ ಮಾಟವಲ್ಲಿ ಮಾಡೆ ಉಂಡ ಓಗರ ವಾಂತಿಯಾದಂತೆ. ಮಾಡಿದ ಸುಖ ತನಗೆ ದುಃಖವಹ ವಿಭೇದವಂ

ಬಿಟ್ಟು ಸ್ವೇಚ್ಛಾತೂರ್ಯವೆಂಬ ತೂರ್ಯದಲ್ಲಿ ನಿಂದು ಆ ತೂರ್ಯವಂ ಬಿಟ್ಟು ತುದಿಯಲ್ಲಿ ನಿಂದು ಒಡೆಯನ ಕೈಯಿಂತ್ರಿಡೆ ಮಡಗಿರಲಾಗಿ ಒಡೆಯ ಕೇಳಿದಡೆ ಒಡೆಯಂಗೆ ಒಡವೆಯಂ ಕೊಟ್ಟು ಪೃಥಕಚಿತ್ತದಲ್ಲಿಪ್ಪವಂಗೆ ಪೊಡ ಪಿಯ ಮಾಟಕೂಟದವರು ಸರಿಯೇ ನಿಃಕಳಂಕ ಮಲ್ಲಿಕಾರ್ಜುನಾ ? ॥ ೬೯ ॥

೧೧೯

ಗುರುಸ್ಥಲ ಮೂರಾಗಿ ನಡೆವ ಭೇದವನಾರೂ ಅರಿಯರಲ್ಲಾ ! ಭವಿಗೆ ಲಿಂಗವ ಕೊಡುವಲ್ಲಿ, ಲಿಂಗವಂತಂಗೆ ಹರರೂಪವ ಮಾಡುವಲ್ಲಿ, ಹರರೂಪಿಂಗೆ ಅರಿವ ಹೇಳುವಲ್ಲಿ, ತ್ರಿವಿಧ ಗುರುರೂಪಾಯಿತ್ತು. ಅಂಗಕ್ಕೆ ಲಿಂಗವ ಕೊಡು ವಲ್ಲಿ ಜಂಗಮಕ್ಕೆ ಸ್ಥಲವ ಮಾಡುವಲ್ಲಿ ಆತ್ಮಬೋಧೆಯ ಹೇಳುವಲ್ಲಿ ಅಂಗಕ್ಕೆ ಆಚಾರ, ಸಮಯಕ್ಕೆ ವರುವಿನ, ಆತ್ಮಕ್ಕೆ ಬೋಧೆ ಇಂತಿವನಾದರಿಸಿ ಮಾಡ ಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೭೦ ॥

೧೨೦

ಅಂದಚಂದದ ಬಣ್ಣವ ಹೊದ್ದು ಹರನ ಶರಣರೆಂಬ ಅಣ್ಣಗಳೆಲ್ಲರು ಕರಣಗಳೆಂಬ ಉರವಣಿಯ ಅಂಬಿಗಾರದೆ ಭಕ್ತಿ ಎಂಬ ಹರಿಗೆಯ ಹಿಡಿದು ಮುಕ್ತಿ ಎಂಬ ಗ್ರಾಮವ ಮುತ್ತಿ ಕಾದಿ ಸತ್ತರೆಲ್ಲರು ರುದ್ರನ ಶೂಲದ ಘಾಯದಲ್ಲಿ. ಎನಗೆ ಹೊದ್ದಿಗೆ ಯಾವುದೋ ನಿಃಕಳಂಕ ಮಲ್ಲಿಕಾರ್ಜುನಾ ? ॥ ೭೧ ॥

೧೨೧

ಜನನ ಮರಣಕ್ಕೆ ಒಳಗಾಹ ಆತ್ಮನು ಪರಿಭವಕ್ಕೆ ಬಪ್ಪುದಿಲ್ಲವೆಂದು ನುಡಿವರು ಅಧ್ಯಾತ್ಮಾಂಗಿಗಳು. ಶರೀರದಲ್ಲಿ ಸೋಂಕಿದ ವ್ಯಾಧಿಗಳು ಆತ್ಮಂ ಗಲ್ಲದೆ ಶರೀರಕ್ಕುಂಟೇ ? ಘಟಕ್ಕೆ ನೋವಲ್ಲದೆ ಆತ್ಮಂಗೆ ನೋವಿಲ್ಲವೆಂಬುದು ಹುಸಿ. ಘಟದಲ್ಲಿ ತೋರುವ ಆತ್ಮ ಘಟವ ಬಿಟ್ಟು ಮತ್ತೆ ಘಟ ಚೇತರಿಸ ಬಲ್ಲುದೇ ? ನಾನಾ ಸುಖಂಗಳ ಸುಖಿಸಬಲ್ಲುದೇ ? ಇದು ಕಾರಣ ಕ್ರಿಯೆ ವಿಡಿದು ಮಾಡುವಂಗೆ ಕರ್ಮಶೇಷವಿಲ್ಲ ನಿಷ್ಕ್ರಿಯೆಯಲ್ಲಿ ಆಚರಿಸುವಂಗೆ. ನಾನಾ ಭವ ಉಂಟಾಗಿ ಇಂತೀ ಆತ್ಮನಲ್ಲಿಪ್ಪರು ಪರಿಭವಕ್ಕೆ ಬರಬಾರದು. ಬಂದರೆ ಅಳಿವುಳಿವನರಿಯಬೇಕು. ಅರಿಯಲಾಗಿ ಮರೆಯಬೇಕು. ಆ ಮರವೆ ತಾನು ತೆರವಿಲ್ಲದರಿಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೨ ॥

೧೨೨

ತಾವು ಬಲ್ಲವರಾದೆವೆಂದು ಗೆಲ್ಲ ಸೋಲಕ್ಕೆ ಹೋರುತಿಪ್ಪರು. ಇದೆಲ್ಲವ ನತಿಗಳೆದ ಮತ್ತೆ ಗೆಲ್ಲ ಸೋಲಕ್ಕೆ ಹೋರಲೇಕೋ? ಗೆಲ್ಲುವಂಗೆ ಸೋಲು ವದೇ ಧರ್ಮ, ಸೋತ ಮತ್ತೆ ಒಲವರವಿಲ್ಲವಾಗಿ. ಜಲನದಿಯಲ್ಲಿ ಪೋಹ ಒಲು ಮರನಂತೆ ಇವರ ನೆಲೆ ಇಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೩ ॥

೧೨೩

ಜಾಗ್ರದಲ್ಲಿ ಕಾಬುದು ಬ್ರಹ್ಮನ ಇರವು. ಸ್ವಪ್ನದಲ್ಲಿ ಕಾಬುದು ವಿಷ್ಣು ವಿನ ಇರವು. ಸುಷುಪ್ತಿಯಲ್ಲಿ ಕಾಬುದು ರುದ್ರನ ಇರವು. ಇಂತೀ ಗುಣವನರಿ ಯದೆ ಪರಮನ ಇರವನರಿವ ಪರಿ ಎಂತೋ? ಭ್ರಾಂತರ ಭ್ರಮೆಗೆ ದೂರ, ದುರಿತ ಸಂಹರ, ವಿಶ್ರಾಂತ ನಿಃಕಳಂಕ ಮಲ್ಲಿಕಾರ್ಜುನನು ॥ ೭೪ ॥

೧೨೪

ಜಾಲಗಾರನ ಡೋಣಿಯಂತೆ, ಒಳಸುವ ಹುಟ್ಟಿನಂತೆ, ಬೈಚಿಟ್ಟನೆಲಿ ಯಂತೆ ಇದ್ದಡೇನು ಭೋಗಿಸಲರಿಯವಾಗಿ. ಲಿಂಗವು ಅಂಗದ ಮೇಲೆ ಇದ್ದಡೆ ಮನ ಸಂಗವ ಮಾಡಬಲ್ಲುದೇ? ಇವರಂದವ ನೋಡಾ! ಕೆಳಗೆ ನಿಂದು ಚಪ್ಪರಿ ಪಡೆ ತೊಟ್ಟು ಬಿಟ್ಟಿತ್ತೇ ಹಣ್ಣು? ಅದರೊಲುಮೆ ಈ ಪರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೭೫ ॥

೧೨೫

ಜೀವವ ಕಡಿದವಂಗೆ ಇಲ್ಲದ ಪಾಪ ಕತ್ತಿಗುಂಟೇ ಎಲೆ ದೇವ! ಎಚ್ಚವ ನಿದ್ದಂತೆ ಅಂಬಿಗೆ ಮುನಿವರೇ? ಕೊಲ್ಲಿಸಿದ ಅರಸಿದ್ದಂತೆ ಬಂಟಗೆ ಮುನಿವರೇ? ಎಲೆ ದಿವ್ಯಜ್ಞಾನವ ಪಾಲಿಸೋ! ಎನ್ನೊಡೆಯ ನಿಃಕಳಂಕ ಮಲ್ಲಿಕಾರ್ಜುನಾ! ನೀನಿದ್ದಂತೆ ಎನ್ನನೇಕೆ ಕಾಡಿಹೆ? ॥ ೭೬ ॥

೧೨೬

ಜಂಗಮಕ್ಕೆ ಇಕ್ಕಿದಲ್ಲದೆ ಒಲ್ಲೆನೆಂಬ ಕೃತ್ಯದ ಭಕ್ತರು ಕೇಳಿರೋ! ಆ ಜಂಗಮ ಮುಂದೆ ಬಂದು ನಿಂದಿರಲು ತಾ ಕುಳಿತಂತೆ ಇದ್ದು ಏನು ಬಂದಿರಯ್ಯಾ ಎಂದು ಉದಾಸೀನ ಪಕ್ಷ ತಾನಾಗಿ ಆಸನವ ತೊಲಗದೆ ಲೇಸ ನುಡಿಯದೆ ವಾಸಿವಟ್ಟಕ್ಕೆ ಕೂಳನಿಕ್ಕುವ ಧಾತರಿಗೆಲ್ಲಿಹದೋ ಜಂಗಮಲಿಂಗದ ಪೂಜೆ? ಮನ ವೊಲಿದು ಮಾಡುವ ಭಕ್ತನ ಸ್ಥಲ ತಾ ಹೋಹಲ್ಲಿ ಜಂಗಮ ಬಾಹಲ್ಲಿ ಇದಿ ರೇಳಬೇಕು. ಮೆಟ್ಟಡಿಯಂ ಕಳೆದು ಬಟ್ಟೆಯಂ ತೊಲಗಿ ಸಾಷ್ಟಾಂಗವೆರಗಿ

ಪ್ರತಿಶಬ್ದವಿಲ್ಲದೆ ಕೈಕೊಂಡು ತ್ರಿಕರಣ ಶುದ್ಧನಾಗಿ ಕೊಡುವುದ ಕೊಟ್ಟು ತನಗೆ ಬೇಕಾಮುದ ಕೇಳಿಕೊಂಡು ಭಾವಿಸಬಲ್ಲಡೆ ಅದೇ ಸದ್ಭಕ್ತಿ, ಅದೇ ಜೀವನ್ಮುಕ್ತಿ. ಇಷ್ಟವನರಿಯದೆ ಕಾಬರ ಕಂಡು ನೋಡುವರ ಮಾಡುವರ ನೋಡಿ ಮಾಡುವ ಮಾಟ ರಾಟಾಳದ ಕುಂಭದ ಪಾಡದಂತೆ. ಆಶಕರನೊಲ್ಲೆ ನೆಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೭೭ ॥

೧೨೭

ಜಂಗಮಭಕ್ತಿಯ ಮಾಡಿಹೆನೆಂದು ಮಹಾಮನೆಯ ಕಟ್ಟಿದ ಮತ್ತೆ ಹಗೆ ಕಪಟದ ತಾಳ್ದು ಶಿವರೂಪಿನಲ್ಲಿ ಬಂದು ಇರಿದಡೆ ಅಂಗವ ಕೊಡದಿದ್ದಡೆ ಭಕ್ತಂಗದೇ ಭಂಗ. ಕಪಟದಿಂದ ಸತಿಯ ಹಿಡಿದಡೆ, ಗದಕದಲ್ಲಿದ್ದನೆಂದಡೆ ತನ್ನ ಸತ್ಯಕ್ಕೆ ಭಂಗ. ಆಸೆಯಿಂದ ಬಂದು, ವೇಷವ ತಾಳಿ, ರಾಶಿಯ ಹೊನ್ನ ಬೇಡಿದರೆ ಮನದಲ್ಲಿ ಆಸೆ ತೋರಿದಡೆ ತಾ ಪೂಜಿಸುವ ಈಶ್ವರಂಗೆ ಭಂಗ. ಇದ ರಾಸೆಯ ಬಿಟ್ಟಲ್ಲದೆ ಜಗದೀಶನೊಲಿಯ. ಇದರಾಶೆಯ ಬಿಡದೆ ಮಾಡುವನ ಭಕ್ತಿ ಕೂಸು ಸತ್ತು ಹೇತದ ನಾತ ಬಿಡದಂತೆ ಅದರಿಗೇತಕ್ಕೊಲಿವ ನಿರ್ಜಾತ ನಿಃಕಳಂಕ ಮಲ್ಲಿಕಾರ್ಜುನಾ ? ॥ ೭೮ ॥

೧೨೮

ಜ್ಞಾನವನರಿದೆನೆಂದು ಕಾಯವ ದಂಡಿಸಲೇಕೆ? ನಾನೆಲ್ಲವನರಿದಿಹೆನೆಂದು ಸೊಲ್ಲುಸೊಲ್ಲಿಗೆ ಹೋರಲೇಕೆ ? ನಾನೆಲ್ಲವ ಕಳೆದುಳಿದೆನೆಂದು ಅಲ್ಲಿಗಲ್ಲಿಗೆ ಹೊಕ್ಕು ಬಲ್ಲೆನೆಂದು ಕಲ್ಲಿಗೆ ಸನ್ನೆಯ ಕೊಡುವನ ತೆರನಂತೆ. ಇಂತಿವರ ಬಲ್ಲ ತನ ಬೇರೆ ಸೂರೆಹೋಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೭೯ ॥

೧೨೯

ಡೊಂಬರ ಡೊಳ್ಳಿನ ಧ್ವನಿಯ ಕೇಳಿ ಬಂದಿತ್ತು ಉಪಚಾರವೆಂದು ಮುಂದೆ ಹರಿವವನಂತೆ ಅದರಂದವ ಕೇಳದೆ ಹಿಂದಮುಂದ ತಿಳಿಯದೆ ಕಂಡಕಂಡವರೊಳಗೆ ಬದ್ಧಕ್ಕೆ ಹೋರಾಡುವ ಭಂಡರಿಗೇಕೆ ಜ್ಞಾನ ನಿಃಕಳಂಕ ಮಲ್ಲಿಕಾರ್ಜುನಾ? ॥ ೮೦ ॥

೧೩೦

ತಥ್ಯವುಳ್ಳವಂಗೆ ತತ್ವದ ಮಾತ ನುಡಿದು ಹೊತ್ತು ಹೋರಲೇಕೆ? ಭಕ್ತಿ ಯುಳ್ಳವಂಗೆ ಕೃತ್ಯಕ್ಕೆ ಸಿಕ್ಕಿ ಸುಚಿತ್ತವನರಸಲೇಕೆ? ಚಿತ್ತದ ಕಲೆಯನರಿಯದೆ

ವಿರಕ್ತನೆನಿಸಿಕೊಂಬವಂಗೆ ತ್ರಿವಿಧಕ್ಕೆ ಹೊತ್ತು ನಿತ್ತರಿಸದಿರಲೇಕೆ? ಇವರೆಲ್ಲರ ಗುಣ ಕತ್ತೆ ಹೊರೆಯ ಹೊತ್ತಿಪ್ಪದನರಿಯದೆ ವಿಷಯಕ್ಕೆ ಹರಿವ ಅದರಚ್ಚಿಗವಂತಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೮೧ ॥

೧೩೧

ತನ್ನ ತಾನರಿದು ಕಂಡಿಹೆನೆಂಬರೆ ಆ ಭಾವ ಭ್ರಮೆಗೊಳಗು. ಭಕ್ತಿಯಲ್ಲಿ ನಡೆವ ಭಕ್ತರಿಗೆ ಇನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ?॥ ೮೨ ॥

೧೩೨

ತನ್ನಂಗವ ತಾ ಬಡಿದುಕೊಂಡು ಇದಿರಿನಲ್ಲಿ ನೋವ ಕೇಳುವನಂತೆ ತನ್ನ ದ್ರವ್ಯವ ತಾ ಸಿಕ್ಕಿ ಪರರುವಕ್ಕೆಯಲ್ಲಿ ಜರೆಯಿಸಿಕೊಂಬವನಂತೆ ವರ್ಮವನರಿಯದವನ ಸುವ್ವಾಸ್ಸ, ಹೆಪ್ಪ್ರಗೆ ಹುಯ್ಯಲಿನಲ್ಲಿ ಸಿಕ್ಕಿ ತನ್ನ ತಾನರಸಿ ಕೊಂಡಂತಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೮೩ ॥

೧೩೩

ತನು ನಿರ್ವಾಣವೋ? ಮನ ನಿರ್ವಾಣವೋ? ಭಾವ ನಿರ್ವಾಣವೋ? ತ್ರಿವಿಧವೂ ತನಗಿಲ್ಲದುದು ನಿರ್ವಾಣವೋ? ಇದ ನಾ ನುಡಿಯಲಂಜುವೆ. ತೊಟ್ಟ ಘಟಧರ್ಮಕ್ಕೆ ಬೇಡದ ಲೆಕ್ಕವಿಲ್ಲದ ಆಶೆ ಮನದೊಳಗೆ ಹೊಕ್ಕು ತಿದುಗಾಡುತಿಹ ಚಿಕ್ಕಮಕ್ಕಳಿಗೆಲ್ಲಿಯದೋ ನಿರ್ವಾಣ ಘಟ್ಟಿವಾಳಂಗಲ್ಲದೆ ನಿಃಕಳಂಕ ಮಲ್ಲಿಕಾರ್ಜುನಾ? ॥ ೮೪ ॥

೧೩೪

ತನುವ ನೆಮ್ಮಿ ಕಾಬುದೇನು? ಘನವ ನೆಮ್ಮಿ ಕಾಬುದೇನು? ಅರಿವ ನೆಮ್ಮಿ ಕಾಬಕುರುಹಿಲ್ಲ. ಬರುದೊರೆ ಹೋಯಿತ್ತಲ್ಲ ಎನ್ನ ಬಾಲಲೀಲೆ! ಅಗಣಿತ ಅಗೋಚರವ ನೆರೆ ಅರಿವುದಕ್ಕೆ ಕುರುಹು ತೋರುವರ ನಾ ಕಾಣೆ. ನಿಃಕಳಂಕ ಮಲ್ಲಿಕಾರ್ಜುನಾ ॥ ೮೫ ॥

೧೩೫

ತನುವಿನಾಶೆಯ ಬಿಟ್ಟು ಕಂಡಿಹೆನೆಂದಡೆ ಗುರುವಿನ ಹಂಗ ಬಿಡಬೇಕು. ಮನದಾಶೆಯ ಬಿಟ್ಟು ಕಂಡಿಹೆನೆಂದಡೆ ಲಿಂಗದ ಹಂಗ ಬಿಡಬೇಕು. ಸರ್ವ ವ್ಯಾಪಾರವ ಹಿಂಗಿ ಕಂಡಿಹೆನೆಂದಡೆ ಜಂಗಮದ ಹಂಗ ಬಿಡಬೇಕು. ಒಂದ ಬಿಟ್ಟು ಒಂದ ಕಂಡಿಹೆನೆಂದಡೆ, ಒಂದಕ್ಕೂ ನೆಲೆ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೮೬ ॥

೧೩೬

ತಾ ನಡೆಯಲರಿಯದೆ ಮೊನೆಯ ಮೆಟ್ಟಿ ಬಯ್ಯುವನಂತೆ. ತನ್ನ ಇಷ್ಟವ ತಾನರಿಯದೆ ಕೊಟ್ಟವನ ಕೆಟ್ಟವನ ಮಾಡುವನಂತೆ. ಈ ದೃಷ್ಟವನರಿಯದದು ಮೆಟ್ಟಿದ ಹೆಜ್ಜೆಯ ಮೆಟ್ಟುವ ಗಾಣದ ಎತ್ತಿನ ತೆರನಂತೆ. ಇವರಿಗೆ ಇಷ್ಟದ ಸುದ್ದಿ ಏಕೋ ನಿಃಕಳಂಕ ಮಲ್ಲಿಕಾರ್ಜುನಾ ॥ ೮೭ ॥

೧೩೭

ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ, ಮಾಯಿಕ, ಕಾರ್ಮಿಕ ಮಲಂಗಳು. ಇವ ಕೊಂದೆನೆಂದು ಮನಕ್ಕೆ ತೋರಿದಡೆ ತನ್ನ ಕೆಳಗಣ ಬೇಡುಗರೆ ಈ ಮೂವರು ? ಉಭಯಕ್ಕೆ ಒಡಲಿಲ್ಲ. ತನಗೆ ತೆರಹಿಲ್ಲ. ನಿಃಕಳಂಕ ಮಲ್ಲಿ ಕಾರ್ಜುನಾ ॥ ೮೮ ॥

೧೩೮

ತಾವು ಸತ್ಯರೆಂದು ನುಡಿಯದಿಪ್ಪುದೇ ಶೀಲ. ತಾವು ವ್ರತಿಗಳೆಂದು ಇದಿರಿಂಗೆ ಹೇಳದಿಹುದೇ ವ್ರತ. ಗುರು ಲಿಂಗ ಜಂಗಮವ ದೂಷಿಸದಿಹುದೇ ವ್ರತ. ಸಹಪಂತಿಯಲ್ಲಿ ವಿಶೇಷವ ಕೊಳದಿಪ್ಪುದೇ ವ್ರತ. ಮಾನ್ಯರ ಮನದ ಮನ್ನಣೆಯನರಿದಿಪ್ಪುದೇ ವ್ರತ. ಇಂತಪ್ಪ ವ್ರತಕ್ಕೆ ನಮೋನಮೋ ಎಂಬೆ. ಇಂತಲ್ಲದೆ ಜಗವ ಸಿಕ್ಕಿಸುವ ಬಹುಮುಖಿಗಳಿಗೆಲ್ಲಿಯದೋ ಮುಕ್ತಿ ? ಮಾತಿನಲ್ಲಿ ಭಕ್ತಿ, ಮನದಲ್ಲಿ ಕತ್ತರಿ, ಭಕ್ತಿಯಲ್ಲಿ ಬಲೆ, ಚಿತ್ತದಲ್ಲಿ ಕತ್ತಲೆ ಇಪ್ಪವರಿಗೆಲ್ಲಿಯದೋ ಭಕ್ತಿ. ಶೀಲ ? ಇಂತಿವ ಒಲ್ಲೆನಾಗಿ ಭಕ್ತಿ ನನಗಿಲ್ಲ. ಇನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ ? ॥ ೮೯ ॥

೧೩೯

ತೊಗಲ ಚೀಲದಲ್ಲಿ ಪರಶಿವನಿದ್ದಾನೆಂದು ಪೊಡವಿಯ ಮೃಢಭಕ್ತರೆಲ್ಲ ನುಡಿವುತಿಪ್ಪರು. ಇದ ನಾ ನುಡಿಯಲಂಜುವೆ. ಹಡಕಿಯ ಕೊಳಕಿನ ತೊಗಲ ಹೊದಿಕೆಯ ಹೊರೆಯೊಳಗೆ ಅರಸಿ ಕಂಡಿಹೆನೆಂಬ ಕುರುಕರ ನೋಡಾ. ಅರಿವಡೆ ತೆರಹಿಲ್ಲ ಕುರುಹಿಡುವದಕ್ಕೆ ನೆರೆ ನಾಮವಿಲ್ಲ. ಅರಿದಡೆ ತಾನೇ. ಮರದಡೆ ಮಾಯೆ. ಇದಕ್ಕೆ ಬಿಡುಗಡೆ ಇಲ್ಲ. ಮೃಡನ ಮುಂಡಿಗೆಯ ಹಾಕಿದೆ ಎತ್ತುವ ಕಡುಗಲಿಗಳ ಕಾಣೆ. ಎನ್ನೊಡೆಯಾ ಎನ್ನ ಬಿಡದಿರಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯೦ ॥

೧೪೦

ತೊಳೆದು ನೋಡಿಹೆನೆಂದಡೆ ಉದಕಕ್ಕೆ ಭೇದಿಸೆ. ಕಲ್ಲಿನಲ್ಲಿ ಒಡೆದು ನೋಡಿಹೆನೆಂದಡೆ ಶಿಲೆಯ ಮರೆಗೊಳಗಾದೆ. ಮನಸಿನಲ್ಲಿ ನೆನೆದು ನೋಡಿಹೆನೆಂದಡೆ ಬಚ್ಚಬರಿಯ ಬಯಲನೊಳಕೊಂಡೆ ಇನ್ನೇತರಿಂದ ಅರಿವೆ ? ಈ ಮನಸಿನ ಸೂತಕವ ಬಿಡಿಸಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯೧ ॥

೧೪೧

ತೋಹಿನ ಶಬರನಂತೆ, ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ. ದೊರೆವನ್ನಬರ ಭಕ್ತ. ದೊರೆವನ್ನಬರ ವಿರಕ್ತ. ಇಂತಿವರಿರವ ಕಂಡು ಬೆರಸಿದನಾದಡೆ ಎನಗೆ ಅಘೋರ ನರಕ. ನಿಮಗೆ ಎಕ್ಕಲ ತಪ್ಪದು. ಇದಕ್ಕೆ ಮುಂಡಿಗೆಯ ಹಾಕಿದೆ ಎತ್ತಿ ಶುದ್ಧರಾಗಿ ನಿಃಕಳಂಕ ಮಲ್ಲಿಕಾರ್ಜುನಾ ॥ ೯೨ ॥

೧೪೨

ತ್ರಿಕರಣ ಶುದ್ಧವಿಲ್ಲದವನ ಮಾಟ, ನೇಣು ಹರಿದ ಆಟ. ಭಯಭಕ್ತಿ ಇಲ್ಲದವನ ಕೈಯ್ಯ ದ್ರವ್ಯವ ಆಶೆ ಮಾಡುವ ಭವಭಾರಿಗೆ ಭವವೇ. ಅದಕ್ಕೇನೂ ಇಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯೩ ॥

೧೪೩

ದಂಡಕ್ಕಂಜಿ ಜಂಗಮಕ್ಕೆ ಇಕ್ಕುವ, ದೋಷಕ್ಕಂಜಿ ಧರ್ಮವ ಮಾಡುವ, ಬೇಡುವ ಕಾಟಕ್ಕಂಜಿ ತ್ರಿವಿಧವ ಕೊಡುವ, ನಾಟಕರಿಗೇಕೋ ಸದ್ಭಕ್ತಿ ? ಜಗದ ಪಾತಕರ ಘಾತಿಸದೆ ವಿಷಯವನರಿಯದೆ ಆಶೆಯಲ್ಲಿ ಸುಳಿವ ಭ್ರಾಂತು ಮಾರಿಗಳನೇನೆಂದರಿಯದೆ ವಸ್ತುವಿನಲ್ಲಿ ಒಪ್ಪುತ್ತಿಪ್ಪ[1] ಸಾತ್ವಿಕರನರಿದು ಸದ್ಭಕ್ತಿಯ ಮಾಡುವುದು ಅರಿದುದಕ್ಕೆ ಇದೇ ಕುರುಹೆಂದು ಮರೆಯೊಳಡಗಿ ಮೊರೆ ಇಡುತ್ತಿದ್ದೇನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯೪ ॥

೧೪೪

ನರ ಸುರ ಚೌರಾಶಿಗಳಿಗೆಲ್ಲ ನೀನಿತ್ತಲ್ಲದಿಲ್ಲ ನೋಡಯ್ಯಾ! ಬೊಮ್ಮ, ಹರಿ, ಸುರರಿಗೆಲ್ಲ ನೀನಿತ್ತಲ್ಲದಿಲ್ಲ ನೋಡಯ್ಯಾ ! ನೀಸಿದ್ದ ಶಿವಭಕ್ತರನು ಬಡವರೆಂಬ ಜಡ ಮತಿಗಳನೇನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ? ॥ ೯೫ ॥

---

೧. ಒತ್ತಿಪ್ಪ

೧೪೫

ನಾಣ್ಯವ ಹೊದ್ದೆನೆಂದರೆ ಬೆಲೆಯಲ್ಲಿ ಸಿಕ್ಕಿ ಸೀಳಬಹುದೇ ? ಬಾಳಾಂಬಕನ ಬಲ್ಲೆನೆಂದಡೆ ಕಾಳು ಮರ್ತ್ಯರಲ್ಲಿ ಸತ್ಯವ ಸೀಳಬಹುದೇ? ಇಂತಿವು ಸತ್ಯದ ಆಳುತನಕ್ಕೆ ಭಂಗ. ಜಾಣನಾಗಿರಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥೯೬॥

೧೪೬

ನಾ ತಪ್ಪಿ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ. ಕಣ್ಣಿನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ? ಇದು ಬಣ್ಣಗಾರಿಕೆಯಲ್ಲ ಸನ್ನದ್ಧರಿರವು ನಿಃಕಳಂಕ ಮಲ್ಲಿಕಾರ್ಜುನಾ ॥ ೯೭ ॥

೧೪೭

ನಾನರಿತು ನಿನ್ನ ಕುರಿತಿಹೆನೆಂದಡೆ ನೀನೆನಗೆ ಭಿನ್ನವಾದೆ. ನಿನ್ನನರಿತು ಎನ್ನನರಿದಿಹೆನೆಂದಡೆ ಪ್ರತಿರೂಪನಾದೆ. ನಾನಿನ್ನೇತರಿಂದರಿವೆ ? ಅರಿವುದಕ್ಕೆ ಮೊದಲೆ ಅಪ್ರಮಾಣವಾದೆ. ನಾಮರೂಪಿಗೆ ಬಂದು ಒಡಲಾದೆ. ಒಡಲು ವಿಡಿದು ಕಂಡಿಹೆನೆಂದಡೆ ಅಗೋಚರ. ಒಡಲು ಹರಿದು ಕಂಡಿಹೆನೆಂದಡೆ ನಿರವಯಾಂಗ. ಇನ್ನೇವೆನಿನ್ನೇವೆ ? ಸನ್ನದ್ಧ ಎನಗನ್ಯ ಭಿನ್ನನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯೮ ॥

೧೪೮

ನಾನರಿಯದೆ ಜ್ಞಾನಿಗಳ ಸಂಭಾಷಣೆಯನರಸುತ್ತಿದ್ದೇನೆ. ಕಲಿಗಳೊಂದಾಗಿ ಹೋಗಿ ಹಂದೆಯ ತಿಳಿವಂತೆ,ಹೊಳೆಯಲ್ಲಿ ತೇಲುವನ ಉಡಿಯ ಹಿಡಿದು ಹೋಹಂತೆ, ಅಂಧಕ ದೃಷ್ಟನ ಹಿಂದೆ ಇದ್ದು ನಡೆವಂತೆ ಎನ್ನಂಗದ ಸಂದ ಬಿಡಿಸಿ ಲಿಂಗದ ಲೀಲೆಯ ತೋರಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯೯ ॥

೧೪೯

ನಾನಾ ಸ್ಥಲಂಗಳ ಮಾತಿನ ಮಾಲೆಯಲ್ಲಿ ನಿಹಿತ ಅನಿಹಿತವೆಂಬ ಮಾತ ಬಣ್ಣಿಸಿ ನುಡಿವಲ್ಲಿ ಅದೇತರ ಸ್ಥಲ ? ಕಾಮದಲ್ಲಿ ಕಂದಿ, ಕ್ರೋಧದಲ್ಲಿ ಬೆಂದು, ನಾನಾ ಲೋಭ ಮೋಹಂಗಳಲ್ಲಿ ಸಲೆ ಸಂದು ಸಾವುತ್ತ, ಭಾವದ ಭ್ರಮೆಯಡಗದೆ, ಜೀವ ವಿಕಾರ ಹಿಂಗದೆ ಕೂರಲಗಿನ ಒಪ್ಪದಂತೆ ಕಣ್ಣಿಗೆ ನೋಟ, ಘಟದ ಅಸುವಿಂಗೆ ಓಟ, ಅಸಿಯ ಘಾತಕತನದಂತೆ. ಇವರ ಭಾವಕ್ಕೆ ಭಕ್ತರೆನಲಾರೆ. ಜ್ಞಾನಕ್ಕೆ ಗುರುವೆನಲಾರೆ. ಸದ್ಭಾವಕ್ಕೆ ಜಂಗಮವೆನಲಾರೆ.

ಎಂದಡೆ ಎನಗದೆ ಬದ್ಧವಲ್ಲ. ಅದು ಕಾಯಜೀವದ ಭೇದ. ಅದು ಸ್ಥಾಣು, ರಜ್ಜು ಎಣ್ಣೆ ಉರಿಯೋಗದ ಕೂಟ. ಆ ಗುಣ ಒಂದೂ ತೋರದೆ ಬೆಳಗೆಂಬ ನಾಮವಡಗಿತ್ತು. ಇಂತೀ ಉಭಯ ಭಿನ್ನವಾದಲ್ಲಿ ಎನ್ನ ಮರವೆಯೇ ನಿನ್ನ ಕೇಡು. ನಿನ್ನ ಮಲ ಎನ್ನ ಕೇಡು. ಅದು ದೃಕ್ಕು ಬೊಂಬೆಯಂತೆ ನಿಶ್ಚಯವಾದಲ್ಲಿ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ! ॥ ೧೦೦ ॥

೧೫೦

ನಾನೇಕೆ ಬಂದೆ ಸುಖವ ಬಿಟ್ಟು ? ಬಂದುದಕ್ಕೆ ಒಂದೂ ಆದುದಿಲ್ಲ. ಸಂಸಾರದಲ್ಲಿ ಸುಖಿಯಲ್ಲ, ಪರಮಾರ್ಥದಲ್ಲಿ ಪರಿಣಾಮಿಯಲ್ಲ. ಸಿಕ್ಕಿದೆ ಅರ್ತಿಗಾರಿಕೆ ಎಂಬ ಭಕ್ತಿಯಲ್ಲಿ. ದಾಸಿಯ ಕೂಸಿನಂತೆ ಒಡವೆಗಾಶೆಮಾಡಿ ಘಾಸಿಯಾದೆ ಮನೆಯೊಡೆಯನ ಕೈಯಲ್ಲಿ. ಈ ಭಾಷೆ ಇನ್ನೇಸು ಕಾಲ ನಿಃಕಳಂಕ ಮಲ್ಲಿಕಾರ್ಜುನಾ ? ॥ ೧೦೧ ॥

೧೫೧

ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ, ನೀನು ನಿರ್ಮಲದೇಹಿ. ನಿನಗೆ ಪೂಜೆಯ ಮಾಡುವಲ್ಲಿ ನಾನು ಕರ್ಮಜೀವಿ, ನೀ ಪುಣ್ಯಜೀವಿ. ನಿನಗೆ ಗಂಧವ ಹೂಸುವಲ್ಲಿ ನಾ ದುರ್ಗುಣಭಾವಿ, ನೀ ಸುಗಂಧಭಾವಿ. ನಿನಗೆ ಅಕ್ಷತೆಯನಿಕ್ಕುವಲ್ಲಿ ನಾ ಲಕ್ಷಿತ, ನೀ ಅಲಕ್ಷಿತ. ನಿನಗೆ ಧೂಪವನಿಕ್ಕುವಲ್ಲಿ ನಾ ಭಾವಿ, ನೀ ನಿರ್ಭಾವಿ. ನಿನಗೆ ದೀಪವನೆತ್ತುವಲ್ಲಿ ನಾ ಜ್ಯೋತಿ, ನೀನು ಬೆಳಗು. ಇಂತೀ ಭಾವಂಗಳಲ್ಲಿ ಭಾವಿಸಿ ಕಂಡಿಹೆನೆಂದಡೆ ಭಾವಕ್ಕೆ ಅಗೋಚರನಾಗಿಪ್ಪೆ. ನಿನ್ನರಿವುದಕ್ಕೆ ತೆರನಾವುದೆಂದಡೆ ಗುರುವಿಗೆ ತನು, ನಿನಗೆ ಮನ, ಜಂಗಮಕ್ಕೆ ಧನ, ತ್ರಿವಿಧಕ್ಕೆ ತ್ರಿವಿಧವನಿತ್ತು, ದಗ್ಧ ಪಟದಂತೆ ರೂಪಿಂಗೆ ಹೊದ್ದಿಕೆಯಾಗಿ ಕಲ್ಲಿಗೆ ಹೊದ್ದದಿಪ್ಪ ಅಂಗ ಸದ್ಭಕ್ತನ ಸ್ಥಲ. ಆ ಭಕ್ತನಲ್ಲಿ ತಪ್ಪದಿಪ್ಪೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೨ ॥

೧೫೨

ನಿಶ್ಚಟ ಭಾಷೆಯ ನುಡಿದ ಮತ್ತೆ ರಣದಲ್ಲಿ ವಾಸಿಗೆ ಸಾಯಬೇಕು. ಈಶಲಾಂಛನವ ಹೊತ್ತಮತ್ತೆ ಸತ್ಯದ ವಾಸಿಗೆ ಸಾಯದ ವೇಷಧಾರಿಗಳು ಅವರೇತಕ್ಕೆ ಬಾತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೩ ॥

೧೫೩

ನಿಷ್ಠೆಯ ಹರಿದು ಭಕ್ತಿ ಎಂಬ ತುರೀಯದಲ್ಲಿ ಸಿಕ್ಕಿ, ಸಾಯಲಿಲ್ಲದ ವಿರಕ್ತಿಯ ಕಟ್ಟಿಕೊಂಡು ಮಾಡುವ ಸದಾನಂದನ ಇರವು ಹೇಗಿರಬೇಕೆಂದರೆ, ಬಂದುದನು ಇಲ್ಲವೆನ್ನದೆ ಬಾರದುದ ಬಯಸದೆ ಘಟದಲ್ಲಿ ಮನ ಸಂದೇಹಿಸದೆ ಜಗದಲ್ಲಿ ಸುಳಿವ ಆಟದವರ ನೋಡುತ್ತ, ಉಣಬಂದವರಿಗಿಕ್ಕಿ ಬೇಡ ಬಂದ ವರಿಗೆ ಕೊಟ್ಟು ಆರೂಢನರಿವುದು ಶೋಧಿಸಿ ಮಾಡುವದು ನಿಷ್ಪತ್ತಿ ನಿರವಯ ಭಕ್ತಾನಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೪ ॥

೧೫೪

ನೀರಿನ ಮೇಲಣ ತೆಪ್ಪ ಒಪ್ಪವಾಗಿ ಹೋಹುದು ತೆಪ್ಪದ ಗುಣವೋ? ಅಪ್ಪುವಿನ ಗುಣವೋ? ಮೇಲಿದ್ದು ಒತ್ತುವನ ಗುಣವೋ? ಇಂತೀಭೇದವ ಭೇದಿಸಿ ನೀರ ಬಟ್ಟೆಯಲ್ಲಿ ಹೋಹನ ಯುಕ್ತಿ ಇಷ್ಟದ ಪೂಜೆ, ದೃಷ್ಟದ ನಿಷ್ಠೆ, ನಿಷ್ಠೆಯ ಶ್ರದ್ಧೆ, ಶ್ರದ್ಧೆಯ ಸದಮಲದಲ್ಲಿ ತೊಳಗಿ ಬೆಳಗುವ ಬೆಳಗು, ಆ ಕಳೆ ಎನ್ನಲ್ಲಿ ಕಾಂತಿ ತಲೆದೋರೆ ಕರಣಂಗಳ ವೇಷದ ಪಾಶವು ಹರಿಗು ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೫ ॥

೧೫೫

ನೀರೊಳಗಣ ಶಿಲೆಯ ಒಡೆಯರೆಲ್ಲರು ಕೂಡಿ ಅದರ ವರ್ಣವಿಂತೆಂದಡೆ ಅದು ಸಾರಾಯವಾಯಿತ್ತೇ? ಮೀರಿದ ಶರಣರೆಲ್ಲರು ಕೂಡಿ ಗುರು ಕೊಟ್ಟ ಲಿಂಗವ ಸೇರುವ ಸಾರಾಯವ ಬಲ್ಲಡೆ? ಹುತ್ತವ ಬಡಿದಡೆ ಹಾವು ಸತ್ತು ಇದು ನಿಶ್ಚಯವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೬ ॥

೧೫೬

ಪಟ ಬಾಲಸರದ ಕೂಡಿದ್ದಡೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಖೇಚರತ್ವದಲ್ಲಿ ಆಡಲರಿಯದಂತೆ ಹೊರಗಣ ಮಾತಿನಿಂ ಗುರುವೆಂದು ಶರ ಣೆಂದಡೇನಾಯಿತ್ತು? ಕೈಯಲ್ಲಿ ಲಿಂಗವ ಹಿಡಿದುಕೊಂಡು ಕಣ್ಣಿನಲ್ಲಿ ನೋಡಿ ಮನಮುಟ್ಟದಿದ್ದಡೇನಾಯಿತ್ತು? ಖ್ಯಾತಿ ಲಾಭಕ್ಕೆ ಜಂಗಮಕ್ಕೆ ಧನವ ಕೊಟ್ಟಡೇನಾಯಿತ್ತು? ಇದು ಕಾರಣ ಉಸುರ ಹಿಡಿದಡೆ ದ್ವಾರಗಳೆಲ್ಲವು ಮುಚ್ಚುವ ತೆರನಂತೆ, ಮಹಾಘನವನರಿದಲ್ಲಿಯೇ ತ್ರಿವಿಧವೂ ಸಮರ್ಪಣ. ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸ್ಥಲನಿರ್ದೇಶ ॥ ೧೦೭ ॥

೧೫೭

ಪರಬ್ರಹ್ಮವ ನುಡಿಯುತ್ತ ಪರದ್ರವ್ಯಕ್ಕೆ ಕೈಯಾಂತು ಬೇಡುತ್ತ ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ ಎಂಬ ತೊರೆಯು ಹಾಯಬಾರದೆ ಹರಿವುತ್ತಿದೆ. ಮತ್ತೇತಕಯ್ಯಾ ಪರಬ್ರಹ್ಮದ ಮಾತು? ಇದು ಎನಗೆ ಹೇಸಿಕೆಯಾಯಿತ್ತು. ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೮ ॥

೧೫೮

ಪಾದತೀರ್ಥವ ಕೊಂಡಲ್ಲಿ ಬ್ರಹ್ಮಂಗೆ ಹೊರಗು. ಪ್ರಸಾದವ ಕೊಂಡಲ್ಲಿ ವಿಷ್ಣುವಿಂಗೆ ಹೊರಗು. ಮಹದ ಒಳಗನರಿದಲ್ಲಿ ರುದ್ರಂಗೆ ಹೊರಗು. ಇಂತೀ ಭಾವ ಭೇದವನರಿಯದೆ ಹುತ್ತವ ಬಡಿದರೆ ಸರ್ಪ ಸಾಯಬಲ್ಲುದೆ? ಭಕ್ತನೆಂದರೆ ಶಿವನೊಪ್ಪುಗೊಂಬನೇ ನಿಶ್ಚಟರನಲ್ಲದೆ? ನಿಃಕಳಂಕ ಮಲ್ಲಿಕಾರ್ಜುನನವರ ಬಲ್ಲನಾಗಿ ಒಲ್ಲನು ॥ ೧೦೯ ॥

೧೫೯

ಪಾಪಪುಣ್ಯವಿಲ್ಲವೆಂದು ನುಡಿವ ಕಾಕರ ಮಾತ ಕೇಳಲಾಗದು. ಅವರು ಇದಿರಿಗೆ ನಿರಾಶೆಯ ಹೇಳಿ ತಾವು ಆಶೆ ಎಂಬ ಪಾಶದಲ್ಲಿ ಕಟ್ಟುವೊಡೆದ ವೇಷಧಾರಿಗಳು. ಇದ ಕಂಡು ನಾಚಿತ್ತೆನ್ನ ಮನ ನಿಃಕಳಂಕ ಮಲ್ಲಿಕಾರ್ಜುನಾ ॥೧೧೦॥

೧೬೦

ಪಾಪಪುಣ್ಯವೆಂದು ಹೇಳುವ ಕೂಪರಪ್ಪ ಭಕ್ತರು ಕೇಳಿರಣ್ಣಾ! ಎನಗೆ ನನ್ನ ಕಾಣದೆ ನಿಂದಿಸುವನಲ್ಲ. ಕಂಡು ನುಡಿವನಲ್ಲ. ಅಂದಗಾರಿಕೆಯಲ್ಲಿ ನಡೆವನಲ್ಲ. ಉಂಬಾಗ ಜಂಗಮವೆಂದು ಸಂಜೆಗೆ ಕಳ್ಳನೆಂದು ಹಿಂಗಿ ನುಡಿವನಲ್ಲ. ವಂದಿಸಿ ನಿಂದಿಸುವ ಸಂದೇಹದವನಲ್ಲ. ಎನಗುಂದುಂದಿಗೆ ನೂರಿಪ್ಪತ್ತು ಸಂದಿತ್ತು. ಎನ್ನ ನಿನ್ನ ಬಂಧವ ಹೇಳಿರಣ್ಣಾ! ದ್ವಿತೀಯ ಶಂಭು ಬಸವಣ್ಣ ಮೊದಲಾದ ಅಸಂಖ್ಯಾತ ಪ್ರಮಥಗಣಂಗಳು ನೀವು ಹೋದ ಹೊಲಬಿನ ಹಾದಿಯಲ್ಲದೆ, ಎನಗೊಂದು ಹಾದಿ ಇಲ್ಲ. ಬೊಂಬೆಗೆ ಸ್ವತಂತ್ರವಿಲ್ಲ ಆಡಿಸುವ ಸೂತ್ರಧಾರಿಗಲ್ಲದೆ. ಐದರಲ್ಲಿ ಹುದುಗಿ ಇಪ್ಪತ್ತೈದರಲ್ಲಿ ಕೂಡಿ ಒಂದರಲ್ಲಿ ಉಳಿದು ನಿಜ ಸಂದಿಯಲ್ಲಿ ನಿಂದು ವಂದನೆಯ ಮಾಡುತ್ತಲಿದ್ದೇನೆ. ಇದರಂದವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೧ ॥

೧೬೧

ಪೂಜೆಯ ಮಾಡುವಲ್ಲಿ ಪುಣ್ಯವನರಿಯದೆ ಮಾಡಬೇಕು. ಹೆಣ್ಣು ಮಣ್ಣು ಹೊನ್ನು ಕೊಡುವಲ್ಲಿ ಹಮ್ಮು ಬಿಮ್ಮಿಲ್ಲದಿರಬೇಕು. ಎರಡೂ ತಲೆ ದೋರದೆ ಒಂದು ನಾಮನಷ್ಟವಾಗಿ ಇಂತಿವ ಕಳೆದುಳಿದ ಮತ್ತೆ ಹೋದ ಹೊಲಬಿಲ್ಲ. ಕೊಟ್ಟುಕೊಂಡಿಹೆನೆಂಬ ಕೊಳುವಡೆ ಇಲ್ಲ ನಿಃಕಳಂಕ ಮಲ್ಲಿ ಕಾರ್ಜುನಾ ॥ ೧೧೨ ॥

೧೬೨

ಪೂಜೆಯಿಂದ ತಾ ಪೂಜ್ಯವಂತನಾದಿಹೆನೆಂದು ಮಾಡುವನಿರವು, ಹೊಲತಿ ತನ್ನ ಹೊಲೆಯ ಮರೆದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟು ವಂತೆ ಆ ವಿಧಿ ನಿನಗಾಯಿತ್ತು ತ್ರಿಕರಣ ಶುದ್ಧವಿಲ್ಲವ ಪೂಜೆ. ಇವರು ಕೆಟ್ಟ ಕೇಡಿಂಗೆ ಇನ್ನೇವೆ ನಿಃಕಳಂಕ ಮಲ್ಲಿಕಾರ್ಜುನಾ ? ॥ ೧೧೩ ॥

೧೬೩

ಪೂರ್ವವಳಿದು ಪುನರ್ಜಾತರ ಮಾಡಿದೆವೆಂಬಿರಿ. ಪೂರ್ವವಳಿದುದಕ್ಕೆ ಭವ ಹಿಂಗಬೇಕು. ಪುನರ್ಜಾತನಾದ ಮತ್ತೆ ಪುನರಪಿ ಇಲ್ಲದಿರಬೇಕು. ಹೀಗಲ್ಲದೆ ಗುರುಕರಜಾತರಾಗಬಾರದು. ತಾವನರಿದು ಸರ್ವೇಂದ್ರಿಯವ ಮರೆದು ಆಳಿ ಉಳಿವ ಉಭಯವನರಿದು ಸುಖ ನಿಶ್ಚಯ ಜ್ಯೋತಿರ್ಮಯ ಪ್ರಕಾಶಿತಂಗಲ್ಲದೆ, ಪಿಡಿದ ಜನ್ಮವ ಕಳೆದುಳಿಯಬೇಕು. ಹೀಗಲ್ಲದೆ ಗುರುಸ್ಥಲ ವಿಲ್ಲದಾಗ ತ್ರಿವಿಧಕ್ಕೋಲು ಅದಾರಿಗೆ ದೃಷ್ಟ ಇನ್ನಾರಿಗೆ ಹೇಳುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೪ ॥

೧೬೪

ಪ್ರಮಾಣಿಸಿ ಅವಧರಿಸಿ ಮಾಡುವಂಗೆ ಮಾಡುವ ದ್ರವ್ಯಕ್ಕೆ ಹೇಗೆಂದು ಮನಗುಂದದಿರಬೇಕು. ನೀಡಿದ ಮತ್ತೆ ನಿಜ ವಸ್ತುವಿನಲ್ಲಿರಬೇಕು. ಕೂಡಿದ ಮತ್ತೆ ಹಿಂದಣ ಹಂಗು ಹರಿದು ಸಂದಳಿದು ಅಂದಂದಿಗೆ ಬಂದುದ ಕಂಡು ಬಾರದುದಕ್ಕೆ ಭ್ರಮೆಯಿಲ್ಲದಿರಬೇಕು. ಇಂತೀ ಸ್ಥಲ ಭಕ್ತಂಗೆ ಮುಕ್ತಿಯನರ ಸಿಪ್ಪವಂಗೆ ಇದೇ ಸತ್ಯ ಸಮರ್ಪಣ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸದ್ಭಕ್ತಿ ನಿರ್ಲೇಪ ॥ ೧೧೫ ॥

೧೬೫

ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರೋ? ಏರಿ ನೀರು ಕುಡಿದಡೆ ಬಿಡಿಸುವರಿನ್ನಾರೋ? ಮಹಾಮೇರು ನಡೆವಡೆ ಪಥಕ್ಕೆ ಇಂಬುಗೊಡುವರಿನ್ನಾರೋ? ಅರಿದವ ಮರೆದವನಾದಡೆ ಅರಿವ ಹೇಳುವರಿನ್ನಾರೋ? ನಿಮ್ಮ ನಿಜವ ನೀವೇ ಬಲ್ಲಿರಿ. ನಾನಂಜುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೬ ॥

೧೬೬

ಬಲ್ಲವರೆಂದು ಎಲ್ಲಕ್ಕೆ ಹೇಳಿ ಅಲ್ಲಿ ಇಲ್ಲಿ ಎಲ್ಲಿಯೂ ಬೋಧಿಸಬಲ್ಲವನಾನೆಂಬ ಕಲ್ಲೆದೆಯವನೆ ಕೇಳಾ! ಲಿಂಗವ ಕುರಿತಲ್ಲಿ ಒಳಿತು ಹೊಲ್ಲೆಹ ಉಂಟೇ? ಜಂಗಮವ ಕುರಿತಲ್ಲಿ ಒಳಿತು ಹೊಲ್ಲೆಹ ಉಂಟೇ? ಪ್ರಸಾದವ ಕುರಿತಲ್ಲಿ ಒಳಿತು ಹೊಲ್ಲೆಹ ಉಂಟೇ? ಸಾಮಾನ್ಯ ಸಂದೇಹಕ್ಕೆ ಕರ್ತೃ ಭೃತ್ಯತ್ವವಲ್ಲದೆ ಜ್ಞಾನಾತ್ಮಂಗೆ ಸೊಮ್ಮು ಸಂಬಂಧವ ಭಾವಿಸಲಿಲ್ಲ. ಇಕ್ಕಿದ ಕರುವಿಗೆ ಟಿಪ್ಪಣವಲ್ಲದೆ ಮನಸ್ಸಿನಲ್ಲಿಪ್ಪುದಕ್ಕೆ ಒಪ್ಪ ಉಂಟೇ? ಇದು ತಪ್ಪದು ಕ್ರಿ ನಿರುತನಾದ ಭಕ್ತಂಗೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೭ ॥

೧೬೭

ಬಲುಗೈಯನೊಡನೆ ಹಗೆವಡೆದು ಕೊಲೆಗಂಜಲೇಕೆ? ಭವಸಾಗರದ ಬಲೆಗೆ ಸಿಕ್ಕಿ ನಿರ್ಗುಣದ ಒಲುಮೆಯ ಮಾತ ನಟಿಸಲೇಕೆ? ತ್ರಾಸಿಂಗೆ ಒಲವರ ಉಂಟೇ? ಭಾಷೆಗೆ ನುಡಿ ಎರಡುಂಟೇ? ಪರಮೇಶ್ವರನ ಅರಿದವಂಗೆ ಜಗದಾಶೆಯ ಮುಖವಿಲ್ಲವೆಂದೆ. ಅವ ಈಷಣ ತ್ರಯಕ್ಕೆ ಹೊರಗೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೮ ॥

೧೬೮

ಬಸವಣ್ಣ ಮೊದಲಾದ ಮಹಾಭಕ್ತರೆಲ್ಲ ಕಂಡರಯ್ಯಾ. ಮಹಾ ಕೈಲಾಸವೆಂಬ ಬೆಳ್ಳಿಯ ಬೆಟ್ಟವನೇರೆ ಒಳ್ಳಿಹ ಪದದಲ್ಲಿ ತಲ್ಲೀಯರಾದೆವೆಂದು ಬಲ್ಲತನವ ಮೆಚ್ಚಿ ಇರಲಾಗಿ, ಆ ಬೆಳ್ಳಿಯ ಬೆಟ್ಟ ಕಲ್ಲೋಲವಾಗಿ ಅಲ್ಲಿದ್ದವರನೆಲ್ಲಿಯು ಕಾಣೆ. ಇವರಿಗಿನ್ನೆಲ್ಲಿಯ ಮುಕ್ತಿ? ಜಲ್ಲೆಯ ಹಿಡಿದು ಎಲ್ಲೆಯ ಹಾಯಿಸುವನಂತೆ ಇವರೆಲ್ಲರು ಬಲ್ಲರೆ? ಬಲ್ಲ ಚೆನ್ನಬಸವಣ್ಣನಲ್ಲದೆ ಇವರೆಲ್ಲರ ನೊಲ್ಲೆನೆಂದೆ. ಬಲ್ಲಹರ ಬಲ್ಲಹ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೯ ॥

೧೬೯

ಬೆಲ್ಲದ ಗೊಟ್ಟು ಕಲ್ಲ ಬೀಜವಾದಡೆ ಸಿಹಿ ಕುಗ್ಗುವದೇ? ಮುಕುರದ ಸಾಕಾರ ಚಿಕ್ಕದಾದಡೆ ಪ್ರತಿಬಿಂಬ ಚಿಕ್ಕುದೇ? ಸಕಲರೊಳು ತನುಗೂಡಿ ವಿಕಸಿತನಾಗಿದ್ದಡೆ ಸಾಲದೇ? ಅವನಿರವು ಘೃತನೀರಿನಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೦ ॥

೧೭೦

ಭಕ್ತನಾದ ಮತ್ತೆ ಬಂಧುಗಳ ಬಿಡಬೇಕು. ವಿರಕ್ತನಾದ ಮತ್ತೆ ಧರಿತ್ರಿಯಲಿ ಸುಖಕ್ಕೆ ಸಿಕ್ಕಿ ಮತ್ತನಾಗದೆ, ಇಕ್ಕುವರ ಬಾಗಿಲ ಕಾಯದೆ ಸುಚಿತ್ತದಿಂದ ಬಂದ ಭಿಕ್ಷವ ಕೊಂಡು ಅನಿತ್ಯವ ಮರೆದು ಸತ್ತು ಚಿತ್ತಾದ ಭಕ್ತ ಜಂಗಮಕ್ಕೆ ನಿತ್ಯ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೧ ॥

೧೭೧

ಭಕ್ತ ತಾ ಮಾಡುವ ಕಾಯಕ ತನಗೆಂದಡೆ ಗುರುವಿಂಗೆ ದೂರ. ತನ್ನ ಸತಿಗೆಂದಡೆ ಲಿಂಗಕ್ಕೆ ದೂರ. ತನ್ನ ಸುತರಿಗೆಂದಡೆ ಜಂಗಮಕ್ಕೆ ದೂರ. ತನ್ನ ಬಂಧುಗಳಿಗೆಂದಡೆ ಸಂಗನಬಸವಣ್ಣ ಮೊದಲಾದ ಶರಣ ಸಂಕುಳಕ್ಕೆಲ್ಲಕ್ಕೂ ದೂರ. ನನಗೂ ದೂರ. ಎನ್ನೊಳಗಾದ ನಿಃಕಳಂಕ ಮಲ್ಲಿಕಾರ್ಜುನ ನಿನಗೂ ದೂರ ॥ ೧೨೨ ॥

೧೭೨

ಭಕ್ತರ ಪಾವನವ ಮಾಡಿಹೆವೆಂದು ಮೊತ್ತವ ಕೂಡಿ, ಚಿತ್ತಕ್ಕೆ ಬಂದಂತೆ ಕಂಡುದ ಬೇಡಿ, ಭಕ್ತರ ಭವವ ತೊಳೆದೆವೆಂದು ನಿಶ್ಚಯಿಸಿಕೊಂಡಿಪ್ಪ ಅಚ್ಚುಗದವರ ಕಂಡು ಬೆಚ್ಚಿದೆನಯ್ಯಾ! ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೩ ॥

೧೭೩

ಭಕ್ತರು ಭವಪಾಶದಲ್ಲಿದ್ದಹರೆಂದು . ಅವರ ತೆಗೆವುದಕ್ಕೆ ಸುಳಿವ ಜಂಗಮದ ಇರವೆಂತೆಂದಡೆ— ಆಶೆ ಎಂಬ ಪಾಶವ ಹರಿದು, ಈ ಷಣತ್ರಯದ ದೋಷವ ಪರಿದು, ತಾನೇತರ ಆಶೆ ಇಲ್ಲದೆ, ತನುವಿಂಗೆ ಶೀತೋಷ್ಣಾದಿ ಭೋಗಂಗಳೆಂಬ ಸುಖಂಗಳಂ ಮರೆದು, ಜಿಹ್ವೆಗೆ ಮಧುರ ರಸ ನಾನಾ ಪರಿಕರಂಗಳಂ ಮರೆದು, ಭಕ್ತರಿಗೆ ಇಚ್ಛೆಯಂ ನುಡಿವ ಕುಚಿತ್ತರಂ ಬಿಟ್ಟು, ಚಿತ್ತ ಶುದ್ಧವಾಗಿ ಇವ ನಿಶ್ಚಯವೆಂದರಿದ ಮತ್ತೆ ಮಚ್ಚರವೇಕೋ ನಾನಾ

ಮೋಹಂಗಳ ? ವಿರಕ್ತಿಯಿಂದ ಸುಳಿವ ಜಂಗಮಕ್ಕೆ ಮತ್ತೆ ನರರೊಂದಾಗಿ ಸುತ್ತಿ ಬಳಸಲೇಕೋ ? ಇದು ಕಾರಣ ಮರ್ಮವನರಿಯದೆ ಮಾಡುವ ಭಕ್ತ ಕರ್ಮಕ್ಕೊಳಗಾದ. ಧರ್ಮವನರಿಯದೆ ತಿರುಗುವ ಜಂಗಮ ಬ್ರಹ್ಮಸಿಗೊಳಗಾದ. ಇವರಿಬ್ಬರೂ ಕೆಟ್ಟ ಕೇಡ ನೋಡಾ ! ಬೆಚ್ಚಿದೆನಯ್ಯಾ ! ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೪ ॥

೧೭೪

ಭಕ್ತರೆಂಬವರೆಲ್ಲರು ಲೆಕ್ಕಕ್ಕೆ ಹಾಯ್ದು ದೃಷ್ಟವಪ್ಪ ಜಂಗಮದ ಕೈಯಲು ಕಷ್ಟತನಹವ ಊಳಿಗವ ಕೊಂಡು, ಮತ್ತೆ ಜಂಗಮನೆಂದು ಪ್ರಸಾದವನಿಕ್ಕಿಸಿ ಕೊಂಡುಂಬ, ಚಿಕ್ಕ ಸೂನೆಗಾರರ ನೋಡಾ. ಇಂತೀ ಹೊಟ್ಟೆಯ ಹೊರೆವ ಜಂಗಮಕ್ಕೆಯೂ, ಠಕ್ಕಿಂದ ಮಾಡುವ ಭಕ್ತಂಗೆಯೂ ಹುಚ್ಚುಗೊಂಡ ನಾಯಿ ಒಡೆಯನ ತಿಂದು, ಅವರಲ್ಲಿ ಮಿಕ್ಕುದ ನರಿ ತಿಂದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೫ ॥

೧೭೫

ಭಕ್ತಂಗೆ ಸದ್ಭಕ್ತಿಯ ಲಕ್ಷಣವೆಂತೆಂದಡೆ ಕಳ್ಳ ಹಾದರಿಗ ಹಾವಾಡಿಗ ಅವರಾರಾದಡು ಶಿವಲಾಂಛನವ ತಾಳ್ದು ಬಂದಲ್ಲಿ ಶಿವನೆಂದೇ ಪ್ರಮಾಣಿಸುವುದು. ಮಾಡುವಾತನ ಭಕ್ತಿ ಲಕ್ಷಣದ ಮರ್ಮವನರಿದು ಮಾಡುವ ಸದ್ಭಕ್ತನ ಇರವೆಂತೆಂದಡೆ,- ಒರತೆಯ ಘಟದಲ್ಲಿ ತೋರುವ ಚಿತ್ರ ಒಪ್ಪುವದೇ? ಕತ್ತಲೆಯ ಮನೆಯಲ್ಲಿ ಒಪ್ಪುವ ಚಿತ್ತಾರದಂತೆ, ಚಿತ್ತಾರದಲ್ಲಿ ಅಡಿಗಿಪ್ಪ ನಿಶ್ಚಯದ ಲೆಕ್ಕಣಿಕೆಯಂತೆ, ಚಿತ್ರದೊಳಡಗಿದ ನಿಶ್ಚಯದಂತೆ. ಹೀಗರಿದು ಮಾಡುವದೆ ಮರ್ಮಸ್ಥಲ. ಸಮ್ಮೋಹದಲ್ಲಿ ಮಾಡುವುದೇ ಭಕ್ತಿಸ್ಥಲ. ಇಂತೀ ಉಭಯದ ಮರ್ಮವನರಿವಲ್ಲದೆ ಭಕ್ತನಲ್ಲ ವಿರಕ್ತನಲ್ಲ. ನಿಃಕಳಂಕ ಮಲ್ಲಿಕಾರ್ಜುನಾ ॥೧೨೬॥

೧೭೬

ಭಕ್ತಿಯುಳ್ಳವಂಗೆ ನಿಷ್ಠುರದ ಮಾತೇಕೆಂಬರು. ನಾಲ್ಕರ ಮುಕ್ತಿಯ ಭಕ್ತರ ನಿಷ್ಠೆವಂತರಿಗಧಿಭಕ್ತಿ. ಅನಿತ್ಯವ ಹರಿದ ನಿಚ್ಚಟಂಗೆ ಮಿಥ್ಯವ ನಾರಾಡಿವಡೇನು ನುಡಿಯಲ್ಲಿ ಸತ್ಯವಿದ್ದ ಮತ್ತೆ. ಕಲ್ಲಿನ ಮನೆಯಲಿದ್ದವಂಗೆ ದಳ್ಳುರಿ ಬೀಳಿದ್ದಡೇನು, ಇವರೆಲ್ಲರ ಬಲ್ಲತನಕ್ಕಂಜಿ ನಾನೊಳ್ಳಿಹನೆಂದಡೆ ಆತನೆಲ್ಲಿಗೆ ಯೋಗ್ಯ ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೭ ॥

೧೭೭

ಭಕ್ತಿ ಎಂಬ ಪಾಶವ ಹೊತ್ತು ಮಾಡುವ ಭಕ್ತನ ಸತ್ಯವು ಹೇಗೆಂದಡೆ, ಲಾಂಛನವ ಹೊತ್ತು ಜಂಗಮ ಬಂದರೆ ಮುಯ್ಯಾಂತು ಅಡಿಗೆರಗಿ ಮೃಡನೆಂದೆ ಪ್ರಮಾಣಿಸಿ, ಮನದಲ್ಲಿ ಒಡಗೂಡಿ ಗುಡಿಗಟ್ಟಿ ಪುಳಕಂಗಳೇರಿ, ಎರಡಿಲ್ಲದೆ ತ್ರಿವಿಧಕ್ಕೆ ಬಿಡುವಿಲ್ಲದೆ ಒಡೆಯಂಗೆ ಒಡವೆಯಂ ಕೊಟ್ಟು ಅಡಿ ಎಡೆಯಲ್ಲಿಪ್ಪ ದೃಢಚಿತ್ತಂಗೆ ಎಡದೆರಹಿಲ್ಲದೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೮ ॥

೧೭೮

ಭಕ್ತಂಗೆ ಭಕ್ತಿಸ್ಥಲ. ಮಾಹೇಶ್ವರಂಗೆ ಮಹೇಶ್ವರ ಸ್ಥಲ. ಪ್ರಾಸಾದಿಗೆ ಪ್ರಸಾದ ಸ್ಥಲ. ಪ್ರಾಣಲಿಂಗಿಗೆ ಪ್ರಾಣಲಿಂಗ ಸ್ಥಲ. ಶರಣಂಗೆ ಶರಣ ಸ್ಥಲ. ಐಕ್ಯಂಗೆ ಮಹದೈಕ್ಯಸ್ಥಲ. ಇಂತೀ ಈರಾರು ಭೇದ ಮಿಶ್ರಂಗಳು ಕೂಡಿ, ತತ್ವ ಒಂದರಲ್ಲಯ್ದು ಆ ವಸ್ತುವಿಗೆ ಒಂದೇ ವಿಶ್ವಾಸದಲ್ಲಿ ಸಂಭವಿಸಿ ಲೇಪ ವಾಯಿತ್ತು. ಇಂತೀ ಗುಣ ಸ್ಥಲ ಲೇಪ ಐಕ್ಯ. ನಿಃಕಳಂಕ ಮಲ್ಲಿಕಾರ್ಜುನಾ ನಾಮವಡಗಿ ನಿರ್ನಾಮವಾದ ಭೇದ. ॥ ೧೨೯ ॥

೧೭೯

ಭಕ್ತಿಜ್ಞಾನಕ್ರಿಯೆಯ ಮಾಡುವ ಮಾಟಂಗಳಲ್ಲಿ, ಚಿತ್ತ ಶುದ್ಧವಿಲ್ಲದ ಸತಿಯಾದರೂ ಒಲ್ಲೆ. ಪುತ್ರ ಬಂಧುಗಳಾದರೂ ಒಲ್ಲೆ. ಇಂತಿವನರಿತು ಕೂಡಿದೆನಾದಡೆ ಎನ್ನ ಭಾವಕ್ಕೆ ಇದೇ ಭಂಗ. ಇದು ಪ್ರಸನ್ನವಪ್ಪ ಭಕ್ತಿಯ ಬೆಳೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೦ ॥

೧೮೦

ಭಕ್ತಿಮಂದಿರದಲ್ಲಿ ಪೂಜಿಸಿಕೊಂಬ ಜಂಗಮವ ನೋಡಯ್ಯಾ ! ಜಂಗಮ ವೆಂಬುದಕ್ಕೆ ನಾಚಿಕೆ ಅಯ್ಯಾ. ಭಕ್ತರ ಮಂದಿರಕ್ಕೆ ಹೂಕಾಯಿ ಹಣ್ಣು ಹುಲ್ಲ ಹೊರೆ ಕಟ್ಟಿಗೆ ಬೊಕ್ಕಸ ಪಹರಿ ಪಾಡಿತನ ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ ಒಡೆಯರೆನಿಸಿಕೊಂಬ ತುಡುಗುಣಿಗೆಲ್ಲಿಯದೋ ನಿಜ ಜಂಗಮ ಸ್ಥಲ. ಹೊಟ್ಟೆಯ ಕಕ್ಕುಲತೆಗೆ ಕಷ್ಟ ಜೀವವ ಹೊರೆವ ಹೆಬ್ಬೊಟ್ಟೆಯ ಡೊಂಬರ ಕಂಡು ಬಟ್ಟಬಯಲಾದೆಯೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೧ ॥

೧೮೧

ಭಕ್ತಿಯ ಮಾಡಿ ವಸ್ತುವ ಕಾಣಬೇಕೆಂಬರು ಕರ್ಮಕಾಂಡಿಗಳು ಭಕ್ತಿ ಇಲ್ಲದೆ ಚಿತ್ತದ ಗೊತ್ತನರಿಯಬೇಕೆಂಬರು ಅಧ್ಯಾತ್ಮಭವಕಾಂಡಿಗಳು. ದರ್ಪಣ ದಲ್ಲಿಪ್ಪ ಒಪ್ಪದ ಭೇದವ ಅದರ ಇಷ್ಟವಿಲ್ಲದೆ ದೃಷ್ಟವ ಕಾಬ ಪರಿ ಇನ್ನೆಂತೋ? ಮುಕುರದ ಅಂಗವಿದ್ದು ಪ್ರಕೃತಿಯ ತಮ ಮುಸುಕಿದಲ್ಲಿ ಮುಖದ ಸುಖ ನೆಲೆಯ ವಿಚಾರಿಸಬಹುದೇ ? ಸಕಲವೆಂದಡೆ ಇಷ್ಟ. ನಿಷ್ಕಲವೆಂದಡೆ ಅದರ ಅಭೀಷ್ಟ. ಈ ಉಭಯದ ತಟಗಾರದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿ ಧಾರೆಯ ಘಾಯಕ್ಕೆ ಇನ್ನೇತರ ಮದ್ದೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೨ ॥

೧೮೨

ಭಕ್ತಿಯಿಂದ ವೈರಾಗ್ಯವ ತೋರಿ ಮಾಡಿದ್ದೆಲ್ಲವು ಬ್ರಹ್ಮನ ಒಡಲು. ಜ್ಞಾನದಿಂದರಿದು ಮಾಡಿದೆನೆಂಬುದೆಲ್ಲ ವಿಷ್ಣುವಿನ ಒಡಲು. ವೈರಾಗ್ಯದಿಂದ ಉತ್ಪತ್ತಿಗೀಡಾಯಿತ್ತು. ಧರ್ಮವ ಕುರಿತು ಮಾಡುವ ಭಕ್ತಿ ವಿಷ್ಣುವಿನ ಅವತಾರಕ್ಕೆ ಸಲೆ ಸಂದಿತ್ತು. ಬಯಕೆ ಹಿಂಗಿ ಮಾಡುವ ಭಕ್ತಿ ರುದ್ರನ ಆವೇಶಕ್ಕೆ ಒಳಗಾಯಿತ್ತು. ಇಂತೀ ಭಕ್ತಿ ಜ್ಞಾನ ವೈರಾಗ್ಯವೆಂಬುದು ಸಂದಿಲ್ಲದ ಸಂದೇಹದಲ್ಲಿ. ಬಪ್ಪುದು ತಪ್ಪದೆಂದು ಸರ್ಪನ ಮುಂಡಿಗೆಯ ಹಾಕಿದೆ. ಎತ್ತಬಲ್ಲ ದೃಷ್ಟವಂತರು ಸರ್ಪನೇಳುವಕ್ಕೆ ಮೊದಲೆ ಎತ್ತಿರಣ್ಣಾ. ಎತ್ತಿ ಹೇಳಿಗೆಯ ಕೂಡೆ ಮುಚ್ಚಳವನಿಕ್ಕಿದ ಮತ್ತೆ ಮುಕ್ತರ ಮುಕ್ತಿ ಇಲ್ಲ ವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೩ ॥

೧೮೩

ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗು ಬೇಕು. ಆತ್ಮ ಉಳ್ಳನ್ನಕ್ಕ ಅರಿವೆಂಬುದ ವಿಚಾರಿಸಬೇಕು. ಮರ್ತ್ಯವೆಂಬುದ ಬಲ್ಲನ್ನಕ್ಕ ಕರ್ಕಶದ ಜಗ. ಇದುಕಾರಣ ಕೈಲಾಸವೆಂಬ ಬಟ್ಟೆಯನರಸಬೇಕು. ಎನ್ನ ಸತ್ಯಕ್ಕೆ, ಎನ್ನ ಭಕ್ತಿಗೆ, ಎನ್ನ ಮನಕ್ಕೆ, ಎನ್ನ ಮುಕ್ತ್ಯಾಂಗನೆಗೆ, ಎನ್ನ ನಿಶ್ಚಯಕ್ಕೆ ಒಂದು ಗೊತ್ತ ತೋರಾ ! ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಹೇಳಾ ! ॥೧೩೪॥

೧೮೪

ಭಕ್ತನು ವಿಶ್ವಾಸಸ್ಥಲ ಗುರುವೆಂದು ಪ್ರಮಾಣಿಸಿದಲ್ಲಿ ಪ್ರತ್ಯುತ್ತರವಿಲ್ಲದೆ ನಿಗರ್ವಿಯಾಗಿರಬೇಕು. ಜಂಗಮವೆಂದು ಪ್ರಮಾಣಿಸಿದಲ್ಲಿ ತ್ರಿವಿಧದ ಹಂಗಿಲ್ಲದಿರಬೇಕು. ಲಿಂಗವೆಂದು ಪ್ರಮಾಣಿಸಿದಲ್ಲಿ ಸಂದೇಹವಿಲ್ಲದಿರಬೇಕು. ಇವರಂದ ಒಂದೂ ಇಲ್ಲದೆ ಭಕ್ತರಾದೆವೆಂಬ ಮಿಟ್ಟೆಯ ಭಂಡರ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೫ ॥

೧೮೫

ಭವ ಘೋರಕ್ಕಾರದೆ ಭವದಾಳಿಯ ತೊಡೆದೆನಯ್ಯಾ. ಬಡವನೆಂದು ನಿಮ್ಮವರು ನಿದಾನವನೀವರಯ್ಯಾ. ನಾ ಬಡವನಾದಡೆ ನೀ ಬಡವನೇ? ಎನ್ನ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೬ ॥

೧೮೬

ಭಿತ್ತಿಯ ಮೇಗಳ ಚಿತ್ರದ ಬೊಂಬೆಯ ಕೈಯಲ್ಲಿ ಹೊತ್ತುವ ದೀಪವಿದ್ದಡೇನು ಕತ್ತಲೆಯ ಬಿಡಿಸ ಬಲ್ಲುದೇ? ನಿಷ್ಠೆಹೀನನಲ್ಲಿ ಇಷ್ಟಲಿಂಗ ಇರುತಿರಲಿಕ್ಕೆ ದೃಷ್ಟವ ಬಲ್ಲನೇ? ಭಕ್ತಿಹೀನಂಗೆ ನಿತ್ಯಾನಿತ್ಯವ ಹೇಳಲಿಕ್ಕೆ ನಿಶ್ಚಯಿಸ ಬಲ್ಲನೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೭ ॥

೧೮೭

ಭೃತ್ಯನಾದಲ್ಲಿ ಕರ್ತೃವಿನ ಕೈಯಲ್ಲಿ ಊಳಿಗವ ಕೊಂಬ ಭಕ್ತರ ಕಂಡು ನಾಚಿತ್ತೆನ್ನ ಮನ. ಆಳು ಅರಸಿನ ಕೈಯಲ್ಲಿ ಊಳಿಗವ ಕೊಂಬಂತೆ ತೊತ್ತು ಒಡತಿಯ ಕೈಯಲ್ಲಿ ಭೃತ್ಯವ ಮಾಡಿಸಿಕೊಂಬಂತೆ ಮೊದಲಿಗೆ ಮೋಸವಾದಲ್ಲಿ ಲಾಭವನರಸಿದರುಂಟೇ? ಅರ್ತಿಕಾರರೆಲ್ಲಕ್ಕೆ ನಿಶ್ಚಯದ ಭಕ್ತಿಯುಂಟೇ? ಹೊತ್ತು ಹೋಕರ ಭಕ್ತರೆಂದರೆ ಒಪ್ಪುವರೇ ನಿಶ್ಚಟದ ಶರಣರು? ಅಚ್ಚು ಮುರಿದ ಹಾರಕ್ಕೆ ಎತ್ತಿನ ಹಂಗಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೮ ॥

೧೮೮

ಮಣ್ಣು ದೇಹ, ಹೊನ್ನು ಪ್ರಾಣ, ಹೆಣ್ಣು ಸರ್ವ ಪ್ರಪಂಚು. ಈ ಮೂರರೊಳಗೊಂದ ಬಿಟ್ಟು ಒಂದ ಕಂಡಿಹೆನೆಂದಡೆ ಹಿಂಗಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೯ ॥

೧೮೯

ಮರ್ತ್ಯಕ್ಕೆ ಸಂಗನ ಬಸವಣ್ಣ ಬಾಹಲ್ಲಿ ಮೂರು ಮಹಾ ರತ್ನವ ಕಂಡು ಒಂದ ಸಿರಿಯ ಕೈಯಲ್ಲಿ ಕೊಟ್ಟ, ಒಂದ ಗಿರಿಯ ಕೈಯಲ್ಲಿ ಕೊಟ್ಟ, ಒಂದ ಉರಿಯ ಕೈಯಲ್ಲಿ ಕೊಟ್ಟ. ಇಂತೀ ಮೂರು ರತ್ನಕ್ಕೆ ಲಯ ಈರೇಳು ಲೋಕ, ಹದಿನಾಲ್ಕು ಭುವನವೆಲ್ಲವು. ಆ ಮೂರು ರತ್ನದ ಬೆಳಗಿನಲ್ಲಿ ತೊಳಗಿ ಅಡಗುತ್ತಿಪ್ಪರ ನೋಡಾ ! ಒಂದು ರತ್ನ ಬಂದ ಬೆಳಗು, ಒಂದು ರತ್ನ ಮುಂದ ಬೆಳಗು, ಒಂದು ರತ್ನ ಸಂದೇಹ ಬೆಳಗು. ಇಂತೀ ರತ್ನವ ತಂದ ಸಂಗನಬಸವಣ್ಣ ಸಂಗಮೇಶ್ವರ ದೇವರಲ್ಲಿ ಐಕ್ಯವಾದೆನೆಂದು ಹರುಷ ಬಡುತ್ತಿದ್ದ. ಇದ ಕಂಡು ಎನ್ನ ಮನಕ್ಕೆ ನಾಚಿಕೆಯಾಯಿತು. ಮರ್ಮವ ನರಿದರೆ ಇಕ್ಕಿ ಕೆಟ್ಟೆನೆಂದು ತನ್ನ ಕಾಯದೆ ಇದಿರು ಕಾಯ್ವ ಶೂರನಂತಿರ ಬೇಕು. ತಾ ರಣದಲ್ಲಿ ನಿಂದು ಅಂಜಿ ಹೋಗುತ್ತಿಪ್ಪವರ ಕಂಡು, ಅಂಜದಿರಿ ಎಂದು ಹೇಳುವ ಧೀರನಂತಿರಬೇಕು. ಇಂತೀ ಮರ್ಮವನರಿಯದೆ ಮಾಡಿ ಧರ್ಮಕ್ಕೊಳಗಾದ ಜಸವಣ್ಣನ ಹಾದಿಯಂ ಬಿಡಿಸಿ, ಚೆನ್ನಬಸವಣ್ಣನ ಹಾದಿಯಂ ತೋರಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೦ ॥

೧೯೦

ಮತ್ಸ್ಯದ ಮನೆಯ ಕೀಟಕನಂತೆ ಸಂಸಾರದಲ್ಲಿಯೇ ಸಾವುತ್ತ, ತೂಳದ ಬೀರನಂತೆ ಅರಿದಲ್ಲಿ ಭಕ್ತನಾಗಿ, ಮರೆದಲ್ಲಿ ಮಾನವನಾಗಿ, ಇತ್ತಲೆಯ ಸರ್ಪನಂತೆ, ಎತ್ತ ನೋಡಿದತ್ತ ಕತ್ತಲೆಯ ತೆರದಂತೆ ಇಪ್ಪವರ ಕಂಡು ಭಕ್ತರೆನಲಾರೆ ವಿರಕ್ತರೆನಲಾರೆ. ಭಕ್ತಿಯುಳ್ಳವ ಮಿಥ್ಯವೆನಿಸಿಕೊಳ್ಳಲಾಗದು, ಆ ಉಭಯ ಕೆಟ್ಟಕೇಡು ಎನ್ನ ಸ್ವಂತದ ಹಾನಿ. ಇದಕ್ಕೆ ನಿಶ್ಚಯವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೧ ॥

೧೯೧

ಉದ್ಯಾಪನ ವ್ಯಾಪಾರ ಕೃತಭೇದ ಸರ್ವವನರಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗನಾಗಿ ತಾಮಸ ನಿರಸನವೆಂಬ ಭೂತ ಭವಿಷ್ಯ ವರ್ತಮಾನಕ್ಕೆ ಹೊರಗಾಗಿನಿಂದ ನಿಜ ತತ್ವದಂಗಕ್ಕೆ ಬೇರೆ ಮಂಗಲೋತ್ತರ ವನರಸಲಿಲ್ಲ. ಲಿಂಗವ ಅಂಗ ಬಾಹ್ಯದಲ್ಲಿ ಹಿಂಗಿದೆನೆಂಬ ಭ್ರಾಂತಿ ಇಲ್ಲ. ಆತನ ಲಿಂಗವೇ ಅಂಗವಾದ ಕಾರಣ ಪೃಥಕ್ ಎಂಬುದಿಲ್ಲ. ಆತನಂಗವೇ ಮಂಗಳ ದೊಡಲು ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೨ ॥

೧೯೨

ಮನಸ್ಸು ಏತರಿಂದ ಅರಿವುದು ಅಂಗವ? ಬುದ್ಧಿ ಏತರಿಂದ ಅರಿವುದು ಮನಸ್ಸು? ಚಿತ್ತ ಏತರಿಂದ ಅರಿವುದು ಬುದ್ಧಿಯ? ಅಹಂಕಾರವ ಏತರಿಂದ ಅರಿವುದು ಚಿತ್ತವು? ಈ ಚತುಷ್ಟಯವ ಏತರಿಂದರಿವೆ? ಒಂದಕ್ಕೊಂದು ಹಂಗಿಲ್ಲದ ಕಾಣೆ. ಒಂದನೆಣಿಸಿ ಎಣಿಕೆ ತುಂಬಿದ ಮತ್ತೆ ಮತ್ತೊಂದಕ್ಕೆ ಸಂಗವಿಲ್ಲದ ಲೆಕ್ಕ. ಇದರಂದದ ತೆರ ಲಿಂಗ. ಇದ ಸಂಗೊಳಿಸಾ ಭಂಗಿತನಾಗಲಾರೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೩ ॥

೧೯೩.

ಮಾಯಾತ್ಮನು ಮಾಯವೆಂಬ ಭವ ಜಾಲದಲ್ಲಿ ಬಂದು ಘೋರ ಸಂಸಾರವ ಕಂಡು ನಾಚದೇಕೆನ್ನ ಮನ? ಹೇಸದೇಕೆನ್ನ ಮನ? ತಿತ್ತಿಯ ಹಿಡಿದ ಮಾದಿಗನಿಗೆ ಹೊತ್ತಿಹ ಮೂಗಿನ ನಾತ ನಿಶ್ಚಯ ಉಂಟೇ ಇತ್ತಣವರಿಗಲ್ಲದೆ. ಸಚ್ಚಿದಾನಂದವು ಅವನಿಗೆ. ನಿನಗೇನು ಸುಖ? ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೪ ॥

೧೯೪

ಮಹಾಭಕ್ತರು ಮಾಡುವ ಅಭ್ಯಾಸ, ಕ್ರಿಯೆಸಿನ ಭಕ್ತಿಯ ಕೇಳಿರಣ್ಣಾ. ಜಂಗಮದ ಕೈಯಲ್ಲಿ ಅಸಿ ಕೃಷಿ ವಾಣಿಜ್ಯ ಮುಂತಾದ ಊಳಿಗವ ಮಾಡಿಸಿಕೊಂಡು, ಪ್ರಸಾದವ ಕೊಂಬ ಪಂಚಮಹಾಪಾತಕರ ಅಂಗಳವ ಮೆಟ್ಟಿದಡೆ, ಸಂಗದಲ್ಲಿ ನುಡಿದಡೆ ಕುಂಭೀಪಾತಕ. ಅವರ ಹಿಂಗದಿರ್ದಡೆ ಲಿಂಗವಿಲ್ಲ, ಜಂಗಮವಿಲ್ಲ, ಪಂಚಾಚಾರ ಶುದ್ಧಕ್ಕೆ ದೂರ. ಇದು ಕಾರಣ ಮಾಟಕೂಟದವರೆಲ್ಲ ಜಗದಾಟದ ಡೊಂಬರೆಂದೆ, ಈಶನಾಣೆ ತಪ್ಪದು ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೫ ॥

೧೯೫.

ಮಾಟಕೂಟವೆಂಬುದು ಮೂರರ ಒದಗಿನಾಟ. ನೀತಿ ನಿರ್ವಾಣ ವಿರಕ್ತಿ ಎಂಬಿವು ಮೂರು ಆತ್ಮನ ಓಟದಾಟ. ಇಂತೀ ಉಭಯದಾಟದ ಕಾಟ ಸ್ವಸ್ಥಲವಾಗಿ, ಭಕ್ತಂಗೆ ಸೊಪ್ಪಡಗಿ ವಿರಕ್ತಂಗೆ ಹೆಚ್ಚು ಕುಂದೆಂಬ ಉಭಯ ನಿಶ್ಚಯವಾದಲ್ಲಿ, ಆತ ನಿಃಕಳಂಕ ನಿರತ ಸರ್ವನಿರ್ವಾಣಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೬ ॥

೧೯೬

ಮಾಡಿ ಮರಗುವ, ನೀಡಿ ನಿಜವಿಲ್ಲದಿಹ, ಕೊಟ್ಟು ಹೊಟ್ಟೆರೋಗ ವಿಕ್ಕುವ ಘಟ್ಟಗನಿರವು ಬಟ್ಟೆಯ ಬಡಿದುಂಬ ಹೊಟ್ಟೆಯ ಹೊರಕರಂತೆ. ಇವರು ಮಾಡುವ ಭಕ್ತಿ ಮೆಟ್ಟುಗಾಲಿನಲ್ಲಿ ನಿಂದು ತುತ್ತ ನುಂಗಿದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೭ ॥

೧೯೭

ಮಾತನಳಿವ ಮಾತು ಬಂದರೆ ಹೋತಿನಂತೆ ಹೋರಲೇಕೆ? ಮಾತಿಂಗೆ ಮಾಣಿದಡೆ ಅಜಾತನ ಒಲುಮೆ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೮ ॥

೧೯೮

ಮಾತಿಂಗೆ ಮಾತಕೊಟ್ಟು ನೀತಿನಿರ್ಣಯವನರಿಯದೆ ಜ್ಞಾತೃ ಜ್ಞಾನ ಜ್ಞೇಯವೆಂಬ ಭ್ರಾಂತಿನ ಕುಡಿಕೆಯಲ್ಲಿ ಸಿಕ್ಕಿ ಕೂಗಾಡುತಿಪ್ಪರ ಕಂಡು ಅದೇತಕ್ಕೆ ಬಾತೆ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೯ ॥

೧೯೯

ಮಾತಿನ ಗೆಲ್ಲ ಸೋಲದಲ್ಲಿ ಅಜಾತನ ಅರಿಯಬಾರದು. ಶಾಸ್ತ್ರದ ನೀತಿ ಗುಣದಲ್ಲಿ ಪ್ರಖ್ಯಾತದ ತನ್ನ ನೀತಿಯ ವೇಷವನರಿಯಬಾರದು. ಉಂಟೆಂಬವರಲ್ಲಿ ಇಲ್ಲವೆನಲೇಕೆ? ಇಲ್ಲವೆಂಬವರಲ್ಲಿ ಉಂಟೆಂದೆನಲೇಕೆ? ಈ ಉಭಯದ ಕಂಟಕವ ದಾಂಟದಲ್ಲದೆ ನಿಜವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೯ ॥

೨೦೦

ಮಾತಿನಲ್ಲಿ ನಿರ್ವಾಣ, ಆತ್ಮನಲ್ಲಿ ಘಾತಕ, ಕೂಸು ಹೇತು ಕಲಸುವಂತೆ ತ್ರಿವಿಧದ ಆಶೆಗೆ ಸಿಲುಕಿ ಸಾವ ತೂತರಿಗೆಲ್ಲಿಯದೋ ಲಿಂಗ? ಅದೇತರ ನಿರ್ವಾಣ? ಯಾತದ ರಾಟಾಳದ ಕೂನಿಯಂತೆ ಭವಪಾಶದಲ್ಲಿ ಬಿದ್ದು ಘಾಸಿಯಾದ ಮತ್ತೆ ನಿನಗಿನ್ನೇತರ ಭಾಷೆಯೋ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೧ ॥

೨೦೧

ಊರಾಡಿದಂತೆ ಆಡದಿದ್ದಡೆ ಮಾರಿಹರೆನ್ನ. ನಾಡಲಿಹರಂತೆ ಆಡದಿರ್ದಡೆ ಬಯ್ವಿಹರೆನ್ನ. ಕೆಸರೊಳಗೆ ಮುಳುಗಿ ಹೊಸ ಸೀರೆ ಎಂದರೆ ಅದರ ಪಾಶ

ಕುನುಕಿರಿಯುವೆ ನೂಣ್ಣವೇ ? ಈ ದೂಷಣೆ ಎನಗೆ ಏಸು ಕಾಲ ? ಭವ ಪಾಪ ರಹಿತ, ಓಸರಿಸುವಂತೆ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೨ ॥

೨೦೨

ಮುಕುರಕ್ಕೆ ತಮಂಧವೆಂದು ಒರಸಿದವರುಂಟೇ ? ಉದಕಕ್ಕೆ ತೃಷೆ ಎಂದು ನೀರಡಿಸಿದವರುಂಟೇ ? ಜೇಕಿಗೆ ಚಳಿ ಎಂದು ಅಂಗಕ್ಕೆ ಹೊದಿಸಿದವರುಂಟೇ ? ಲಿಂಗಾರೂಢಗೆ ಅಪಲಂಗಕ್ಕೆ ಮಾಡಿದೆವೆಂದಡೆ ಅದರಂದವ ತಿಳಿಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೩ ॥

೨೦೩

ಮುನ್ನ ಸತ್ತವರ ಕೇಳಿ, ಕೊಲೆಗೆ ಈಗ ಸತ್ತವರ ಕಂಡು, ನಾ ಸತ್ತೆನೆ? ಒಂಥ ತಾನೆ ಹರಿವ ಮತ್ತೆ ಥೀರ ನೋವನರಿಯ ಬೇಡವೆ? ನೋವನರಿದವಂಗೆ ನಿಜ ಭಾವದಲ್ಲಿ ತಪ್ಪದಿಪ್ಪನು, ಆತ ತಾನು ತಾನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೪ ॥

೨೦೪

ಮೂಕೊರೆಯನ ಕೈಯಲ್ಲಿ ವಾಸನೆಯ ಕುಸುಮವ ಕೊಟ್ಟರೆ ಅವನಿಗದು ಲೇಸೋ ಕಷ್ಟವೋ ಭಾವಿಸಿಕೊಳ್ಳಿರಣ್ಣಾ. ಭಕ್ತಿಹೀನಂಗೆ ಸತ್ಯವ ಹೇಳಿದಡೆ ಅದೆತ್ತಣ ಸುದ್ದಿಯೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೫ ॥

೨೦೫

ಮುಂಡೆ ಮಾಸಿದರೆ ಮಜ್ಜನವ ಮಾಡಿದಲ್ಲದೆ ಹಿಂಗದು ವ್ಯಾಪಾರ. ಮನ ಮರೆದು ಮಾಸಿವಡೆ ಮಹಾತ್ಮರ ಗುಣಜಲದಿಂದಲ್ಲದೆ ಅಮಲವಾಗದದು. ಇನ್ನೇನ ನುಡಿವೆ? ಇನ್ನಾರಿಗೆ ಹೇಳುವೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೬ ॥

೨೦೬ .

ರಣಕ್ಕೆ ಅಲಗೇರಿವಲ್ಲಿ ಹಲುಬಿದರೆ ಬಿಡುವರೆ? ಭಕ್ತಿಗೊರೆಗಟ್ಟಿ ತಪ್ಪಿಹೆನೆಂದರೆ ಬಿಡುವರೆ? ಸತ್ಯನಾಗಿದ್ದವನು ಅಸತ್ಯಕ್ಕೆ ಒಡಲಪ್ಪನೆ? ವಿರಕ್ತನಾಗಿದ್ದು ತಥ್ಯಮಿಥ್ಯಕ್ಕೆ ಹೋರುವನೆ? ಇಂತೀ ಗುಣವ ತಾನರಿದು ತನ್ನಲ್ಲಿ ಬಂದ ಗುಣದೋಷವ ಅನ್ಯರು ನುಡಿದರೆಂದು ಭಿನ್ನವ ಮಾಡಿ ನೋವನ್ನಕ್ಕ

೧. ನೀಂಟೆಯಲ್ಲದೆ (ಡ) (ವಚನ ೧೯೯ ರಲ್ಲಿಯ ಪಾಠಾಂತರ.)

ಭಕ್ತಂಗೆ ಸತ್ಯವಿಲ್ಲ, ವಿರಕ್ತಂಗೆ ಜ್ಞಾನವಿಲ್ಲ. ನಾನು ಇವನಾಡಿ ನೊಂವಹುರೆಂಬ ಭಾವ ಎನಗಿಲ್ಲ. ಕಣ್ಣಿನೊಳಗಣ ಕಸ, ಕಾಲೊಳಗಣ ಮುಳ್ಳು ಆವ ಬಗೆಯಿಂದ ಹೋದರದು ಲೇಸು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೭ ॥

೨೦೭

ರಾಜರಲ್ಲಿ ಹೊಕ್ಕು ಮತ್ತೆ ಆವರಾಗು ಚೇಗೆಯ ಹೇಳಬೇಕು. ಚೇಗೆಯ ಆಳವಿನಲಿ ಹೊಕ್ಕು ಮತ್ತೆ ಸೊಡೆಗುಂಜಲೇಕೆ? ಸುಖವ ಮುಟ್ಟಿ ಅಖಿಳದೊಳಗೆ ಬೆರಸಿದ ಮತ್ತೆ ಅಕಳಂಕತನ ಉಂಟೇ? ಇಂತೀ ಏಕಧ್ಯಾನಿಗಳ ಧ್ಯಾನ ಮಕರನ ಒಲುಮೆಯಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೮ ॥

೨೦೮

ರುದ್ರ ದೈವವೆಂದಡೆ ಅರ್ಧನಾರಿಗೆ ಸಿಕ್ಕಿದ. ವಿಷ್ಣು ದೈವವೆಂದಡೆ ಹೊದ್ದಿಹುದಕ್ಕೆ ರೂಹಿಲ್ಲ. ಮತ್ತೆ ಮಹಾತ್ಮವಪ್ಪ ಘನವ ನೆನೆದಿಹೆನೆಂದಡೆ ಮಾತಿಂಗೊಳಗಾಯಿತ್ತು. ಮತ್ತೆ ವಸ್ತುವ ಇನ್ನೇತರಿಂದ ಕಾಂಬೆ? ಗುರು ನರನಾದ. ಲಿಂಗ ಪಾಷಾಣವಾಯಿತ್ತು. ಜಂಗಮ ಆರಕನಾದ. ಇವನೆಲ್ಲವನರಿವ ಮನ ಭವಕ್ಕೆ ಬೀಜವಾಯಿತ್ತು. ಎನಗಿನ್ನೇವೆ! ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೯ ॥

೨೦೯

ಲಿಂಗಬಿದ್ದರೆ ಸಮಾಧಿಯ ಕೊಂಡೆನೆಂಬಿರಿ. ಗುರು ಸತ್ತರೇಕೆ ಸಮಾಧಿಯ ಕೊಳ್ಳರಣ್ಣಾ? ಬಲ್ಲರೆ ಹೇಳಿ ಅರಿಯದಿದ್ದರೆ ಕೇಳಿ ಪೃಥ್ವಿಯಲ್ಲಿ ಹುಟ್ಟಿದ ಕಣಿಯನೆ ತಂದು ಅಷ್ಟತನುವಿನ ಕೈಯಲ್ಲಿ ಕೊಡಲು ಇದ ಮುಟ್ಟಿ ಪೂಜಿಸಲಿಕ್ಕೆ. ನಾ ಹೇಗೆ ಪೂಜಿಸಲಯ್ಯಾ? ಲಿಂಗ ಮೂವರಿಗೆ ಹುಟ್ಟಿತ್ತು. ಪೃಥ್ವಿಯಲ್ಲಿ ಶಿಲೆಯಾಯಿತ್ತು. ಬನ್ನಾಣದ ಕೈಯಲ್ಲಿ ರೂಪಾಯಿತ್ತು, ಗುರುವಿನ ಕೈಯಲ್ಲಿ ಮೋಕ್ಷವಾಯಿತ್ತು. ಈ ಲಿಂಗ ಬೀಳಬಲ್ಲುದೇ? ಪೃಥ್ವಿ ತಾಳಬಲ್ಲುದೇ? ಲಿಂಗಬಿದ್ದಿತೆಂದು ಷೋಡಶೋಪಚಾರವ ಮಾಡಲಾಗದು. ಲಿಂಗದ ಕೂಡ ಸಮಾಧಿಯ ಕೊಂಡೆನೆಂತೆಂಬ ಭಕ್ತರಿಗೆ ನಾಯಕ ನರಕ ತಪ್ಪದೆಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೦ ॥

೨೧೦

ಲಿಂಗಸ್ವರೂಪದಲ್ಲಿ ನಿಜವಸ್ತುವಿನ ಕಳೆಯುದೆ. ಮತ್ತಿಲ್ಲದುದ ಕಂಡೆ. ರುದ್ರನ ವೇಷದಲ್ಲಿ ಪರಮನ ಪರಮ ವಿರಕ್ತಿಯುದೆ. ಮತ್ತಿಲ್ಲದುದ ಕಂಡೆ.

ಉಂಟಾದುದ ಇಲ್ಲವಾಗಿ, ಇಲ್ಲವಾದುದ ಉಂಟಾಗಿ ಈ ಉಭಯದ ಬೆಡಗಿನ ಬಿನ್ನಾಣವ ಒಲಿವರಪೀಂದಲ್ಲದೆ ತಿಳಿಯಬಾರದು ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ॥ ೧೬೧ ॥

೨೧೧

ಲಿಂಗವಿದ್ದು ಇದಿರಿಂಗೆ ಕೊಟ್ಟಕಾರಣ ಗುರುವಾದ. ಆ ಗುರುಸಮ್ಮತವಾಗಿ ಪರಸ್ವರೂಪವ ಮಾಡಲಾಗಿ ಜಂಗಮವಾದ. ಇಂತೀ ಲಿಂಗಬೀಜ ಅಂಕುರಿಸಿ ಎರಡಾಯಿತ್ತು. ತನ್ನ ಕುರಿತು ಮೂರಾಯಿತ್ತು. ಮೂರು ಆರಾದ ಭೇದವ ಉಪಮಿಸಲಿಲ್ಲ. ವಿಶ್ವಮಯನಾಗಿ[1] ವಿಶ್ವಾಸಕ್ಕೆ ಒಡಲಾಗಿ, ಪ್ರಣವ ಬೀಜವಾಗಿ, ಉತ್ಪತ್ತಿ ಸ್ಥಿತಿ ಲಯಕ್ಕೆ ಕರ್ತರ ಕೊಟ್ಟು ಮಿಕ್ಕಾದ ತತ್ವಂಗಳಿಗೆ ಎಲ್ಲರಿಗೆ ಹಂಚಿಹಾಕಿ, ಆವು ಯಂತ್ರವಾಗಿ ಯಂತ್ರವಾಹಕ ನೀನಾಗಿ, ಜಲದಿಂದಾದ ಮಲವ ಮತ್ತೆ ಜಲದಿಂದ ತೊಳೆವಂತೆ ನಿನ್ನ ಲೀಲೆಗೆ ನೀನೇ ಹಂಗಾದಿಯಲ್ಲಾ ! ಅಲ್ಲಿಗೆ ಮಲವಾಗಿ ಎನ್ನಲ್ಲಿಗೆ ಅಮಲವಾಗಿ ಪಾಶಬದ್ಧ ವಿರಹಿತನಾದ ನಿಃಕಳಂಕ ಮಲ್ಲಿಕಾರ್ಜುನ ॥ ೧೬೨ ॥

೨೧೨

ಲಿಂಗಾಲಯದಲ್ಲಿ ಸತ್ತಿತ್ತೆಂದು ಸಂಪ್ರೋಕ್ಷಣವ ಮಾಡಬೇಕೆಂಬ ಸಂದೇಹಿಗಳ ನೋಡಿರೇ ! ಲಿಂಗ ಮಧ್ಯದಲ್ಲಿ ಜಗದ ಅಳಿವುಳಿವೆಂಬುದನರಿಯದೆ, ಪ್ರೇತಲಿಂಗವೆಂದು ಭೂಸುರರು ಕೂಡಿ ಜಗದೀಶಂಗೆ ಅಭಿಷೇಕವ ಮಾಡಿ ಘಾಸಿಯಾದರಲ್ಲಾ ಸಂಗನಬಸವಣ್ಣ ಮುಂತಾದ ಅಂಗಲಿಂಗಿಗಳೆಲ್ಲರು. ಸಂಗನ ಬಸವಣ್ಣಂಗೆ ಕೈವ ಸಂಗಮೇಶ್ವರನೇ ಪ್ರಾಣ. ಲಿಂಗವೆಂದು ಇನ್ನಾರಿಗೆ ಹೇಳುವೆ ! ಇನ್ನು ಸಂದೇಹವಿಲ್ಲ, ನಾನಂಜುವೆನಯ್ಯಾ. ಬಂದ ಬಟ್ಟೆಯಲ್ಲಿ ಬರಲಾರದಂತೆ ಈ ದ್ವಂದ್ವವ ಹರಿಯೂ ಜಂಗಮಪ್ರಾಣ ಸಂದಿಲ್ಲದಿರ್ಪ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೩ ॥

೨೧೩

ಲೀಲಾಭಾವಿಯಾಗಿ ಏಕೆ ಬಂದೆನೆಂಬುದನರಿದು ಸಾಕಾರದ ನೀತಿಯ ನಿರ್ಣಯವ ಕಂಡು, ಏತರಿಂದ ತಿಳಿವು ಇನ್ನೇತರಿಂದ ಉಳಿವು ? ಈ ಉಭಯದ ನೀತಿಯಲ್ಲಿ ನಿಮ್ಮ ಮೇಲಪ್ಪ ತಾಣವನರಿಯಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೪ ॥

೧. ವಿಸ್ಮಯನಾಗಿ (ಅ)

೨೧೪

ಮಾರುವ ಮುಗ್ಗಿದಡೆ ಮಾಗೆಯಲಿ ಆದರಿಸಬೇಕಲ್ಲದೆ ಅದ ಗಾರು ಮಾಡಿ ಹೊಯ್ಯುವರೇ ಮಿಡಿಯನು ? ಮಾರಾರಿಯ ಶರಣರು ಮೀರಿ ಒಂದ ನುಡಿದರೆ ದೂರ ಮಾಡುವರೆ ಇವರಾರನು ? ಅಡಿಗೊಳಗಾದವನ ಸೂರೆಗೊಂಬ ಪರಿ ಯುಂಟೇ ? ಲೇಸ ತೋರುವರಯ್ಯಾ. ಐದರ ಬೇಗೆಯಲ್ಲಿ ಬೆಂದು ಗಾರಾದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬೫ ॥

೨೧೫

ಮಾರುಥಿಯ ಹೊದ್ದು ಬೇರ್ಪಡಿಸಬಹುದೇ ? ಫಲದೊಳಗಣ ಬೀಜವ ಬಲಿವುದಕ್ಕೆ ಮುನ್ನವೆ ತೆಗೆಯಬಹುದೇ ? ಮಹಾ ಘನವನರಿವುದಕ್ಕೆ ಮುನ್ನವೆ. ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನಹ ಪರಿ ಇನ್ನೆಂತೊ ? ಇಕ್ಷುದಂಡ ಬಲಿವುದಕ್ಕೆ ಮೊದಲೆ ತನಿರಸ ಬಹುದೇ ? ನಾನು ನೀನೆಂಬುದಕ್ಕೆ ಸ್ಥಾಣುವಹುದಕ್ಕೆ ಭಾವದ ಬಲಿಕೆ ಇನ್ನಾವುದೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೬ ॥

೨೧೬

ವಿಕಾರಿಗೇಕೋ ವ್ರತ ನೇಮ ? ವಿಶ್ವಾಸಹೀನಗೇಕೋ ಭಕ್ತಿಕೃತ್ಯ ? ವಂದಿಸಿ ನಿಂದಿಸುವಗೇಕೋ ಜಂಗಮಪೂಜೆ ! ಲಿಂಗವೆಂದು ಅರ್ಚಿಸಿ ಸಂಗವ ನರಿಯದ ಲೈಂಗಿಗಳಿಗೆಲ್ಲಿಯದೋ ಶಿವಲಿಂಗಪೂಜೆ ? ಆರಂಗವ ತೊರೆಯದೆ, ಮೂರಂಗವ ಮೀರದೆ, ತೋರಿಪ್ಪ ಗುಣವ ಜಾರದೆ, ಅರವತ್ತುನಾಲ್ಕು ನೇಮವನರಿವ ಪರಿ ಇನ್ನೆಂತೋ ? ಇಂತೀ ಗುಣವನರಿಯದರಾಗಿ, ಶೀಲವಂತಂಗೆ ನೇಮವಿಲ್ಲ. ಘಾತಕಂಗೆ ಭಕ್ತಿ ಇಲ್ಲ. ಪೂಜೆವಂತಂಗೆ ಲಿಂಗವಿಲ್ಲ. ತ್ರಿವಿಧವ ಮರೆಯುವವಂಗೆ ಜಂಗಮವಿಲ್ಲ. ಇಂತೀ ಕಾಯಜೀವದ ಬೆಸುಗೆಯ ಬಿನ್ನಾಣವ ಅರಿಯದವಂಗೆ ಪ್ರಾಣಲಿಂಗವಿಲ್ಲ. ಇಂತಿವರಂಗ ಒಂದೂ ಇಲ್ಲದವಂಗೆ ನೀನೂ ಇಲ್ಲ ನಾನೂ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೭ ॥

೨೧೭

ವಿರಕ್ತಿಯ ಹೇಳಿ ಹರಿದಾಡುವ ಹಿರಿಯರೆಲ್ಲರು ಕರಸ್ಥಲದಲ್ಲಿ ಲಿಂಗವ ಹಿಡಿದು, ಎರವಿನ ದ್ರವ್ಯ ಸ್ಥಿರವಲ್ಲವೆಂದು ಹೇಳಿ, ಅವರು ಕೊಡುವವಕ್ಕೆ ಮುನ್ನವೆ ಕೈಯಾಂತು ಬಳಲುವ ಗಡ್ಡಯ್ಯಗಳ ನೋಡಿ ಬೆರಗಾದೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ! ೧೬೮ ॥

೨೧೮

ವೇದವ ಕಲಿತು ಶಾಸ್ತ್ರವನೋದಿ ನಾನಾಪುರಾಣಂಗಳಲ್ಲಿ ಪರಿಣತರಾವೆ ವೆಂದು ತಿಳಿದು ಶ್ರುತಿಸ್ಮೃತಿಗಳಲ್ಲಿ ಪರತತ್ವವ ನೋಡಿ ಕಂಡಿಹೆವೆಂದು ಹೇಳು ತಿಪ್ಪ ಹಿರಿಯರೆಲ್ಲರು ಇಕ್ಕುವ ದಾತಾರನ ಬಾಗಿಲವ ಕಾಯ್ದು ಚಿಕ್ಕಾಳರಾದರು. ದೃಷ್ಟವ ಬೋಧಿಸುವ ಹಿರಿಯರೆಲ್ಲರು ಕೆಟ್ಟರಲ್ಲಾ ! ಉತ್ತರದ ಬಲೆಗೆ ಸಿಕ್ಕಿದ ಮೂಷಕನಂತೆ ಇವರ ದೃಷ್ಟವ ಕಂಡು ಮತ್ತೆ ಹಿರಿಯರೆಂದು ಹೋರುತಿಪ್ಪ ಮಿಟ್ಟೆಯ ಭಂಡರ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬೯ ॥

೨೧೯

ವ್ರತ ನೇಮ ನಿತ್ಯಕೃತ್ಯವ ಮಾಡುವ ಸತ್ಪುರುಗಳು ಕೇಳಿರೋ. ಲಿಂಗಕ್ಕೆ ಜಂಗಮ ವಿಶೇಷವೆಂದು ಆ ಜಂಗಮದ ಪಾದೋದಕದಿಂದ ಮಜ್ಜ ನಕ್ಕೆರೆದು ಪ್ರಸಾದದಿಂದ ಸಮರ್ಪಣವ ಮಾಡಿ, ಅಷ್ಟವಿಧಾರ್ಚನೆ ಷೋಡ ಶೋಪಚಾರದಿಂದ ಲಿಂಗದ ಪ್ರಾಣ ಜಂಗಮವೆಂದರಿದು, ಮತ್ತಾ ಜಂಗಮ ಮನೆಗೆ ಬಂದಡೆ ಸಂದೇಹವ ಮಾಡಲೇಕೋ ? ತನ್ನ ಪ್ರಾಣಲಿಂಗವೆಂದರಿದು, ಲಿಂಗದ ಪ್ರಾಣ ಜಂಗಮವೆಂದರಿದು, ಉಭಯ ಪ್ರಾಣ ತತ್ಪ್ರಾಣವಾದ ಮತ್ತೆ ಭಕ್ತಿಗೆ ಅವಿಶ್ವಾಸವಾಗಲೇಕೋ ? ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು, ಹೊನ್ನ ಬೇಡಿದರೆ ಆಶಕನೆಂದು, ಮಣ್ಣ ಬೇಡಿದರೆ ಬದ್ಧಕನೆಂದು, ಇಷ್ಟಕ್ಕೆ ನೊಂದ ಮತ್ತೆ ಭಕ್ತಿವಾಸಿಗೆ ಹೋರಲೇಕೆ ? ಎಷ್ಟು ಕಾಲ ಮಾಡಿದ್ದ ದ್ರವ್ಯವ ಸವೆದಡೆ ಭಕ್ತಿಗೆ ಸಲ್ಲ, ಯುಕ್ತಿಗೆ ಸಲ್ಲ, ಮುಕ್ತಿಗೆ ಸಲ್ಲ ವಿಶ್ವಾಸಹೀನಂಗೆ. ಸತ್ಯಭಕ್ತಿ ಹುಸಿಯುಂಟೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೦ ॥

೨೨೦

ಶರೀರದ ನೆಲಮನೆಯಲ್ಲಿದ್ದು ನೆರೆವಸ್ತುವನರಿವುದಕ್ಕೆ ಕುರುವಾವುದು ? ಸಂಚಾರದ ಪ್ರಕೃತಿಯ ನಿಳಯನಲ್ಲಿದ್ದು ನೆರೆ ಸುಳುಹಿಗೆ ಒಳಗಲ್ಲದವನ ಅರಿವ ಪರಿ ಇನ್ನೆಂತೋ ? ಅರಿದೆನೆಂಬುದು ಅದು ತಾ ಅರಿವೋ ಮರವೆಯ ತೆರನೋ ಇದು ಎನಗೆ ಅರಿಯಬಾರದು. ಅರಿವೆಡೆಗೆ ಕುರುಹು ಹೇಳಾ, ಎನ್ನೊಡೆಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೧ ॥

೨೨೧

ಸುಧೆ ಇದ್ದಂತೆ ಸುರೆಗೆ ಆಶೆ ಮಾಡುವನಂತೆ, ರತಿಯುಂತಿಪ್ಪ ಸತಿ ಇರ್ದ ಪತಿ ತೊತ್ತಿಂಗೆ ಮನವಿಟ್ಟು ಗತಿಗೆಡುವಂತೆ, ಘೃತವಿದ್ದಂತೆ ಉನ್ಮತ್ತದ ರಸಕ್ಕೆ ಬಾಯಬಿಡುವಂತೆ, ರಸವಿದ್ದಂತೆ ಬೆಳಕುವ ಕಾಶವ[1]ಗಳಿಸುವನಂತೆ, ಇಂತೀ ರಸಿಕವನಾರು ಬಲ್ಲರು ? ಎಸಕದ ಒಲುಮೆ ನಾನೋ ನೀನೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೨ ॥

೨೨೨

ಸಡಗರಿಸುವಲ್ಲಿ ಲಿಂಗವ ನೆನೆದು ಕಡು ದುಃಖದಲ್ಲಿ ಲಿಂಗವ ಮರೆದು, ಇಂತೀ ಅಂಗಲಿಂಗ ಸಂಗವ ಮಾಡುವ ಪರಿ ಇನ್ನೆಂತುಂಟೋ ? ಕೂರ್ತಡೆ ಭಕ್ತ ತಾಪತ್ರಯಕ್ಕೆ ಪಾಪಿ. ಸುಖದುಃಖವೆಂಬೀ ಉಭಯವ ಭೇದಿಸಿ ನಿಂದವಂಗೆ ಸುಖ ನಿಶ್ಚಯದಿಂದ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೩ ॥

೨೨೩

ಸತ್ವಕ್ಕೆ ತಕ್ಕ ಹೊರೆಯಲ್ಲದೆ ಮತ್ತುಳಿದ ಮಾತಂಗವ ಹೊರಬಹುದೇ? ಸತ್ಯಕ್ಕೆ ತಕ್ಕ ನುಡಿಯಲ್ಲದಿರ್ದಡೆ ಅದ ಒಚ್ಚತಗೊಂಬರೇ ಹರಶರಣರು ? ನಡೆ ನುಡಿ ಸಿದ್ಧಾಂತಂಗಲ್ಲದೆ ಹುಡಿಗರ ಮಾತು ಸುಡು ಎನ್ನೊಡೆಯ ಕರೆಯನವರನು ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೪ ॥

೨೨೪

ಸತಿ ತಪ್ಪಿ ಪಾರದಾರವ ಮಾಡಿದಲ್ಲಿ, ಒಳಗಿಟ್ಟುಕೊಂಡು ಸಂದು ಸಂಶಯವಿಲ್ಲದೆ, ಗುರು ಲಿಂಗ ಜಂಗಮಕ್ಕೆ ಉದಾಸೀನವ ಮಾಡಿದಡೆ ತಪ್ಪನೊಪ್ಪಬಹುದೇ ? ಅಲ್ಲಿಗೆ ಶಾಂತಿ, ಇಲ್ಲಿಗೆ ದ್ವೇಷವೇ ? ಇದು ಭಕ್ತಿಯ ಬಲ್ಲವರ ಮತವಲ್ಲ. ಸತಿ ಸುತ ಬಂಧುಗಳು ತಪ್ಪಿದಲ್ಲಿ ಭಕ್ತಿಗೆ ಅನುಸರಣೆಯ ಮಾಡಿದಡೆ, ಲಿಂಗಕ್ಕೆ ಮಜ್ಜನಕ್ಕೆರದಡೆ, ಜಂಗಮಪ್ರಸಾದವ ಕೊಂಡಡೆ, ಆ ಅಂಗ ಧರೆಯಲ್ಲಿ ನಿಂದಿತ್ತಾದರೆ, ನಾ ನಿಂದ ಕಾಯಕಕ್ಕೆ ಭಂಗ ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೫ ॥

---

೧. ಕಸವ (ಪ)

೨೨೫

ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ ಚಾಟುಲತನ[೧] ಗೆಲ್ಲಸೋಲತನ ಇವೆಲ್ಲವ ಬಿಡಬೇಕು. ಇದೇ ಸದ್ಭಕ್ತಿ ಇದೇ ಸದಾತ್ಮನ ಮುಕ್ತಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೬ ॥

೨೨೬

ಸರ್ಪನ ಹಿಡಿವಲ್ಲಿ ಹಾವ ಮತ್ತವ ಮಾಡುವ ಮಂತ್ರವಿರಬೇಕು. ಶಸ್ತ್ರವ ಹಿಡಿವಲ್ಲಿ ರಣಕ್ಕೆ ನಿಚ್ಚಟನಾಗಿರಬೇಕು. ಭಕ್ತಿಯ ಹಿಡಿವಲ್ಲಿ ತ್ರಿವಿಧಕ್ಕೆ ಮುಚ್ಚಳವನಿಕ್ಕಿದಂತಿರಬೇಕು. ಇಂತೀ ಗುಣ ಸತ್ಯವಂತರಿಗಲ್ಲದೆ ಮಿಕ್ಕಿನ ಮರ್ಕಟರಿಗೆಲ್ಲಿಯದೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೭ ॥

೨೨೭

ಬಲ್ಲಿದಟ್ಟು ಅದೆಲ್ಲಿದ್ದರು ತನ್ನ ವೇದನೆಯ ಬಿಡದು. ಭಾವಜ್ಞರ ಮನೆಯ ಬಾಗಿಲಲ್ಲಿದ್ದರೂ ಸ್ವಜಾತಿಯ ಗುಣವಲ್ಲದೆ ನೀತಿಯ ಗುಣವಿಲ್ಲ. ಇಂತಿವರುಗಳ ಮಾತೇಕೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೮ ॥

೨೨೮

ಸಾವಿರದಲ್ಲಿ ಒಂದು ರಜ್ಜು ಹರಿದಡೆ ಅದ ಸಾಗಿಸಿ ಕಡೆಹಾಸಬೇಕಲ್ಲದೆ ಗೈದುಬಿಟ್ಟಡೆ ಒಂದರ ಹಿಂದೊಂದಳಿಯಿತ್ತು ಆ ಅಚ್ಚು. ಬಂದುದನರಿದು ಮಾಡುವ ಭಕ್ತನ ದ್ವಂದ್ವದೊಳಗೊಂದು ತಪ್ಪಿದಡೆ ಅವ ಹಿಂದುಳಿದನೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭೯ ॥

೨೨೯

ಸಾಸಿರ ನೋಂಪಿಯ ನೋಂತು ನೂಲೆಳೆಯ ಹರಿದಂತಾಯಿತ್ತು. ಭಾವದಲ್ಲಿ ಬಲ್ಲಿಕೆ ಇಲ್ಲ. ಜ್ಞಾನದಲ್ಲಿ ಶುದ್ಧವಿಲ್ಲ. ಮಾಟದಲ್ಲಿ ಕೂಟವಿಲ್ಲ. ಈ ವ್ಯಾಪಾರದಾಟ ಸಾಕು. ಖ್ಯಾತಿಯ ಬಿಡಿಸಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೦ ॥

---

೧. ಚಾಲಟ (ಕ) ೨. ಮುಕ್ಕಟನಾಥ (ಬ)

೨೩೦

ಸುಖವ ಮೆಚ್ಚಿದ ದೇಹ ಸಕಲದೊಳಗೆ ಸಿಕ್ಕಿದುದಕ್ಕೆ ದೃಷ್ಟ. ಅಖಿಳರ ಬೋಧೆಗೆ ಸಿಕ್ಕಿ ಸುಖವನರಿದ ಮತ್ತೆ ಅಕಳಂಕತನ ನಿನಗಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೧ ॥

೨೩೧

ಸ್ಥೂಲ ಬ್ರಹ್ಮನ ಮಗ. ಸೂಕ್ಷ್ಮ ವಿಷ್ಣುವಿನ ಮಗ. ಕಾರಣ ರುದ್ರನ ಮಗ. ಜ್ಞಾನಮಹಿಮ ನಿಮ್ಮನರಿವುದಕ್ಕೆ ಎನಗಿನ್ನಾವುದು ಮನ ನಿಃಕಳಂಕ ಮಲ್ಲಿಕಾರ್ಜುನಾ ? ॥ ೧೮೨ ॥

೨೩೨

ಸ್ವಪ್ನದ ಸತಿ ನಿಶ್ಚಯವೆಂದು ಆದ ಮಚ್ಚಿ ಮಾತಕ್ಕನುವಾಗಿ ಮಿಕ್ಕವ ನೋಂದಾಗಿ ಇದನಿತ್ತ ಮಾಡುವೆ ಎಂದು ಕಾಮದ ಕಳವಳವೆಂದು ಹಿಡಿದು ತಪ್ಪಿ ನುಡಿದಂತೆ ಅದರ ತಥ್ಯಮಿಥ್ಯ ನಿಮಗಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೩ ॥

೨೩೩

ಸ್ತ್ರೀಯರುಗಳು ಹಲವಾದಡೆ ಕೂಡುವನೊಬ್ಬನೇ. ಯೋನಿ ಭಿನ್ನವಲ್ಲದೆ ಸ್ಥಾಣು ಭಿನ್ನವಲ್ಲ. ಅರಿವರು ಹಲಬರಲ್ಲದೆ ಅರುಹಿಸಿಕೊಂಬವನೊಬ್ಬನೆ. ನಿನ್ನರಿವ ಪರಿಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೪ ॥

೨೩೪

ಸಂಚಿತಕರ್ಮ ಆಗಾಮಿ ಪ್ರಾರಬ್ಧವೆಂಬ ಸಂಕಲ್ಪಕ್ಕೆ ಹೊರಗಾಗಿಯಲ್ಲದೆ ಲಿಂಗವ ಕಾಣಬಾರದು. ಆ ಲಿಂಗವು ಸಾಕಾರವ ತಾಳಿ ಜಗದ ಹಿತಾರ್ಥವಾಗಿ ಬಂದಿರ್ದಲ್ಲಿ ನಾ ನಿರಾಕಾರದಿಂದ ಕಾಬ ಕಾಣಿಕೆ ಇನ್ನಾವುದೊ? ಇನ್ನೇನ ಹೇಳುವೆ ? ಕಣಿಲೆಯ ಕೈಯಲ್ಲಿ ಕೊಟ್ಟ ಕಲ್ಲಿನಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೫ ॥

೨೩೫

ಹರಗೋಲನೇರಿದಡೆ ಅದ ಹಿಡಿವ ತೆರನರಿದಿರಬೇಕು- ತಡಿ ಮಡು ಅದರ ಡಿಯನರಿದು ತಡಿಗೂಡಬೇಕು. ಬಿಡುಮುಡಿಯನರಿಯದಿರ್ದಡೆ ತನ್ನ ಸಡಗರವೇ ಕೊಲ್ಲುವ ಹಗೆ ಬೇರಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೬ ॥

೨೩೭

ಹರಿಗೆಯ ಹಿಡಿದವ ಇದಿರ ಗೆದ್ದಿಹೆನೆಂದು ಅದನೆದೆಗಿಕ್ಕಿಕೊಂಡು ಉರ ವಣಿಸಿಕೊಂಡು ಬಾಹ ಸಮರವ ತರಹರಿಸಿಹೆನೆಂದು ಇದಿರಿಗೆ ಈಡಹ ತೆರನಂತೆ ಅಕ್ಕೆ ಹಾನಿಯೆ. ಅಂಗದ ಕುರುಹಿನ ನೆಮ್ಮುಗೆಯಪ್ಪ ಲಿಂಗವು ಕಲಸಿದ ಮಣ್ಣುರೂಹಿಂಗೆ ಈಡಾಗದೆಂದರಿದಡೆ ಆ ಲಿಂಗ ಭವಪಾಶವ ಗೆಲ್ಲುವುದು. ಹಾಕಿದೆ ಮುಂಡಿಗೆಯ ಭಾಷೆಯ ತಪ್ಪಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೭ ॥

೨೩೭

ಹಲವು ಬಹುರೂಪ ಬರೆವ ಕರದ ಕಡ್ಡಿಯ ಭೇದದಂತೆ, ಮನವರಿದು ಕಣ್ಣುನೋಡಿ ಕೈ ಕಡ್ಡಿಯ ಹಿಡಿದು ಲಕ್ಷಿಸುವಂತೆ, ಸ್ಥಲದಲ್ಲಿ ನಿಂದು ಅರಿವಿನಲ್ಲಿ ಆಶ್ರಯಿಸಿ ಇಷ್ಟ ವಿಶ್ವಾಸ ಭಕ್ತಿಯೊಳಗಡಗಿ ಭಕ್ತಿವಸ್ತುವಿನಲ್ಲಿ ಲೇಪವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ನಿರ್ಲೇಪವಾಯಿತ್ತು ॥ ೧೮೮ ॥

೨೩೮

ಹಸಿದ ದಿಂಡುಕಂಗೆ ಭಕ್ತಂಗೆ ಎಸಕದ ಧ್ಯಾನ ಉಂಟೇ ? ಅದು ತನ್ನ ಹಸಿವಡಗುವನ್ನಕ್ಕ, ತ್ರಸಗಳು ಬಂದು ಸೇರುವನ್ನಕ್ಕ ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬವು. ಇಂತಿವರಂತೆ ಹುಸಿಕರ ಭಕ್ತಿ, ಕಿಸುಕುಳರ ವಿರಕ್ತಿ, ಇವು ಹುಸಿ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮೯ ॥

೨೩೯

ಹಸಿವ ಕೊಂದೆನೆಂದು ಘೃತ ಹಾಲು ಸಕ್ಕರೆ ಹಣ್ಣು ಕಾಯಿ ಮುಂತಾದ ಫಲಾಹಾರವ ಕೊಂಡು ಫಲಕ್ಕೆ ಬಾರೆವೆಂಬ ಬಾಲೋತ್ತರವ ನುಡಿದು, ಬಾಲಹರಾದೆವೆಂಬ ಗೆಲ್ಲ ಗೂಳಿಗಳು ಕೇಳಿರೋ! ಉರಿವ ಬೆಂಕಿಗೆ ತಂಪು ತುಪ್ಪ ತಿಲ ಮೊದಲಾದ ಕುಲವಂ ಹಾಕಿ, ಅನಲನ ಕೆಡಿಸಿಹೆನೆಂಬ ಕಲಿಕೆಯ ಮಾತಿನ ನೆರೆ ಬಾಲಕರ ಕಂಡು ಇವರಿಗೆ ಅರಿಕೆ, ಎನಗದು ಕೊರಟನಿರಿಸಿದಂತೆ. ಇದಾರಿಗು ಅಘಟಿತ ನೋಡಾ ಪ್ರಕಟದೂರ ಸಕಲಸಾರ ಮುಕುರ ಗುಣನಿಧಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೦ ॥

೨೪೦

ಮಹಾರಾಣುವೆಯ ಬಿಟ್ಟುಬಂದು, ಮತ್ತೆ ಒಡೆಯರು ಭಕ್ತರಲ್ಲಿ ರಾಣಿವಾಸವೆಂದು ಕಟ್ಟುಮೆಟ್ಟುಂಟೆ ? ಖಂಡಿತ ಕಾಯಕವನಂಗೀಕರಿಸಿದ ಭಕ್ತಂಗೆ

ಮತ್ತೆ ಹೆಂಡತಿ ಮಕ್ಕಳು ಬಂಧುಗಳೆಂದು ಜಂಗಮಕ್ಕೆ ತಂದ ದ್ರವ್ಯವನವರಿಗಿಕ್ಕಿ ತಾನುಂಡನಾದರೆ ತಿಂಗಳಲಿ ಸತ್ತಹುಳಿತ ನಾಯ ಕಾಗೆ ತಿಂದು, ಆ ಕಾಗೆಯ ಕೊಂದು ತಿಂದ ಭಂಡಂಗೆ ಕಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವೆ ನೀವೇ ಬಲ್ಲಿರಿ. ॥ ೧೯೧ ॥

೨೪೧

ಹೀಗಿರು ಎಂದರೆ ಹಾಗಿರದಿದ್ದರೆ ಅವಳು ಸತಿಯಲ್ಲ ನಾ ಪತಿಯಲ್ಲ. ಆವ ಠಾವಿನಲ್ಲಿ ಎನಗೆ ಸತಿಸಂಗ, ಆ ಠಾವಿನಲ್ಲಿ ಲಜ್ಜೆ ನಾಚಿಕೆ ಕೇಣಸರ ಅಪಮಾನವಿಲ್ಲದಿರಬೇಕು. ಅದು ಎನ್ನ ಭಕ್ತಿಮುಕ್ತಿಯ ಬೆಳೆ. ಸತಿ ಪತಿ ಇಬ್ಬರು ಏಕವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ಹೆಡಗುಡಿಗೊಳಗಾದ ॥ ೧೯೨ ॥

೨೪೨

ಹುತ್ತದಲ್ಲಿ ಕೈಯ್ಯನಿಕ್ಕಿ ಸರ್ಪನ ತೆಗೆವಾಗ, ಸರ್ಪನ ಒಪ್ಪ ತಪ್ಪಿ ಮತ್ತೆ ವಸ್ತುವಿನ ನೇವಳ ಆಭರಣವಾಹಲ್ಲಿ ಅದಾರ ದೃಷ್ಟ? ಮತ್ತೆ ನಿರ್ಧನಿಕ ವಿಶ್ವಾಸದಿಂದ ಬಸವಣ್ಣ ಮುಂತಾದ ಲಕ್ಷವ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಕೃತ್ಯ ತಪ್ಪದೆ ಇಕ್ಕುವಾಗ ಅದಾರ ವಿಶ್ವಾಸ ಹೇಳಾ? ನಾ ಹೊತ್ತ ಕಟ್ಟಿಗೆಯ ಸರಬು ಮತ್ತೆ ಸುವರ್ಣದಂಡವಾಹಾಗ ಅದಾರ ನಿಶ್ಚಯದ ವಿಶ್ವಾಸ? ಅವು ತಮ್ಮ ಚಿತ್ತದ ದೃಢತೆಯಿಂದ ಗುರುವಿಂಗೆ ತನುವೆಂಬಲ್ಲಿ ಕಂಡಲ್ಲಿಯೇ ಆತ್ಮ ತೇಜವಳಿದು ಹೊಡೆಗೆಡೆಯಬೇಕು. ಲಿಂಗಕ್ಕೆ ಮನಮುಟ್ಟಿ ಪೂಜೆಯ ಮಾಡುವಲ್ಲಿ ರಾಜ ಚೋರ ಅನಲ ಅನಿಲ ಅಹಿ ಮುಂತಾದ ಭಯಂಗಳಿಗೆ ತಲೆದೋರದಿರಬೇಕು. ಜಂಗಮಾರ್ಚನೆಯ ಮಾಡುವಲ್ಲಿ ಅರ್ಥ ಪ್ರಾಣ ಅಪಮಾನಕ್ಕೆ ಕಟ್ಟುಮೆಟ್ಟಿಲ್ಲದಿರಬೇಕು. ಇಂತೀ ತ್ರಿವಿಧ ವಿಶ್ವಾಸ ಭಕ್ತಂಗೆ ಮೂರುಸ್ಥಲ ಮುಂತಾಗಿ, ಆರುಸ್ಥಲ ಒಳಗಾಗಿ, ನೂರೊಂದುಸ್ಥಲ ವೇಧಿಸಿ ನಿಂದಲ್ಲಿ, ಅದು ಒಂದೇ ವಿಶ್ವಾಸದ ಒಡಲು. ಇದಕ್ಕೆ ಹಲವು ಮಾತನಾಡಿ, ನಾನಾಸ್ಥಲ ಉಂಟೆಂದು ಹಲಬುತ್ತಿರಲಿಲ್ಲ. ಇದು ನೆಲೆ, ವಸ್ತುವಿನ ಏಕಸ್ಥಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೩ ॥

೨೪೩

ಹೃದಯಕಮಲ ಮಧ್ಯದಲ್ಲಿ ಅಷ್ಟದಳ ಕಮಲವ ಮೆಟ್ಟಿ, ಹಂಸನ ಕಟ್ಟಬೇಕೆಂಬರು! ಈ ಹೊಟ್ಟೆಯ ಕೂಳಣ್ಣಗಳೆಲ್ಲರು ಕಟ್ಟಬಲ್ಲರೆ ನಿಜಹಂಸನ?

ಬೆಟ್ಟಗಟ್ಟವನೇರಿದ ಭೃಗು ದಧೀಚಿ ಅಗಸ್ತ್ಯ ಕಶ್ಯಪ ರೋಮಜ ಕೌಂಡಿಲ್ಯ ಚಿಪ್ಪಜ ಮುಂತಾದ ಸಪ್ತಕುಲ ಋಷಿಗಳು ಎಲ್ಲರೊಳಗಾದರು. ಋಷಿ ಜನಂಗಳು ಬೆಟ್ಟವನೇರಿ ಕಟ್ಟಿದುದಿಲ್ಲಾ ಮತ್ತೆಯೂ ಬಟ್ಟೆಗೆ ಬಂದು ಮತ್ತರಾದರಲ್ಲದೆ ಸುಚಿತ್ತವನರಿದುದಿಲ್ಲ. ಬಿಸರುಹಕುಸುಮಜನ ಕಪಾಲವ ಹಿಡಿದಾತನ ಕೈಯಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನರಿಯದೆ. ಈ ಹುಸಿಕರ ನೋಡಿ ದೆಸೆ ಹೊದ್ದಿಹೆನೆಂದರೆ ಪಶುಪತಿ ದೂರ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೪ ॥

ಒರ್ಥ:— ದ್ವಾದಶದಳ ಕಮಲದ ಊರ್ಧ್ವವುುಖವಾಗಿದ್ದ ನಾಲ್ಕೆಸಳ ಕಮಲದಲ್ಲಿರುವ ಪರಮಾತ್ಮ ಲಿಂಗದಲ್ಲಿ ಅಧೋಮುಖವಾಗಿ, ಎಂಟೆಸಳ ಕಮಲದಲ್ಲಿ ದಳ ಪ್ರಕೃತಿವಿಡಿದು ಚರಿಸುವ ಜೀವಹಂಸನ ಬಂಧಿಸಬೇಕೆಂಬರು. ಹೊಟ್ಟೆಗೆ ವೃಷ್ಟಾನ್ನ ಪಾನಂಗಳ ಗಳಿಸಿಕೊಂಬ ಹಿರಿಯರುಗಳೆಲ್ಲರು ಜೀವಹಂಸನ ಪರಮಾತ್ಮ ಲಿಂಗದಲ್ಲಿ ಬಂಧಿಸಬಲ್ಲಡೆ ಅರಿಯರು. ಪರ್ವತಂಗಳನು ಬೆಟ್ಟಗುಡ್ಡಗಳನು ಅಲ್ಲಿಪ್ಪ ಗವಿಗಳು ಕೋಡುಗಲ್ಲುಗಳಲ್ಲಿ ನಿಂದು ತಪವ ಮಾಡುವ ಭೃಗು ಮುನಿ ದಧೀಚಿ ಅಗಸ್ತ್ಯ ಕಶ್ಯಪ ರೋಮಜ ಕೌಂಡಿಲ್ಯ ಚಿಪ್ಪಜ ಮೊದಲಾದ ಸಪ್ತ ಋಷಿಗಳೇ ಮುಖ್ಯವಾದ ಎಂಭತ್ತೆಂಟು ಕೋಟಿ ಋಷಿಜನಂಗಳು ಪರ್ವತಂಗಳಲ್ಲಿ ಕೋಡುಗಲ್ಲು ಗವಿಗಳಲ್ಲಿ ನಿಂದು ಧ್ಯಾನಮೌನಂಗಳಂ ಮಾಡಿ, ಜೀವ ಹಂಸನನು ಪರಮಾತ್ಮ ಲಿಂಗದಲ್ಲಿ ಬಂಧಿಸಲಿಲ್ಲ. ಬಳಿಕ ಕೆಲವು ದಿನಂಗಳ ಮೇಲೆ ಸಂಸಾರ ಮಾರ್ಗದಲ್ಲೆಯ್ದಿ ದೇಹಭಾವದ ಮರವೆಯಿಂದ ಅಜ್ಞಾನಿಗಳಾದರಲ್ಲದೆ ನಿಃಸಂಸಾರಿಗಳಾಗಿ ಪರಮಾತ್ಮ ಲಿಂಗದಲ್ಲಿ ಕೂಡಿ ಜ್ಞಾನಿಗಳಾದುದಿಲ್ಲ. ಉದಕದಲ್ಲಿ ಹುಟ್ಟಿದ ಕಮಲ, ಆ ಕಮಲದಲ್ಲಿ ಹುಟ್ಟಿದ ಬ್ರಹ್ಮನ ಕಪಾಲವ ಪಿಡಿದ ರುದ್ರನ ಲಯದಲ್ಲಿ ಗಾಸಿಯಾದರು. ಜೀವಾತ್ಮನನು ಪರಮಾತ್ಮಲಿಂಗದಲ್ಲಿ ಕೂಡುವ ಪ್ರೌಢತ್ವವನು ತಿಳಿಯದೆ ಈ ಮಿಥ್ಯಾಲಾಂಛನಿಗಳಂ ಕಂಡು ಅವರ ದಿಕಿನಲ್ಲಿ ಬೆರೆಯನೆಂದೆ. ಅವರಿಗೆ ಶಿವಕೃಪೆ ಇಲ್ಲವೆಂಬುದರ್ಥ.

೨೪೪

ಹೆಣ್ಣು ಹೊರಗಣದೆಂದು ಹೊನ್ನು ಹೊರಗಣದೆಂದು ಮಣ್ಣು ಹೊರಗಣದೆಂದು ಸುಬೋಧೆಯ ಇದಿರಿಂಗೆ ಹೇಳಿ ದುರ್ಬೋಧೆಯಲ್ಲಿ ತಾವು ನಡೆಯುತ್ತಿಹ ದುರ್ಗುಣಿಗಳ ಕಂಡು ನಾಚಿಕೆಯಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೫ ॥

೨೪೫

ಹೇಳುವಡೆ ನಾನಾಗಿ ಕೇಳುವಡೆ ನೀನಾಗಿ ಈ ಉಭಯದ ಸಾವು ಮೂಲೆಯಲ್ಲಿ ಬಿದ್ದ ಜೋಳವಾಳಿಗೆ ಓಲೈಸಿ ಬಂಟನಂತಾದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೬ ॥

೨೪೬

ಹೊಟ್ಟೆಯ ಕಕ್ಕುಲತೆಗಾಗಿ ಭಕ್ತರ ಮನೆಯ ಹೊಕ್ಕು ಸೇವೆಯ ಮಾಡುವ ಮಿಟ್ಟೆಯ ಭಂಡರಿಗೆಲ್ಲಿಯದೋ ನೆಟ್ಟನೆ ದೇವತ್ವ? ಈ ಕಷ್ಟಜೀವವ ನೆಟ್ಟನೆ ಕಂಡರೆ ಬಟ್ಟೆಯ ಬಿಡಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೭ ॥

೨೪೭

ಹೊಳೆಯ ಹಗುರದಿಂದ ಹಳ್ಳವ ಹಾಯಬೇಕು. ಬಲ್ಲವರ ಸಂಗದಿಂದ ನಿಂದ ಸಂಸಾರದ ತಳ್ಳಿಯ ಹರಿಯಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥೧೯೮॥

೨೪೮

ಕಾಯ ಹೋಗಿ ಕರ್ಮವ ಮಾಡಿ ಜೀವಕ್ಕೆ ಬಾಧೆಯ ತಂದಿತ್ತೆಂಬರು. ಜೀವನಿಲ್ಲದೆ ಕಾಯ ಕರ್ಮ ಮಾಡುವಾಗ ಅದಾವುದರ ಬಲುಹೋ? ಕಾಯವು ಆ ಜೀವನಿಗೂ ನಿನಗೂ ಸರಿಹುದುಗು. ಎನ್ನನೇಕೆ ಕಾಡಿಹೆ ಗನ್ನತನವೇಕೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೯೯ ॥

೨೪೯

ಹಿಂದೆ ನೀ ಬಂದೆ ನಾನಾ ಭವಂಗಳಲ್ಲಿ ನಾನಾ ವ್ಯಾಪಾರಕ್ಕೆ ನೀ ನೊಡೆಯನಾಗಿ. ಮರ್ತ್ಯದ ಸುಖದುಃಖ ನಿನಗೆ ನಿಶ್ಚಿಂತವಾಗಿಪ್ಪುದು. ಹಿಂದೆ ನಿನ್ನಂತೆ ನಾ ಬಂದು ನೊಂದುದಿಲ್ಲ. ಬಂದೆ ನಾ ಬಸವಣ್ಣನ ಕಥನ ದಿಂದ. ನಾ ತಂದ ಪದಾರ್ಥವೆಲ್ಲವ ನಿಮಗಿತ್ತೆ. ನಾನಂಜುವೆ ಗುರುಲಿಂಗ ಜಂಗಮದಲ್ಲಿ ಪ್ರತ್ಯುತ್ತರಕ್ಕೆ. ಎನಗೆ ಮರ್ತ್ಯದ ಮಣಿಹ ಕೃತ್ಯವಿನ್ನೆಷ್ಟು ದಿನ ಹೇಳಾ? ಅಂದು ನೀವು ಕೊಟ್ಟ ಒಪ್ಪದ ಬೇಟವನೊಪ್ಪಿಸಿದೆ. ಮತ್ತೆ ಇನ್ನು ಸಂದೇಹವೆ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦೦ ॥

೨೫೦

ಪ್ರಭುದೇವರು ಬಂದ ಬರವಿನ ವೃದ್ಧಿಗೆ ಅವಧಿ ಇಲ್ಲ. ಕಲ್ಲ ಮಚ್ಚಿ ದವರ ಕೂಡ ಗೆಲ್ಲ ಸೋಲಕ್ಕೆ ಹೋರಾಡಬಲ್ಲೆವೆಂದು ಗೆಲ್ಲಗೂಳಿಗಳ ಕೂಡ

ಬಲ್ಲತನಕ್ಕೆ ನೆಲೆಗೊಟ್ಟು ಒಳ್ಳಿಹರ ಗುಣವನರಸಿಹೆವೆಂದು ಎಲ್ಲಾ ಠಾವಿನಲ್ಲಿ ತಿರುಗಿ ಬಂದು ಮಾಟಮಾಟವಲ್ಲಿ[೧] ನಿಷ್ಠೆಯ ತೋರಿಹೆವೆಂದು ಕಷ್ಟಗುಣವಾದ ಬೇಟವ ಹೊಕ್ಕೆವೆಂಬರಿಗೆ ಕಷ್ಟ ಗುಣ ಬಿಡದು. ಭಾವದ ಕದಳಿಯಂ ಮರೆದು ವಾಯದ ಕದಳಿಯಂ ಹೊಕ್ಕು ಭಾವದ ಭ್ರಮೆಯಿಂದ ತಿರುಗಿ ಬಂದ ಸಂಗನಬಸವಣ್ಣನಿಗೆ ಸಂಗವಿಶೇಷವ ತೋರದೆ ಹಂಗಿಸಿ ಕೊಟ್ಟೆಯಲ್ಲಾ! ಸಂಗಮೇಶ್ವರ ದೇವರೆಂಬ ಕಲ್ಲಿನ ಮನೆಯ ಕಲ್ಲಿನೊಳಗೆ ಹೊಕ್ಕು ವಲ್ಲಭನನರಿಯದೆ ಪ್ರಭು ಮೊದಲಾಗಿ ಇವರೆಲ್ಲರು ಕೆಟ್ಟರಲ್ಲಾ! ಎನಗೆ ಬಲ್ಲತನವ ತೋರಿದ ಎನ್ನ ವಲ್ಲಭ ನೀನೇ. ಚೆನ್ನಬಸವಣ್ಣಂಗೆ ಸಂಗನ ಬಸವಣ್ಣಂಗೆ ಪ್ರಮಥ ಗಣಂಗಳು ಮೊದಲಾದವರಿಂಗೆ ಎನಗೆ ಎನ್ನ ನಿಃಕಳಂಕ ಮಲ್ಲಿಕಾರ್ಜುನಂಗೆ ನಿನ್ನಿಂದ ಭವವಿರಹಿತನಾದೆ ॥ ೨೦೧ ॥

೨೫೧

ಅನಲನೆಂಬ ಗಂಡಂಗೆ ತೃಣವೆಂಬ ಹೆಂಡತಿ ಮೋಹದಿಂದ ಅಪ್ಪಲಾಗಿ ಬೇಯ್ವು ಆಕೆಯ ಕರಚರಣಾದಿಗಳು ಆ ಗಂಡನಲ್ಲಿ ಒಪ್ಪವಿಟ್ಟಂತಿರಬೇಕು. ಇಂತಪ್ಪ ಇಷ್ಟಲಿಂಗವ ದೃಷ್ಟದಲ್ಲಿ ಹಿಡಿದುದಕೆ ಇದೇ ದೃಷ್ಟ. ಹೀಗಲ್ಲದೆ ಲೌಕಿಕಾರ್ಚನೆಯ ಮಾಡುವ ಪೂಜಕರ ಮೆಚ್ಚನೆಂದ ನಚ್ಚಿನಗ್ಘಣಿಯ ಮಜ್ಜನದೊಡೆಯ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦೨ ॥

೨೫೨

ನೆನಹಿನ ನಿಧಿಯ ನೋಡಾ ಎನ್ನ ಅರಿವಿನ ಘನವ ನೋಡಾ ಆಹಾ ಎನ್ನ ಪುಣ್ಯವೆ! ಆಹಾ ಎನ್ನ ಭಾಗ್ಯವೆ! ಆಹಾ ಎನ್ನ ಕಂಗಳ ಮನೆಯ್ವ ಮಾಡಿಕೊಂಡಿಪ್ಪ ನಿತ್ಯದ ಬೆಳಗೆ! ಎನ್ನ ಧ್ಯಾನದೊಳಗಣ ದೃಢವೆ! ಎನ್ನ ಸುಖದೊಳಗಣ ಸುಗ್ಗಿಯೆ! ನಿಃಕಳಂಕ ಮಲ್ಲಿಕಾರ್ಜುನ ನಿಮ್ಮ ಶರಣ ಪ್ರಭುವಿನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ॥ ೨೦೩ ॥

---

೧. ಮಠಮಠದಲ್ಲಿ (ಬ)

## ೨. ಮಾಹೇಶ್ವರ ಸ್ಥಲ

೨೫೩

ಇನ್ನು ಕೇಳಿ ಅರಿದೆನೆಂಬನ್ನಬರ ಮುಂದಕ್ಕೆ ಮರವೆಯೆ? ಮುಂದ ನರಿದು ಹಿಂದ ಮರೆವಂಗೆ ಭೂತನ ಕಾಯುವೆ? ಹಿಂದಕ್ಕೋ ಮುಂದಕ್ಕೋ? ಈ ದ್ವಂದ್ವದ ಭೇದದ ಇದರಂದವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥೧॥

೨೫೪

ಈಶ್ವರನ ಅಂಗವ ತಾಳಿದ ಮತ್ತೆ ಪರಕೆ ದೇಗುಲವಾಗಿರಬೇಕು. ತ್ರಿವಿಧದ ಆಶೆಗೆ ಮನ ಓಸರಿಸ[1]ದಂತಿರಬೇಕು ಆತನ ಗುಣ. ನಿಜಾರ್ತನು ತಾನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೨೫೫

ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿಯಾದೆವೆಂಬ ದಿಂಡೆಯ ಮತದ[2] ಹಿರಿಯರುಗಳೆಲ್ಲ ಕೇಳಿರೋ. ಬಲೆಯೊಳಗಾದ ಹುಲಿಗೆ ಬಲಾತ್ಕಾರ ಉಂಟೇ? ಲಲನೆಯರ ಸಂಸರ್ಗದಲ್ಲಿರ್ದು ಚಲನೆ ಇಲ್ಲದ ಬಿಂದು ಉಂಟೇ? ಸಲಿಲದೊಳ ಗಣ ತೃಷೆಗೆ ಆಪ್ಯಾಯನ ಉಂಟೇ? ಶಿಲೆಯೊಳಗಣ ಚೆಂಕಿಗೆ ಅಲಂಕಾರ ಉಂಟೇ? ಅರಿವನರಿದಂಗಕ್ಕೆ ಮರೆವೆಗೆ ತೆರನುಂಟೇ? ಆ ತೆರನನರಿದು ಹರಿ ದಲ್ಲಿಯೆ ಅರಿಕೆ ತಾನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

ಅರ್ಥ:—ಸಕಲ ಪದಾರ್ಥವ ಲಿಂಗಕ್ಕರ್ಪಿಸಿ ಲಿಂಗಪ್ರಸಾದವ ಸ್ವೀಕರಿಸುತ್ತಿರ್ದ ಜಿಹ್ವಾಲಂಪಟತ್ವ ಇಲ್ಲದೆ ಇದ್ದವರು ಸ್ತ್ರೀಯರುಗಳ ಸಂಸರ್ಗವ ಮಾಡುತ್ತಿರ್ದು ಮನ್ಮಥ ವಿಕಾರವಿಲ್ಲದೆ ಲಿಂಗಭೋಗೋಪಭೋಗಿಗಳಾಗಿದ್ದೇವೆ ಎಂದು ದಿಂಡೆಯ ತನದಲ್ಲಿ ಚರಿಸುವ ಜ್ಞಾನಿಗಳೆನಿಸಿಕೊಂಬುವರೆಲ್ಲ ಆಲಿಸಿರೋ. ಬಲೆಯಲ್ಲಿ ಸಿಕ್ಕಿದ ಹುಲಿಗೆ ಬಲೆಯ ಹರಿದು ಹೊರಗಾಗಿ ಹೋಗುವ ಸಾಮರ್ಥ್ಯ ಉಂಟೇ? ಎಂಬ ಹಾಗೆ ಸ್ತ್ರೀಯರುಗಳ ತತ್ಸಂಗದಲ್ಲಿರ್ದು ನಾವು ಯತಿಗಳು ಜಿತೇಂದ್ರಿಯರು ಎಂದರೆ ಆದಾರೆ? ಆಗಲರಿಯರು ಎಂಬ ಹಾಗೆ ಜಿಹ್ವಾಲಂಪಟ ಗುಹ್ಯಲಂಪಟತ್ವಕ್ಕೊಳಗಾ ಗಿರ್ದು ನಾವು ಜಿಹ್ವಾಲಂಪಟತ್ವವಿಲ್ಲದವರೆಂದರೆ ಆಗಲರಿಯರು. ಕಲ್ಲಿನಲ್ಲಿಪ್ಪ ಮಂದಾಗ್ನಿಗೆ ಕುರುಹಿಲ್ಲ ಎಂಬ ಹಾಗೆ ಉದರದೊಳಗಿಪ್ಪ ವಡಬಾಗ್ನಿಗೆ ತೃಷೆ ಇಲ್ಲ ಎಂಬ ಹಾಗೆ ಮಹಾಲಿಂಗ ಸ್ವರೂಪ ನಾನೆಂದರಿದ ಜ್ಞಾನ ತಿಳಿದಾತಂಗೆ ಜಿಹ್ವಾಲಂಪ

೧. ಆಸರಿಸ (ಡ)   ೨. ಮಾತಿನ (ನ)

ಟತ್ವ ಗುಹ್ಯಲಂಪಟತ್ವವು ಮುಂದುಗೊಂಡು ಚರಿಸುವ ಅಜ್ಞಾನಕ್ಕೆ ತೆರಹಿಲ್ಲ. ಮಹಾ ಲಿಂಗ ಸ್ವರೂಪನೇ ತಾನೆಂಬ ನಿಲುಕಡೆಯು ತಿಳಿದು ಜಿಹ್ವಾಲಂಪಟತ್ವ ಗುಹ್ಯಲಂಪಟತ್ವ ದೊಡನೆ ಕೂಡಿ ಚರಿಸುವ ಅಜ್ಞಾನವನ್ನು ಛೇದಿಸುವಲ್ಲಿ ಅರಿವು ಸ್ವರೂಪವಾದ ಮಹಾಲಿಂಗವೇ ತಾನಾಗಿರ್ದನೆಂಬುದರ್ಥ.

೨೫೬

ಕೊಲ್ಲಬಾರದೆಂದು ಎಲ್ಲಿಕ್ಕೆ ಹೇಳಿ ಮತ್ತೆ ಗೆಲ್ಲಿ ಸೋಲಿನ ಮಾತು ಬಂದರೆ ಅಲ್ಲಹುದೆಂದು ಹೊಳೆಯಲೇಕೆ? ಅದೇ ಕೊಲ್ಲದ ಕೊಲೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೨೫೭

ಕ್ರೀವಂತಂಗೆ ಪಡಿಪುಚ್ಛಕ್ಕೆ ಬಂದಾಗವೇ ಆಚಾರಕ್ಕೆ ಭಂಗ. ಪಟುಭಟಂಗೆ ರಣಕ್ಕೆ ಹಂದೆಯಾದಲ್ಲಿಯೇ ಮಾತಿನ ಕೊರತೆ. ವಿರಾಗಿ ರಾಗಿಯಾದಲ್ಲಿಯೇ ಸಮತೆ ಎಂಬುದಕ್ಕೆ ಸಮಾಧಾನವಿಲ್ಲ. ವಿರಕ್ತನಾದಲ್ಲಿ ಸ್ತುತಿ ನಿಂದ್ಯಾಧಿಕಂಗಳಲ್ಲಿ ಅಂಗಭಾವ ನಿಂದಲ್ಲಿಯೇ ವಿರಕ್ತಿ ಎಂಬ ಸಂಗವಿಲ್ಲ. ಇಂತೀ ಇವರ ಸಂದನಳಿ ದಲ್ಲದೆ ಕ್ರೀಭಾವ ಜ್ಞಾನ ಒಂದೂ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೨೫೮

ಗುರುವಿಂಗೆ ತನುವ ಕೊಟ್ಟೆಹೆವೆಂದು ಗುರುವಿಗೆ ಭವಭಾರವ ಹೊರಿಸ ಲೇಕೋ? ಲಿಂಗಕ್ಕೆ ಮನವ ಕೊಟ್ಟೆಹೆವೆಂದು ಬೆಂಬಳಿಯಲ್ಲಿ ತಿರುಗಲೇ ತಕ್ಕೋ? ಜಂಗಮಕ್ಕೆ ಧನವ ಕೊಟ್ಟೆಹೆವೆಂದು ಪಾಶವ ತಪ್ಪಿಸಲೇಕೋ? ಕೊಟ್ಟೆನೆಂಬುದು ಆಶೆಯೋ ನಿರಾಶೆಯೋ? ಕೊಡುವುದಕ್ಕೆ ತಾನಾರೆಂಬುದ ನರಿದು ಇದಿರಿಟ್ಟು ಈಸಿಕೊಂಬುವನಾರೆಂದರಿದು ಮಾಡುವ ಭಕ್ತಿಗೆ ಕೇಡಿಲ್ಲದ ಪದವೆಂದರಿದು ಕೊಟ್ಟವ ಭಕ್ತ ಕೊಂಡವ ದೇವ ಇವರ ಬಂಧ ಎನಗೊಂದೂ ಬೇಡ ನಿಮ್ಮಲ್ಲಿ ಹಿಂಗದಂತಿರಿಸು. ಆನಂದಕ್ಕತೀತ ಸ್ವಾನುಭಾವಾತ್ಮಕ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೨೫೯

ಚಿತ್ತಶುದ್ಧಿಯನರಿದು ನುಡಿಯಬೇಕೆಂಬರು. ನಡೆಯದು ಹೊಡೆವಾಗ ಹೂಡಿದ ಬಂಡಿಯು ಆಡುವಲ್ಲಿ ಧಾತ್ರಿಯು. ಈ ಭೇದವನರಿಯದೆ ಗಾಜಿನ ಕುಪ್ಪಿಗೆಯಲ್ಲಿ ತೋರುವ ಪ್ರತಿಬಿಂಬದಂತೆ ಅದ ಭೇದಿಸಿ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೭ ॥

೨೬೦

ದ್ವೇಷವಿಲ್ಲದ ಭಕ್ತ ಆಶೆ ಇಲ್ಲದ ವಿರಕ್ತ ಸಂಸಾರಪಾಶವಿಲ್ಲದ ಗುರು ಈಶ್ವರ ರೂಪವಲ್ಲ. ಆತ ಸದಾಶಿವ ಮೂರ್ತಿಗಿಂದತ್ತ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೨೬೧

ನಿರವಯ ರೂಪಾಯಿತೆಂದು ನುಡಿವರು. ಬಯಲು ರೂಪಾದ ಪರಿ ಇನ್ನೆಂತೋ ? ಮೊದಲುಗೆಟ್ಟು ಲಾಭವನರಸುವ ಪರಿ ಇನ್ನೆಂತೋ ? ರೂಪಿಗೆ ಬಂದುದು ನಿರೂಪವಾದ ಮತ್ತೆ ರೂಪಿಗೀಡಾಗಿಪ್ಪುದೇ ? ಇದು ಕಾರಣ ತಮ್ಮಲ್ಲಿದ್ದ ಜ್ಞಾನವ ತಾವರಿಯದೆ, ತಾವು ಹಿಡಿದಿದ್ದ ಲಿಂಗದ ಆದಿ ಅಳಿವು ಉಳಿವು ಉಭಯವ ಭೇದಿಸಲರಿಯದೆ, ಜ್ಞಾನವ ಸಾಧಿಸಲರಿಯದೆ ಸಾಧ್ಯರೆಂತಾದಿರೋ ? ಅಸಾಧ್ಯ ನಿರುಪಮ ನಿರವಯ ಪರಂಜ್ಯೋತಿ ಲಿಂಗವು ಕುರುಹಿಡಿದ ಪರಿ ಇನ್ನೆಂತೋ? ಕುರುಹಿನ ಮರವೆಯೊಳಗಿಪ್ಪ ವಸ್ತುವ ಕಾಬ ತೆರ ನಿನ್ನಾವುದೋ ? ಇವೆಲ್ಲವು ಮರವೆಯ ಮಾತಲ್ಲದೆ ಬರಿಯ ಹೋರಟೆಗೆ. ಇವರು ಬಲ್ಲವರಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೨೬೨

ಭೇರಿಯು ಇರಹವಾದಲ್ಲಿ ಅದುರಲ್ಲದೆ ಸುನಾದವಿಲ್ಲ. ಪಾಷಾಣದ ಬೆಳಗು ಮೀರಿದಲ್ಲದೆ ರತ್ನವಲ್ಲ. ಇಂತೀ ಮರ್ಮದ ಭೇದವೇತುಂಟೆಂದಡೆ ಭೇರಿ ಇದ್ದಲ್ಲದೆ ನಾದಕ್ಕೆ ಸಾಕಾರವಿಲ್ಲ. ಪಾಷಾಣವಿಲ್ಲದೆ ದೀಪ್ತಿಗೆ ತೋರಲೊಡಲಿಲ್ಲ. ಕ್ರೀಶುದ್ಧಾತ್ಮನಾಗಿಯಲ್ಲದೆ ವಿರಕ್ತಿಯನರಿವುದಕ್ಕೆ ಒಡಲಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೨೬೩

ಮಣ್ಣಬೆಕ್ಕು ನಸ್ನಿಯ ಮೂಷಕನ ಮುಟ್ಟಿಸುದುಂಟೇ ? ಜಗಗನ್ನರ ಕ್ರೀವಿರಕ್ತಿ ಪ್ರಸನ್ನನ ಮುಟ್ಟಿದುದುಂಟೇ ? ಇವ ಚೆನ್ನಾಗಿ ತಿಳಿದು ನೋಡಾ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೧೧ ॥

೨೬೪

ವ್ರತವ ಮಾಡಿಕೊಂಡಿಹೆವೆಂದು ಗನ್ನ ಘಾತಕತನದಲ್ಲಿ ನಡೆವ ಅಧಿಕರ ನೋಡಾ. ತನುವಿಂಗೆ ವ್ರತವೋ ? ಮನಕ್ಕೆ ವ್ರತವೋ? ಮಡಕಿಗೆ ವ್ರತ

ಬೇಕೆಂದು ಸಡಗರಿಸುತ್ತಿಪ್ಪ ಗತಿಹೀನರ ಕಂಡು ನಾಚಿತ್ತೆನ್ನ ಮನ. ದಿಟವ ವ್ರತವ ಹೇಳಿಹೆ ಕೇಳಿರಣ್ಣಾ. ಹುಸಿ ಕೊಲೆ ಕಳವು ಪಾರದಾರ ಅತಿ ಚಾಂಡಾಲವಮಂ ಬಿಟ್ಟು ಪರದ್ರವ್ಯಕ್ಕೆ ಕೈಯ್ಯಾನದೆ ಪರರ ಬಾಗಿಲಲ್ಲಿ ನಿಂದು ನೆರೆ ಹೊಲಬುಗೆಟ್ಟು ಅರಿವು ಉಳ್ಳವರು ತಾವೆಂದು ಒರಿದೆ ಹಲುಬುತ್ತಿಪ್ಪವರ ಮಾತಿಗೆ ಒಡಲಾಗದಿಪ್ಪುದೆ ಶೀಲ, ತನ್ನ ಸುಬುದ್ಧಿಯಿಂದ ಸುಕಾಯಕದಿಂದ ಗುರು ಲಿಂಗ ಜಂಗಮಕ್ಕೆ ತನು ಮನ ಧನ ಸವೆಯಿಸಿ ಚಿತ್ತಶುದ್ಧನಾಗಿ ಅರ್ಚಿಸ್ತುತ್ತಿಪ್ಪಂತಿದ್ದುದೇ ವ್ರತ. ಹಾಗಲ್ಲದೆ ಜಾಲಗಾರನ ಕೈಯ್ಯ ದೀಹ[1]ದಂತೆ ಬಾಲೆಯರ ಮನದ ಸೋಲುವೆಯುಂತೆ, ಇಂತಿವರನಳವಾಡಿ ಸಿಕ್ಕಿಸುವ ಪೋಲಿ[2]ಗಾರರಿಗೆಲ್ಲಿಯದೋ ಸತ್ಯ ನಿಃಕಳಂಕ ಮಲ್ಲಿಕಾರ್ಜುನಾ ? ॥ ೧೨ ॥

೨೬೫

ಶಿಶುವಿಂಗೆ ಗುಮ್ಮನಲ್ಲದೆ ದೆಸೆಯ ಬಲ್ಲವರಿಗುಂಟೇ ಭೀತಿ ? ನಿನ್ನಲಸದೊಲುಮೆ ಒಪ್ಪೈಸಿದವರಿಗುಂಟೇ ? ಹುಸಿ ಕೊಲೆ ಕಳವು ಪಾರದಾರ ಇಂತೀ ಪಿಸಿತಪ ಹರಿಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೧. ದೀಪ (ಬ) ೨. ಪೊಲೆಗಾರ, ಪೊಲ್ಲಗಾರ (ಡ)

# ೩. ಪ್ರಸಾದಿ ಸ್ಥಲ

೨೬೬

ಅರ್ಪಿತವ ಭಿನ್ನವ ಮಾಡಬಹುದೇ ಅಯ್ಯಾ? ಸರ್ಪದಷ್ಟವಾದಲ್ಲಿ ಕಚ್ಚಿದ ಠಾವಿನಲ್ಲಿ ಇಪ್ಪುದೇ ವಿಷ? ತನುವಿನ ದರ್ಪವ ಮುರಿದಲ್ಲದೆ ಸಿಕ್ಕದದು ಒಂದು ಠಾವಿನಲ್ಲಿ. ಭಕ್ತಿ ಜ್ಞಾನ ವೈರಾಗ್ಯವೆಂಬ ಈ ಮೂರು ತ್ರೋಟ್ಟು ಬಿಟ್ಟ ಶರಣಂಗೆ ಅರ್ಪಿತವೆರಡಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೨೬೭

ಆದಿ ಶೂನ್ಯ ಲಿಂಗಕ್ಕೆ ಮಜ್ಜನವಾವುದೋ? ಕುಸುಮ ಭರಿತ ಲಿಂಗಕ್ಕೆ ಪೂಜೆಯಾವುದೋ? ಪರಿಪೂರ್ಣಲಿಂಗಕ್ಕೆ ನೈವೇದ್ಯವಾವುದೋ? ಅರ್ಪಿಸುವದಕ್ಕೆ ಮುನ್ನವೆ ಅರ್ಪಿತವಾಗಿ ತೃಪ್ತಿಯಾಯಿತ್ತು ಮತ್ತೆ ಮುಟ್ಟಿ ಕೊಡುವ ಠಾವಿನ್ನಾವುದೋ? ಅಟ್ಟಮುಡಕೆಯ ನೆತ್ತಿಯ ಮೇಲೆ ಹೊತ್ತು ತಿರುಗುವನಂತೆ ಹೊಟ್ಟೆಗೆ ಕಾಣದೆ ಇವರು ಕೆಟ್ಟ ಕೇಡ ನೋಡಾ. ಈ ಬಟ್ಟ ಬಯಲ ಮೆಟ್ಟದಂತೆ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೨೬೮

ಇಷ್ಟಲಿಂಗವ ಕೊಂಡು 'ಅರ್ಪಿತದ ಭೋಜನವೆಂದು ತುತ್ತ ನುಂಗಿಕೊಂಡು, ಮಿಥ್ಯ ಭಾಜನರಾಗಿ ಈ ಅಚ್ಚುಗದಲ್ಲಿ ಬಿದ್ದು ಸಾವರಿಗೆತ್ತಣ ಲಿಂಗಾರ್ಪಿತವೆಂದೆ. ಮಜ್ಜನ, ಮೈಥುನ ಹೊಂದಿಹಸುಖ, ಶೃಂಗಾರ ಇದರೊಳಗೆ ವರ್ಜಿತಲಿಂಗ. ಲಿಂಗಕ್ಕೊಂದು ಹಂಗು, ತಾ ನುಂಗುವದಕ್ಕೊಂದು ಹಂಗು. ಇದರಂದವ ನರಿಯದೆ ಬೆಳದಿಂಗಳಲ್ಲಿ ನಿಂದು, ಹೆಂಡವ ಕೊಂಬವಂಗೆ ಲಿಂಗದ ಸಂದನೇನ ಬಲ್ಲ? ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೨೬೯

ಕಂಡು ನೋಡಿದಲ್ಲಿ ಕಣ್ಣಿಂಗೆ ಸುಖ. ಮುಟ್ಟಿ ನೋಡಿದಲ್ಲಿ ತ್ವಕ್ಕಿಂಗೆ ಸುಖ. ಉಂಡು ನೋಡಿದಲ್ಲಿ ಬಾಯಿಂಗೆ ಸುಖ. ಮುಖಮುಖಂಗಳಿಂದ ಭಿನ್ನವಲ್ಲದೆ ಅರ್ಪಿತ ಅವಧಾನ ಏಕಮುಖವೆಂದೆ. ಜಾತಿಗೆ ಬೇರೆ ಹರುಗೋಲುಂಟೇ? ಆಚಾರಕ್ಕೆ ಬೇರೆ ಕುಲ ಛಲ ಉಂಟೇ? ಶಿಲೆ ಹಲವು ರೂಪಾದ ತೆರನಂತೆ ಅವರ ಒಲವರದ ರೂಪು ಅವರ ಛಲದ ಗುಣ. ಬಲವಂತರೆಲ್ಲ ನಳಿಕೆಯ

ಕೀರನಂತೆ ಅವರು ದಿಕ್ಕಾಗಲರಿಯರು. ನಾಗ್ಮೊಗವಪ್ಪವರ ಒಪ್ಪವಿಟ್ಟುಕೊಳ್ಳ ನಿಃಕಳಂಕ ಮಲ್ಲಿಕಾರ್ಜುನ ॥ ೪ ॥

೨೭೦

ತನುವಿದ್ದಡೂ ಆಶೆ ಅಪೇಕ್ಷೆಗೆ ಒಡಲಿಲ್ಲದಿರಬೇಕು. ಒಡಲಿದ್ದಡೂ ಪಂಚೇಂದ್ರಿಯದೊಳಗಾದ ಇಂದ್ರಿಯಕ್ಕೆಡೆಗುಡದಿರಬೇಕು. ಇಂದ್ರಿಯಂಗಳಿದ್ದಡೂ ವಾಯು ಸಂಚಾರಕ್ಕೆ ಮುಂಚದಿರಬೇಕು. ಇಂತೀ ಅಂಗವಿದ್ದೂ ನಿರಂಗವೆಂಬುದಕ್ಕೆ ಶುಭಸೂಚನೆ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿವುದಕ್ಕೆ ॥ ೫ ॥

೨೭೧

ತಾಗಿವ ಮತ್ತೆ ಬಾಗುವರೆಂಬುದನೆಲ್ಲರೂ ಬಲ್ಲರು. ಸೋಂಕಿದ ಮತ್ತೆ ಅರ್ಪಿತವೆಂಬುದನೆಲ್ಲರೂ ಬಲ್ಲರು. ಅರ್ಪಿತ ಅನರ್ಪಿತವೆಂಬುದನ್ನು ಮುಂದಕ್ಕೆ ಮುನ್ನವೆ ಅರಿದು ಭೇದಿಸುವ ಅರ್ಪಿತದ ಅವಧಾನಿಗೆ ಬಿಡುಮುಡಿ ಇಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೨೭೨

ತೊಗಲ ಕೈಯ್ಯಲ್ಲಿ ಶಿಲೆಯ ಲಿಂಗವ ಹಿಡಿದು ಮಣ್ಣಪರಿಯಾಣದಲ್ಲಿ ಓಗರವನಿಕ್ಕಿ ಲಿಂಗಕ್ಕೆ ನೈವೇದ್ಯವ ತೋರಿದಡೆ ಓಗರಸವಿದುದಿಲ್ಲ, ಕೈ ನೈವೇದ್ಯದ ರುಚಿಯನರಿದುದಿಲ್ಲ. ಒಳಗು ಶುದ್ಧವಿಲ್ಲದೆ, ಮುಟ್ಟಿ ಅರ್ಪಿತವೆಂದಡೆ, ಮೆಚ್ಚುವರೇ ಪ್ರಾಣಲಿಂಗಸಂಬಂಧಿಗಳು ? ಉಂಡವನುಂಡಂತೆ, ತೇಗುವ ಸಂದಳಿದು ದ್ವಂದ್ವ ಹಿಂಗಿ, ನಿಜವಾರೆಂಬುದ ವಿಚಾರಿಸಿ ಕೊಡುವವದಕ್ಕೆ ಮೊದಲೇ ಕೊಂಡವರಾರು ಎಂಬುವ ಭಾವಿಸಿ; ಭಾವಿಸುವುದಕ್ಕೆ ಮೊದಲೇ ಭಾವನೆಗೆ ಬಂದವರಾರೆಂದು ವಿಚಾರಿಸಿ, ಬೀಜ ನೆರೆ ಬಲಿದು, ಪುನರಪಿಗೆ ಬಪ್ಪಂತೆ ಲಿಂಗವು ತಾನಾಗಿ, ಸಂದೇಹವಿಲ್ಲದೆ ಸೋಂಕುವುದಕ್ಕೆ ಮುನ್ನ ಅರ್ಪಿತ ನಿಂದಾಯಿತ್ತಾಗಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಪ್ರಾಣಲಿಂಗ ಸಮರ್ಪಣ॥ ೭॥

**ಅರ್ಥ:— ಸಮರಸ ಭಾವವ ತಿಳಿದು ಚರಿಸಲರಿಯದ ಭಿನ್ನಭಾವಿಗಳು ತಮ್ಮ ಜಡಹಸ್ತದಲ್ಲಿ ಚಿತ್ಕಲಾಲಿಂಗವಲ್ಲದ ಜಡಲಿಂಗವನು ಗ್ರಹಿಸಿ, ಮೃತ್ತಿಕೆಯ ಹರಿವಾಣದಲ್ಲಿ ಪದಾರ್ಥವನೆಡೆಮಾಡಿ, ಲಿಂಗಕ್ಕೆ ನೈವೇದ್ಯವ ಮಾಡಿ ಸಮರ್ಪಿಸಿದಡೆ, ಆ ಪದಾರ್ಥವು ಲಿಂಗಕ್ಕೆ ಸಮರ್ಪಿತವಾಗಲಿಲ್ಲ. ಆ ಜಡಹಸ್ತದಿಂದೆ ಪದಾರ್ಥವ ನರ್ಪಿಸಿಕೊಂಡಡೆ ಅವರಿಗೆ ಪ್ರಸಾದಸ್ವೀಕಾರವಳವಡಲಿಲ್ಲ. ಅಂತರಂಗದಲ್ಲಿ ಸಮರಸ**

ಜ್ಞಾನವಿಲ್ಲದೆ ಭಿನ್ನಭಾವದಲ್ಲಿ ತೊಗಲ ಕೈಯ್ಯಲ್ಲಿ ಶಿಲೆಯ ಲಿಂಗವ ಪಿಡಿದು, ಮಣ್ಣ ಪರಿಯಾಣದಲ್ಲಿ ಪದಾರ್ಥವನೆಡೆಮಾಡಿ, ಲಿಂಗಕ್ಕರ್ಪಿಸಿದಡೆ, ಪ್ರಾಣಲಿಂಗವೇ ಈ ಇಷ್ಟಲಿಂಗವು ? ಅರಿವಿನ ಹಸ್ತವೇ ಈ ಹಸ್ತವು ? ಚಿತ್‌ಪರಿಯಾಣವೇ ಈ ಪರಿಯಾಣವು ? ಆತ್ಮನೆಂಬ ನೈವೇದ್ಯವೇ ಈ ನೈವೇದ್ಯವೆಂಬ ಸಂಬಂಧವ ತಿಳಿದಾಚರಿಸುವ ಶರಣರುಗಳು ಒಡಂಬಡುವರೇ ? ಹುಳಿಯನುಂಡವ ಹುಳಿಯನೇ ತೇಗುವ, ಸಿಹಿಯನುಂಡವ ಸಿಹಿಯನೇ ತೇಗುವ, ಎಂಬ ಹಾಗೆ ಭಿನ್ನಭಾವಿಗಳು ಶರಣ ಲಿಂಗವೆಂಬೆರಡಳಿದು, ಶರಣ ಲಿಂಗ ಒಂದೇ ಬ್ರಹ್ಮವೆಂದು ಪರಾಂಬರಿಸಿ ರೂಪಪದಾರ್ಥವನ್ನು ಇಷ್ಟಲಿಂಗಕ್ಕೆ ಸಮರ್ಪಿಸಿ ದೃಷ್ಟಕ್ಕೆ ಆ ಪದಾರ್ಥ ಕೈಕೊಂಡವರಾರು ? ಪ್ರಾಣಲಿಂಗವೇ ಇಷ್ಟಲಿಂಗವಾಗಿ ಆರ್ಪಿಸಿಕೊಂಡಿತ್ತೆಂದು ನೆನೆದು ಪ್ರಾಣಲಿಂಗವೇ ಇಷ್ಟಲಿಂಗವೆಂದು ನೆನೆದಷ್ಟಕ್ಕೆ ಮನದಲ್ಲಿ ಪ್ರಾಣಲಿಂಗವಾಗಿ ಬಂದವರಾರು? ಇಷ್ಟಲಿಂಗವೇ ಪ್ರಾಣಲಿಂಗವಾಗಿ ಬಂದಿಪ್ಪುದೆಂದು ಪರಾಂಬರಿಸಿ, ಅದು ಹೇಗೆಂದೊಡೆ, ಚಿತ್ತವು ಅಧಿಕವಾಗಿ ದೃಢವಾಗಿ ಮರಳಿ ಅಂಕುರವಾಗುವ ಹಾಗೆ, ಪ್ರಾಣಲಿಂಗವೇ ಇಷ್ಟಲಿಂಗವೆಂಬ ನೈಷ್ಠೆಯುಂಟಾದಲ್ಲಿ, ಇಷ್ಟಲಿಂಗದ ಚಿತ್ಕಲೆಯೇ ಮನದಲ್ಲಿ ಪ್ರಾಣಲಿಂಗವಾಗಿ ಇಷ್ಟಲಿಂಗ ಬೇರೆ, ಪ್ರಾಣಲಿಂಗ ಬೇರೆ, ಎಂಬ ಸಂಕಲ್ಪವಿಲ್ಲದೆ, ರೂಪಿನೊಳಗಣ ಪಂಚವಿಷಯಂಗಳು ಪಂಚೇಂದ್ರಿಯಂಗಳ ತಟ್ಟಿದಷ್ಟಕ್ಕೆ ಪ್ರಾಣಲಿಂಗವೇ ಇಷ್ಟಲಿಂಗವೆಂದು ರೂಪುಪದಾರ್ಥವನರ್ಪಿಸಿದಲ್ಲಿ, ಇಷ್ಟಲಿಂಗವೇ ಪ್ರಾಣಲಿಂಗವಾಗಿ, ರೂಪಿನೊಳಗಣ ಪಂಚವಿಷಯಂಗಳನರ್ಪಿಸಿಕೊಂಬುದೆಂಬ ತನ್ನ ಸಮರಸ ಜ್ಞಾನದಿಂದವೇ ಪ್ರಾಣಲಿಂಗದೊಡನೆ ಕೂಡಿದ ಪಂಚವಿಧ ಲಿಂಗಂಗಳಿಗೆ ಸಮರ್ಪಣೆಯಾದುದಾಗಿ, ರೂಪು ಇಷ್ಟಲಿಂಗಾರ್ಪಣವಾದಲ್ಲಿ, ಆ ರೂಪಿನೊಳಗಣ ರುಚಿಯು ಪ್ರಾಣಲಿಂಗಕ್ಕರ್ಪಿತವಾಗುತ್ತಿಹುದೆಂಬುದರ್ಥ.

೨೭೩

ನೆಲ ತಳವಾರನಾದಡೆ ಕಳ್ಳಂಗೆ ಹೋಗಲೆಡೆಯುಂಟೇ ? ಸರ್ವಾಂಗಲಿಂಗಿಗೆ ಅನರ್ಪಿತ ಉಂಟೇ ? ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೨೭೪

ಬಂದ ಪದಾರ್ಥವ ಸವಿದು ಚಪ್ಪರಿದು ಅಹಾ ಲಿಂಗಕ್ಕೆ ಅರ್ಪಿತವಾಯಿತ್ತೆಂದು ಕಂಗಳ ಮುಚ್ಚಿ ಅಂಗವ ತೂಗಿ, ಮಹಲಿಂಗವೇ ನೀನೇ ಬಲ್ಲೆ ಎಂದು ಕಂಡವರು ಕೇಳುವಂತೆ ಹಿಂಗವ ಲಿಂಗಾಂಗಿ ಇವನೆಂದು ವಂದಿಸಿಕೊಳ್ಳಬೇಕೆಂದು, ಅಂದಗಾರಿಕೆಯಲ್ಲಿ ನಡೆವ ಭಂಡರಿಗೆಲ್ಲಿಯದೋ ಲಿಂಗಾರ್ಪಿತ ? ಲಿಂಗಕ್ಕೆ ಸಂದ ಸವಿಯ ಹಿಂದೆ ಮುಂದೆ ಇದ್ದವರು ಕೇಳುವಂತೆ, ಲಿಂಗಾರ್ಪಿತ ಉಟ್ಟಿ ಭ್ರಮರಕೊಂಡ ಕುಸುಮದಂತೆ, ವರ್ಣವ ಕೊಂಡ ಕಿರಣದಂತೆ, ವಾರಿಕೊಂಡ

ಸಾರದಂತೆ ತನ್ನಲ್ಲಿಯೇ ಲೇಪ. ಅರ್ಪಿತ ಅವಧಾನಿ ಹೀಗಲ್ಲದೆ ಕಲ್ಲೊಳಗಿಪ್ಪ ಕಿಲ್ಲಿನಂತೆ ಇನ್ನಾರಿಗೆ ಹೇಳುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೨೭೫

ಭಕ್ತಿಸೂತ್ರ ಬಸವಣ್ಣಂಗೆ. ಭಾವಸೂತ್ರ ಚೆನ್ನಬಸವಣ್ಣಂಗೆ. ಜ್ಞಾನ ಸೂತ್ರ ಪ್ರಭುದೇವಂಗೆ. ಇಂತೀ ಸ್ಥೂಲ ತನು ಬಸವಣ್ಣಂಗೆ. ಸೂಕ್ಷ್ಮತನು ಚೆನ್ನಬಸವಣ್ಣಂಗೆ. ಕಾರಣ ತನು ಪ್ರಭುದೇವಂಗೆ. ಕಾಯ ಬಸವಣ್ಣನಾಗಿ, ಜೀವ ಚೆನ್ನಬಸವಣ್ಣನಾಗಿ, ಉಭಯದರಿವು ಪ್ರಭುದೇವರಾಗಿ, ಇಂತೀ ತ್ರಿವಿಧ ಪ್ರಸಾದ ಎನಗೆ ನಿಂದು ಎನ್ನ ಜನ್ಮವಾಸನೆ ಬಿಡದಿದೆ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ. ಈ ವಾಸನೆ ನಷ್ಟವಾಗಿಯಲ್ಲದೆ ಎನ್ನ ಭಾವ ನಷ್ಟವಿಲ್ಲ॥೧೦॥

೨೭೬

ರಸ ಆತ್ಮನಂಗ, ಗಂಧ ವಾಯುವಿನಂಗ, ರೂಪು ಭಾವದಂಗ, ಶಬ್ದ ಆಕಾಶದಂಗ, ಸ್ಪರ್ಶ ಪೃಥ್ವಿಯಂಗವಾಗಿ ಅಂಗೀಕರಿಸುವಲ್ಲಿ ಪಂಚೇಂದ್ರಿಯ ಮುಖಂಗಳಿಂದ ಅರ್ಪಿಸಿಕೊಂಬುವನಾರು ಹೇಳಾ. ಅದು ಸ್ಥಾಣು ಚೋರನಂತೆ, ರಜ್ಜು ಸರ್ಪನಂತೆ. ತಿಳಿದು ನೋಡಲಿಕ್ಕೆ ಮತ್ತಲ್ಲಿ ಏನೂ ಇಲ್ಲ. ತನ್ನನರಿದು ಮುಟ್ಟುವಲ್ಲಿ ತಾನು ತಾನೇ. ತನ್ನನರಿಯದೆ ಮುಟ್ಟುವಲ್ಲಿ ಇಂದ್ರಿಯಂಗಳು ಅನ್ಯ ಭಿನ್ನವಾಗಿ ಇಹವು. ಅನ್ಯವಿಲ್ಲದೆ ಚೆನ್ನಾಗಿ ತಿಳಿದು ನೋಡಲಾಗಿ ಅಭಿನ್ನ ಮೂರ್ತಿ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೇ ॥ ೧೧ ॥

೨೭೭

ರಸ ಗಂಧ ರೂಪು ಶಬ್ದ ಸ್ಪರ್ಶವೆಂಬ ಪಂಚೇಂದ್ರಿಯಂಗಳಲ್ಲಿ ಲಿಂಗಕ್ಕೆ ಅರ್ಪಿತವ ಮಾಡಬೇಕೆಂಬ ಭಂಗಿತರ ನೋಡಾ. ಅಂಗುಷ್ಠದಲ್ಲಿ ಸರ್ಪದಷ್ಟ ವಾದಡೆ ಸರ್ವಾಂಗದಲ್ಲಿ ವಿಷವಾವರ್ತಿಸುವದಲ್ಲದೆ ಖಂಡಿತವಾಗಿ ನಿಂದುದಿಲ್ಲ. ಸ್ವರ್ವಾಂಗಲಿಂಗಿಗೆ ಬೇರೆ ಐದು ಸ್ಥಾನದಲ್ಲಿ ಅರ್ಪಿತವ ಮಾಡಬೇಕೆಂಬುದಿಲ್ಲ. ಇಷ್ಟಕ್ಕೊ ಪ್ರಾಣಕ್ಕೊ ಕಟ್ಟಿದ ಈಡ ನೋಡಯ್ಯಾ. ಪರುಷ ರಸ ಕೈಯಲ್ಲಿದ್ದು ಹೇಮವನರಸಿ ತಿರುಗುವನಂತೆ,ಖೇಚರತ್ವದಲ್ಲಿ ಬಹಸಾಮರ್ಥ್ಯವಿರ್ದಡೇನೋ ಅಂಬಿಗನ ಹಂಗನರಸುವನಂತೆ, ನಿತ್ಯ ತೃಪ್ತಂಗೆ ಉಂಡಿಹೆನೆಂದು ತಳಿಗೆ ಕಂಕು ಳೊಳಗಿಪ್ಪ ತೆರನಂತೆ, ಸ್ವಯಂ ಜ್ಯೋತಿಯ ಬೆಳಗುಳ್ಳವಂಗೆ ಜ್ಯೋತಿಯ ಹಂಗಿನಲ್ಲಿ ಕಂಡಿಹೆನೆಂಬ ಭ್ರಾಂತನಂತೆ, ವಾಯುಗಮನವುಳ್ಳವಂಗೆ ತೇಜಿಯನರ

ಸುವನಂತೆ, ಅಮೃತ ಸೇವನೆಯುಳ್ಳವಂಗೆ ಆಕಳವನರಸಿ ಬಳಲಿ ಬಪ್ಪವನಂತೆ, ತಾ ಬೈಚಿಟ್ಟ ನಿಕ್ಷೇಪವ ಹೊಲಬುದಪ್ಪಿ ಅರಸುವನಂತೆ. ಇದು ಕಾರಣ ಐದರ ಗುಣದಲ್ಲಿ ಅರ್ಪಿತವೆಂಬ, ಮೂರರ ಗುಣದಲ್ಲಿ ಮುಕ್ತಿ ಎಂಬ, ಆರರ ಗುಣದಲ್ಲಿ ಆಧಾರವೆಂಬ, ಎಂಟರ ಗುಣದಲ್ಲಿ ಸಂತೋಷವೆಂಬ, ಭ್ರಾಂತು ಹರಿದು ಕಾಳಿಕೆಯೊಳಗಿಪ್ಪ ಕರಿಯ ಬಣ್ಣವ ಕಳೆದು ಬೆಳಗಿನೊಳಗಿಪ್ಪ ಜ್ವಲಿತವಂ ಕಡೆದು ತಾನು ತಾನಾಗಬಲ್ಲಡೆ ಆತನೆ ನಿರ್ಮುಕ್ತ ನಿಃಕಳಂಕ ಮಲ್ಲಿಕಾರ್ಜುನಾ

೨೭೮

ಸಮಯಾಚಾರವೆಂಬ ನಾಮವ ಹೊತ್ತು ನೇಮವ ಮಾಡುತ್ತಿಪ್ಪ ಸದ್ಭಕ್ತರೆನಗೆ ಹೇಳಿರಯ್ಯಾ. ಇದು ಅರ್ಥಕ್ಕೋ, ಪ್ರಾಣಕ್ಕೋ, ಅಪಮಾನಕ್ಕೋ ? ಅಂತಲ್ಲದೆ ಉಂಬ ಓಗರಕ್ಕೋ ? ಸಂತತ ಸಮಯ ಉಚಿತವನರಿವುದಕ್ಕೋ ? ಈ ಸಂಚಿತವನರಿಯದೆ ಮುಂಚೆ ತಾನುಂಬ ಅಶನಕ್ಕೆ ನೀಡಿ ತಾ ಹಿಂಚಾಗಿ ಕೊಂಬ ಪ್ರಸಾದಿಯ ನೋಡಾ. ಆಯತವೆಂದರಿಯದೆ, ಸ್ವಾಯತವೆಂದರಿಯದೆ, ಸನ್ನಿಹಿತ ಪ್ರಸಾದವೆಂದರಿಯದೆ, ಹಮ್ಮುಬಿಮ್ಮಿಗೆ ಹೋರುವ ಉನ್ಮತ್ತರನೇನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೨೭೯

ಸರ್ವೇಂದ್ರಿಯಂಗಳ ಲಿಂಗಮುಖವ ಮಾಡಿ ಲಿಂಗಕ್ಕೆ ಕೊಡಬೇಕೆಂಬುದು ತನ್ನಯ ಸಂದೇಹವೋ ಲಿಂಗದ ಬಂಧವೋ ಎಂಬುದನರಿತುಕೊಡುವಲ್ಲಿ. ಇಂದ್ರಿಯಂಗಳ ನೆನಹಿನಲ್ಲಿ ಲಿಂಗ ಬರಬೇಕೋ ಲಿಂಗದ ನೆನಹಿನಲ್ಲಿ ಇಂದ್ರಿಯಂಗಳು ಅಯ್ದಬೇಕೋ ಇಂತೀ ಉಭಯದ ಪ್ರಮಾಣು ಸಂದೇಹದ ಅಪ್ರಮಾಣು ಈ ಅರ್ಪಿತದಂಗ ಸಂಗವಾದಲ್ಲಿ ತಿಲ ಎಣ್ಣೆಯಂತೆ, ಗಂಧ ಕುಸುಮದಂತೆ, ಲಿಂಗ ಇಂದ್ರಿಯಂಗಳ ಸಂದು ಒಂದೆಂದು ಕೊಡುವಲ್ಲಿ ಎನ್ನಂಗದ ಮನವ ಕೊನೆಯ ಮೊನೆಯ ಮೇಲೆ ನೀ ಬಂದು ನಿಂದಡೆ ಬಿಡುಗು ಸಂದೇಹ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೨೮೦

ಸುಗಂಧ ಪರಿಮಳ ದುರ್ಗಂಧವೆಂಬ ಉಭಯವ ನಾಸಿಕವರಿದುದ ಹೆರೆ ಹಿಂಗಿದ ಪರಿ ಇನ್ನೆಂತುಂಟೋ ? ಸುಳಿವ ವಾಸನೆಗೆ ಮೊದಲೇ ಅಲ್ಲ ಅಹು

ದೇಬದನರಿದು ಅರ್ಪಿತವೆಂಬುದ ಬಲ್ಲಡೆ ಬಲ್ಲರೆಂಬೆ. ಇವರಲ್ಲಿಯೇ ಪ್ರಾಣ ಲಿಂಗಾರ್ಪಿತ ಉಳಿಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೨೮೧

ಕೊಟ್ಟ ದ್ರವ್ಯವನ್ನು ತಮ್ಮ ತಮ್ಮ ಲಿಂಗಕ್ಕೆ ಸಮರ್ಪಣೆಯ ಮಾಡಿಕೊಂಡು ತನು ಭೋಗಾದಿ ಭೋಗಂಗಳ ಭೋಗಿಸುತ್ತಿರ್ದರಲ್ಲಾ. ಹೊನ್ನ ಪರಿಯಾಣಂಗಳಲ್ಲಿ ಅನಂತ ಪರಿಪರಿಯ ಗುಗ್ಗುಳ ಧೂಪವ ಸಾಂಗವೆಸಗಲು ಭವದಿಂದ ನಡೆತಂದು ಶೂನ್ಯ ಸಿಂಹಾಸನದ ಮುಂದೆ ನಿಂದಿರ್ದರು ಪಂಚಮ ವಾದ್ಯ ಮೊಳಗುತ್ತಿರಲು ಅವರವರ ಕೈಯ್ಯ ನಿವಾಳಿಗಳ ನೀಸಿಕೊಂಡು ನಾಗಾಯಮ್ಮಗಳು ನಿಃಕಳಂಕ ಮಲ್ಲಿಕಾರ್ಜುನಗೆ ಆರತಿಯನೆತ್ತುತಿರ್ದರೆಲ್ಲಾ ॥೧೬॥

## ೪. ಪ್ರಾಣಲಿಂಗಿ ಸ್ಥಲ

೨೮೨

ಅಡಗಿದ ಕಿಚ್ಚು ಉರಿದಾಗವೇ ತನ್ನಿರವು ನಷ್ಟ. ತುರೀಯವ ಮೋಹ ಬೆರಸಿದಾಗವೇ ಆ ತುರೀಯ ನಷ್ಟ. ಇಷ್ಟದ ಮೇಗಳ ಚಿತ್ತ ಅಭಿವಾರ್ತವೆಂಬ ಗುಟ್ಟು ಬಿಟ್ಟಲ್ಲಿಯೇ ನಿಜ ನಿಶ್ಚಯ. ಆ ನಿಶ್ಚಯ ಅಚ್ಚೊತ್ತುವುದಕ್ಕೆ ಮುನ್ನವೆ ಸಚ್ಚಿತವಾದಲ್ಲಿಯೇ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೨೮೩

ಅಪಮಾಸಿಗೇಕೆ ಸೀರೆ? ವೀರಗೇಕೆ ಕೈದು? ಧೀರಗೇಕೆ ಮಂತ್ರ? ಇವರಾಗುಹೋಗನರಿಯದೆ, ಬಾಧೆಗೆ ಸಿಕ್ಕಿ, ನಾದವ ಲಾಲಿಸುವ ನಾಗಪಣೆಯಂತೆ ಆಡುತ್ತಿದ್ದು ಹೋದ ಹೊಲಬೇಕೆಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೨೮೪

ಅರಗಿನ ಪುತ್ತಳಿಯು ಉರಿಯ ಮನೆಯ ಹೊಕ್ಕಂತಿರಬೇಕು. ಸಿರಿಯು ಲಕ್ಷ್ಮಿಯು ಉದಕದಲ್ಲಿ ನೆರೆದು ಹೋದಂತಿರಬೇಕು. ಅಂಬರಕ್ಕೆ ಸಂಭ್ರಮವು ಹರಿದಂತಿರಬೇಕು. ಆತನ ಇರವು ಕಣ್ಣಿನಲ್ಲಿ ಪುಟ್ಟಿದ ಆಲಿಯ ತೆರನಂತಿರಬೇಕು. ಭಿನ್ನವಹುದಲ್ಲವೆಂಬ ಸಂದೇಹವೇಕೋ? ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೨೮೫

ಅರಿತಿಹೆನರಿತಿಹೆನೆಂದು ಹೊರಹೊಮ್ಮುವಾಗ ಕಾಯ ಮರುಜವಣಿಯೆ ಮಹಾಪ್ರಳಯಕ್ಕೆ ಶ್ರಮಣವೆ? ಅವತಾರಕ್ಕೆ ಹೊರಗಾದ ನಿರಂಗವೇ? ಅಸಗ ನೀರಡಿಸಿ ಸತ್ತಂತಾಯಿತ್ತು ಅವನಿರವು ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೨೮೬

ಅರಿವ ಹೇಳುವ ಹಿರಿಯರೆಲ್ಲರು ಕುರುಹಿನ ಶಿಲೆಯ ಕೈಯಲ್ಲಿ ಹಿಡಿದು ನರಗುರಿಗಳ ಕುರುಹಿನ ಬಾಗಿಲಲ್ಲಿ ನಿಂದು ಮೊರೆ ಇಡುತ್ತಿಪ್ಪರಯ್ಯಾ! ಈ ಅರಿಗುರಿಗಳ ಮೆಚ್ಚ ನಮ್ಮ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೨೮೭

ಅರುಹಿನಿಂದ ಕಂಡಿಹೆನೆಂದಡೆ ಅರುಹಿಂಗೆ ಮರಹು ಹಿಡಿಯಬೇಕು. ಕುರುಹಿನಿಂದ ಕಂಡಿಹೆನೆಂದಡೆ ಆ ಕುರುಹಿನಲ್ಲಿ ಅರಿವು ಕರಿಗೊಳ್ಳಬೇಕು. ಉಭಯವನರಿದ ಮತ್ತೆ ಅರಿವು ನಿಂದು ಅರಿದಿಹೆನೆಂದಡೆ ಆ ಅರಿವು ನಾನಾ ಯೋನಿಗೊಳಗಾಯಿತ್ತು. ಕುರುಹಿನಿಂದ ಅರಿದಿಹೆನೆಂದಡೆ ಆ ಅರಿವು ಪುನರಪಿ ಗೊಳಗಾಯಿತ್ತು. ಆ ಅರಿಹನರಿವ ಅರಿವೇನೊ? ಕುರುಹನರಿವದೇನೊ? ಅರಿವನರಿದಲ್ಲಿಯೂ ಕುರುಹನರಿದಲ್ಲಿಯೂ ಅರಿವಿಂಗೆ ತೆರಹಿಲ್ಲ. ಬರಿದೆ ಅರಿದೆ ನೆಂಬ ಬರುಬರ ಮೆಚ್ಚ ನಿಃಕಳಂಕ ಮಲ್ಲಿಕಾರ್ಜುನ ॥ ೬ ॥

೨೮೮

ಅಂಗ ಲಿಂಗವಂತನಾದ ಮತ್ತೆ ಮುಟ್ಟುವ ತಟ್ಟುವ, ಸೋಂಕಿನಲ್ಲಿ ಸುಳಿವ, ಇದಿರಿಟ್ಟು ಬಂದ ಪದಾರ್ಥವ ಅಂಗ ಲಿಂಗಕ್ಕೆ ಕೊಟ್ಟುಕೊಳ್ಳಬೇಕು. ಪ್ರಾಣ ಲಿಂಗವಾದ ಮತ್ತೆ ಕರಣಂಗಳಿಗೆ ಇಂಬುಗೊಡದಿರಬೇಕು. ತನ್ನ ತಾನರಿವ ಮನಕ್ಕೆ ಉಭಯ ರೂಢನಾಗಿರಬೇಕು. ಉಭಯ ಏಕವಾದ ಮತ್ತೆ ಸಾಕು ಸತ್ಕ್ರಿಯೆ ನಿಃಕಳಂಕಮಲ್ಲಿಕಾರ್ಜುನಾ ॥ ೭ ॥

**ಅರ್ಥ:**— ಅಂಗವು ಇಷ್ಟಲಿಂಗ ಸಂಬಂಧ ಉಳ್ಳದ್ದಾದ ಬಳಿಕ ಶರಣ ತಾ ಹೋಗಿ ಮುಟ್ಟುವ, ಸೋಂಕಿಗಳ ಸೋಂಕಿನಲ್ಲಿ ಚರಿಸುವ, ಸಾಕ್ಷಾತ್ಕಾರವಾಗಿ ಬಂದ ರೂಪು ಪದಾರ್ಥವನ್ನು ಅಂಗದಲ್ಲಿ ಸಂಬಂಧವಾದ ಇಷ್ಟಲಿಂಗಕ್ಕರ್ಪಿಸಿ ಆ ಲಿಂಗ ಪ್ರಸಾದವ ಸ್ವೀಕರಿಸಬೇಕು. ಪ್ರಾಣದಲ್ಲಿ ಪ್ರಾಣಲಿಂಗ ಸಂಬಂಧವಾದ ಬಳಿಕ ಮನ ಮೊದಲಾದ ಇಂದ್ರಿಯಂಗಳ ವರ್ತನೆಗೆ ತೆರಪುಗುಡದಿರಬೇಕು. ಆತ್ಮನಲ್ಲಿ ಭಾವಲಿಂಗ ಸಂಬಂಧವ ತಿಳಿದುದಕ್ಕೆ ಜ್ಞಾನಸಕ್ರಿಯೆಗಳಲ್ಲಿ ಹತ್ತಿಗೆಯುಳ್ಳವನಾಗಿರ ಬೇಕು. ಅಂಗತ್ರಯಂಗಳು ಲಿಂಗತ್ರಯಂಗಳು ಸಮರಸವಾದ ಬಳಿಕ ಬಹಿರಂಗದ ಕ್ರಿಯೆಗಳನೆಲ್ಲವ ಬಿಟ್ಟು ಸ್ವಲೀಲಾನಂದ ಕ್ರಿವಿಡಿದು ಆಚರಿಸಬೇಕೆಂಬುದರ್ಥ.

೨೮೯

ಅಂಗಲಿಂಗವೆಂದು, ಪ್ರಾಣಲಿಂಗವೆಂದು ಉಭಯದ ಒಡಲನೊಡಗೂಡುವ ಪರಿ ಇನ್ನೆಂತೋ? ಅದು ಶಿಲೆಯ ಬೆಳಗಿನಂತೆ ಶಿಲೆ ಅಡಗಿದಡೆ ಬೆಳಗಿಲ್ಲ. ಬೆಳಗಡಗಲಿಕ್ಕೆ ಆ ಶಿಲೆ ಅಚೇತನ ಪಾಷಾಣವಾಯಿತ್ತು. ಅಪ್ಪು ಕೂಡಿದ ಎಲೆ ನಾಮರೂಪಾದಂತೆ, ಅಪ್ಪುವಡಗೆ ಅಚೇತನದ ತರಗಾಯಿತ್ತು. ಅಂಗದ ಮೇಲಣ ಲಿಂಗ, ಲಿಂಗ ಮೂರ್ತಿಯ ನೆನಹು, ಈ ತ್ರಿವಿಧ ಒಂದುಗೂಡಿದಲ್ಲಿ

ಅಂಗವೆಂಬ ಭಾವ ಲಿಂಗವೆಂಬ ನೆನಹು ನಿರಂಗವಾದಲ್ಲಿ ಕಾಯಕ್ಕೆ ಕುರುಹಿಲ್ಲ, ಜೀವಕ್ಕೆ ಭವವಿಲ್ಲ. ಈ ಗುಣ ಪ್ರಾಣಲಿಂಗಿಯ ಭೇದ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೨೯೦

ಅಂಗವಿರಲಾಗಿ ಲಿಂಗವೆಂಬುದೊಂದು ಕುರುಹು. ಆ ಕುರುಹನರಿವುದಕ್ಕೆ ಅರಿವೆಂಬುದೊಂದು ಭಾವ. ಆ ಭಾವದ ಮರೆಯಲ್ಲಿ ಚಿತ್ತ. ಆ ಚಿತ್ತದ ಮರೆಯಲ್ಲಿ ನಿಶ್ಚಯ. ಆ ನಿಶ್ಚಯದ ನಿಜವನಯ್ದಿದಲ್ಲಿ ವಸ್ತುಭಾವ ಲೇಪ. ಅದು ಪ್ರಾಣಲಿಂಗಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೨೯೧

ಅಂಗ, ಲಿಂಗ ಸಂಬಂಧ, ಭಾವ, ಲಿಂಗ ಸಂಬಂಧ, ಪ್ರಾಣ, ಲಿಂಗ ಸಂಬಂಧ ವೆಂದು ಭಾವಿಸಬೇಕು, ಭಾವಿಸಬೇಡಾ ಎಂಬ ಉಭಯದ ತೆರನೆಂತುಂಟೆಂದಡೆ— ಮೃದು ಕಠಿಣವನರಿವನ್ನಕ್ಕ ಕುರುಹು ಮರೆಯಲಿಲ್ಲ. ಶೀತ ಉಷ್ಣಾದಿಗಳ ನರಿವನ್ನಕ್ಕ ಆ ಭಾವವ ಮರೆಯಲಿಲ್ಲ. ರೂಪುನಿರೂಪೆಂಬ ದ್ವಯಂಗಳ ಭೇದಿಸುವನ್ನಕ್ಕ ಪ್ರಾಣಲಿಂಗವೆಂಬ ಉಭಯದ ಕುರುಹುಂಟು ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೨೯೨

ಇಷ್ಟಲಿಂಗವಿಡಿದು ಪೂಜೆಯ ಮಾಡುವಲ್ಲಿ, ಕಷ್ಟಗುಣಕ್ಕೆ ಬಾರದಿರ ಬೇಕು. ಪ್ರಾಣಲಿಂಗವನರಿದು ಭಾವಿಸಿದಲ್ಲಿ ಜಾಗ್ರ ಸ್ವಪ್ನ ಸುಷುಪ್ತಿ ಲಯ ವಿಪತ್ತಿಗೊಳಗಾಗದಿರಬೇಕು. ಹೀಗೆ ಉಭಯವನರಿದು ದಗ್ಧವಾದ ಅಂಬರ ದಂತೆ, ವಾರಿಯ ಕೂಡಿದ ಕ್ಷೀರದಂತೆ, ಭಾವಕ್ಕೆ ಭ್ರಮೆ ಇಲ್ಲದೆ, ಸಾಕಾರ ನಿರಾಕಾರವ ಮರೆದು ಪರತ್ರಯದ ತುತ್ತಿಂಗೆ ತುಚ್ಛನಾಗದೆ ನಿಶ್ಚಯನಾದ ಮಹಾತ್ಮಂಗೆ ನಮೋ ನಮೋ ನಿಃಕಳಂಕಮಲ್ಲಿಕಾರ್ಜುನಾ ॥ ೧೧ ॥

**ಅರ್ಥ:**— ಇಷ್ಟ ಬ್ರಹ್ಮವನ್ನು ಹಿಡಿದು ಪೂಜಿಸುತ್ತಿರ್ದ ಬಳಿಕ ತನುವಿನ ಜಿಹ್ವಾಲಂಪಟ, ಗುಹ್ಯಲಂಪಟತ್ವವೆಂಬ ಕ್ಷೀಣ ಗುಣಕ್ಕೊಳಗಾಗದಿರಬೇಕು. ಇಷ್ಟ ಲಿಂಗವೇ ಪ್ರಾಣಲಿಂಗವಾಗಿ ತಿಳಿದು, ಆ ಪ್ರಾಣಲಿಂಗವುಳ್ಳವನಾದ ಬಳಿಕ ಅವಸ್ಥಾ ತ್ರಯಂಗಳ ವರ್ತನೆ ಇಲ್ಲದಿರಬೇಕು. ಜನನ ಮರಣಂಗಳಿಗೆ ಈಡಾಗದಿರಬೇಕು. ಹೀಗೆ ಇಷ್ಟ ಪ್ರಾಣಲಿಂಗ ಸಂಬಂಧವನ್ನು ತಿಳಿದು ಸುಟ್ಟ ಸೀರೆಯು ಉಡುವದಕ್ಕೂ ತೊಳೆವುದಕ್ಕೂ ಬಾರದಿರುವ ಹಾಗೆ, ಉದಕದಲ್ಲಿ ಬೆರೆದ ಹಾಲು ಆ ಉದಕದಿಂದ

ಬೇರಾಗದಿರುವ ಹಾಗೆ, ಪ್ರಾಣಲಿಂಗದಲ್ಲಿ ಕೂಡಿದ ಚಿತ್ತಕ್ಕೆ ಇಂದ್ರಿಯ ವಿಷಯಂಗಳ ಭ್ರಾಂತಿಲ್ಲದೆ ದೇಹ ಪ್ರಪಂಚವ ಮರೆದು ಬಿಟ್ಟು ಪರಲೋಕದ ಸಾಮೀಪ್ಯ ಸಾರೂಪ್ಯಂಗಳನನುಭವಿಸಬೇಕೆಂದು ಜೀವ ಭಾವವ ಮುಂದುಗೊಂಡು ಚರಿಸದೆ ಯಥಾರ್ಥವಾದ ಮಹಾಲಿಂಗದಲ್ಲಿ ಕೂಡಿ ಮಹಾಲಿಂಗವೇ ತಾನಾದ ಮಹಿಮಾ ಪದವನುಳ್ಳ ಶರಣಂಗೆ ಸಾಂದ್ರನಮಸ್ಕಾರವೆಂಬುದರ್ಥ.

೨೯೩

ಉದಕವ ನುಂಗಿದ ಕೆಸರಿನಂತೆ ಗಸಣೆಗೊಳಗಾಯಿತ್ತು ಆತ್ಮನು. ಆ ಕೆಸರು ಉದಕವರತ ಮತ್ತೆ ಕೆಸರಿನ ತೆರನುಂಟೇ? ಉಭಯ ಭೇದವನರಿದಡೆ ಪ್ರಾಣಲಿಂಗಿ ಎಂದೆಂಬೆ ನಿಃಕಳಂಕಮಲ್ಲಿಕಾರ್ಜುನಾ ॥ ೧೨ ॥

೨೯೪

ಉಭಯವ ನೆಮ್ಮಿ ಹರಿವ ನದಿಯಂತೆ ಮಾಡುವ ಕ್ರಿ, ಅರಿವ ಚಿತ್ತ ಈ ಉಭಯದ ನೆಮ್ಮುಗೆಯಲ್ಲಿ ಭಾವಿಸಿ ಅರಿವ ಚಿತ್ತ, ಅಂಗದ ಮುಟ್ಟನರಿತು ನಿಜ ಸಂಗದ ನೆಲೆಯಲ್ಲಿ ನಿಂದು ಉಭಯ ನಿರಂಗವಾದಲ್ಲಿ ಪ್ರಾಣಲಿಂಗಸಂಬಂಧ ನಿಃಕಳಂಕಮಲ್ಲಿಕಾರ್ಜುನಾ ॥ ೧೩ ॥

೨೯೫

ಕರ್ಮವ ಮಾಡುವಲ್ಲಿ ಆ ಕರ್ಮದ ವರ್ಮವನರಿಯಬೇಕು. ಆ ವರ್ಮದ ವರ್ಮವನರಿವಲ್ಲಿ ಉಮ್ಮಳ ದುಮ್ಮಳವೆಂಬ ಸುಖಸುಮ್ಮಾನವೆಂಬ ಉಭಯವಡಗಿದಲ್ಲಿ ಪ್ರಾಣಲಿಂಗಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೨೯೬

ಕಲ್ಲನೊಡೆದು ಕಲ್ಲೊಡಗೂಡುವಂತಾಗಬಲ್ಲರೆ ಇಷ್ಟಲಿಂಗ ಸಂಬಂಧಿ. ಮಣ್ಣಿನಲ್ಲಿ ಸುಟ್ಟ ಓಡು ಮುನ್ನಿನಂತಾಗಬಲ್ಲರೆ ಭಾವಲಿಂಗ ಸಂಬಂಧಿ. ಇಷ್ಟ ಭಾವವನರಿವ ಚಿತ್ತ ದೃಷ್ಟವನರಿವುದಕ್ಕೆ ಶೃತದೃಷ್ಟವೆಂತುಟೆಂದಡೆ ವಾರಿ ಕಲ್ಲು ನೋಡ ನೋಡಲಿಕ್ಕೆ ನೀರಾದಂತೆ. ಇಷ್ಟದ ಭಾವ ಕರಿಗೊಂಡು ನಿಶ್ಚಯ ಪದವೆಂಬ ಗೊತ್ತ ಮುಟ್ಟದೆ ಸಚ್ಚಿತವಾದಲ್ಲಿ ಅದು ಪ್ರಾಣಲಿಂಗಸಂಬಂಧ ನಿಃಕಳಂಕಮಲ್ಲಿಕಾರ್ಜುನಾ ॥ ೧೫ ॥

೨೯೭

ಕಾಣೆಯ ಹಾಕಿ ಮುಕ್ಕಾಣೆಯನರಸುವನಂತೆ ಒಂದ ಬಿಟ್ಟು ಒಂದ ಹಿಡಿದಿಹೆನೆಂಬ ಸಂದೇಹಿಗೇಕೆ ಲಿಂಗಾಂಗ? ಸರ್ವ ವ್ಯಾಪಾರವ ಕಟ್ಟಿಕೊಂಡಿಪ್ಪ

ಹರದಿಗನ ತೆರನಂತೆ, ಕೊಂಡುದಕ್ಕೆ ಕೊಡುವಲ್ಲಿ ವಾಸಿಯ ಕಂಡು ಬಿಟ್ಟ ಲಾಭಗಾರನಂತೆ ಮೊದಲಿಗೆ ಮೋಸ ಲಾಭಕ್ಕುಂಟೇ ಅಯ್ಯಾ ? ಒಂದನರಿದಲ್ಲದೆ ಮೂರ ಮರೆಯಬಾರದು. ಮೂರ ಮರೆದಲ್ಲದೆ ಐದು ಹರಿಯಬಾರದು. ಐದ ಹರಿದಲ್ಲದೆ ಆರ ಮೆಟ್ಟಬಾರದು. ಆರ ಮೆಟ್ಟದಲ್ಲದೆ ಎಂಟನೀಂಟಬಾರದು. ಎಂಟರೊಳಗಣ ಬಂಟರೆಲ್ಲರು ಮಹಾಪ್ರಾಯರಾದರು. ಹೀಗಲ್ಲದೆ ಪ್ರಾಣಲಿಂಗಿಗಳೆಂತಾದಿರೊ ? ಗಂಟಕೊಯಿದು ಕೋಡಗದ ಗಂಟುಳ್ಳರಂತೆ ತುಂಟರ ಮೆಚ್ಚುವನೆ ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೬ ॥

೨೯೮

ಕಾಯಕ್ಕೆ ಕಲ್ಪಿತ ಉಂಟೆಂಬುದು ಹುಸಿಯೋ ದಿಟವೋ ? ಜೀವಕ್ಕೆ ಜನ್ಮ ಉಂಟೆಂಬುದು ಹುಸಿಯೋ ದಿಟವೋ? ಕೆಂಡದೊಳಗೆ ಹೊಗೆಯಡಗಿತ್ತೋ ಹೊಗೆಯೊಳಗೆ ಕೆಂಡವಿದ್ದಿತ್ತೋ ? ಲಿಂಗವಲ್ಲಿ ಮನವಿದ್ದಿತ್ತೋ ಮನದಲ್ಲಿ ಲಿಂಗವಡಗಿತ್ತೋ? ಇಂತೀ ಉಭಯದ ಸಂದನರಿದು ಬೆರಸಬಲ್ಲಡೆ ಆತನೇ ಪ್ರಾಣಲಿಂಗಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭ ॥

೨೯೯

ಕಾಯದ ಗುಣವನರಿವುದು ಕಾಯವೋ ಜೀವವೋ? ಜೀವದ ಗುಣವ ಸಂಬಂಧಿಸುವುದು ಜ್ಞಾನವೋ ಆ ಜೀವವೋ ? ಈ ಉಭಯ ಉಳ್ಳನ್ನಕ್ಕ ಪ್ರಾಣಲಿಂಗಿಯಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೩೦೦

ಕುರುಳಿನಲ್ಲಿ ಕೂಳ ಕಟ್ಟಿ ಕೂದಲ ಶೋಧಿಸಬಹುದೇ ಅಯ್ಯಾ ? ಸಂಸಾರಕ್ಕಂಗವನಿತ್ತು ಮೋಹಕ್ಕೆ ಮನವಿತ್ತು ಮನುಜರ ಗುಣ ತನಗೊಂದೂ ಬಿಡದೆ ಘನವನರಿದೆನೆಂಬ ಬಿನುಗಾಟದ ಮಾತೇಕೆ ? ಹಸಿವು ತೃಷೆ ವ್ಯಸನ ವ್ಯಾಪ್ತಿ ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಲಯವಾಗುತ್ತಿದ್ದು, ದ್ವೈತಾದ್ವೈತದ ಮಾತಿನ ಬಣಬೆಯ ವೇಷಗಳ್ಳಗೇಕೆ ಪರದೇಶಿಗನ ಸುದ್ದಿ? ಅರಿದವನಂಗ ದಗ್ಧಪಟದಂತೆ, ಬೆಂದ ನುಲಿಯಂತೆ, ಬೆಳಗಿನ ರೂಪಿನಂತೆ, ಉದಕದ ಪ್ರತಿಬಿಂಬದಂತೆ ತೋರಲಿಲ್ಲವಾಗಿ ಅದು ಆ ಲಿಂಗದ ಪ್ರಾಣಸಂಯೋಗ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯ ॥

೩೦೧

ಕ್ರಿ ಶುದ್ಧವಾದವಂಗೆ ಭಾವ ಶುದ್ಧ, ಭಾವ ಶುದ್ಧವಾದವಂಗೆ ಆತ್ಮಶುದ್ಧ. ಆತ್ಮಶುದ್ಧವಾದವಂಗೆ ಅರಿವು ಕರಿಗೊಂಡು ನಿಂದ ನಿಜವೇ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೩೦೨

ಗರಳವಿಲ್ಲದ ಉರಗಂಗೆ ಹಲಬರಂಜಿದರುಂಟೇ ? ಕೆಯ್ಯಿಲ್ಲದ ಬಂಟ ಗರ್ಜಿಸಿದರೆ ಅಂಜಿದರುಂಟೇ ? ಇಷ್ಟ ಬಾಹ್ಯದೃಷ್ಟದ ಮಾತನಾಡಿದಡೆ ನೆಟ್ಟನೆ ಪ್ರಾಣಲಿಂಗಿಯಪ್ಪನೇ? ಅದು ನಿಶ್ಚಯವಲ್ಲ ನಿಃಕಳಂಕ ಮಲ್ಲಿಕಾರ್ಜುನಾ॥ ೨೧ ॥

೩೦೩

ಚಂದ್ರಮಂಡಲದಲ್ಲಿ ನಿಂದಿಪ್ಪ ಭೇದವ ಅವರಂಗದ ನಿಲವೆಂತೋ? ಅಂಗದ ಮಂಡಲದಲ್ಲಿ ಲಿಂಗವಿಪ್ಪ ಭೇದವ ಸಂಗೊಳಿಸುವ ಪರಿ ಇನ್ನೆಂತೋ? ಈ ಭಂಗಿತವ ಮಾಡುವ ಇಂದ್ರಿಯ ಕರಣಂಗಳಿಗೆ ನಿಂದಿಹ ಪರಿ ಇನ್ನೆಂತೋ? ಈ ರಸ ಫಲ ಭೇದವಂಗ ಬಸವಣ್ಣ ಮೊದಲಾದ ಪ್ರಮಥರು ಬಲ್ಲರು. ಇದ ನೇನೇವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

೩೦೪

ಜೀವನಾಡಿಸಿದಂತೆ ಆಡುವರೆಲ್ಲರೂ ಲಿಂಗಪ್ರಾಣಿಗಳಪ್ಪರೆ ? ನಾನಾ ಭವಂಗಳಲ್ಲಿ ಬಂಧಿತರಾದವರೆಲ್ಲರು ಶಿವಲಿಂಗ ಪ್ರಾಣಿಗಳಪ್ಪರೆ? ದಿವ್ಯಜ್ಞಾನ ಪರಿಪೂರ್ಣವಪ್ಪವರೆಲ್ಲರು ತ್ರಿವಿಧ ಮಲಕ್ಕೆ ಸಿಕ್ಕಿ ಅಂತಹ ಮಲಸಂಬಂಧಿಗಳ ದ್ವಾರದಲ್ಲಿ ನಿಂದು ತಮ್ಮ ಜ್ಞಾನವ ಮರೆದರೆಂಬುದಕ್ಕೆ ಇದೇ ಸೂಚನೆ. ಉಪಾಧಿಕೆಯಂಗವ ಹೊತ್ತು ನಿಃಕಳಂಕ ಮಲ್ಲಿಕಾರ್ಜುನನ ಲಿಂಗವನರಿಯದೆ ಹೋದರು ॥ ೨೩ ॥

೩೦೫

ತತ್ವಬ್ರಹ್ಮವನರಿವ ಹಿರಿಯರೆಲ್ಲರು ಕ್ಷುತ್ತಿನ ಸುಖವ ಮಚ್ಚಿ ವಿದ್ಯೆಯ ನುಡಿವುತ್ತಿಪ್ಪರು ನೋಡಾ. ಸುಚಿತ್ತವನರಿದಡೆ ಕುಚಿತ್ತದ ಬೋಧೆಯ ಹೇಳಲಾಗದು. ಆಳಾಗಿದ್ದು ಅರಸಾಗಬಹುದಲ್ಲದೆ ಅರಸಾಗಿದ್ದು ಆಳಾಗಬಾರದು. ರೂಪಾಗಿದ್ದು ನಿರೂಪಾಗಬಹುದಲ್ಲದೆ, ನಿರೂಪಾಗಿರ್ದು ರೂಪಾಗಬಾರದು. ಇದುಕಾರಣ ನಾ ಸತ್ತಹೆನೆಂಬ ವೆಣವಿಲ್ಲವಾಗಿ ನಾನೇ ನೀನೆಂಬ ಉಭಯವೆ ಹಿಂಗಿದಲ್ಲದೆ ಪರಿಪೂರ್ಣರಾಗಬಾರದು ನಿಃಕಳಂಕ ಮಲ್ಲಿಕಾರ್ಜುನಾ ॥ ೨೪ ॥

೩೦೬

ತನುವಿನ ಮೇಲೆ ಇಷ್ಟಲಿಂಗಕ್ಕೆ ಅನವರತ ಬಿಡದೆ ನೆನಹಿರಬೇಕೆಂಬರು. ಅಂಗದ ಮೇಲಣ ಲಿಂಗವ ಪ್ರಾಣಸಂಗವ ಮಾಡುವ ಪರಿ ಇನ್ನೆಂತೋ? ಇದರಂದವನರಿಯದೆ ತ್ರಿಭಂಗಿಯಲ್ಲಿ ಸಿಕ್ಕಿ ಬೆಂದವರಿಗೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೫ ॥

೩೦೭

ತಿಲದ ಮರೆಯ ತೈಲವ ಅರೆದು ಕಾಬ ತೆರನಂತೆ, ಫಲದ ಮರೆಯ ರಸವ ಹಿಳಿದು ಕಾಬ ಸವಿವ ರುಚಿಯಂತೆ, ತೆರೆಯ ಮರೆಯ ರೂಪವ ತೆಗೆದು ಕಾಬ ಸುಖದಂತೆ, ಇಷ್ಟದ ಮರೆಯಲ್ಲಿದ ದೃಷ್ಟವ ಉಭಯವ ನಿಶ್ಚಯಿಸಿದಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೩೦೮

ದೇಹದ ಕಳೆಯನರಿವನ್ನಬರ ಇಷ್ಟಲಿಂಗ ಸಂಬಂಧಿಯಲ್ಲ. ಭಾವದ ಭ್ರಮೆ ಉಳ್ಳನ್ನಕ್ಕ ಭಾವಲಿಂಗ ಸಂಬಂಧಿಯಲ್ಲ. ಪ್ರಾಣದ ಪ್ರಳಯವನರಿವನ್ನಬರ ಪ್ರಾಣಲಿಂಗ ಸಂಬಂಧಿಯಲ್ಲ. ಭಾವ ಇಷ್ಟದಲ್ಲಿ ನಿಂದು ಇಷ್ಟಕ್ಕೆ ಭಾವ ಚೇತನವಾಗಿ ರಜ್ಜು ತೈಲವ ಅಗ್ನಿಗೆ ವೇಧಿಸಿಕೊಡುವಂತೆ, ಇಷ್ಟ ಭಾವದ ಸತ್ವ, ಆ ಉಭಯುವನಾಧರಿಸಿ ನಿಂದ ಒಡಲು, ಸದ್ಭಾವವಂತನ ಕ್ರಿ, ಈ ಮೂರು ಏಕವಾಗಿ ವೇಧಿಸಿ ಉದಯಿಸಿ ತೋರುವ ಬೆಳಗು ಆ ಕಳೆಯನೊಳಕೊಂಡಲ್ಲಿ ಪ್ರಾಣಲಿಂಗಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೨೭ ॥

೩೦೯

ಧರೆ ನೀರು ಕುಡಿವಲ್ಲಿ, ಉರಿ ಸೀತಮರನ ಸುಡುವಲ್ಲಿ, ಜಲ ಉರಿ ನಿಲುವುದಕ್ಕೆ ಒಡಲುಂಟೇ? ನೆರೆ ಅರಿದ ಅರಿವು ಮರೆದ ಮತ್ತೆ ಬೇರೊಬ್ಬ ಅರಿವನುಂಟೇ? ಆ ತೆರ ದರುಶನವನರಿವಲ್ಲಿ ಪ್ರಾಣಲಿಂಗಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೨೮ ॥

೩೧೦

ನಾನಾಸಾರಂಗಳ ಸವಿಯ ಆ ಸಾರ ಅರಿಯ ಬಲ್ಲುದೇ ಸವಿ ಸಾರವ ಬಲ್ಲವನಲ್ಲದೆ? ನಾನಾ ಘಟಪಟವ ಆ ಘಟಪಟಂಗಳು ಬಲ್ಲವೆ ಇದಿರಿಟ್ಟವ ನಲ್ಲದೆ? ತಾ ನೋಡುವಲ್ಲಿ ನಾನಾ ಛಾಯೆಂಗಳು ದರ್ಪಣದಲ್ಲಿ ಒಪ್ಪುವಂತೆ

ಆ ದರ್ಪಣಕ್ಕೆ ತನ್ನ ಮುಖಕ್ಕೆ ದೃಷ್ಟ ಉಂಟೇ ? ಆ ನೆನಹುಂಗೆ ಇಷ್ಟ, ಆ ಇಷ್ಟಕ್ಕೆ ಈ ಗುಣ ದೃಷ್ಟ, ಇಂತೀ ಪ್ರಾಣಲಿಂಗಿಯ ಕೂಟ, ಮೇಲೆ ಐಕ್ಯಾನು ಭಾವಿಯ ಲೇಪ, ನಿಃಕಳಂಕ ಮಲ್ಲಿಕಾರ್ಜುನ ಲಿಂಗದ ಒಳಗಿನಾಟ ॥ ೨೯ ॥

೩೧೧

ಪೂರ್ವ ಧಾತುವಿನ ಮೋಹ, ಉತ್ತರ ಧಾತುವಿನ ನಿರ್ಮೋಹ, ಉಭಯದ ಕಕ್ಷೆಯ ತಿಳಿದು ಅರಿದಲ್ಲಿ ಅರಿದು ಮರೆದಲ್ಲಿ ಮತ್ತೇತರ ದರುಶನ ಉಂಟೇ ? ಇಂತೀ ಗುಣ ಸಂದೇಹಕ್ಕಿಕ್ಕಿ ಬೇರೊಂದರಲ್ಲಿ ನಿಂದು ಕಂಡಿಹೆನೆಂದಡೆ ಉಭಯ ಲಿಂಗದಂಗ ಒಂದೂ ಇಲ್ಲ ನಿಃಕಳಂಕಮಲ್ಲಿಕಾರ್ಜುನಾ ॥ ೩೦ ॥

೩೧೨

ಪೃಥ್ವಿ ಅಪ್ಪು ತೇಜ ವಾಯು ಆಕಾಶಂಗಳು ತಲೆದೋರುವುದಕ್ಕೆ ಮುನ್ನವೆ, ಯುಗ ಜುಗಂಗಳು ಪ್ರಮಾಣಿಸುವುದಕ್ಕೆ ಮುನ್ನವೆ, ನಾಲ್ಕು ವೇದ ಹದಿನಾರು ಶಾಸ್ತ್ರ ಇಪ್ಪತ್ತೆಂಟು ದಿವ್ಯ ಪುರಾಣಂಗಳು ಕುರುಹುಗೊಳ್ಳದ ಮುನ್ನವೆ, ನಿರಾಳ ಸುರಾಳವೆಂಬ ಬಯಲು ಅವಗವಿಸುವುದಕ್ಕೆ ಮುನ್ನವೆ, ಬ್ರಹ್ಮಾಂಡವೆಲ್ಲಿ ಆಯಿತ್ತು? ವಿಷ್ಣುವಿನ ಚೇತನವೆಲ್ಲಿ ಹುಟ್ಟಿತ್ತು? ಮಹಾ ರುದ್ರನ ದ್ವೇಷವೆಲ್ಲಿ ಹುಟ್ಟಿ ಎಲ್ಲಿ ಅಡಗಿತ್ತು ಹೇಳಾ! ನಾದ ಬಿಂದು ಕಳೆಗೆ ಅತೀತವಪ್ಪ ಲಿಂಗವ ಭೇದಿಸಿ ವೇಧಿಸಲರಿಯದೆ ಭಾವದ ಭ್ರಮೆಯಿಂದ ನಾನಾ ಸಂದೇಹಕ್ಕೊಳಗಾಗಿ ಜೀವ ಪರಮರ ನೆಲೆಯ ಕಂಡಿಹೆನೆಂದು ಆವಾವ ಠಾವಿನಲ್ಲಿ ಕರ್ಕಶಗೊಂಬವಂಗೆ ಪ್ರಾಣಲಿಂಗಿ ಎಂಬ ಭಾವ ಒಂದೂ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

೩೧೩

ಪ್ರಾಣಲಿಂಗ ಸಂಬಂಧಿಗಳೆಂದು ಬಾಹ್ಯ ಭ್ರಮೆಯಿಂದ ಬಳಲುತಿರ್ಪ್ಪ ಅಜ್ಞಾನಿಗಳು ನೀವು ಕೇಳಿರೋ ! ಲಿಂಗ ಪ್ರಾಣವೋ ಪ್ರಾಣ ಲಿಂಗವೋ ಅದರ ಸಂಗದ ಗುಣವೋ ಎಂಬುದನರಿದಾಗವೇ ಲಿಂಗಾಂಗ. ಅಂಗಲಿಂಗ ಉಭಯದ ಸಂದ ಹರಿದಾಗವೇ ಪ್ರಾಣಲಿಂಗ. ಪ್ರಾಣನ ಪ್ರಕೃತಿಯ ಭಾವಿಸಿದಾಗವೇ ಪರಮಪ್ರಕಾಶವೇ ಪರಮ ಪ್ರಕಾಶ. ಇಷ್ಟರಿಂದ ನಾನರಿಯೆ. ನೀವಾಡಿಸುವ ಬೊಂಬೆ ನಾನು. ಎನ್ನ ಭಾವದ ಭ್ರಮೆಯ ಬಿಡಿಸಿ ನಿರ್ಭಾವಕ್ಕೆ ನೆಲೆಗೊಳ್ಳಿಸಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೨ ॥

೩೧೪

ಪ್ರಾಣಲಿಂಗಿಗಳೆಂದು ನುಡಿವ ನಾಚಿಕೆ ಇಲ್ಲದ ಅಣ್ಣಗಳು ಭಾವಿಸಿ ರಯ್ಯಾ! ತನು ನೋಂಕುವದಕ್ಕೆ ಮುನ್ನವೆ ಮನನೋಂಕಿತ್ತಾಗಿ ತನುಹಿಂಗಿ ಅರ್ಪಿಸುವ ಠಾವಿನ್ನೆಲ್ಲಿಯದೋ? ಅಂಗವನರಿದು ಮನವರಿಯುದುದಿಲ್ಲ[೧]. ಅಂಗ ಲಿಂಗ ಅರ್ಪಿತವಿನ್ನೆಂತಾಯಿತ್ತೋ? ಇಂತೀ ಭಂಗಿತರ ಕಂಡು ಹಿಂಗಿದೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೩ ॥

೩೧೫

ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪ್ಪ ಅಣ್ಣಗಳು ನೀವು ಕೇಳಿರೋ. ಅಂಗಕ್ಕೆ ಪ್ರಾಣ ಮೊದಲೋ ಪ್ರಾಣಕ್ಕೆ ಲಿಂಗ ಮೊದಲೋ ? ಈ ಉಭಯವ ವಿಚಾರಿಸಿಕೊಂಡು ನುಡಿಯಿರಣ್ಣಾ ! ಗಂಧ ವಾಯುವ ನೋಂಕಿತ್ತೋ? ವಾಯು ಗಂಧವ ನೋಂಕಿತ್ತೋ? ಲಿಂಗವ ಮನವರಿಯಿತ್ತೋ ? ಮನ ಲಿಂಗವನರಿ ಯಿತ್ತೋ ? ಕಾಯದಿಂದ ನೋಂಕಿದ ಸುಖವ ಮನದಿಂದರಿವರಾರೋ ? ಮನದಲ್ಲಿ ಮುಟ್ಟಿದ ಗುಣವ ತನುವಿನಿಂದರಿದವರಾರೋ? ಇಂತೀ ಉಭಯವ ನರಿದಡೆ ಪ್ರಾಣಲಿಂಗಿಗಳೆಂಬೆ. ಉರಿ ನೋಂಕಿದ ಕರ್ಪುರಕ್ಕೆ ನಿಲ್ಲುವದಕ್ಕೆ ನೆಲೆ ಮನೆ ಇನ್ನಾವುದೋ? ಭ್ರಮರ ಕೊಂಡ ಸುವಾಸನೆಗೆ ಕಡೆ ನಡು ಮೊದಲಿನ್ನಾ ವುದೋ ? ಧೂಳು ಕೊಂಡ ಜಲಕ್ಕೆ ನೆಲೆ ಮನೆ ಇನ್ನಾವುದೋ ? ಲಿಂಗ ನೋಂಕಿದ ಮನಕ್ಕೆ ಲಿಂಗವನರಿವುದಕ್ಕೆ ನೆಲೆಗೊಂಬ ಠಾವಿನ್ನಾವುದೋ? ಇಂತೀ ಗುಣಂಗಳಲ್ಲಿ ಕಳೆದುಳಿದ ಮಹಾತ್ಮಂಗೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೩೪ ॥

೩೧೬

ಪ್ರಮಾಣಿಸಿ ವಿಶ್ವಾಸದಿಂದ ಧ್ಯಾನಿಸಲಾಗಿ ಧ್ಯಾನವಲ್ಲಿಯೆ ವೇಧಿಸಿತ್ತು. ಧ್ಯಾನವ ತನ್ಮಯ ಲಕ್ಷ್ಯವಲ್ಲಿ ಲಕ್ಷಿಸಿರಲಾಗಿ ಉಭಯದ ಕುರುಹು ಅಲ್ಲಿಯೇ ಲೇಪವಾಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಲಿಂಗದಲ್ಲಿ॥ ೩೫ ॥

೩೧೭

ಬಹಳ ತೆರಪಿನಿಂದರಿದರಿವ ಚಿದ್ಘನ ಭೇದದಿಂದ ಒಡಗೂಡಿ, ಎರಡಳಿದ ಸಮ್ಯಕ್ ಜ್ಞಾನಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಉಭಯದ ಕುರುಹಿಟ್ಟ ಭೇದ ॥ ೩೬ ॥

---

೧. ಮನ ಮರೆದುದಿಲ್ಲ (ಅ)

೩೧೮

ಬಾಯ ಮುಚ್ಚಿ ಹೊಟ್ಟೆ ತುಂಬ ಉಂಬುವನಾರನು ಕಾಣೆ. ಕಣ್ಣ ಮುಚ್ಚಿ ಸನ್ನೆಯನರಿವನಾರನು ಕಾಣೆ. ಕರ್ಣವ ಮುಚ್ಚಿ ಚೆನ್ನಾಗಿ ಕೇಳುವ ಅಣ್ಣಗಳನಾರನು ಕಾಣೆ. ಪ್ರಸನ್ನ ಎನಗಿನ್ನಾವುದೋ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೩೧೯

ಬಾಲಲೀಲೆಯಲ್ಲಿ ಕಟ್ಟಿದ ಲಿಂಗವ ಏನೆಂದು ಅರಿಯದಲ್ಲಿ ಜ್ಞಾನಭಾವ ತೋರಿದ ಮತ್ತೆ ಇದ ಏನೆಂದು ಅರಿಯಬೇಕು. ಮಕ್ಕಳ ಮದುವೆಯ ಚಿಕ್ಕಲ್ಲಿ ಮಾಡಿದಡೆ ಯೌವನ ತೋರೆ ಆ ವಿಷಯಕ್ಕೆ ಹೊಕ್ಕು ಹೋರಟೆಗೊಂಬುದ ಮರಿದಡೆ ಇಷ್ಟವ ಮರೆಯಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೩೮ ॥

೩೨೦

ಬೆಳಗಿನಲ್ಲಿದ್ದು ಬೆಳಗ ಕಾಂಬುದು ತಾನೋ ಇದಿರೋ? ಇಷ್ಟದ ಮರೆಯಲ್ಲಿದ್ದು ದೃಷ್ಟವ ಕಂಡಿಹೆನೆಂದರೆ ಕಾಂಬುದು, ಆದ ಕಾಣಿಸಿಕೊಂಬುದು ಏನೆಂದರಿಯಬೇಕು. ಅರಿವಲ್ಲದೆ ಇಷ್ಟ ಪ್ರಾಣ ಸಮರ್ಪಣವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೩೯ ॥

೩೨೧

ಬ್ರಹ್ಮನ ಕಲ್ಪಿತವ ತೊಡೆಯದಾಗಿ ಲಿಂಗವ ಕೊಟ್ಟದು ಹುಸಿ. ಆ ಲಿಂಗ ಬಂದು ತನುವನಿಂಬುಗೊಳ್ಳದಾಗಿ ವಿಷ್ಣುವಿನ ಸ್ಥಿತಿ ಹುಸಿ. ಆ ವಿಷ್ಣುವಿನ ಹಂಗಿನಲ್ಲಿ ಉಂಡು ಹೋಹ ಕಾರಣ ಆ ಜಂಗಮದ ಮಾಟ ಹುಸಿ. ಇದ್ರು ಕಾರಣ ರುದ್ರನ ಹಂಗಿನಲ್ಲಿ ಬಂದ ಜಂಗಮವೆಲ್ಲವು ಲಯವಾಗುತಿಪ್ಪ ಕಾರಣ ಪ್ರಾಣಲಿಂಗಿಗಳೆಂಬುದು ಹುಸಿ. ಇಂತಿವು ನಿರ್ಲೇಪವಾಗಿಯಲ್ಲದೆ ಸಹಜ ಭರಿತನಲ್ಲ, ಇಹಪರಕ್ಕೆ ಸಲ್ಲ, ಸೊಲ್ಲಿಗೆ ಅಭೇದ್ಯ ನಿಃಕಳಂಕ ಮಲ್ಲಿಕಾರ್ಜುನನು ಬಲ್ಲ ಹರ ಬಲ್ಲ ॥ ೪೦ ॥

೩೨೨

ಬಿಂದು ನಾದವ ನುಂಗಿತ್ತೆಂಬರು. ನಾದ ಬಿಂದುವ ನುಂಗಿತ್ತೆಂಬರು. ಕಳೆ ಬಿಂದುವ ನುಂಗಿತ್ತೆಂಬರು. ಬಿಂದು ಕಳೆಯ ನುಂಗಿತ್ತೆಂಬರು. ಈ ಮೂರರಂದ

ವತೀತ ತಿಂದಿತ್ತು. ತಿಂದವರ ತಿಂದ ಅಂದವ ನೋಡಾ. ಇದಕ್ಕೊಂದೂ ಇಲ್ಲ ವೆಂದೆ ಸಂದನಳಿದ ನಿಃಕಳಂಕ ಮಲ್ಲಿಕಾರ್ಜುನಾ ॥ ೬೧ ॥

೩೨೩

ಭಕ್ತಿಯೊಳಗಾದ ಕ್ರಿ, ಕ್ರಿಯೆಯೊಳಗಾದ ಆಚಾರ, ಆಚಾರ ದೊಳಗಾದ ಅನುವು, ಅನುವಿನೊಳಗಾದ ಭಾವಲಿಂಗವನರಿದು ಉಭಯದ ಬೆಸುಗೆಯ ನಿಶ್ಚಯಿಸಿದಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೩೨೪

ಭೂತಹಿತವುಳ್ಳನ್ನಕ್ಕ ಇಷ್ಟಲಿಂಗ ಪೂಜೆ. ಸರ್ವಚೇತನ ಭಾವವ ನರಿವನ್ನಕ್ಕ ಭಾವಲಿಂಗ ಪೂಜೆ. ಸರ್ವ ಜೀವಂಗಳಲ್ಲಿ ದಯವುಳ್ಳನ್ನಕ್ಕ ಪ್ರಾಣಲಿಂಗ ಪೂಜೆ. ಇಂತೀ ತ್ರಿವಿಧ ಭೇದಂಗಳಲ್ಲಿ ತ್ರಿವಿಧಾತ್ಮ ಭರಿತನಾಗಿ ಕ್ರಿಯಲ್ಲಿ ತ್ರಿವಿಧ, ಭಾವದಲ್ಲಿ ತ್ರಿವಿಧ, ಜ್ಞಾನದಲ್ಲಿ ತ್ರಿವಿಧ. ತನ್ನ ತ್ರಿವಿಧವ ತಾನರಿದು ಅನ್ಯ ಭಿನ್ನವಿಲ್ಲದೆ ನಿಂದುದದು ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೪೩ ॥

೩೨೫

ಮಣ್ಣುಕೊಂಡ ನೀರಿನಂತೆ, ಬಣ್ಣವನೊಳಕೊಂಡ ಕಪ್ಪಡದಂತೆ, ಬಣ್ಣ ವನೊಳಕೊಂಡ ಬಂಗಾರದಂತೆ, ಈ ತ್ರಿವಿಧವನೊಳಕೊಂಡ ಭೇದ ಭಾವದಂತೆ ಬಂದ ಘಟ, ಸಂಧಿಸಿದ ಇಷ್ಟ, ಉಭಯದ ಸಂದನರಿವ ಭಾವ, ಈ ತ್ರಿವಿಧವ ನೊಂದುಗೂಡಿ ಸಕಲ ಸುಖಿಯಾದ ನಿರಂಗನೇ ಪ್ರಾಣಲಿಂಗಿ ನಿಃಕಳಂಕ ಮಲ್ಲಿಕಾರ್ಜುನಾ ॥ ೪೪ ॥

೩೨೬

ಮಧುರವ ಕೂಡಿದ ಜಲವ ತೆಗದು ಭಿನ್ನವ ಮಾಡಬಹುದೇ ಅಯ್ಯಾ? ಘಟವ ಪುದಿದ ಬೆಳಗ ಪ್ರಕಟಿಸಬಹುದೇ ಅಯ್ಯಾ? ಇಂತೀ ಉಭಯದ ತೆರನಂತೆ ಪ್ರಾಣಲಿಂಗಿಯ ಸಂಬಂಧದಿರವು. ಮಾತಿನ ಮಾಲೆಯಿಂದ ನೀತಿ ಯಲ್ಲಿ ವಾಗ್ಬಲ. ಇಂತಿವರಿಗೇತಕ್ಕೊಲಿವ ನಿಃಕಳಂಕ ಮಲ್ಲಿಕಾರ್ಜುನಾ ॥ ೪೫ ॥

೩೨೭

ಮಹಾ ಮುಗಿಲಿನ ಮರೆಯ ಅರುಣನ ಕಿರಣದಂತೆ, ಮಹಾ ನಿರ್ಮಲ ಶಿಲೆಯ ಮರೆಯಲ್ಲಿ ಬೆಳಗುವ ದೀಪ್ತಿಯಂತೆ, ಮಹಾ ಸುಕ್ಷೇತ್ರವಾಸದ

ವಾಲುಕದ ಮರೆಯ ಅಪ್ಪುವಿನಂತೆ, ಇಂತೀ ದೃಷ್ಟದ ಇಷ್ಟದ ಮರೆಯಲ್ಲಿ ನಿಶ್ಚಯವ ನಿಶ್ಚಯಿಸಿದಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೪೬ ॥

೩೨೮

ಮಳಲ ಹಿಡಿದು ದ್ರವವ ಕಾಣಬಲ್ಲರೆ ಇಷ್ಟಲಿಂಗ ಸಂಬಂಧಿ. ಕಲ್ಲ ಹಿಡಿದು ಮೃದುವ ಕಂಡಲ್ಲಿ ಭಾವಲಿಂಗ ಸಂಬಂಧಿ. ನೀರ ಕಡೆದು ಬೆಣ್ಣೆಯ ಮೆದ್ದಲ್ಲಿ ಪ್ರಾಣಲಿಂಗ ಸಂಬಂಧಿ. ಇಂತೀ ಇಷ್ಟ ಭಾವ ಪ್ರಾಣ ತ್ರಿವಿಧ ಕೂಡಿ ಏಕವಾದಲ್ಲಿ ಪ್ರಾಣಲಿಂಗಿ ಎಂಬ ಭಾವವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೩೨೯

ಮಂಜಿನ ಮಡಕೆಯ ನೀರಿನಂತೆ, ಮರೀಚಿಕಾ ಜಲದ ಹೊಳಹಿನಂತೆ, ಅಂಬುಧಿ ತುಂಬಿದಲ್ಲಿ ಕುಡಿವ ಬಡಬಾನಲನಂತೆ, ಕಲ್ಲಿಂಗೆ ಸಂಭ್ರಮಿಸಿ ಹೂಸಿದ ನವನೀತದಂತೆ, ಮತ್ತವಕ್ಕೆ ಸಂದು ಸಂಶಯ ಉಂಟೇ? ಕ್ರಿಯೆಯಲ್ಲಿದ್ದು ಕ್ರಿಯೆಯನೀಂಟಿ, ಭಾವದಲ್ಲಿದ್ದು ಭಾವವನೀಂಟಿ, ಜ್ಞಾನದಲ್ಲಿದ್ದು ಜ್ಞಾನವ ನೀಂಟಿ ತಾವಾಗಿದ್ದಲ್ಲಿ ತನ್ನನರಿದು ತನಗೆ ಅನ್ಯಭಿನ್ನವಿಲ್ಲದಲ್ಲಿ ಸರ್ವಮಯ ಪರಿಪೂರ್ಣನಾದಲ್ಲಿ ಪ್ರಾಣಲಿಂಗ ಸಂಬಂಧಿ ನಿಃಕಳಂಕ ಮಲ್ಲಿಕಾರ್ಜುನಾ ॥ ೪೮ ॥

೩೩೦

ರಸವ ರುಚಿಸುವಲ್ಲಿ, ಗಂಧವ ವಾಸಿಸುವಲ್ಲಿ, ರೂಪು ನೋಡುವಲ್ಲಿ, ಶಬ್ದ ಕೇಳುವಲ್ಲಿ, ಸ್ಪರ್ಶ ಮುಟ್ಟುವಲ್ಲಿ, ಇಂತೀ ಐದರ ಮುಖದಲ್ಲಿ ಅರ್ಪಿಸಿ ಕೊಂಬುವನಾರೆಂಬುದನರಿತು ಭಂಗಾರದ ಹಲವು ತೆರದ ಆಭರಣದ ಸ್ವಸ್ಥಾನಂಗಳಲ್ಲಿ ಶೃಂಗರಿಸುವದು. ಘಟದಿಂದ ಚಂದವಲ್ಲದೆ ಆತ್ಮಂಗೆ ಒಂದೇ ವಿಲಾಸಿತ. ತನ್ನ ಭೀಷ್ಮೆಯ ತಾನರಿದು ಲೀಲೋಲ್ಲಾಸತೆಯನ್ನೈದುವಂತೆ ಲೌಕಿಕಕ್ಕೆ ಭರಿತನಾಗಿ, ಭಾವಕ್ಕೆ ಸತ್‌ಕ್ರಿಯವಂತನಾಗಿ, ಜ್ಞಾನಕ್ಕೆ ಸರ್ವಸಂತುಷ್ಟನಾಗಿ, ರಾಗವಿರಾಗಿಯಾಗಿ ನಿಜದಲ್ಲಿ ನಿಂದಾತನೇ ಪ್ರಾಣಲಿಂಗ ಸಂಬಂಧಿ ನಿಃಕಳಂಕ ಮಲ್ಲಿಕಾರ್ಜುನಾ ॥ ೪೯ ॥

೩೩೧

ರೂಪಿನಲ್ಲಿ ಹೊದ್ದಿಸಿಕೊಂಬುದೀ ಲಿಂಗ ಶಿಲೆಯ ಹಂಗ ಬಿಡದಾಗಿ ಮುಟ್ಟಿ ಪೂಜಿಸುವ ಭಕ್ತಂಗೆ ಭವ ಬಿಡದು. ಭಾವದಿಂದ ಅರಿದು ಭಾವಿಸಿಹೆ

ನೆಂದರೆ ಆ ಭಾವ ಕುರುಹಿಲ್ಲದೆ ಅರಿಯಬಾರದು. ಅರುಹು ಕುರುಹ ನುಂಗಿ
ಕುರುಹು ಅರುವಿನಲ್ಲಿ ಲೇಪವಾಗಬೇಕು. ಲೇಪವಾದ ಮತ್ತೆ ಕುರು
ಹಿಂಗೂ ಅರುವಿಂಗೂ ತೆರದರ್ಶನವಿಲ್ಲವಾಗಿ ಸೊಪ್ಪನೊಳಕೊಂಡ ಬಿತ್ತಿನಂತೆ,
ಕರ್ಪುರವನೊಳಕೊಂಡ ಕಿಚ್ಚಿನಂತೆ, ಚಿತ್ರವನೊಳಕೊಂಡ ಭಿತ್ತಿಯಂತೆ,
ಮುತ್ತನೊಳಕೊಂಡ ನಿಜಕಾಂತಿಯಂತೆ, ಸಚ್ಛಕ್ತಿಯನೊಳಕೊಂಡ ಘನಲಿಂಗ
ದಂತೆ. ಹೀಗಲ್ಲದೆ ಪ್ರಾಣಲಿಂಗ ಲಿಂಗವಾಗಬಾರದು. ಲಿಂಗ ಪ್ರಾಣವಾಗ
ಬಾರದು. ಇದರ ದ್ವಂದ್ವವನಳಿದ ಸದ್ದೇಹಿಗೆ ನಮೋ ನಮೋ ಎಂಬೆ
ನಿಃಕಳಂಕ ಮಲ್ಲಿಕಾರ್ಜುನಾ ॥ ೫೦ ॥

೩೩೨

ರೂಪುಗೊಂಡ ಲಿಂಗವ ನಿರೂಪಿನಿಂದ ಅರಿವಾಗ ಅದೇತರ ಕಳಾಸ್ವರೂಪು?
ನಿಷ್ಠೆಯ ಭಾವವೋ? ಇಷ್ಟದ ದೃಷ್ಟವೋ? ಉಭಯವನರಿವ ಚಿತ್ತುವಿನ
ಭೇದವೋ? ಇಷ್ಟನರಿತಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ
॥ ೫೧ ॥

೩೩೩

ವಸ್ತುವ ಮುಟ್ಟಿ ಇಹಪರವಲ್ಲಿ ಸುಖಿಯಾವೆನೆಂಬನ್ನಬರ ಅದು ತನ್ನ
ನೆಲೆಯೋ ಆತ್ಮನ ಭೇದವೋ ಎಂಬುದ ತಾನರಿತಲ್ಲಿ ಇಷ್ಟಲಿಂಗಕ್ಕೆ ದೃಷ್ಟವ
ಕೊಟ್ಟು, ಆತ್ಮಲಿಂಗಕ್ಕೆ ತೃಪ್ತಿಯ ಕೊಟ್ಟು, ನಿಶ್ಚಯಿಸಿಕೊಂಡಿಹೆನೆಂಬುದು
ಅದೇನು ಹೇಳಾ. ಉಭಯ ಭಿನ್ನ ಉಳ್ಳನಕ್ಕ ಪ್ರಾಣಲಿಂಗಿಯಲ್ಲ ನಿಃಕಳಂಕ
ಮಲ್ಲಿಕಾರ್ಜುನಾ ॥ ೫೨ ॥

೩೩೪

ಶರೀರದಲ್ಲಿ ಷಡಾಧಾರ ಚಕ್ರವುಂಟೆಂಬ ಜಡೆಗಡಿಗೆದೆಲೆಯ ಬೀಡು
ಗುರುಳಣ್ಣಗಳು ಕೇಳಿರೋ. ಬ್ರಹ್ಮನ ಚಕ್ರದಲ್ಲಿ ಹುಟ್ಟಿ ವಿಷ್ಣುವಿನ ಚಕ್ರದಲ್ಲಿ
ಬೆಳೆದು ರುದ್ರನ ಚಕ್ರದಲ್ಲಿ ಸಾವುದನರಿಯದೆ ಬಣ್ಣ ಬಚ್ಚಣೆಯ ಮಾತು
ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ನವನಿಕ್ಕುವರ ಪ್ರಸಂಗವ ಹಡೆಯ
ಬಂದ ಗನ್ನಗಾರಂಗೇಕೆ ಅರಿವು? ಆನಂದಕ್ಕತೀತ ದೂರ ಸ್ವಾನುಭಾವಾತ್ಮಕ
ನಿಗೆ ಜಾಣನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೩೩೫

ಸ್ಪರ್ಶನ ಸಲಹಿದಲ್ಲಿ ಬೇರೆ ವಿಷವ ಸಲಹಲುಂಟೇ? ಸಸಿವೃಕ್ಷಂಗಳ ಸಲಹುವಲ್ಲಿ ಬೇರೆ ಫಲವ ಸಲಹಲುಂಟೇ? ಕ್ರಿ ನಿರ್ಝರವಾದಲ್ಲಿ ಆಚಾರಕ್ಕೆ ಅಂಕುರ. ಆಚಾರಕ್ಕೆ ಅಂಕುರವಾದಲ್ಲಿ ದಿವ್ಯಜ್ಞಾನ ಪಲ್ಲವಿಸಿತ್ತು. ಆ ಪಲ್ಲವದ ಮರೆಯಲ್ಲಿ ಪರತತ್ವ ವಸ್ತು ಫಲವಾಗಿ ಉಭಯದ ತೊಟ್ಟು ಹರಿದುಬಿದ್ದ ಹಣ್ಣು ಅಭೇದ್ಯಲಿಂಗಕ್ಕೆ ತೃಪ್ತಿಯಾಯಿತ್ತು. ಇಂತೀ ಭಾವದ ಭ್ರಮೆಯ ಕಳೆದು ಜೀವವಿಕಾರ ಹಿಂಗಿ ನಾನೀನೆಂಬ ಉಭಯದ ಗುಟ್ಟು ಏನೂ ಇಲ್ಲದೆ ನಿಂದುದು ಪ್ರಾಣಲಿಂಗ ಸಂಬಂಧ. ಆ ಸಂಬಂಧವ ಸ್ವೀಕರಿಸಿ ನಿಂದುದು ಪ್ರಾಣಲಿಂಗಿಯ ತೃಪ್ತಿ. ಇಂತೀ ನಿಜದಲ್ಲಿ ತಾನು ತಾನಾಗಬಲ್ಲಡೆ ಆತನೇ ಐಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೪ ॥

೩೩೬

ಸರ್ವಾತ್ರ ಸುಲಭನಾದಲ್ಲಿ ನೀನು ನಾನೆನ್ನದಿಪ್ಪುದೇ ಜ್ಞಾನ. ಅಜ್ಞಾನವಿಂಬಾದಲ್ಲಿ ಭಾವದ ಭ್ರಮೆ. ಆತ್ಮತೇಜಕ್ಕೆ, ತರ್ಕದ ಗೆಲ್ಲಸೋಲಕ್ಕೆ ಇಕ್ಕೆಹಕ್ಕೆಗೆ ಹಿಕ್ಕಿಗೊಡದಿಪ್ಪುದೇ ಅರಿವು. ಅರಿವು ಕರಿಗೊಂಡಲ್ಲಿ ಇದಿರೆಡೆ ಇಲ್ಲವಾಗಿ ದೃಢವೇ ತದ್ರೂಪವಾದಲ್ಲಿ ತನಗೆ ಇದಿರಿಲ್ಲ ಇದಿರು ತಾನಲ್ಲ ದರ್ಪಣದ ಒಪ್ಪದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೫ ॥

೩೩೭

ಸಸಿ ಸ್ಥಾವರ ಮೂಲಂಗಳಿಗೆಲ್ಲಕ್ಕು ಪೃಥ್ವಿಯೇ ಆದಿ ಅಪ್ಪುವಿನ ಸಾರದಿಂದ ಪಲ್ಲವಿಸಿ ವೃಕ್ಷಂಗೆ ದೃಷ್ಟವಾದ ತೆರನಂತೆ, ಇಷ್ಟದ ಪೂಜೆ ದೃಷ್ಟವಾಗಿ ಆ ದೃಷ್ಟ ನಿಶ್ಚಯವಾದಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

೩೩೮

ಸ್ಥೂಲದಲ್ಲಿ ಕಾಬ ತನುವಿಂಗೆ ಆವುದು ದೃಷ್ಟ? ಸೂಕ್ಷ್ಮದಲ್ಲಿ ಕಾಬ ತನುವಿಂಗೆ ಆವುದು ದೃಷ್ಟ? ಕಾರಣದಲ್ಲಿ ಕಾಬ ತನುವಿಂಗೆ ಆವುದು ದೃಷ್ಟ? ದೃಷ್ಟಕ್ಕೆ ದೃಷ್ಟವ ಕಂಡಲ್ಲದೆ ಮನ ನಿಶ್ಚಯಿಸದು. ಶ್ರುತದಲ್ಲಿ ಕೇಳಿ, ದೃಷ್ಟದಲ್ಲಿ ಕಂಡು, ಅನುಮಾನದಲ್ಲಿ ಅರಿದು, ಭಾವ ನಿರ್ಭಾವವಾಗಿಯಲ್ಲದೆ ನಿಶ್ಚಯವಿಲ್ಲ. ನಿಶ್ಚಯಕ್ಕೆ ಒಳಗಾಹನ್ನಬರ ಅಂಗಕ್ಕೆ ಆಚಾರ, ಮನಕ್ಕೆ ಅರಿವು.

ಅರಿವಿಂಗೆ ನಿರಾಳವಹನ್ನಕ್ಕ ಸ್ಥೂಲದಲ್ಲಿ ಮುಟ್ಟಿ, ಸೂಕ್ಷ್ಮದಲ್ಲಿ ಅರಿದು ಕಾರಣದಲ್ಲಿ ಕೂಡಿ, ಕೂಟ ಏಕಸ್ಥವಾದಲ್ಲಿ ತ್ರಿವಿಧಲಿಂಗ ತ್ರಿವಿಧ ಲಿಂಗಾರ್ಪಣವಾಯಿತ್ತು. ಆದಲ್ಲಿ ಭಾವವಿಲ್ಲದಿಪ್ಪುದು ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೫೭ ॥

೩೩೯

ಹಲಾಹಲವೆಂಬ ಮಾಳಿಗೆಯ ಹೊಕ್ಕು ಕೋಲಾಹಲವ ಕಾದಿ, ಈಡಾ ಪಿಂಗಳ ಸುಷುಮ್ನನಾಳನಾಡಿಗಳೆಂಬ ಅಂಬುಗಂಡಿಯ ಮುಚ್ಚಿ, ಅಷ್ಟ ಮದವೆಂಬ ಕೋಟೆಯನೊಡೆದು, ಪಂಚೇಂದ್ರಿಯವೆಂಬ ಹುಡೆಯವ ಕಿತ್ತು, ಸಕಲೇಂದ್ರಿಯವೆಂಬ ನೆಗಳ ಮುರಿದು, ಆಧಾರ ಸ್ವಾದಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಅಗ್ನಿ ನೆಲೆಗಟ್ಟ ಮೆಟ್ಟಿ, ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೇಲ ಜಂತೆಯ ಕಿತ್ತು, ಪ್ರಪಂಚಕವೆಂಬ ಮೆತ್ತ ಮಣ್ಣನೆ ಕಿತ್ತು ಹಾಯಿಕೆ ಹಾಯಿತ್ತು. ಮಾಳಿಗೆಯ ನಾಮ ನಷ್ಟವಾಯಿತ್ತು. ಆ ಮಾಳಿಗೆಯನಾಳಿ ಬಾಳದೆ ಹೋದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

೩೪೦

ಹೆಡೆ ಇಲ್ಲದ ಸರ್ಪ, ಫಲವಿಲ್ಲದ ವೃಕ್ಷ, ದಯವಿಲ್ಲದ ಮಾಟದಂತೆ ಇಷ್ಟದ ದೃಷ್ಟವ ಕಾಣದ ಚಿತ್ತ ಆತ್ಮನಲ್ಲಿ ಕಟ್ಟುವಡೆಯ ಬಲ್ಲುದೆ? ಕ್ರಿಯೆಯಲ್ಲಿ ಆಚರಣೆ, ಆಚರಣೆಯಲ್ಲಿ ಅರಿವು ಶುದ್ಧವಾಗಿ ನಿಂದುದು ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೫೯ ॥

## ೫ ಶರಣಸ್ಥಲ

೩೪೧

ಅಕ್ಕಿಯ ಕುದಿಸಿದಡೆ ಅದಕ್ಕೆ ಪಕ್ವವಲ್ಲದೆ ಮಿಕ್ಕುಳಿದುದಕ್ಕೆಲ್ಲ ಪಕ್ವ ಉಂಟೇ? ಮರವೆಯಲ್ಲಿ ಅರಿವನಲ್ಲದೆ ಅರಿವಿನಲ್ಲಿ ಮರವೆಯುಂಟೇ? ಅದ ಉಂಟೆನ್ನಬಾರದು, ಇಲ್ಲೆನ್ನಬಾರದು. ಈ ಉಭಯವನೀಂಟಿದಲ್ಲದೆ ಗಂಟಿಗೆ ಹೊರಗಾಗ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೩೪೨

ಅರ್ಚನೆಯುಲರ್ಚಿಸಿದಲ್ಲಿ ಪುಣ್ಯದ ಫಲ ಭಕ್ತಿ. ಈ ದ್ರವ್ಯವ ಕುಡುವುದು ಮುಕ್ತಿಲೋಕದೊಳಗು. ಈ ಉಭಯದ ಬಿತ್ತಿಯನರಿದು ನಿತ್ಯವ ತಿಳಿದ ವಂಗೆ ಏನೂ ಎನಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೩೪೩

ಅನಾಗತ ಸಂಸಿದ್ಧಿಯಾಗಿ ನಾಮರೂಪುಕ್ರಿ ಇಲ್ಲದಿಪ್ಪ ಭೇದ ಭವಿಶಬ್ದ ಸರ್ವಗುಣ ಸಂಪನ್ನನಾಗಿಹುದು. ಕೃತ್ಯಾಕೃತ್ಯಂಗಳ ಮಾಡುವನ್ನಕ್ಕ ಭಕ್ತ. ಅವನಿತ್ತರಿಸಿ ಅನುಭವಿಸಿದ ಮತ್ತೆ ಅನುಭಾವಿ ಎಂಬುದಕ್ಕೆ ಸೂಚನೆ. ಕಡವ ರಕ್ಕೆ ಕುರುಹನಿಟ್ಟಂತೆ ಮರೆಯ ಮಾತಿನ ಅರಿಕೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ ॥ ೩ ॥

೩೪೪

ಅಮೃತ ಸಾರವ ಬಲ್ಲುದೇ? ಸಸಿ ಫಲವ ಬಲ್ಲುದೇ? ನಿರ್ಜಾತರ ಜಾತ ಬಲ್ಲನೇ? ಅವನೇತಕ್ಕೂ ಸಿಕ್ಕ. ಅರಿದವನಾಶೆಗೆ ಸಿಕ್ಕ. ಇದು ಭಾಷೆ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೩೪೫

ಅರಿದ ಶರಣಂಗೆ ಅಡಗುವ ಠಾವುಂಟೇ? ಅಡಗಿದ ಮತ್ತೆ ಬಿಡಬೇಕು. ಆದಿಯ ಹುಟ್ಟುವ ಜಡರ ಸಂಸರ್ಗ ಬಿಡವು ಸರಿ. ಇಂತೀ ದೃಢ ಚಿತ್ತಂಗೆ ಕಡೆ ಮೊದಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೩೪೬

ಅರಿದವ ತಾನರಿದ ಮತ್ತೆ ಹೆರೆಹಿಂಗದಿರಬೇಕು. ಆಶೆ ಆಮಿಷ ತಾಮಸ ಸಕಲೇಂದ್ರಿಯವ ಭಾವಿಸಲಿಲ್ಲ ಭ್ರಮೆಗೊಳಗಾದ ಮಾನವರುಗಳು. ಜ್ಞಾನಿ ತಾನಾದ ಮತ್ತೆ ಮಾನವರ ಮರೆಯ ಹೊಗದೆ ತಾನು ತಾನಾಗಬಲ್ಲರೆ ಆತಂಗೆ ಭವದ ಭ್ರಮೆ ಇಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೩೪೭

ಅರಿದೆನೆಂಬುದೇನೋ? ಮರೆದೆನೆಂಬುದೇನೊ? ಅರಿವು ಮರವೆ ಎರಡರ ಎಡೆಯಲ್ಲಿ ಇದರ ತೆರನರಿಯೋ ನಿಃಕಳಂಕ ಮಲ್ಲಿಕಾರ್ಜುನಾ ॥ ೭ ॥

೩೪೮

ಅರಿವು ಕರಿಗೊಂಡಲ್ಲಿ ಇದರ ತೆರನರಿಯಬೇಕು. ತನ್ನ ಮರೆಯಬೇಕು. ಅರಿದ ಮತ್ತೆ ಯಥಾರ್ಥಕ್ಕೆ ತೆರಹಿಲ್ಲ. ಹಿಡಿವುದಕ್ಕೆ ಅಂಗವಿಲ್ಲ. ಅರಿವುದಕ್ಕೆ ಆತ್ಮವಿಲ್ಲ. ಬೇರೆ ಬಿಡುಗಡೆ ಇಲ್ಲವಾಗಿ ಅರಿಕೆ ತಾನೆ ಆ ಶರಣನಲ್ಲಿ. ಇದು ನಿರ್ಲೇಪ ಶರಣಸ್ಥಲ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೩೪೯

ಅಳಿವರಿಗೆ ಉಳಿವೆಲ್ಲಿಯು ಇಲ್ಲ ಎಂಬುದ ತಿಳಿ. ಉಳಿವರಿಗೆ ಅಳಿವೆಲ್ಲಿಯು ಇಲ್ಲವೆಂಬುದು ತಿಳಿ. ಈ ಅಳಿ ಉಳಿವೆಂಬುಭಯವನರಿದು ಏನು ಎನಲಿಲ್ಲ ವೆಂಬುದ ತಿಳಿ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೩೫೦

ಅಂಬರ ಹರಿದಡೆ ಸಂಭಾವಿಸಿದ ಕಲೆ ಬಿಡದು. ಇದರಂದವ ತಿಳಿ. ಹೀಗ ಲ್ಲದೆ ಮನವ ಲಿಂಗದಲ್ಲಿ ನಿಕ್ಷೇಪಿಸಿ ಬಂಧವ ಹಿಂಗಿ ಸುಸಂಗತನಾಗು. ಮಹ ಲಿಂಗಿಗಳ ಸಂಭಾಷಣದಲ್ಲಿ ನಿಂದು ನಿರ್ವಾಣನಾಗು ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೩೫೧

ಆಡುವ ಆಟ ತಪ್ಪಿ, ಅದು ಆಟದವನ ಮನಸಿಗೆ ಕಿಂಕರದೋರಿದ ಮತ್ತೆ ಕೊಡಬೇಕೆಂಬ ಮತ್ತೆ ಆ ಲಾಗು ಬಂದಿತ್ತೆಂಬ ದಿಮ್ಮು ಮನುಜರುಗಳಿಗೆ ಹೇಳುವದುಂಟೇ? ಮಹಾನುಭಾವಿಗಳ ಸಂಗ ಮಣಿವ ಅಲಗಿನ ಮೊನೆಯ ಗುಣದಂತಿರಬೇಕು. ರೂಹುಗೊಂಡಡೆ ನೆಲನ ಕಲ್ಲು ವಾಸದಂತಿರಬೇಕು. ಹಾಗಲ್ಲದೆ ಅರಿದು ಮರೆದೆನೆಂಬ ಮರೆದ ಮತ್ತೆ ಅರಿದೆನೆಂಬವನ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೩೫೨

ಆಡುವಂಗೆ ಅವಧಾನ, ಆಭಾಸಾಂಗವಲ್ಲದೆ ನೋಡುವಂಗೆ ಚೋದ್ಯವ ಪ್ಪಂತೆ ಈ ಉಭಯವನೊಡಗೂಡಿದ ಭೇದವ ನೋಡಾ. ಕೈಯ್ಯಲ್ಲಿ ಅಡಗು ವಾಗ ಕಲ್ಲಲ್ಲ. ಮನದಲ್ಲಿ ಒಡಗೂಡಿ ಸುಳಿಯುವಾಗ ಗಾಳಿಯಲ್ಲ. ಏನು ಎನ್ನ ದಿಹ ಚೋಹ ಬಯಲಲ್ಲ. ಎಲ್ಲಿ ತನ್ನನರಿದಲ್ಲಿಯೇ ತಾನು ನಿಃಕಳಂಕ ಮಲ್ಲಿ ಕಾರ್ಜುನಾ ॥ ೧೨ ॥

೩೫೩

ಆತ್ಮನರಿದಿಹೆವೆಂದು ಭೇಷ್ಮಿಸಿಕೊಂಡಿಪ್ಪ ಜಗದಾಟದ ತ್ರಿವಿಧಕಾಟದ ನೀತಿವಂತರು ಕೇಳಿರೋ. ಆತ್ಮನ ಇರವು ಶ್ವೇತವೋ ಹರಿತವೋ ಕಪೋತವೋ ಮಂಜಿಷ್ಟವೋ ಕೃಷ್ಣವೋ ಗೌರವಗಾತ್ರಕ್ಕೆ ಮೊದಲಾದ ಬಣ್ಣದ ವರ್ಣವೋ? ಇವೆಲ್ಲ ಬಾಯಲ್ಲಿ ಆಡುವ ಮಾತಲ್ಲದೆ ಭಾವಜ್ಞರಸಾರಸೂ ಕಾಣೆ. ಆತ್ಮನ ಕಂಡವನ ಇರವು ಮುಕುರದೊಳಗಣ ಪ್ರತಿಬಿಂಬದಂತೆ, ಸ್ಮೃತಿಯೊಳಡಗಿದ ಗತಿನಾದದಂತೆ, ಸುಖದೊಳಡಗಿದ ಪ ತಿರೂಪದಂತೆ ಇದರ ಎಸಕದ ಕುರುಹ ಸರಿವವ ನೀನೋ ನಾನೋ ಇದನೇನೆಂದು ಅರಿಯೆ. ಅವ ಭ್ರಮೆಗೆ ದೂರ. ವಿಜ್ಞಾನ, ನಿರ್ಲೇಪ, ತಾನು ತಾನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೩೫೪

ಆದಿಯನರಿದ ಮತ್ತೆ ಆಧಿಯಲ್ಲಿ ನಡೆವ ಪ್ರಪಂಚವೇಕೋ? ಅನಾಗತವ ನರಿದ ಮತ್ತೆ ಅನ್ಯಾಯದಲ್ಲಿ ನಡೆವ ಕನ್ನಘಾತಕವ ಬಿಡಬೇಕು. ಇಹ ಪರ ಉಭಯವನರಿದ ಮತ್ತೆ ಪರಮನಾಗಿರಬೇಕು. ಪರರ ಬೋಧಿಸಿ ಹಿರಿಯರಾದೆ ವೆಂಬ ಹೊರೆಯದೇತಕ್ಕೋ? ಯೋಗಿಯಾದ ಮತ್ತೆ ರೋಗದಲ್ಲಿ ಸಾಯಲ ದೇತಕ್ಕೋ? ಆದಿ ಮಧ್ಯ ಅಂತ್ಯವನರಿದ ಮತ್ತೆ ಸಾಯಲದೇತಕ್ಕೋ? ಇಂತೀ ಭೇದಕರಿಗೆ ಅಭೇದ್ಯ ಅಪ್ರಮಾಣ ಅಭಿನ್ನನಾದ ಶರಣಂಗೆ ನಮೋನಮೋ ಎಂದು ಬದುಕಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೩೫೫

ಆವ ಬೀಜ ಬತ್ತಿದಲ್ಲಿ ತಾನಳಿದು ಮತ್ತೆ ಬೀಜ ತಾನೆಯಾಗಿ ಮತ್ತೆ ಳಿದು ಉಳಿದ ತೆರದಂತೆ ಲಿಂಗವ ಮುಟ್ಟಿದ ಆತ್ಮನು ಲಿಂಗದಲ್ಲಿಯೇ ಅಳಿದು ಮತ್ತೆ ಘನಲಿಂಗವಾಯಿತ್ತೆಂಬುದಕ್ಕೆ ಸೂಚನೆ. ಇಂತೀ ಉಭಯದ ನಷ್ಟದ ತೊಟ್ಟುಬಿಟ್ಟು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಅಚ್ಯೋತ್ತಿದಂತಿರಬೇಕು ॥ ೧೫ ॥

೩೫೬

ಇರಿ ಎಂಬುದಕ್ಕೆ ಮುನ್ನವೆ ಒಡಲು ಹರಿಯಿತ್ತೆ ? ಮಾತನಾಡುವದಕ್ಕೆ ಮುನ್ನವೆ ಮನ ಸಂದಿತ್ತೆ? ಕಲ್ಪತರುವಿನ ನಾಮವ ಹಡೆದ ದತ್ತೂರದಂತೆ ಭಕ್ತರ ವಿರಕ್ತರೆಂದರೆ ಸತ್ಯರಪ್ಪರೆ? ಅದು ನಿಶ್ಚಯವಲ್ಲ ನಿಃಕಳಂಕ ಮಲ್ಲಿಕಾರ್ಜುನನೊಪ್ಪದ ಮಾತು ॥ ೧೬ ॥

೩೫೭

ಈಡಾ ಪಿಂಗಳ ಸುಷುಮ್ನ ನಾಳನಾಡಿಗಳಲ್ಲಿ ಆತ್ಮನು ಸಂಚರಿಸಬಾರದೆಂಬ ಯೋಗಾಂಗದ ಅಣ್ಣಗಳು ನೀವು ಕೇಳಿರೋ! ವಾಯುವ ಅಧೋ ಮುಖಕ್ಕೆ ತರಬಾರದೆಂದು ಊರ್ಧ್ವ ಮುಖಕ್ಕೆ ತಂದು ಅಮೃತವನುಂಡಿಹೆನೆಂಬ ಅಷ್ಟಾಂಗ ಯೋಗದ ಕರ್ಮಿಗಳು ನೀವು ಕೇಳಿರೋ! ಶರೀರದಲ್ಲಿ ಶುಕ್ಲ ಶೋಣಿತ ಮಜ್ಜೆ ಮಾಂಸ ಇದರೊಳಗಾದ ಸಾಕಾರದ ತಲೆಯಲ್ಲಿ ನಿರಾಕಾರದ ಅಮೃತವನುಂಡಿ ಹೆನೆಂಬುದು ಹುಸಿಯಲ್ಲವೇ? ಒಂಜೆಯಾವಿನಲ್ಲಿ ಕ್ಷೀರದ ಕೆಚ್ಚಲುಂಟೇ? ಕಲ್ಲಿನ ಕಲ್ಲರೆಯಲ್ಲಿ ಚಿಲುಮೆಯ ಸಾರ ಉಂಟೇ? ಹೊಲ್ಲಹ ದೇಹದಲ್ಲಿ ನೆಲೆಯ ಕ್ಷೀರ ಉಂಟೇ? ಇವನೆಲ್ಲವನರಿಯದೆ ಬಲ್ಲತನವ ಸೂರೆಗೊಂಬ ಗೆಲ್ಲಗೂಳಿಗೆಲ್ಲಿಯದೋ ಲಿಂಗಾಂಗಯೋಗ? ಹರಿವ ವಾರಿ ನೆರೆ ಷ್ಣಾವಸೆ ಮುಸುಕುವದೇ? ಸುಡುವ ಅನಲಂಗೆ ತೃಣ ಕಟ್ಟು ಒಡೆವುದೇ? ಅರಿದ ಪರಂಜ್ಯೋತಿ ಪ್ರಕಾಶಂಗೆ ತನುವ ದಂಡಿಸಿ ಕಂಡಿಹೆನೆಂಬ ಭ್ರಾಂತು ಎಲ್ಲಿಯದೋ? ಆತ್ಮನ ಇರವು ಘಟ ವ್ರತ ದೊಳಗೆ ಗ್ರಹಿಸಿಪ್ಪ ಬೈಲಿನ ಇರವಿನಂತೆ, ರವಿಯೊಳಗೆ ಸೂಸುವ ಕಿರಣದಂತೆ, ವಾಯುವಿನ ಬೆಂಬಳಿಯ ಗಂಧದಂತೆ, ಬಿತ್ತಳಿದ ರಜ್ಜುವಿನ ತೈಲದ ಕೂಡ ಬೆಳಗುವ ಕಳೆಯಂತೆ. ಭಾವದ ಮಧ್ಯದಲ್ಲಿ ನಿಂದು ಓಂಕಾರ ಸ್ವರೂಪವನರಿ ಯದೆ ಕೆಟ್ಟರಲ್ಲಾ ಕರ್ಮ ಕಾಂಡಿಗಳು ಪಳುಕಿನ ಶಿಲೆಯಲ್ಲಿ ನಿಂದ ವಾರಣ ದಂತೆ. ನಿನ್ನ ನೀ ತಿಳಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸರ್ವಾಂಗ ಭರಿತನಾದ ಶರಣಾ ॥ ೧೭ ॥

೩೫೮

ಉದಕಲ್ಲಿ ತೊಳೆದು ಕಂಡಿಹೆನೆಂದಡೆ ಮಲಿನದವನಲ್ಲ. ಪುಷ್ಪದಲ್ಲಿ ಹೊದಿಸಿ ಕಂಡಿಹೆನೆಂದಡೆ ಹೊತ್ತಿನ ವೇಳೆಗೆ ಬಂದು ಗೊತ್ತು ಮುಟ್ಟುವನಲ್ಲ. ನಾನಾ ಉಪಚಾರದಿಂದ ಭಾವಿಸಿ ಕಂಡಿಹೆನೆಂದಡೆ ಭ್ರಮೆಯುವನಲ್ಲ. ಇದನರಿದು ಮರವೆಗೆ ತೆರಹಿಲ್ಲದಿಪ್ಪ ನಿಃಕಳಂಕ ಮಲ್ಲಿಕಾರ್ಜುನನ ಒಡಗೂಡಿದವನಿಗೆ॥ ೩೮॥

೩೫೯

ಉದಕವ ರಸದಂತೆ, ಅಗ್ನಿಯ ಉಭಯದಂತೆ, ವಿಷವ ನಿರ್ವಿಷದಂತೆ, ಕಾಬಕಾಣಿಸಿಕೊಂಬ ಭೇದ, ತನುವಿನ ಮೇಲಿಹ ಲಿಂಗದ ನೆನಹು, ಪ್ರಾಣನ ಮೇಲಿಹ ಭಾವದಸಂಚು, ಆ ಉಭಯವನ್ನೊಳಕೊಂಡ ಜ್ಞಾನದ ಬಿಂದು

ಸದಮಲ ಬೆಳಗಿನೊಳಗಯ್ದಿದ ಮತ್ತೆ ಬಿಡುಮುಡಿ ಎರಡಿಲ್ಲ. ಅದು ಶರಣನ ನಿಲದೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥೧೯॥

೩೬೦

ಉರಿಯ ಬಣ್ಣದ ಸೀರೆಯನುಟ್ಟು ಹರಶರಣರೆಲ್ಲರು ಮದುವೆಗೆ ಹೋದರು ನಿಬ್ಬಣಿಗನ ಹಿಂದುಳಿಹಿ ಮದುವೆಯ ಹರೆ ಮುಂದೊಳಿತ್ತು. ಮದುವೆಗೆ ಕೂಡಿದ ಬಂಧುಗಳೆಲ್ಲರು ಮದುವಳಿಗನ ಮದುವಳಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ. ಈ ಗಜಿಬಿಜಿಗಂಜಿ ಹರೆಯುವ ಸತ್ತು ಎಣ್ಣೆಯ ಗಡಿಗೆಯ ಒಡೆಯ ಹಾಕಿದ. ಇನ್ನು ಮದುವೆಯ ಸಡಗರ ನೇಕಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೩೬೧

ಉರಿಯೊಳಗಣ ಶೈತ್ಯದಂತೆ ಶೈತ್ಯದೊಳಗಣ ಉರಿಯಂತೆ ಅರಿದು ಅರುಹಿಸಿಕೊಂಬುದೇನು ಹೇಳಾ? ಅದು ಚಂದ್ರನೊಳಗಣ ಕಲೆ, ತನ್ನಂಗದ ಕಳೆಯಿಂದ ಉಭಯ ದೃಷ್ಟವ ಕಾಣಿಸಿಕೊಂಬಂತೆ ಆ ಇಷ್ಟದ ದೃಷ್ಟ ಅರಿವುದು ಅರುಹಿಸಿಕೊಂಬುದು ಒಡಗೂಡಿದಲ್ಲಿ ಶರಣಸ್ಥಲ. ಆಸಂಬಂಧ ಸಮಯ ನಿಂದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೩೬೨

ಏಕಜಲ ಒಹುಜಲವಾದ ಕ್ರಮವನರಿವುದು ಅದಕ್ಕೆ ದೃಷ್ಟ. ಅನಾದಿಯ ಪ್ರಣಮವನರಿಯದೆ ಹಾದಿಯಲ್ಲಿ ಕಲ್ಲ ಪೂಜಿಸಿದರಯ್ಯಾ! ಸಂಸಾರಕ್ಕೆ ಬೋಧೆಗೆ ಸಿಕ್ಕಿರೆ ಅನಾಗತಸಿದ್ಧಿಯ ಹೋದ ಹೊಲಬನರಿಯದೆ ಕೆಟ್ಟರಯ್ಯಾ! ಅಂಧಕಂಗೆ ಚಂದದ ಮುಖ ಉಂಟೇ? ಶೃಂಗಾರವೇಕೆ ಪಂಗುಳಂಗೆ? ಲಿಂಗವ ನರಿದವಂಗೆ ಜಗದ ಹಂಗಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

೩೬೩

ಕಟ್ಟಿ ಬಿಟ್ಟು ಕಂಡಿಹೆವೆಂದು ಬಿಗಿದಿಪ್ಪರಂತೆ ಕೆಲವರು. ಕಣ್ಣ ಮುಚ್ಚಿ ಧ್ಯಾನದಿಂದ ಅರಿದು ನಿಂದಿಹೆವೆಂದು ಕೆಲವರು. ಜಪ ತಪ ನೇಮ ನಿತ್ಯದಿಂದ ತಿರುಗಿ[೧] ಕಂಡಿಹೆವೆಂದು ಕೆಲವರು. ವೇದ ಶಾಸ್ತ್ರಾಗಮವ ನೋಡಿ ಕಂಡಿಹೆವೆಂದು ಕೆಲವರು. ಮಾಡಿ ನೀಡಿ ಕೊಟ್ಟು ಕೊಂಡು ಸುಖಿಯಾಗಿ ನಿಂದಿಹೆ

---

೧. ರೂಹು (ಬ)

ವೆಂದು ಕೆಲವರು. ಕರ್ತೃಭೃತ್ಯರಾದೆವೆಂದು ಕೆಲವರು. ಲೋಕವೆಲ್ಲ ಕೆಟ್ಟು ಮುನ್ನಾದಿಯಲ್ಲಿ ಆದ ಅವರಂಗವಿದೇ ಸವ್ಯಾಕ್ಷಕೃತ್ಯವೆಂದು ಭೇದಿಸುವವಕ್ಕೆ ಅತೀತ ತಾನು ಶೂನ್ಯಲಿಂಗ. ಅನ್ಯಸಾಧಕಕ್ಕೆ ಸಿಕ್ಕದಿಪ್ಪ ಅನಾಗತ ಸಂಸಿದ್ಧ ಲಿಂಗವನ್ನು ತನ್ನನರಿದು ಇದಿರ ಕಂಡಿಹೆನೆನ್ನುವ ದೇಹದಿ ಲಿಂಗವೇಕೋ ಪ್ರಾಣಲಿಂಗವದೇಕೋ ಏನೆನ್ನದೆ ಅದೇತೆನ್ನದಿಪ್ಪ ನಿಃಕಳಂಕ ಮಲ್ಲಿಕಾರ್ಜುನ ತಾನೇ ಬಲ್ಲ ॥ ೨೩ ॥

೩೬೪

ಕಣ್ಣ ಮುಚ್ಚಿ ದೃಷ್ಟಿಯಲ್ಲಿ ನೋಡಬಲ್ಲರೆ ಆತನ ಬಲ್ಲನೆಂಬೆ. ಬಾಯ ಮುಚ್ಚಿ ನಾಲಿಗೆಯಲ್ಲಿ ಉಣ್ಣಬಲ್ಲರೆ ಆತನ ಸಂಗೋಳಿಸಿದವನೆಂಬೆ. ತನುವ ಮರೆದು ಆ ತನುವ ಕಂಡಡೆ ಆತನರಿದನೆಂಬೆನಯ್ಯಾ. ಬೆಳಗಿನೊಳಗಣ ಬೆಳಗು ಕಳೆಯೊಳಗಣ ಕಾಂತಿ ನಿಃಕಳಂಕ ಮಲ್ಲಿಕಾರ್ಜುನಾ ತಾನು ॥ ೨೪ ॥

೩೬೫

ಕಣ್ಣಿನಲ್ಲಿ ನೋಡಿ ಕಂಡಿಹೆನೆಂದರೆ ರೂಪಿಗೆ ಒಡಲಲ್ಲ. ಕೈಯಲ್ಲಿ ಮುಟ್ಟಿ ಕಂಡಿಹೆನೆಂದರೆ ನೆಟ್ಟ ಗೂಟವಲ್ಲ. ಮನದಲ್ಲಿ ನೆನದು ಕಂಡಿಹೆನೆಂದರೆ ಅನು ಮಿಂಗಗೋಚರ. ಈ ಅನುಪಮ ಲಿಂಗವಾರಿಗೂ ಸಾಧ್ಯವಲ್ಲ. ಘನಮಹಿಮ ನೀನೇ ಬಲ್ಲೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೫ ॥

೩೬೬

ಕಣ್ಣಿಲ್ಲದವಂಗೆ ಬಣ್ಣ ಬಚ್ಚಣೆ ಯಾಕೆ? ಮನ್ನಣೆ ಇಲ್ಲದ ಠಾವಿನಲ್ಲಿ ಅಣ್ಣ ಅಪ್ಪ ಎನ್ನಲೇಕೆ? ನನ್ನಿಯ ಗುಣವಿಲ್ಲದಲ್ಲಿ ಪನ್ನಗಧರನ ಶರಣರು ಮತ್ತಲ್ಲಿಗೆ ಹೋದರೆ ಕಾಲಿಗೆ ತಾಗಿದ ಸರಳಂತಾಯಿತ್ತು.[೧] ಬಲ್ಲವರಿಗೆ ಗುಣವೇ ಪ್ರಾಣ. ಪ್ರಾಣವಲ್ಲಭ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೩೬೭

ಕತ್ತಿಯ ನೆತ್ತಿ ಕೊಲೆಗೆಣಿಸಿದಡೆ ಕಲ್ಪಿತವ ತೊಡೆವುದು ಕತ್ತಿಯೋ ಹೊತ್ತವನೋ? ಈ ಉಭಯದ ಚಿತ್ರವನರಿದಡೆ ಆತನೇ ಮತ್ತೆ ನಿಜಾತ ನೆಂದರಿಗು[೨] ನಿಃಕಳಂಕ ಮಲ್ಲಿಕಾರ್ಜುನಾ ॥ ೨೭ ॥

---

೧. ಕಲ್ಲತಾಗಿದ ಸರಳ (ಬ)

೨. ನೆಂದೇಗು (ಬ)

೩೬೮

ಕಾಳಗಕ್ಕೆ ಆಸಾಗಿ ಬಂದು ಎನಗಿದಿರಾಗಿ ಕೈದ ಪಿಡಿವವನಾರನು ಕಾಣೆ. ಆಗಿದು ನೋಡಿದೆ ಮೊಗೆದು ನೋಡಿದೆ ಎನಗಿದಿರಹ ವೈರಿಗೆ ಯಾವ ಎಡೆಯಲ್ಲಿಯೂ ವಜ್ರಾಂಗವೇ. ಎನ್ನ ಕರವ ಕಂಪಿನ ಕೈದೇ! ಎನ್ನ ಹೃದಯದ ಬೆಳಗಿನ ಎಡೆಯ ತೇಜವೇ! ನಿರ್ಘಾತಿಯ ಲೀಲೆಯೇ! ಎನ್ನನೊಡಗೂಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೮ ॥

೩೬೯

ಕುರುಹು ಅಡಗಿಯಲ್ಲದೆ ಒಂದನರಿಯಬಾರದು. ತಾನರಿದಲ್ಲಿಯಲ್ಲದೆ ಕುರುಹಿನ ಕುಲ ಕೆಡದು. ಅರಿಯದುದವನರಿದಲ್ಲಿ ಮರೆದು, ಮರದುವನರಿವಲ್ಲಿ ಕಂಡು, ಉಭಯದ ತೋಟಿಯು ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಅಂಗ ಕರತಳಾಮಳಕವಾಯಿತ್ತು ॥ ೨೯ ॥

೩೭೦

ಕುಲಿಶ ಅಂಗುಲದೊಳಗಡಗಿವಡೆ ಕುಟ್ಟದೆ ಬಿಟ್ಟವ? ಶಿಲೆಯೊಳಗಡಗಿದ್ದ ಪಾವಕ ಉದ್ಭೈಸಿ ಸುಡದೆ ಮಹಾರಣ್ಯವ? ಚಿತ್ತುವಿನಲ್ಲಿ ಉದ್ಭೈಸಿದ ಜ್ಞಾನ, ತನುವಿನ ಮೊತ್ತದೊಳಿಪ್ಪ ಕಷ್ಟೇಂದ್ರಿಯವ ನಷ್ಟವ ಮಾಡದಿಪ್ಪುದೇ? ಸರ್ಪದಷ್ಟವಾದರೇನು ವಿಷ ಚಲನೆಯಾದಲ್ಲದೆ ತನುವಿನ ಮರವೆ ಇಲ್ಲ. ಹೀಗೆ ನಟಿಸಿಯಲ್ಲದೆ ಅಘಟಿತವಾಗಬಾರದು. ಇಂತಪ್ಪ ಪ್ರಕಾಶಿತಂಗೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೦ ॥

೩೭೧

ಕುಸುಮ ಗಂಧವ ಉಪದ್ರವಷ್ಟದಿಂದ ಹೊರುವಂತೆ ಕಿಸಲಯದ ಘೃತವ ಅದು ತನ್ನ ಎಸಕದಿಂದ ಬಂಧ ಬಿಡುವಂತೆ, ರಸಿಕರ ವಿವೇಕವದು ಹೊಸ ನವನೀತದಲ್ಲಿ ನಿಶಿತ ಅಳಕವ ತೆಗದಂತೆ, ಆ ವಾದಸ್ಥಲವ ವೇಧಿಸಿದಲ್ಲಿ ಭಾವಕ್ಕೆ ಭ್ರಮೆ ಇಲ್ಲದೆ ಉಭಯಕ್ಕೆ ನೋವಿಲ್ಲದೆ ಭಾವನಿರ್ಭಾವವಾಗಬೇಕು. ಆತ ಷಟ್ಸ್ಥಲವೇದಿ. ಉಭಯಸ್ಥಲಭರಿತ ಆತ ಸರ್ವಸ್ಥಲ ಸಂಪೂರ್ಣ. ಸರ್ವಭಾವಲೇಪ. ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಉಭಯಸ್ಥಲ ಲೇಪವಾದ ಶರಣ ॥ ೩೧ ॥

೩೭೨

ಕೋಳು ಹೋದ ಮತ್ತೆ ಕಾಳಗದ ಇರವೇಕೆ ? ಜಾಣನಾದ ಮತ್ತೆ ಕೇಳಲೇಕೆನುವನು ? ಜ್ಞಾನವಾದ ಮತ್ತೆ ಬಳಲೇಕೆ ಭವದಲ್ಲಿ ? ಇದು ವೇಣುವಿನೊಳಗಣ ಕಿಚ್ಚಿನಂತಾಯಿತ್ತು. ಇದಕ್ಕೆ ಜಾಣತನವೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೨ ॥

೩೭೩

ಕಂಡೆನಯ್ಯಾ ಕಂಗಳಲ್ಲೊಂದು ಹಿಂಗಬಾರದ ವಸ್ತುವ. ಅದು ನಿಂದಲ್ಲಿ ನಿಲ್ಲದು, ಬಂದಲ್ಲಿ ಬಾರದು, ಹೊಂದಿದಲ್ಲಿ ಹೊಂದದು. ಇದರಿಂದ ಸಂದು ಸಂಶಯದಿಂದ ನಂಬಿಯೂ ನಂಬದೆ ಇನ್ನೇವೆ ? ಕಂಡಡೆ ಕಂಗಳಲ್ಲಿ ನಿಲ್ಲದು. ನೆನದಡೆ ಮನದಲ್ಲಿ ನಿಲ್ಲದು. ಹಿಡಿವಡೆ ಕೈಯೊಳಗಲ್ಲ. ಇದರ ಕೂಟದ ಕುಶಲವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೩ ॥

೩೭೪

ಕ್ರಿಆಚರಣೆ ಶುದ್ಧವಾದಲ್ಲಿ ಇಷ್ಟಲಿಂಗ ಪೂಜೆ. ರೂಪು, ರುಚಿ, ಏಕವಾದಲ್ಲಿ ಪ್ರಾಣಲಿಂಗ ಪೂಜೆ. ರೂಪು ನಿರೂಪೆಂಬ ಉಭಯವ ತಿಳಿದಲ್ಲಿ[೧] ಐಕ್ಯನ ಅನುಭಾವ ತೃಪ್ತಿ. ಕೂಡುವನ್ನಬರ ನೋಟ ಸುಖಿಯಾಗಿ, ಬೇಟದ ನೋಟ ಕೂಟದಲ್ಲಿ ಅಳಿದ ಮತ್ತೆ ಉಭಯದ ದೃಷ್ಟ ಏಕವಾಯಿತ್ತು. ಚರ ಅಚರವಾದಲ್ಲಿ ಉಭಯನಾಮರೂಪು ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೩೪ ॥

೩೭೫

ಗಾಳಿಯಲೆದ್ದ ಧೂಳು ತೃಣ ಎಲೆ ಮೊದಲಾದ ಬಹುವ್ಯಾಪಾರ ಧೂಳಿಯ ಮುಟ್ಟಿದುದಿಲ್ಲ. ಶರಣನ ಸರ್ವೇಂದ್ರಿಯಂಗಳು ಗಾಳಿಯ ಧೂಳಿನ ಪರಿಯಂತೆ ಪಳುಕದ ಭಾಂಡದ ಬಹುವರ್ಣದಂತೆ. ಮುಟ್ಟಿಯೂ ಮುಟ್ಟದಿಪ್ಪ ಮಹಾಶರಣಂಗೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೫ ॥

೩೭೬

ಚಿನ್ನದಲ್ಲಿ ಮಾಡಿದ ರೂಪು, ಮಣ್ಣಿನಲ್ಲಿ ಮಾಡಿದ ರೂಪು, ಕಲ್ಲಿನಲ್ಲಿ ಮಾಡಿದ ರೂಪು ಪ್ರಳಯವಾದಡೂ ಸ್ಥೂಲವಳಿದು ಸೂಕ್ಷ್ಮಕ್ಕೆ ತರಬಹುದು.

---

೧. ಅಳಿದಲ್ಲಿ (ಬ).

ಬಣ್ಣ ರೂಪವಹ ಚಿನ್ನವ ಹರಿದಲ್ಲಿ ಅದನಲ್ಲಿಯೇ ಮಾಡಬಹುದು. ಅದು ತನ್ನಲ್ಲಿಯೇ ಲೇಪ. ಅದು ಭಿನ್ನಕ್ಕೆ ಬಾರದು. ಇದ ಚನ್ನಾಗಿ ಹೇಳಾ ಅಭಿನ್ನ ಮೂರ್ತಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

೩೭೭

ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭೇದದಂತೆ, ಮೃತ್ತಿಕೆಯ ಸಾರ ದಲ್ಲಿ ಹೊಮ್ಮಿದ ಪೊಂಗಲ ಪರಿಯಂತೆ, ಕಾಯದಲ್ಲಿ ಬೆಳಗಿ ತೋರುವ ಮಹ ದಿರವಿನ ಕೊನೆಯಲ್ಲಿ ಪ್ರಜ್ವಲಿತ ಪ್ರಭಾಕರ ನೀನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೩೭೮

ಜಗದಲ್ಲಿ ಪರಿವೇಷ್ಟಿಸುವ ದೈವಜಾತಿಗಳ ಪರಿಪ್ರಕಾರವ ನೋಡಿರೇ! ಬ್ರಹ್ಮಮೂರ್ತಿಯೆ ಗುರುವಾದ. ವಿಷ್ಣುಮೂರ್ತಿಯೆ ಲಿಂಗವಾದ. ರುದ್ರ ಮೂರ್ತಿಯೆ ಜಂಗಮವಾದ. ಇಂತೀ ಮೂವರು ಬಂದ ಭವವ ನೋಡಯ್ಯಾ! ಇಷ್ಟಲಿಂಗವ ಕೊಟ್ಟು ಕಷ್ಟಪ್ರವ್ಯಕ್ಕೆ ಕೈಯಾನುವ ಕಾರಣ ಗುರು, ಬ್ರಹ್ಮನ ಕಲ್ಪಿತವ ತೊಡೆದುದಿಲ್ಲ. ಲಿಂಗವ ಸರ್ವಾಂಗದಲ್ಲಿ ಸಂಬಂಧಿಸಿದ ಮತ್ತೆ ಕಾಯ ದಲ್ಲಿ ಮೆಟ್ಟಿಸಿಕೊಂಬ ಕಾರಣ ವಿಷ್ಣುವಿನ ಸ್ಥಿತಿಯ ಬಿಟ್ಟುದಿಲ್ಲ. ಜಂಗಮ ರುದ್ರನ ಪಾಶವ ಹೊತ್ತ ಕಾರಣ ರುದ್ರನ ಲಯಕ್ಕೆ ಹೊರಗಾದುದಿಲ್ಲ. ಇಂತೀ ಇವರು ಮೂವರನು ಗುರುವೆನ್ನಬಾರದು ಲಿಂಗವೆನ್ನಬಾರದು ಜಂಗಮವೆನ್ನ ಬಾರದು. ಇಂತಿವರ ಪೂಜಿಸಿದಲ್ಲಿ ಮುಕ್ತಿಯಲ್ಲದೆ ನಿತ್ಯತ್ವವಿಲ್ಲ. ಸತ್ಯವನರಸಿ ಮಾಡುವ ಭಕ್ತ ನಿತ್ಯಾನಿತ್ಯವ ವಿಚಾರಿಸಬೇಕು. ಸತ್ತು ಗುರುವೆಂಬುದು, ಚಿತ್ತ ಲಿಂಗವೆಂಬುದು, ಆನಂದ ಜಂಗಮವೆಂಬುದು ಇಂತಿವು ತ್ರಿಮೂರ್ತಿ ಯಾಗಬೇಕು. ತಾನೇ ಗುರುವಾದರೆ ಬ್ರಹ್ಮನ ಪಾಶವ ಹರಿಯಬೇಕು, ತಾನೇ ಲಿಂಗವಾದರೆ ವಿಷ್ಣುವಿನ ಸ್ಥಿತಿಯ ನೀಗಬೇಕು ಶಕ್ತಿಯ ಪಾಶವ ನಿಶ್ಚಯಿಸ ಬೇಕು, ತಾನೇ ಜಂಗಮವಾದರೆ ರುದ್ರನ ಬಲೆಯ ಹಂಗ ಹರಿಯಬೇಕು. ಇಂತಿವರೊಳಗಾದವೆಲ್ಲವು ಪ್ರಳಯಕ್ಕೊಳಗು. ನಾದ ಗುರುವಿನಿಂದ. ಬಿಂದು ಲಿಂಗದಿಂದ. ಕಳೆ ಜಂಗಮದಿಂದ. ಕಳಾತೀತಜ್ಞಾನ ಜಂಗಮ. ಆ ವಸ್ತುವಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ. ಆತ ಪಾಶಾಬದ್ಧನಲ್ಲ. ವೇಷಧಾರಿಯಲ್ಲ ಗ್ರಾಸಕ್ಕೋಸ್ಕರ ಭಾಷೆಯ ನುಡಿವನಲ್ಲ. ಈಶಲಾಂಛನವ ಹೊತ್ತು

ಕಾಸಿಗಾಗಿ ಕಾರ್ಪಣ್ಯವ ಬೇಡುವನಲ್ಲ. ಮಹದಾಶ್ರಯವನಾಶ್ರಯಿಸಿದವಂಗೆ ಮನೆಯ ತುತ್ತ ಜ್ಞಾನಿಗಳ ಮೆಚ್ಚ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿರ್ಲೇಪನಾದ ಶರಣನು ॥ ೩೮ ॥

೩೭೯

ಜಪವೇಕೋ ಅಪ ಮಾಣಂಗೆ? ತಪವೇಕೋ ಚತುರ್ವಿಧ ಪಥಕ್ಕೆ ಹೊರಗಾದವಂಗೆ? ನೇಮವೇಕೋ ನಿತ್ಯ ತೃಪ್ತಂಗೆ? ನಿತ್ಯವೇಕೋ ಅಷ್ಟ ವಿಧಾರ್ಚನೆ ಷೋಡಶೋಪಚಾರ ಭರಿತಂಗೆ? ಜಪಕ್ಕೊಳಗಾದ ರುದ್ರ. ತಪಕ್ಕೊಳಗಾದ ವಿಷ್ಣು. ನೇಮಕ್ಕೊಳಗಾದ ಬ್ರಹ್ಮ. ನಿತ್ಯಕ್ಕೊಳಗಾದ ಈಶ್ವರ. ಉಪಚಾರಕ್ಕೊಳಗಾದ ಸದಾಶಿವ. ಇಂತಿವರೆಲ್ಲರು ಸೃಷ್ಟಿಯ ಮೇಲಣ ತಪ್ಪಲಲ್ಲಿ ಇದ್ದರೇಕೆ? ಎಲ್ಲರೂ ಬೆಟ್ಟವನೇರಿ ಇಂತಿವರ ಬಟ್ಟೆಯ ಮೆಟ್ಟದೆ ನಿಶ್ಚಯನಾದ ಶರಣಂಗೆ ಇಹದವನಲ್ಲ ಪರದವನಲ್ಲ. ಆ ಶರಣ ಉಂಬಲ್ಲಿ ತಾನೆ, ಉಡುವಲ್ಲಿ ತಾನೆ, ತೊಡುವಲ್ಲಿ ತಾನೆ, ಮುಟ್ಟುವಲ್ಲಿ ತಾನೆ, ತಟ್ಟುವಲ್ಲಿ ತಾನೆ ಬೇರೊಂದಿಲ್ಲವಾಗಿ. ಕ್ಷೀರವ ಕೂಡಿದ ಜಲವ ಭೇದಿಸಬಹುದೇ ಅಯ್ಯಾ? ವಾರುಧಿಯ ಕೂಡಿದ ಉದಕವ ಸಾರವ ಬೇರೆ ರುಚಿಸಲುಂಟೇ ಅಯ್ಯಾ? ಆರಡಿಗೊಂಡ ಗಂಧವ ಬೇರೆ ಮುಡಿಯಲಿಲ್ಲ. ತೋರಲಿಲ್ಲದ ರೂಹಿಂಗೆ ಆರಾಧಿಸುವದಕ್ಕೆ ಬೇರೆ ಒಡಲಿಲ್ಲ. ವಕ್ತ್ರದ ಸಾಕಾರಕ್ಕೆ ಆರೈಕೆ ಇಲ್ಲದೆ ಸತ್ತು ರೂಪಾದಲ್ಲಿಯೇ ಇಹದಲ್ಲಿ ಪರದಲ್ಲಿ ಪರಿಣಾಮಿಗಳಗಲಿ ಇಂತಿವಕ್ಕೆ ದೂರವಾಗಿ ಬಾಳುಗೆಟ್ಟೆ ಬೀಳಾದೆ ಜಾಳಾದೆ ಹೇಳಹೆಸರಿಲ್ಲದಂತಾದೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೯ ॥

೩೮೦

ಜಲ ಅನಲಮಣ್ಣು ಕೂಡಿ ಬಲಿದ ಮತ್ತೆ ಜಲ ಅನಲನಿಗುಂಟೇ? ಕ್ರಿಯಾಪಾರ ಜ್ಞಾನವ ಕೂಡಿದ ಮತ್ತೆ ಪ್ರಳಯ ಉಂಟೇ? ಹಾಕಿದೆ ಮುಂಡಿಗೆಯ ಶಿವನಾಣೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸತ್ಯವಂತರೆತ್ತಿರಣ್ಣಾ ॥೪೦॥

೩೮೧

ಜಿಹ್ವಾಲಂಪಟಕ್ಕಾಗಿ ಅನ್ಯರ ಬೋಧಿಸಲೇಕೋ? ಗುಹ್ಯದ ವಿಷಯಕ್ಕಾಗಿ ಮನುಷ್ಯರೊಳು ದೈನ್ಯಂ ಒಡಲೇಕೋ ಅಂಗದ ಇಂದ್ರಿಯಕ್ಕಾಗಿ ನಿಜಲಿಂಗವ ಹಿಂಗಿ ಮನುಷ್ಯರ ಹಂಗ ಬಿಟ್ಟು ಒಳ್ಳಿತ್ತು ಮತ್ತೆ ಏನೂ ಇಲ್ಲ.

ನಿಜಾಂಗವಾದ ಮಹಾತ್ಮಂಗೆ ಇದಿರಿಡಲಿಲ್ಲ. ಇದಿರಿಂಗೆ ತಾನಿಲ್ಲ, ತನಗೆ ಇದಿರಿಲ್ಲ. ಉಭಯವಳಿದ ಮತ್ತೆ ಏನೂ ಎನಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

೩೮೨

ಜ್ಯೋತಿಯ ಬೆಳಗಿನಲ್ಲಿ ನೋಡಿ ಜ್ಯೋತಿಯ ಕಪಟವ ಕಾಬಂತೆ ಕಣ್ಣಿನಿಂದ ಕನ್ನಡಿಯ ನೋಡಿ ಕಣ್ಣ ಕಲೆಯ ಕಾಬಂತೆ ತನ್ನಿಂದ ತಾ ನೋಡಿ ತನ್ನನರಿಯಬೇಕು. ತನ್ನನರಿಯದವ ನಿಮ್ಮನೆತ್ತ ಬಲ್ಲನೋ? ತನ್ನನರಿವುದಕ್ಕೆ ದೃಷ್ಟವ ಕೈಯಲ್ಲಿ ಕೊಟ್ಟು ಕಾಣದುದಕ್ಕೆ ಚಿತ್ತವ ನೆನಹಿಂಗಿತ್ತು ಚಿತ್ತವ ಇಷ್ಟದಲ್ಲಿ ಅಚ್ಚೊತ್ತಿದ ಮತ್ತೆ ದೃಷ್ಟವ ಕಾಬುದಿನ್ನೇನೋ? ಉರಿಯೊಳಗಣ ಕಪ್ಪುರ, ಅನಿಲನೊಳಗಣ ಪಾವಕ, ಶಿಲೆಯುಂಡ ಎಣ್ಣೆ ಅಳತೆಗೆ ಉಂಟೆ ಅಯ್ಯಾ? ಲಿಂಗವ ಮುಚ್ಚಿದ ಅಂಗಕ್ಕೆ ಜಗದ ಹಂಗಿಲ್ಲ. ಅನಂಗ ಅತೀತ ನಿಃಕಳಂಕ ಮಲ್ಲಿಕಾರ್ಜುನ ಲಿಂಗವೇ ತಾನಾದ ಶರಣಂಗೆ ॥ ೪೨ ॥

೩೮೩

ಜ್ಞಾನಾರೂಢನಾದಲ್ಲಿ ಮಾನವರನಾಶ್ರಯಿಸಲಾಗದು. ಮಾನವರಿಚ್ಛೆಯ ನುಡಿಯಲಾಗದು. ಆ ಮಾನವ ಶರೀರದಲ್ಲಿ ಆಶ್ರಯಂಗೈಯ್ಯಲಾಗದು. ಪೂಜೆಗೆ ಸಿಕ್ಕಿ ಬಾರಿಸಲಾಗದು. ಸಾಧಕ ವಸಿಹೇಳಿ ಸಾವಂತೆ ಮಾಡಲಾಗದು ಸಾಧನವನರಿದು ಸಾವಯವ ತಿಳಿದು ನಿರವಯವ ಏನೂ ಎನ್ನದಿಪ್ಪುದೆ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ ॥ ೪೩ ॥

೩೮೪

ಜ್ಞಾನಿ ತಾನಾದ ಮತ್ತೆ ಮಾನವರ ಗುಣವೇನಾದರು ಆಗಲಿ ಭಾನು ತೇಜಂಗೆ ನಾನಾ ಗುಣ ಎಲ್ಲಕ್ಕು ಸರಿ. ಬೀಸುವ ವಾಯುವಿಂಗೆ ಸುಗುಣ ದುರ್ಗುಣವಿಲ್ಲ. ಇದು ಅಜಾತನೊಲುಮೆ. ಮಿಕ್ಕಿನ ಮಾತಿನ ಮಕ್ಕಳಿಗಿಲ್ಲವೆಂದೆ ಜಗದೀಶನೊಲುಮೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೪ ॥

೩೮೫

ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು. ಜ್ಞಾನಿಯ ಸಂಗ ಭಾನುವಿನ ಠಾವಿನಂತಿರಬೇಕು. ಜ್ಞಾನಿಯ ಸಂಗ ಸೌಖ್ಯದ ಠಾವಿನಂತಿರಬೇಕು. ಹೀಗಲ್ಲದೆ ಮಹಾನುಭಾವಿಗಳ ಕೂಟದ ಸುಖದ ಸುಗ್ಗಿ ಅದೇತಕೆ ಕಳೆದಾವೆ? ಅದು ನಿಯತವಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೫ ॥

೩೮೬

ತನ್ನಂಗದಲ್ಲಿ ಸೋಂಕಿಹ ದಿವ್ಯಜ್ಞಾನ ಶಿವಲಿಂಗವು ಚಿತ್ತವೃತ್ತಿಯದೆ ಅರಿವುತ್ತಿರಲಾಗಿ ಲಿಂಗದ ಮೇಲೆ ಇಷ್ಟವಾಗಿರುತ್ತಿಹುದು. ಮತ್ತೆ ವಿಭವಕ್ಕೆ ಬಾಹ್ಯದಲ್ಲಿ ಮುಟ್ಟನೋಡಿಹೆನೆಂದಡೆ ಚಿತ್ತಶುದ್ಧನಲ್ಲದ ಕಾರಣ ವ್ಯಕ್ತಿಂಗೆ ತೋರಿ ಸರ್ವಾಂಗದಲ್ಲಿ ಲಕ್ಷ್ಯವಾಗದೆಂಬುದಕ್ಕೆ ಸೂಚನೆ. ಇಂತೀ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಗುಪ್ತದಲ್ಲಿ ನಿತ್ಯನಾಗಿಪ್ಪನು ॥ ೪೬ ॥

೩೮೭

ತನುವಿಂಗೆ ಕುರುಹ ಕೊಟ್ಟು ಮನಕ್ಕೆ ಅರಿವ ಕೊಟ್ಟು ಘನಕ್ಕೆ ವಿಶ್ರಾಂತಿಯ ಕೊಟ್ಟು ಚರಿಸಿಯಾಡುವ ಪರಿಪೂರ್ಣಂಗೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೩೮೮

ತನುವಿನಿಂದ ಕಂಡೆನೆಂದಡೆ ರೂಪಿನ ಜಡ. ಮನದಿಂದ ಕಂಡೆನೆಂದಡೆ ಕರಣಂಗಳು ಹೊಲ್ಲ. ಘನದಿಂದಿರುತ್ತಿಹೆನೆಂದಡೆ ನಿರಾಳದ ಬಯಲು. ಇದನರಿದ ಅರಿವಿನ ಈಡೆನಗೆ. ಅನಾಥರನಾಥ ಕರುಣಿಸಾ ನಿಃಕಳಂಕ ಮಲ್ಲಿಕಾರ್ಜುನಾ ॥ ೪೮ ॥

೩೮೯

ತಮದಲ್ಲಿ ಸ್ಥಾಣುವ ನಟಿಸಿದ ವ್ಯಾಧನಂತೆ ಅಂಜಲೇಕೋ ಅರಿದ ಮತ್ತೆ ಹೆದರಲೇಕೋ ? ಇದಿರಿಂಗರಿವ ಹೇಳುವ ಮರದೊರಗುವನ ಕಂಡು ಒಡಗೂಡಲಂಜಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೯ ॥

೩೯೦

ತಲೆ ಇಲ್ಲದೆ ಕಾಲು ನಡೆಯಬಲ್ಲುದೇ ? ಕುಕ್ಷಿ ಇಲ್ಲದಿರೆ ಬಾಯಿ ಉಣ್ಣಬಲ್ಲುದೇ ? ಆತ್ಮನಿಲ್ಲದಿರೆ ಕರಚರಣಾದಿಗಳಿಗೆ ಏತರ ಹೊಲಬು ? ನಿನ್ನ ನಿನ್ನ ಭಕ್ತಿಯ ಬೆಳೆ ಎನಗೆ ಸತ್ಯದ ಹಾದಿ. ಇದು ನಿಶ್ಚಯ ನಿಃಕಳಂಕ ಮಲ್ಲಿಕಾರ್ಜುನಾ ॥ ೫೦ ॥

೩೯೧

ತಲೆ ಕಿತ್ತವಂಗೆ ನಯನದ ಹಂಗೇಕೆ ? ಮನ ಕಿತ್ತವಂಗೆ ತನುವಿನ ಹಂಗೇಕೆ ? ಮೋಹವ ಕಿತ್ತವಂಗೆ ಅಸಮನಯನನ ಹಂಗೇಕೆ ? ಇಂತೀ

ಭೇದವನರಿದು ಕಳೆದುಳಿದವಂಗೆ ಮಾತಿನ ನೀತಿ ಯಾಕೊ? ನಿಃಕಳಂಕ ಮಲ್ಲಿಕಾರ್ಜುನಾ ॥ ೫೧ ॥

೩೯೨

ತಾನರಿಯದಿದ್ದಡೆ ಅರಿವ ಮುಖ ಬೇಕು ದೃಷ್ಟಿಗೆ ಪ್ರತಿಬಿಂಬದಂತೆ. ಮರೆವಡೆ, ಅರಿಯೆನೆಂದು ಹೇಳುವಡೆ, ಇದು ಕೊರತೆ ಎಂದರಿಯ ಬಲ್ಲವರಿಗದು ತೆರಪಿನ ಹೃದಯ. ಅರುವಿನ ಆಗರ. ಮಿಥ್ಯವನಳಿದು ತಥ್ಯವ ಕರಿಗೊಂಡಡೆ ಲಿಂಗದಲ್ಲಿ ಅಚ್ಯೋತ್ತಿದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೨ ॥

೩೯೩

ದಳ್ಳುರಿಯಲ್ಲಿಗೆ ಹೋದರೆ ಮೆಲ್ಲನೆ ಮುಟ್ಟುವದೆ ಅಯ್ಯಾ? ಬಲ್ಲವ ಗೆಲ್ಲ ಸೋಲಕ್ಕೆ ಹೋರಿದಡೆ ಕಲ್ಲು ಹೃದಯ ಬಲ್ಲುದೆ ಬಲ್ಲವರ ಇರವ? ಇದು ಎಲ್ಲಕ್ಕೆ ಸಾಧ್ಯವಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೩೯೪

ದೀಪದ ಕೊನೆ ಮೊನೆಯ ಮೇಲಿದ್ದುದು ತಮವೋ ಬೆಳಗೊ? ಮನದ ಕೊನೆ ಮೊನೆಯಲ್ಲಿದ್ದುದು ಅರಿವೋ ಅರಿವಿನ ಮರವೆಯೋ? ಬೀಜದ ಕೊನೆಯ ಮೊನೆಯ ಮೇಲಿದ್ದುದು ಮುಂದಕ್ಕದು ಬೀಜವೋ ಸಂದೇಹವೋ? ಅರಿವುದಕ್ಕೆ ತೆರಹಿಲ್ಲ. ಮರೆವುದಕ್ಕೆ ಒಡಲಿಲ್ಲ. ಅದರ ಹೂ ಮಿಡಿಯರಿದು ಬಿಡುಗಡೆಯಾದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೪ ॥

೩೯೫

ನಾನರಿದು ತಂದಿಹೆನೆಂದಡೆ ಸ್ವತಂತ್ರಿಯಲ್ಲ. ನಿನ್ನ ಭೇದಿಸಿ ಕಂಡಿಹೆನೆಂದಡೆ ಸ್ವಾಮಿ ವಿಶ್ವಾಸಿಯಲ್ಲ. ಈ ಉಭಯದ ತೆರನ ಹೇಳಾ ಚಿತ್ತಶುದ್ಧನಾಗಿ ಕಂಡಿಹೆನೆಂದಡೆ ಆ ಚಿತ್ತವು ಪ್ರಕೃತಿಗೆ ಒಳಗು. ಇದ ಮಾಡದೆ ನಾ ನಿನ್ನನರಿದು ಭೇದಿಸಿಹೆನೆಂದಡೆ ಮನೋಧರ್ಮ ಧರ್ಮಕ್ಕೊಳಗಾಗದು. ಅಂಧಕರಂಧಕನ ಕೈಯ್ಯ ಹಿಡಿದಡೆ ಅವರೆಂದು ಹೋಗುವರು? ನಿಃಕಳಂಕ ಮಲ್ಲಿಕಾರ್ಜುನಾ ॥ ೫೫ ॥

೩೯೬

ನಾನರಿದು ಬಲ್ಲೆನೆಂದು ನುಡಿಯಲೇಕೆ? ಸಡುಗುಡುನಾಡುವ ಬಾಲಕನಂತೆ ನಾನಡವರಿಸಿ ಹೋಗಿ ಕೆಡಹಿದೆನೆಂಬಂತೆ ಅರಿವಿಗೇಕೆ ಗೆಲ್ಲಸೋಲು?

ಆಕಾಶವ ನೋಡುವದಕ್ಕೆ ತಾಳ್ತು ನೂಕೇಕೆ ? ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

೩೯೭

ನಾನಾ ಯೋನಿಯಲ್ಲಿ ತಿರುಗಿ ಬಂದನಾಗಿ ಗುರುಸ್ಥಲವಲ್ಲ. ನಾನಾ ಶಿಲೆಯಲ್ಲಿ ರೂಹಿಟ್ಟು ಬಂದುದಾಗಿ ಲಿಂಗವಲ್ಲ. ನಾನಾ ಯಾಚಕ ವಿಕಾರದಿಂದ ತಿರುಗುವನಾಗಿ ಜಂಗಮವಲ್ಲ. ಜನನ ರಹಿತ ಗುರು. ಅವತಾರ ರಹಿತ ಲಿಂಗ. ಮರಣ ರಹಿತ ಜಂಗಮ. ಹೀಗಲ್ಲದೆ ತ್ರಿವಿಧವ ಕಳೆಯಬಾರದು. ತ್ರಿವಿಧಕ್ಕೆ ತ್ರಿವಿಧವನಿತ್ತು ಗುರುವಿನ ಹಂಗ ಮರೆಯಬೇಕು. ತ್ರಿವಿಧಕ್ಕೆ ತ್ರಿವಿಧವನಿತ್ತು ಜಂಗಮದ ಹಂಗು ಮರೆಯಬೇಕು. ಮೂರರೊಳಗಾದ ಆರ ಕೊಟ್ಟು ಐದ ನಿಲಿಸಿಕೊಂಡು ಇಪ್ಪತ್ತೈದರ ಲೆಕ್ಕದಲ್ಲಿರಿಸಿ ಐವತ್ತೊಂದು ಬಿಂದುವಿನಲ್ಲಿ ಹೊಂದಿಸಿ ಓಂಕಾರವಪ್ಪ ಪ್ರಣಮವ ಪರಿಣಾಮಿಸಿ ವ್ಯಾಪಾರದ ಲತೆಯ ಬಳ್ಳಿಯ ಬೇರ ಕಿತ್ತು ಪರ್ವಿಪ್ರಕಾರದಿಂದ ಉರ್ವಿಯ ಸುತ್ತಿ ಮುತ್ತಿ ಬೆಳೆದ ಚಿತ್ತ ಬಿದಿರಿನ ನಡುವಿಪ್ಪ ಹುತ್ತದ ಬಹು ಮುಖದ ಸರ್ಪನ ಹಿಡಿದು ಕಾಳೋಗರವಂ ಬೇರು ಮಾಡಿ ಲೀಲೆಗೆ ಹೊರಗಾಗಿ ಭಾಳಲೋಚನನ ಕೀಳು ಮಾಡಿ ಬಾಲೆಯರ ಬಣ್ಣಕ್ಕೆ ಸೋಲದೆ ಕಾಳು ಶರೀರವೆಂಬ ಒತ್ತರಂಗೊಳ್ಳದೆ ಗತಿ ಮತಿ ಗುಣ ಸಂಸರ್ಗ ವಿಪಿನ ಕಂಟಕಕ್ಕೊಳಗಾಗದೆ ಪಿಂಡ ಪ್ರಾಣವ ವಾಯು ಸಂಚಾರಕ್ರೀಡು ಮಾಡದೆ ಅರಿದೆನೆಂಬುದಕ್ಕೆ ಕುರುಹಿಲ್ಲದೆ ಕುರುಹಿಂಗೆ ಅವಧಿಗೊಡಲಿಲ್ಲದೆ ಹುಸಿಮುಸಿಯ ಮಣಿ ಮಾಡದಲ್ಲಿ ಒರಗದೆ ಪರಿಣಾಮವೇ ಪಥ್ಯವಾಗಿ ಅಂತರಂಗಶುದ್ಧ ಪರಿಪೂರ್ಣವಾಗಿ ನಿಂದು ಸಂಸಾರಕ್ಕೆ ಸಿಕ್ಕದೆ ನಿಂದ ನಿಜ ತಾನಾಗಿ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ ॥ ೫೭ ॥

೩೯೮

ನಿನ್ನನರಿತು ಅರಿದೆನೆಂದಡೆ ನಾಕುತ್ತದಕೊಮ್ಮೆ, ನೀ ಮದ್ದಿನ ಗುಳಿಗೆ. ನಿನ್ನನರಿತು ನೆರೆದಿಹೆನೆಂದಡೆ ನೀ ಹೆಣ್ಣು, ನಾ ಗಂಡು. ಸಾಕು, ಬಲ್ಲಹರ ಮಾತು ಬಿಡು ನಿನ್ನಪ್ಪ ನೀತಿಯಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

೩೯೯

ನಿನ್ನಿಂದ ನಾ ಭವಸಾಗರವ ದಾಂಟ ಗೆದ್ದಿಹೆನೆಂದಡೆ ಭಕ್ತರಿಗೆ ನೀನೇರುವ ಹರುಗೋಲವೆ ? ನಿನ್ನ ಮರೆಯಲ್ಲಿ ಇದ್ದಿಹೆನೆಂದಡೆ ಕರದಲ್ಲಿ

ಕಡ್ಡಾಯವೆ ? ಚಿನ್ಮಯ ನೀನಾಗಿ ತನ್ಮಯ ನಾನಾಗಿ ಭಿನ್ನಭಾವಿಯಾವಲ್ಲಿ ನೀನಾರು ನಾನಾರು ನಿಃಕಳಂಕ ಮಲ್ಲಿಕಾರ್ಜುನಾ ॥ ೫೯ ॥

೪೦೦

ನೀತಿಗೆ ನೀತಿ, ಜಾತಿಗೆ ಜಾತಿ ಭೇದವನರಿದು, ಕೂಟಕ್ಕೆ ಕೂಟ ಕ್ಷೀರಕ್ಕೆ ಕ್ಷೀರ ಕೂಡಿದಂತಿರಬೇಕು. ವಾರಿಗೆ ವಾರಿ ಕೂಡಿದಂತಿರಬೇಕು. ಇದು ಜ್ಞಾನಿಗಳ ಮಹಾಪ್ರಕಾಶದ ಕೂಟದ ಸುಖ ನಿಃಕಳಂಕ ಮಲ್ಲಿಕಾರ್ಜುನಾ ॥ ೬೦ ॥

೪೦೧

ಪರರುವ ಕಾಡೆ, ಬೇಡೆ, ನೂಡೆನೆಂಬ ಮೂಢತನವೇಕೆ ? ಕಾಡಸೊಪ್ಪ ತಂದು ಬೇಡದೆ ಉಂಬ ಆರೂಢಂಗೆ ಮೂರಡಿಗೊಮ್ಮೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೬೧ ॥

೪೦೨

ಫಲರಸ ವರ್ಣಕೊಂಡಂತಿರಬೇಕು. ಪಯದೊಳಗಣ ನವನೀತದಂತಿರ ಬೇಕು. ವಾಯುವಿನೊಳಗಣ ಗಂಧದ ತೆರನಂತಿರಬೇಕು. ದೃಷ್ಟಿಯ ಚಿತ್ತ ದಂತಿರಬೇಕು. ಅಪ್ಪುವಿನ ಮಚ್ಚಿಕೆಯಂತಿರಬೇಕು. ಇಂತೀ ಲಿಂಗದಲ್ಲಿ ಒಪ್ಪ ವಿಟ್ಟಿಪ್ಪ ಶರಣಂಗೆ ಅರ್ಚನೆಯ ಮಾಡಿದರೂ ಸರಿ ಅರ್ಪಣದಲ್ಲಿ ಒಪ್ಪ ವಿಟ್ಟರೂ ಸರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೨ ॥

೪೦೩

ಬಲ್ಲವನಾದಡೆ ಕಲ್ಲಿ ಅಡಗಿದಂತಿರಬೇಕು. ಬಲ್ಲವರು ಬಂದರೆ ಆ ಕಲ್ಲಿ ಎಲ್ಲವ ನವಗ್ರಹಿಸಿದಂತಿರಬೇಕು. ಇದೇ ಬಲ್ಲವರ ಬಲ್ಲತನ ನಿಃಕಳಂಕ ಮಲ್ಲಿ ಕಾರ್ಜುನಾ ॥ ೬೩ ॥

೪೦೪

ಬೀಜದ ಮೊಳೆಯ ಮುರಿದ ಮತ್ತೆ ಅದು ಸಾಗಬಲ್ಲುದೇ ? ಸುನಾದದ ಭೇದವನರಿದ ಮತ್ತೆ ಅದು ವೇಧಿಸಬಲ್ಲುದೇ ? ಆದಿಯವರೆಲ್ಲರು ಹೋದರು ಹೊಲಬುಗೆಟ್ಟು. ಎನಗಿನ್ನಾದವರಾರೋ, ಭೇದಕ್ಕತೀತ, ಚೋದ್ಯಮಯ ನಿಃಕಳಂಕ ಮಲ್ಲಿಕಾರ್ಜುನಾ ॥ ೬೪ ॥

೪೦೫

ಬೇಟದಲ್ಲಿ ಸುಖಿಯಾದ ಮತ್ತೆ ಕೂಟದ ಆಟವೇಕೋ ? ಜಂಗಮದಲ್ಲಿ ಕೂಟವ ಮಾಡಿದ ಮತ್ತೆ ವಸ್ತುವಿನಲ್ಲಿ ಕೂಡಿಹೆನೆಂಬ ಆತುರವೇಕೋ ? ನಿತ್ಯಸುಖಿಯಾದ ಮತ್ತೆ ಒಚ್ಚೊತ್ತಿಗೊಂದು ಪರಿ ಏಕೋ ? ಸುಖದುಃಖ ಸಚ್ಚಿತಾನಂದವನರಿದೆಯಾದರೆ ಭಕ್ತಿಮುಕ್ತಿಗೆ ದೂರ ನಿಃಕಳಂಕ ಮಲ್ಲಿ ಕಾರ್ಜುನಾ ॥ ೬೫ ॥

೪೦೬

ಬೋಧೆಯ ಬೋಧಿಸಿ ಉಂಬವರೆಲ್ಲರು ಸಾಧಾರಣಕ್ಕೀಡಾದರು. ನಿರ್ಬೋಧೆಯ ಹೇಳುವ ಹಿರಿಯರೆಲ್ಲರು ಬಾಗಿಲ ಕಾವುದಕ್ಕೊಳಗಾದರು. ಈ ಜಲರಿಯದವನೊಂದಾಗಿ ಹೊಳೆಯ ಹಾಯ್ದಿಹೆನೆಂದು ಪ್ರಾಣಕ್ಕಾಶೆಯ ಮಾಡುವನಂತೆ ಇಷ್ಟಲಿಂಗವನರಿಯದವರ ಮಾತ ಕೇಳಿ ತಾ ಮುಕ್ತನಾದೆ ನೆಂಬ ಧೂರ್ತನ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೬೬ ॥

೪೦೭

ಬ್ರಹ್ಮನ ಡಾಗು ಬೆನ್ನ ಮೇಲೆ. ವಿಷ್ಣುವಿನ ಡಾಗು ಕೈಯ ಮೇಲೆ. ರುದ್ರನ ಡಾಗು ತಲೆಯ ಮೇಲೆ. ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ ? ಇದು ನಿಮಗೆ ಸಂಗಿಸದೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೭ ॥

೪೦೮

ಬಂದ ಬಟ್ಟೆಯ ಮರೆದು ಪೂರ್ವಾಶ್ರಯವನರಿದು ಭೋಗ ಭೋಜ್ಯಂ ಗಳ ಪರಿದು ಪರಕ್ಕೆ ಪರಾಙ್ಮುಖನಾಗಿ ವಿರಳವಿಲ್ಲದ ವಿರಳನಾಗಿ ಬಿಡು ಮುಡಿಯಲ್ಲಿ ನಿಂದ ನಿರಂತಂಗೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೬೮ ॥

೪೦೯

ಭೇರಿಯೊಳಗಣ ನಾದವ ಭೇದಿಸಬಲ್ಲರೆ ಅಭೇದ್ಯನ ಭೇದಿಸಿದರೆಂಬೆ. ಚೋದ್ಯದೊಳಗಣ ಸ್ವರೂಪವ ಸಾಧಿಸಿ ಬೋಧಿಸಬಲ್ಲರೆ ಬಲ್ಲರೆಂಬೆ. ಆ ವಸ್ತುವ ಸಾಧಿಸಬಲ್ಲರೆ ಬಲ್ಲರೆಂಬೆ. ಇಂತಿವರ ಆಗುಹೋಗನರಿಯದೆ ಜ್ಞಾನಕ್ಕೆ ನನಗವರರ್ಹ[೧]ರೆಂಬ ಖುಲ್ಲರ ನೋಡಿ ಜಾಣನಾಗಿ ಅಡಗಿದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೬೯ ॥

---

೧. ಅರುಹ (ಡ)

೪೧೦

ಊಟದ ಸುಖವ ಕಲಿತ ಮತ್ತೆ ನೋಟಕ್ಕೆ ದೃಷ್ಟ. ನೋಟದ ಸುಖವ ಕಲಿತ ಮತ್ತೆ ಬೇಟಕ್ಕೆ ದೃಷ್ಟ. ಬೇಟದ ಸುಖವ ಕಲಿತ ಮತ್ತೆ ಕೂಟಕ್ಕೆ ದೃಷ್ಟ. ಕೂಟದ ಸುಖವ ಕಲಿತ ಮತ್ತೆ ಜಗದಾಟಕ್ಕೆ ದೃಷ್ಟ. ಈ ದೃಷ್ಟವ ನರಿಯದೆ ನಿರ್ಜಾತನೆನಲೇಕೆ ? ಇಂತಿವರಾಟಕ್ಕಂಜಿ ಈಶನ ಮರೆಯ ವೇಷವ ಬಿಟ್ಟು ಎನಗಿನ್ನೇಸು ಕಾಲ ಆಶೆ ಎಂಬ ಕೊಳವೋ ನಿಃಕಳಂಕ ಮಲ್ಲಿಕಾರ್ಜುನಾ ॥ ೭೦ ॥

೪೧೧

ಮಧುರದ ಗುಣ ಸಾರದಿಂದಳಿಯಿತ್ತು. ಸರಿತೆಯ ಗುಣ ಸಾಗರದಿಂದಳಿಯಿತ್ತು. ಬೆಟ್ಟದ ಗುಣ ತೋಡಿನಿಂದಳಿಯಿತ್ತು. ಸಾಗರದ ಗುಣ ಕೋಡಿಯಿಂದಳಿಯಿತ್ತು[೧]. ಕಠಿನದ ಗುಣ ಪಾಕದಿಂದಳಿಯಿತ್ತು. ಕಾಯದ ಗುಣ ಪ್ರಾರಬ್ಧದಿಂದಳಿಯಿತ್ತು. ವಿಷದ ಗುಣ ನಿರ್ವಿಷದಿಂದಳಿಯಿತ್ತೆಂಬುದ ಜಗಸಿದ್ಧಾಂತವಾಗಿ ನುಡಿಯುತ್ತಿದೆ. ಎನ್ನ ಗುಣ ನಿನ್ನಿಂದೇಕಳಿಯದಯ್ಯಾ? ಕಾಲಕ್ಕಂಜಿ ಕರ್ಮಕ್ಕಂಜಿ ವಿಧಿ ವಿಧಾಂತ ನಿನಗಂಜಿ ಹಿರಿಯರೆನಿಸಿಕೊಂಬ ಗ್ರಾಸನಾಸಿಗಳು ಕೇಳಿರಯ್ಯಾ. ರುದ್ರನ ಪಾಶವ ಹೊತ್ತು ಆಶೆ ಎಂಬ ಕಂತೆಯ ತೊಟ್ಟು ಜಗದಾಟವೆಂಬ ವೇಷವ ಹೊತ್ತು ಈಶನ ಶರಣರೆಂದು ಭವಪಾಶದಲ್ಲಿ ತಿರುಗುವ ದೇಶಿಕರ ಕಂಡು ನಾಚಿದೆ. ಭಾಷೆಗೆ ತಪ್ಪ, ನಿರ್ಗುಣಿ, ನಿರಾಶಕ, ನಿಃಕಳಂಕ ಮಲ್ಲಿಕಾರ್ಜುನನಲ್ಲದೆ ಇನ್ನಿಲ್ಲ ನಿಲ್ಲು ಮಾಣಿರೋ ॥ ೭೧ ॥

೪೧೨

ಮಧುರವ ಬಲ್ಲಡಲ್ಲದೆ ಮಧುರ ರಸವ ಬಲ್ಲಡೆ ಬಲ್ಲರೆಂಬೆ. ಬೆಳಗ ಬಲ್ಲರಲ್ಲದೆ ಬೆಳಗಿನ ಕಳೆಯನೊಳಕೊಂಡಿಪ್ಪ ಭೇದವ ಬಲ್ಲರೆ ಬಲ್ಲರೆಂಬೆ. ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ದಿಡೆಯ ಬಲ್ಲರೆ ಬಲ್ಲರೆಂಬೆ. ಇವನೆಲ್ಲವನರಿಯದೆ ಸೊಲ್ಲಿನ ಮಾತಿಗೆ ಬಲ್ಲೆನೆಂದು ಹೋರುವ ಬಲ್ಲೆಹಕಾರರಿಗೆಲ್ಲಿಯದೋ ಮುಕ್ತಿ ? ಬಲ್ಲಹರ ಬಲ್ಲಹ ಭವವಿಲ್ಲದಿಹ ನೀನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೨ ॥

---

೧. ಸಾಗರದ ಗುಣ ಕಟ್ಟನಿಂದಳಿಯಿತ್ತು

೪೧೩

ಮಾಟಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿ ಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು. ಮತ್ತೆ ಹೊಲದ ಹೊಲಬಿಲ್ಲ ನಿಃಕಳಂಕ ಮಲ್ಲಿ ಕಾರ್ಜುನಾ ॥ ೭೩ ॥

೪೧೪

ಮುಗಿಲ ತೆರೆಯ ಮರೆಯಲ್ಲಿ ಉರಿವ ಬೆಂಕಿಯ ಹೊರೆಯ ಹಿಡಿದು ಮತ್ತೆ ಅಳಿದುದಿನ್ನೇನೋ ? ಉಳಿದುದಿನ್ನೇನೋ ? ಕೆಂಡ ಕೆಟ್ಟಲ್ಲಿ ಹೊರೆ ನಿಂದಿತ್ತು. ಆವಾಸಕ್ಕೆ ಸಂಪಿಲ್ಲ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿಷ್ಪತ್ತಿಯಾದ ಶರಣಂಗೆ ॥ ೭೪ ॥

೪೧೫

ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ ಅದ ನೀತಿವಂತರು ಮೆಟ್ಟಿದಡೆ ಪಾತಾಳದ ಉದಕವ ತಂದು ಪಾತೆಗೆ ಹರಹಿದ ತೆರನಂತೆ ಸರ್ವ ಮಯದಲ್ಲಿ ಒಪ್ಪಿಪ್ಪ ವಸ್ತುವನರಿದು ನಿರ್ಜಾತನಾಗಬಲ್ಲಡೆ ಆತನೇ ಜೀವ ನ್ಮುಕ್ತ ನಿಃಕಳಂಕ ಮಲ್ಲಿಕಾರ್ಜುನಾ ॥ ೭೫ ॥

೪೧೬

ರುದ್ರನ ದೇವರೆಂದಾರಾಧಿಸಿ ಶಿಲೆಯೊಳಗೆ ಹೋರಾಟಗೊಂಡು ಕೆಟ್ಟರಲ್ಲಾ ಭಕ್ತಜನಂಗಳು. ವಿಷ್ಣುವ ದೇವರೆಂದಾರಾಧಿಸಿ ಮರನ ಸುತ್ತಿ ಕಾಲುಗೆಟ್ಟ ರಲ್ಲಾ ಭೂಸುರಾದಿಗಳು. ಬ್ರಹ್ಮನ ದೇವರೆಂದಾರಾಧಿಸಿ ಬೆಂಕಿಯೊಳಗೆ ಬೆಂದ ರಲ್ಲಾ ಮರ್ತ್ಯಲೋಕದ ಮಹಾಜನಂಗಳು. ಇಂತೀ ಮೂವರು ಗಂಪೆಧಾರಿ ಗಳೆಂಬೆ. ಧಾರುಣಿಯೊಳಗೆ ಹೇರಿನಕ್ಕಿ ಲಳಿಗೆಯ ಎಣ್ಣೆ ಹೂವು ಕಾಯಿ ಹಣ್ಣು ಮೊದಲಾದುದ ತಪ್ಪ ಸಾಧಿಸಿ ತರಿಸಿಕೊಂಡುಂಬ ಚಿಕ್ಕಮಕ್ಕಳಿಗೆಲ್ಲಿ ಯದೋ ನೆಟ್ಟನೆಯ ದೇವತ್ವ ? ಎನ್ನ ದೇವಂಗೆ ಇಂತಿವರಂದ ಒಂದೂ ಇಲ್ಲ. ಕಾಲದೊಳಗಾಗಿ ಪ್ರಳಯ ವಿರಹಿತ. ಕರ್ಮದೊಳಗಾಗಿ ಚತುರ್ವಿಧ ರಹಿತ. ಗಂಗೆವಾಳುಕ ಸಮಾರುದ್ರರೊಳಗಾಗಿ ಬಂಧನ ವಿರಹಿತ. ಲೀಲೆಗೆ ಹೊರಗಾಗಿ ಸ್ವಯಂಭುವಯ್ಯಾ ಎನ್ನ ದೇವ ! ಇಂತಿವರೆಲ್ಲರು ಪ್ರತಿಷ್ಠೆಯ ನಾರಾಧಿಸಿ ಪ್ರಸನ್ನರಾದರಯ್ಯಾ ! ಇಂತೀ ಪುಣ್ಯದ ಫಲವೆನಗೊಂದೂ ಬೇಡ.

ಇದ್ದವರೆಲ್ಲ ಒಳಗಿರಲಿ ನಾ ಹೊರಗಯ್ಯಾ. ನಿಮ್ಮಾಣೆ ನಿಮ್ಮ ಪ್ರಮಥರಾಣೆ ಅಲಸಿದೆನಲಸಿದೆ ನಿಮ್ಮ ಕಾಷ್ಟದ ಸೇವೆಯವನಯ್ಯಾ. ಕಾಷ್ಟದವನ ಕಾಷ್ಟವ ಮಾಡದೆ ಎನ್ನ ಹೊರಗಿರಿಸದೆ ನಿನ್ನೊಳಗು ಮಾಡಾ ನಿಃಕಳಂಕ ಮಲ್ಲಿ ಕಾರ್ಜುನಾ ॥ ೭೬ ॥

೪೧೭

ಲಿಂಗವ ಕೈಯಲ್ಲಿ ಹಿಡಿದು ಭಕ್ತರಂಗಳವ ಕಾಯಲೇಕೋ? ಲಿಂಗವ ಕೈಯಲ್ಲಿ ಹಿಡಿವು ಅವರಂಗದಿಚ್ಛೆಯ ನುಡಿದು ತನ್ನ ದಿಂಡ ಹೊರೆಯಲೇಕೋ? ಸಂದನಳಿದ ಸದಮಲಾನಂದಂಗೆ ಇದರಂದ ಒಂದೂ ಇಲ್ಲ ನಿಃಕಳಂಕ ಮಲ್ಲಿ ಕಾರ್ಜುನಾ ॥ ೭೭ ॥

೪೧೮

ವಾಯುವ ಹಿಡಿದು ದಂಡವ ಕೊಂಡು, ಸಾವರ ಹಿಡಿದು ಸಂಕದೋಲೆಯನಿಕ್ಕಿ, ವಿಧಿಯಲ್ಲಿ ಸಾಯುಸಗೊಳ್ಳದೆ ಭಾವವಡೆದಂತೆ ಭ್ರಮೆಗೊಳಗಾದ ಮತ್ತೆ ಇವನೇನೆನ್ನದಿಪ್ಪುದೇ ಸರ್ವಜ್ಞಾನದ ಒಳಗು. ಆ ನಿಜ ವಸ್ತು ತಾನು ತಾನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೭೮ ॥

೪೧೯

ವಿವರ[೧]ವಿಲ್ಲದ ಮಣಿಗೆ ದಾರದ ಹಂಗೇಕೆ? ನಿರವಯಾಂಗಂಗೆ ಪರಿಭ್ರಮಣವೇಕೆ? ನಿರಾಳದಲ್ಲಿ ನಿಂದ ಸುಖಿಗೆ ವಿರಾಳದಲ್ಲಿ ಸುತ್ತು ತಿರುಗುತ್ತಿಹಲೇಕೆ? ಸಂಸಾರದ ಸುಖದುಃಖಮಂ ಮರೆದು ಅಂಗ ಮೊದಲು ಮನವೇ ಕಡೆಯಾಗಿ ಮನುಜರ ಹಂಗು ಬಿಟ್ಟವಂಗೆ ಮನೆಮನೆಯ ಹೊಗಲೇಕೆ? ತಲೆ ಹುಳಿತ ದನವಿನಂತೆ ಗಳುವಿನಾಶೆಗಾಗಿ ಇವರಿಗೆ ಲಿಂಗದ ಅನುವಿನ ಆಶೆಯಾಕೆ? ಘನಮಹಿಮ ಆರೆನಲರಸಿದೆ ಅಂಜಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೯ ॥

೪೨೦

ವೇದಾಂತವ ನುಡಿವವರ ಬಲ್ಲೆ; ಸಿದ್ಧಾಂತವ ನಡೆವವರ ಕಾಣೆ. ಇಲ್ಲವೆಂದಡೆ ಸಮಯಕ್ಕೆ ದೂರ. ಉಂಟೆಂದರೆ ಜ್ಞಾನಕ್ಕೆ ದೂರ. ಉಭಯವ ಸಂಪಾದಿಸುವದಕ್ಕೆ ಎನಗೆ ಹಾನಿ ನಿಃಕಳಂಕ ಮಲ್ಲಿಕಾರ್ಜುನಾ ॥ ೮೦ ॥

---

೧. ವಿರಳ (ಡ).

೪೨೧

ಸಕಲ ಸಂಸಾರವ ಹೆರೆ ಹಿಂಗಿದಲ್ಲಿ ನಿಜ ವಸ್ತುವಿನ ಕುರುಹು ಕಾಣ ಬಂದಿತ್ತು. ತ್ರಿವಿಧ ಮಲವ ನೇತಿಗಳೆದು ಮತ್ತಾ ಅರಿವ ಮರೆದು ಮಲ ತ್ರಯವನೊಡಗೂಡಿದಲ್ಲಿ ಬಂಧನವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿ ಕಾರ್ಜುನನ ಲಿಂಗವನರಿವ ಬೆಡಗಿನಂಗ ॥ ೮೧ ॥

೪೨೨

ಸತ್ಯನ ಇರವು, ಪಾವಕದೊಳಗಣ ನವನೀತದಂತೆ, ಕೂರ್ಮೆಯ ಆಚರಣೆಯಂತೆ, ಪಳುಕಿನ ಘಟದಂತೆ. ಹೆಸರಿಡ ಬಾರದ ಅತೀತ ಅಸಮಾಕ್ಷನ ಶರಣರು ನೀವೇ ಬಲ್ಲಿರಿ. ಇದ ಹೆಸರಿಡಲಂಜುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೮೨ ॥

೪೨೩

ಸತ್ವಗೆಟ್ಟಲ್ಲಿ ಕಾಷ್ಟವನೂರಿ ನಡೆಯಬೇಕು. ಮಹತ್ತ[1]ತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ ಮಹಪ್ರಸಾದವೆಂದು ಕೈಕೊಳ್ಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ ಎನ್ನ ಸುಖ ದುಃಖ, ನಿನ್ನ ಸುಖ ದುಃಖ, ಅನ್ಯವಿಲ್ಲ. ಇದಕ್ಕೆ ಭಿನ್ನ ಭೇದವೇನು ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೮೩ ॥

೪೨೪

ಸತಿ ಪುರುಷರಿಬ್ಬರಿಂದ ಒಂದಾಗಿದ್ದ ಸುಖ ಪುರುಷನಿಗೋ ಸತಿಗೋ ? ಇದ ನಾ ಭಾಗಿಸಲಂಜುವೆ. ಇನ್ನಾರಿಗೆ ಸುಖವೆಂಬೆ ಇನ್ನಾರಿಗೆ ದುಃಖವೆಂಬೆ ? ಕೂಟದಿಂದ ಹುಟ್ಟಿದ ಶಿಶು ಬೆಳೆಯಿತ್ತು ಹೆಂಗಸಿನಲ್ಲಿ. ಆ ಮಗು ಅವನಿಗೋ ಅವಳಿಗೋ ? ಬದುಕಿದಡೆ ಸುಖವಿಬ್ಬರಿಗೆ ಸರಿ. ಸತ್ತಡೆ ದುಃಖ ಇಬ್ಬರಿಗೂ ಸರಿ. ಈ ಪುತ್ತಳಿಯ ಇರವ ಇನ್ನಾರಿಗೆ ಹೇಳುವೆ ? ನಿಃಕಳಂಕ ಮಲ್ಲಿ ಕಾರ್ಜುನಾ ॥ ೮೪ ॥

೪೨೫

ಸರ್ವವ ನಾ ಧರಿಸಿಕೊಂಡಿಪ್ಪ ಮಹಾಶರಣನಿರವು ಎಂತುಟೆಂದಡೆ— ಮಹಾಪಲ್ಲವಿಸಿ ಬೆಳೆದ ವೃಕ್ಷದ ಶಾಖೆಗಳಂತೆ ಮರ್ಕಟ ವಿಹಂಗ ನಾನಾ

೧. ಮತ್ತತ್ವ (ಅ).

ಕೀಟ ಜಾತಿಕುಲಕ್ಕೆ ಸಂಭ್ರಮಿಸಿ ನೆರೆದು ತಮ್ಮ ತಮ್ಮ ಅಂಗದ ಓಲು ಜಾತಿ ಉತ್ತರಂಗಳಿಂದ ಆಡುತ್ತಿರಲಾಗಿ ಜೇಡಾ ಎಂಬುದಕ್ಕೆ ಈಡಾಯಿತ್ತೆ ? ಆ ತೆರನರಿತು ಒಂದಿತ್ತು ಬಾರದೆಂಬ ಸಂದೇಹ ನಿಂದಲ್ಲಿ ಶರಣ ಸ್ಥಲ. ಇಂತೀ ಅಪ್ರಮಾಣ ಕುರುಹಳಿದು ನಿಂದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೮೫ ॥

೪೨೬

ಸಿದ್ಧರಸವೆಂದಡೆ ತಾಸಿದ್ದ ಕುಡಿಕೆ ಹೇಮವಾದುದಿಲ್ಲ. ಲೋಹಕ್ಕಲ್ಲದೆ ವೇಧಿಸದು ಆ ವಸ್ತು. ಸರ್ವದಲ್ಲಿ ಸಂಪೂರ್ಣವಾಗಿದ್ದಡೇನು ತನ್ನನರಿವರ ಹೃದಯದಲ್ಲಲ್ಲದೆ ಇರ ಸಾರ ಶಿವಮೂರ್ತಿ ಲಿಂಗದಿರವು. ಇಂದ್ರಿಯವ ಕಟ್ಟಿ ವಸ್ತುವನರಿತಿಹೆನೆಂದಡೆ ಅದು ಕರೆವ ಹಸುವಲ್ಲ. ಇಂದ್ರಿಯವ ಬಿಟ್ಟು ವಸ್ತುವ ಹಿಡಿದಿಹೆನೆಂದಡೆ ಬಿಡಾಡಿಯಲ್ಲ. ವಸ್ತುವನರಿವುದಕ್ಕೆ ಎರಡಳಿದು ಒಂದುಳಿಯಬೇಕು. ಆ ಸಂದಿನ ಬೆಸುಗೆಯಲ್ಲಿ ನಿಂದಿರುತಿಪ್ಪವರ ಅಂದವ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೮೬ ॥

೪೨೭

ಸೀರೆಯ ನೆಯ್ಯುವಾತನ ಕೈಯ ಲಾಳಿ ನುಂಗಿತ್ತ ಕಂಡೆ. ಜಾಲಗಾರನ ಬಲೆಯ ತೃಷಾಳಿ ನುಂಗಿತ್ತ ಕಂಡೆ. ಭಾಳಾಂಬಕನ ತಲೆಯ ಚೀಳು ನುಂಗಿತ್ತ ಕಂಡೆ. ಇವರನಳವಡಿಸುವಾತನ ಕೈಯ್ಯ ಒಂದು ಬಾಳೆಯ ಸುಳಿ ನುಂಗಿತ್ತ ಕಂಡೆ. ಬಾಳೆಯ ಸುಳಿ ತೀರುವನ್ನಕ್ಕ ಕೊಯ್ದು ನೋಡಿ ಆ ಎಲೆಯ ಹಸೆಯ ಹಾಸಿ ಆದಿ ಶರಣರೆಲ್ಲರು ಓಗರವನುಂಡರು. ಭೇದಿಸಲರಿಯದೆ ನಾದ ಬಿಂದು ಕಳಾಭಾವನೆಗೊಳಗಾದರು. ತ್ರಿಸಂಧ್ಯಾಕಾಲದ ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು ! ಶಾಸ್ತ್ರದ ಸನ್ನಿಹಿತರು ! ವಚನದ ರಚನೆವಂತರು ! ಮುಕ್ತಿಯ ಬಟ್ಟೆಯ ಸತ್ಯವಂತರು ! ಇವರೆಲ್ಲರು ಸತ್ತ ಸಾವ ಕಂಡು ಎನಗಿನ್ನೆತ್ತಣ ಮುಕ್ತಿ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೮೭ ॥

೪೨೮

ಸುರೆಯ ಮಡಿಕೆಯ ಮೇಲೆ ವಿಭೂತಿಯ ಹೂಸಿ ಕುಸುಮದಲ್ಲಿ ಪೂಜಿಸಿ ದೇವರೆಂದರ್ಚಿಸಿ ಪೂಜಿಸಿ ಕುಡಿಯುತ್ತಿರ್ಪ ನರರಂತಾದಿರಯ್ಯಾ !

ಈದ ಎಮ್ಮೆಯ ಕೊರಳಲ್ಲಿ ಬಜವ[1] ಕಟ್ಟಿದಾತ ಗುರುವೆ ? ಕಟ್ಟಿಸಿಕೊಂಡ ಪಶುವಿಂಗೆ ಆದೆತ್ತಣ ಮುಕ್ತಿಯೋ ? ಬಟ್ಟೆಯನರಿಯದ ಗುರು, ಸೃಷ್ಟಿಯ ನರಿಯದ ಶಿಷ್ಯ, ವ್ಯರ್ಥವಾಯಿತಲ್ಲಾ ಕಟ್ಟಿದ ಲಿಂಗ ! ನೆಟ್ಟನೆ ಗುರುವಾದ ಮತ್ತೆ ಬಟ್ಟೆಯ ಮೆಟ್ಟಲೇಕೋ ? ತೊಟ್ಟು ಬಟ್ಟ ಹಣ್ಣಿಂಗೆ ಕಟ್ಟಿಗೆಯ ಹಂಗೇಕೋ ? ದೃಷ್ಟವನರಿವುದಕ್ಕೆ ಆಯಸ್ಕಾಂತದ ಶಿಲೆಯ ತೆರನಂತೆ, ಲೋಹದ ವಿನಯದಂತೆ, ಅನಲನ ತೃಣದ ಸಂಗದಂತೆ, ಅನಿಲ ಗಂಧದ ಕೂಟ ದಂತೆ ನಿಃಕಳಂಕ ಮಲ್ಲಿಕಾರ್ಜುನನ ಕೂಟದ ಕುಟಿಲ ॥ ೮೮ ॥

೪೨೯

ಸೆರೆಮನೆಯಲ್ಲಿದ್ದ ಕಡುಗಲಿಗೆ ಸೆರೆಯ ಮೀರಬೇಕೆಂಬ ಕಳ್ಳನ ಬುದ್ಧಿ ಯಲ್ಲದೆ ಅದರೊಳಗಡಗಿಹೆನೆಂಬುದಿಲ್ಲ. ಆ ವಿಧಿಯಂತೆ ಶರೀರವನೊಡಗೂಡಿ ದಾತ್ಮನು ಇದರ ವಿಗಡವನರಿದಲ್ಲದೆ ಗಜಬಜೆಗೆ ಸಿಕ್ಕ ನಿಜ ತತ್ವಜ್ಞಾನಿ ನಿಃಕಳಂಕ ಮಲ್ಲಿಕಾರ್ಜುನಾ ॥ ೮೯ ॥

೪೩೦

ಸ್ಥೂಲವಡಿಕೆಯಾದಂತೆ ಸೂಕ್ಷ್ಮ ಪರ್ಣವಾದಂತೆ ಕಾರಣ ಚೂರ್ಣ ವಾದಂತೆ ಮೂರು ಕೂಡಿದ ಮತ್ತೆ ಬಣ್ಣವಾಯಿತ್ತು ರಜ. ಇದರ ಭೇದವ ನರಿದವರನಾರನು ಕಾಣೆ. ಅದರ ಸ್ವಾಮುವ ಸವಿದು ಭೇದವ ಕಂಡಂಗಲ್ಲದೆ ಅನಾದಿ ಸಂಸಿದ್ಧಿ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೯೦ ॥

೪೩೧

ಹಿಡಿದ ಹೊಲಕ್ಕೆ ಒಡವೆಯ ಕೊಡೆನೆಂದಡೆ ಬಿಡುವರೇ ಪೊಡವಿ ಯೊಡೆಯರು ? ನುಡಿದ ಮಾತಿಂಗೆ ನಡೆಯದಿದ್ದರೆ ಕೇಡ ನುಡಿಯದೆ ಬಿಡು ವರೇ ಲಿಂಗವನೊಡಗೂಡಿದ ಶರಣರು ? ಇದಕ್ಕೆ ಪಡಿಪುಚ್ಚವಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯೧ ॥

೪೩೨

ಹಿರಿದಪ್ಪುದೊಂದು ಭೇರಿಗೆ ಅಂಗುಲದೊಳಡಗಿದ ಕಾಷ್ಟದ ಕುರುಹಿ ನಿಂದ ಧ್ವನಿಯೊದಗುವಂತೆ ಇಂತೀ ಘಟನಾದದ ಭೇದದ ಎಸಕವ ಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ ॥ ೯೨ ॥

---

೧. ಬೀಜವ (ಡ).

**ಅರ್ಥ:— ದೊಡ್ಡಿತ್ತಾದೊಂದು ನಿಸ್ಸಾಳಕ್ಕೆ ಬೆರಳಿನಲ್ಲಿ ಅಡಗಿದ ಕಟ್ಟಿಗೆ ಎಂಬ ನಾದ ದಂಡದಿಂದ ಅಬ್ಬರ ಹುಟ್ಟುವ ಹಾಗೆ, ಈ ಪ್ರಕಾರದಿಂದ ಅಂಗದಲ್ಲಿ ಚಿನ್ನಾದ ಸ್ವರೂಪವಾದ ಇಷ್ಟಲಿಂಗ ಸಂಬಂಧವ ಮಾಡಿಕೊಂಡು ಜ್ಞಾನಕ್ರಿಯಿಡಿದಾಚರಿಸಿ, ಪ್ರಾಣಲಿಂಗ ಸಂಬಂಧವನುಂಟುಮಾಡಿಕೊಳಬಲ್ಲಡೆ ಆತನೇ ಇಷ್ಟಲಿಂಗ ಸಂಬಂಧವ ಬಲ್ಲನೆಂಬರ್ಥ.**

೪೩೩

ಹೊಲನ ಬೆಳೆವಲ್ಲಿ ಹುಲ್ಲೆ ಇರಗೊಡದು. ಹುಲ್ಲೆಯ ಹೊಯ್ಯಬಾರದು ಹೊಲನ ಮೇಯಬಾರದು. ಬಿಟ್ಟರೆ ವ್ರತಕ್ಕೆ ಭಂಗ. ಇಂತೀ ಸಮಯ ಜ್ಞಾನದಲ್ಲಿ ತಿಳಿಯಬೇಕಯ್ಯಾ ! ಹಾವು ಸಾಯದು, ಕೋಲು ಮುರಿಯದು, ಹಾವು ಹೋಹಪರಿ ಇನ್ನೆಂತಯ್ಯಾ ! ಅದು ಗಾರುಡಂಗಲ್ಲದೆ ಗಾವಿಲಗಂಜದು. ಆ ತೆರ ಸ್ವಾನುಭಾವಿಗಳಿಗಲ್ಲದೆ ಶ್ವಾನಜ್ಞಾನಿಗಳಿಗುಂಟೇ ? ಮುಚ್ಚಿದಲ್ಲಿ ಅರಿದು ತೆರವಲ್ಲಿ ಮರೆದು ಇಂತೀ ಉಭಯವಲ್ಲಿ ಕುಕ್ಕುಳಗುದಿವರಿಗುಂಟೇ ನಿಃಕಳಂಕ ಮಲ್ಲಿಕಾರ್ಜುನ ಸುಚಿತ್ತದ ಸಂಗವ ಗುಣ ॥ ೯೩ ॥

# ೬. ಐಕ್ಯ ಸ್ಥಲ

೪೩೪

ಅರ್ಚನೆಗೊಳಗಾಯಿತ್ತು ಲಿಂಗವೆಂಬುದು ಅದು ಹುಸಿ ನಿಲ್ಲು. ಪೂಜೆಗೊಳಗಾಯಿತ್ತು ಲಿಂಗವೆಂಬುದು ಅದು ಹುಸಿ ನಿಲ್ಲು. ಇಂತೀ ಉಭಯದೊಳಗಾದ ಅಷ್ಟವಿಧಾರ್ಚನೆ ಷೋಡಶೋಪಚಾರಕ್ಕೆ ಒಳಗಾದುದಿಲ್ಲ. ಇಂತೀ ನೇಮ ಹುಸಿ ನಿಲ್ಲು. ಇಂತೀ ನೇಮಕ್ಕೊಳಗಾದುದೆ ಇಷ್ಟಾರ್ಥ, ಕಾಮ್ಯಾರ್ಥ, ಮೋಕ್ಷಾರ್ಥ. ತನಗೆ ದೃಷ್ಟದಲ್ಲಿ ಅದು ಇಲ್ಲ. ಇಹದಲ್ಲಿ ಕಾಣದೆ ಪರದಲ್ಲಿ ಕಂಡೆನೆಂಬುದು ಹುಸಿ ನಿಲ್ಲು. ಕುರುಹಿನಿಂದ ಕಾಬರೆ ತನ್ನಿಂದಲೋ ಕುರುಹಿಂದಲೋ ? ಅರುಹಿಂದ ಕಾಬರೆ ಅರುಹಿನಿಂದಲೋ ಕುರುಹಿನಿಂದಲೋ ? ಕುರುಹಿನಿಂದ ಅರಿದೆನೆಂದರೆ ಆ ಅರುಹಿನಿಂದ ಬೇರೊಂದ ಕಂಡಿಹೆನೆಂದರೆ ಕಾಣಿಸಿಕೊಂಡುದು ನೀನೋ ನಾನೋ ? ಈ ಉಭಯವ ಏನೆಂದರಿಯದಿಪ್ಪುದೆ ಬೆಳಗಿನ ಕಳೆಯ ಕಲೆಯೊಳಗಣ ನಿಶ್ಚಯ ತಾನಾದ ಮತ್ತೆ ಏನು ಎನಲಿಲ್ಲ ಅದು ತಾನೇ ಅದು ತಾನೇನೂ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ || ೧ ||

೪೩೫

ಅರಿವನರಿವನ್ನಕ್ಕ ಅರ್ಚನೆ ಬೇಕು. ಪುಣ್ಯವನರಿವನ್ನಕ್ಕ ಪೂಜೆ ಬೇಕು. ತಾನೆಂಬುದನರಿವನ್ನಕ್ಕ ಎಲ್ಲ ನೇಮವ ಭಾವಿಸಬೇಕು. ಕಾಲ ಕರ್ಮ ಜ್ಞಾನ ಭಾವ ತಾನುಳ್ಳನ್ನಕ್ಕ ಭಜಿಸಬೇಕು. ತನ್ನ ಮರೆದು, ವಸ್ತುವ ಕುರಿತು ನಿಂದ ಮತ್ತೆ ಬತ್ತಲೆ ಹೋಹವಂಗೆ ಎತ್ತಲು ಭಯವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ || ೨ ||

೪೩೬

ಅರಿವು ಕಿರಿದಾಗಿ ಅರಿದಿಹೆನೆಂಬುದು ಘನವಾಗಿ ವಿಚಾರಿಸುತ್ತಿರಲಾಗಿ, ನೆನೆದಿಹೆನೆಂಬ ಭ್ರಾಂತು ಹುರಿಯಳಿದು, ಆ ನೆನಹೇ ತಾನಾಗಿ ಪ್ರಕೃತಿ ಎಂಬ ಕುಂಭಕ್ಕೆ ಹೊರಗಾಗಿ ನಿಜ ನಿಜ ಗೂಡಿದ ಬೆಳಗು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ತುಂಬಿ ಇಂಬಾಯಿತ್ತು || ೩ ||

೪೩೭

ಅರುವಿಂಗೆ ಅರ್ಚನೆಗೆ ಒಳಗು. ಅರ್ಚನೆಗೆ ಎಚ್ಚರೆ ನಿತ್ಯತ್ವಕ್ಕೊಳಗು. ನಿತ್ಯತ್ವ ನಿಂದರೆ ಬಚ್ಚಬರಿಯ ಬಯಲು ನಿಃಕಳಂಕ ಮಲ್ಲಿಕಾರ್ಜುನಾ ‖ ೪ ‖

೪೩೮

ಅಲ್ಲಿಗೆ ಮರ್ಕಟನಂತಾಗದೆ, ಇಲ್ಲಿಗೆ ವಿಹಂಗನಂತಾಗದೆ, ಈಚೆಯಲ್ಲಿಗೆ ಪಿಪೀಲಿಕನಂತಾಗದೆ, ರಾಜಸ ತಾಮಸ ಸಾತ್ವಿಕದಲ್ಲಿ ಸಾಯದೆ, ಭಾಗೀರಥಿ ಯಂತೆ ಹೆಚ್ಚು ಕುಂದಿಲ್ಲದೆ, ಮಾಸದ ಚಂದ್ರನಂತೆ, ಕಲೆ ಇಲ್ಲದ ಮೌಕ್ತಿಕ ದಂತೆ, ಜರವಿಲ್ಲದ ರತ್ನದಂತೆ, ತೆರೆದೋರದ ಅಂಬುಧಿಯಂತೆ, ಒಡಲಳಿದವಂಗೆ, ನೆರೆ ಅರಿದವಂಗೆ, ಕುರುಹೆಂಬುದು ಆತ್ಮನಲ್ಲಿ ಘಟಿಸಿದವಂಗೆ, ಬೇರೊಂದೆಡೆ ಇಲ್ಲ. ಆ ಗುಣವಡಗಿವಲ್ಲಿ ಪ್ರಾಣಲಿಂಗ ಸಂಬಂಧ. ಆ ಸಂಬಂಧ ಸಮಯ ಸ್ವಸ್ಥವಾದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ‖ ೫ ‖

೪೩೯

ಅಷ್ಟತನು ಮೂರ್ತಿ ಕೂಡಿ ನಿಂದು ವಸ್ತುವನರಿಯಬೇಕೆಂಬುದು; ತತ್ತ್ವ ಇಪ್ಪತ್ತೈದು ಕೂಡಿ ನಿಂದು ವಸ್ತುವನರಿಯಬೇಕೆಂಬುದು; ಶತ ಏಕವ ನರಸಿ ಒಂದುಗೂಡಿ ವಸ್ತುವನರಿಯಬೇಕೆಂಬುದು; ತಾಪತ್ರಯವಾರು ತನು ತ್ರಯ ಮೂರು ದಶವಾಯುವಿನಲ್ಲಿ ಸೂಸುವ ಆತ್ಮನ ಏಕವ ಮಾಡಿ ವಸ್ತುವನರಿಯಬೇಕೆಂಬುದು; ಅಷ್ಟಮದಂಗಳ ಹಿಟ್ಟುಗುಟ್ಟಿ ವಸ್ತುವ ಕಾಣ ಬೇಕೆಂಬುದು; ಷಟ್ಸ್ಥಲವನಾಚರಿಸಿ ನಿಂದು ವಸ್ತುವನೊಡಗೂಡಿ ಅರಿಯ ಬೇಕೆಂಬುದು; ಬ್ರಹ್ಮನ ಉತ್ಪತ್ತಿಗೆ ಹುಟ್ಟದೆ, ವಿಷ್ಣುವಿನ ಸ್ಥಿತಿಗೊಳಗಾಗದೆ, ರುದ್ರನ ಲಯಕ್ಕೆ ಸಿಕ್ಕದೆ, ನಿಜದಲ್ಲಿ ನಿಂದು ವಸ್ತುವನರಿಯಬೇಕೆಂಬುದು; ಅದೇನು ಹೇಳಾ ! ಆ ಗುಣ; ಸ್ವಾದೋದಕ ಮೇಘದಲ್ಲಿ ಏರಿ ಧರೆಗೈದಿದಂತೆ, ಆ ಅಪ್ಪುವಿನಿಂದ ತರು, ಸಸಿ, ಸಕಲ ಜೀವಂಗಳಿಗೆ ಸುಖವನ್ನೈದಿಸುವಂತೆ ಎಂಬುದನರಿದು ವರ್ತನಕ್ಕೆ ಕ್ರಿ, ಕ್ರೀಗೆ ನಾನಾ ಭೇದ, ನಾನಾ ಭೇದಕ್ಕೆ ವಿಶ್ವ ಮಯ ಸ್ಥಲಂಗಳಾಗಿ, ಆ ಸ್ಥಲಂಗಳ ಏಕೀಕರಿಸಿ ನಿಂದುದು ಮಹಾಜ್ಞಾನ. ಆ ಮಹಾಜ್ಞಾನವನೇಕೀಕರಿಸಿ ನಿಂದುದು ದಿವ್ಯ ಜ್ಞಾನ. ಆ ಜ್ಞಾನವು ಸುಳುಹುದೋರದೈ ನಿಂದುದು ಪ್ರಾಣಲಿಂಗಿಯ ಭಾವ. ಆ ಭಾವ ನಿರ್ಭಾವ

ವಾದುದು ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಸಂದನಳಿದು ನಿಂದುದೇ ನಿಜ ॥ ೬ ॥

೪೪೦

ಅಂಬು ಇಲ್ಲದಿದ್ದರೆ ಅಂಬುಜವನಾರು ಬಲ್ಲರು? ನೀರಿಲ್ಲದಿದ್ದರೆ ಹಾಲನಾರು ಬಲ್ಲರು? ನಾನಿಲ್ಲದಿದ್ದಡೆ ನಿನ್ನನಾರು ಬಲ್ಲರು? ನಿನಗೆ ಎನಗೆ ಬೇರೊಂದೆಡೆಯುಂಟೇ? ನಿಃಕಳಂಕ ಮಲ್ಲಿಕಾರ್ಜುನಾ ॥ ೭ ॥

೪೪೧

ಆತ್ಮ ಪೃಥ್ವಿಯ ಗುಣವೋ ಅಪ್ಪುವಿನ ಗುಣವೋ ತೇಜದ ಗುಣವೋ ವಾಯುವಿನ ಗುಣವೋ ಆಕಾಶದ ಗುಣವೋ ಇಂತೀ ಐವರ ಗುಣವೋ ತನ್ನ ಸುಬುದ್ಧಿಯೋ ಎಂಬುದ ತಿಳಿಯಬೇಕು. ಅಧ್ಯಾತ್ಮವ ತಿಳಿದಿಹೆನೆಂಬ ಲಿಂಗಾಂಗಿಗಳು ಅದು ಅಡಗಿ ಮಡಗಿಹ[1] ಭೇದವನರಿದಡೆ ಅದೇ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೪೪೨

ಇಷ್ಟಲಿಂಗದಂಗ ಭಕ್ತಿಸ್ಥಲ. ಭಾವಲಿಂಗದಂಗ ಮಾಹೇಶ್ವರ ಸ್ಥಲ. ಪ್ರಾಣಲಿಂಗದಂಗ ಪ್ರಸಾದಿಸ್ಥಲ. ಶರಣಸ್ಥಲದಂಗ ಐಕ್ಯಸ್ಥಲ. ಐಕ್ಯಸ್ಥಲದಂಗ ಅಭೇದ್ಯಸ್ಥಲ. ಇಂತೀ ಉಭಯುವ ತಿಳಿವ ನಿರಂಗಂಗೆ ಸ್ಥಲ ಕುಳಲೇಪ[2]ವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೯ ॥

೪೪೩

ಇಷ್ಟಲಿಂಗ ಸಂಬಂಧ, ಭಾವಲಿಂಗ ಸಂಬಂಧ, ಪ್ರಾಣಲಿಂಗ ಸಂಬಂಧವೆಂದು ಭಾವಿಸಿ ಕಲ್ಪಿಸುವಾಗ ಅಂಗದ ಮರೆ ಇಷ್ಟ, ಇಷ್ಟದ ಮರೆ ಭಾವ, ಭಾವದ ಮರೆ ಪ್ರಾಣ, ಪ್ರಾಣದ ಮರೆ ಜ್ಞಾನ, ಇಂತೀ ಗುಣಂಗಳ ಏಕವ ಮಾಡಿ ಉಭಯದ ದೃಷ್ಟಕ್ಕೆ ಒಡಲಿಲ್ಲದೆ ನಿಂದುದೆ ನಿಜೈಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೪೪೪

ಉದಕದಲ್ಲಿ ಮಜ್ಜನವ ಮಾಡಿ ಇಹ ಪರವ ಹರಿದವರನಾರನು ಕಾಣೆ. ಪುಷ್ಪದಲ್ಲಿ ಪೂಜೆಯ ಮಾಡಿ ಪುನರಪಿಯ ಗೆದ್ದವರನಾರನು ಕಾಣೆ. ಕರ್ಮ

೧. ಉಡುಗಿಹ (ಪ) ೨. (ಪ) ಲೋಪ.

ದಿಂದ ಒದವಿದ ಸುಖ, ಚತುರ್ವಿಧಕ್ಕೆ ಒಳಗಲ್ಲದೆ ಹೊರಗಾದುದಿಲ್ಲ. ಕರ್ಮವ ಮಾಡುವಲ್ಲಿ ಧರ್ಮವನರಿದಡೆ ಅದೇ ಪಥಕ್ಕೆ ಹೊರಗೆಂದೆ. ಮೌಕ್ತಿಕ ಉಂಡ ಜಲಕ್ಕೆ ರಾಗ ಉಂಟೇ ಅಯ್ಯಾ ? ಅಮೃತದಲೊದವಿದ ಆಜ್ಯವ ಧರಿಸಿದ ಜಿಹ್ವೆಗೆ ಕರಿಟಳ ಉಂಟೇ ಅಯ್ಯಾ, ಆ ಕರದಲ್ಲಲ್ಲದೆ. ಅರಿದು ಹಿಡಿದವಂಗೆ ಬಿಡುಗಡೆ ಇನ್ನೇನೋ ? ಅರಿದಡೆ ತಾ ಮರೆದಡೆ ಜಗವೆಂಬ ಉಭಯವು ಹರಿದಾಗವೆ ಬಿಡುಗಡೆ. ಪೂಜಕನಲ್ಲ, ಪ್ರತಿಷ್ಠೆಯಲ್ಲಿ ಪರಿಣಾಮಿಯಾದಲ್ಲದೆ ಸ್ವಯಂಭುವಿನಲ್ಲಿ ಸ್ವಾನುಭಾವಿಯಲ್ಲ. ಏನು ಎನಲಿಲ್ಲವಾಗಿ ನಿಃಕಳಂಕ ಮಲ್ಲಿಕಾರ್ಜುನಲಿಂಗ ತಾನೆಯಾಗಿ ॥ ೧೧ ॥

೪೪೫

ಉದಕವಿಲ್ಲದಿರೆ ಅಂಬುಧಿ ತಟಾಕಂಗಳೆಂಬ ನಾಮ ಉಂಟೇ ? ಬಣ್ಣ ನಾಸ್ತಿಯಾಗಿರೆ ಭಂಗಾರವೆಂಬ ವಿಶೇಷ ಉಂಟೇ ? ಗಂಧವಿಲ್ಲದಿರೆ ಚಂದನವೆಂಬ ಅಂಗ ಉಂಟೇ ? ನೀನಿಲ್ಲದಿರೆ ನಾನೆಂಬ ಭಾವ ಉಂಟೇ ? ಜಗವೆಲ್ಲವು ನಿನ್ನ ಹಾಹೆ. ಉತ್ಪತ್ತ್ಯ ಸ್ಥಿತಿ ಲಯವೆಲ್ಲವೂ ನಿನ್ನ ಹಾಹೆ. ಕ್ರಿ, ನಿಃಕ್ರಿ ಎಂಬುದೆಲ್ಲವು ನಿನ್ನ ಹಾಹೆ. ಜಗಹಿತಾರ್ಥವಾಗಿ ಭಕ್ತನಾದೆ. ಭಕ್ತಿ ತದರ್ಥವಾಗಿ ಮಹೇಶ್ವರನಾದೆ. ಮಹೇಶ್ವರ ತದರ್ಥವಾಗಿ ಪ್ರಸಾದಿಯಾದೆ. ಪ್ರಸಾದಿ ತದರ್ಥವಾಗಿ ಪ್ರಾಣಲಿಂಗಿಯಾದೆ. ಪ್ರಾಣಲಿಂಗಿ ತದರ್ಥವಾಗಿ ಶರಣನಾದೆ. ಶರಣ ತದರ್ಥವಾಗಿ ಐಕ್ಯನಾದೆ. ಇಂತೀ ಷಡುಸ್ಥಲ ಮೂರ್ತಿಯಾಗಿ ಒಂದೆಯಲ್ಲಾ ಸಂಗನಬಸವಣ್ಣ ಚೆನ್ನಬಸವಣ್ಣ ! ನಿಮ್ಮ ಸುಖದುಃಖದ ಪ್ರಮಥರು ಸಹಿತವಾಗಿ ಏಳುನೂರೆಪ್ಪತ್ತು ಅಮರಗಣಂಗಳು, ಗಂಗೆವಾಳುಕ ಸಮಾರುದ್ರರು, ಮತ್ತೆ ಅವಧಿಗೊಳಗಲ್ಲದ ಸಕಲ ಪ್ರಮಥರು ಬಂದರಲ್ಲಾ ! ಬಂದುದ ಕಂಡು ಎನ್ನ ಸಿರಿ ಉರಿಯೊಳಗಾಯಿತ್ತು. ಎನ್ನ ಭಾವದ ಉರಿಯ ಬಿಡಿಸು. ಭಾವ ವಿರಹಿತ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨ ॥

೪೪೬

ಉರಿದು ಬೇವುದು ಉರಿಯೋ ಮರನೋ ? ಹರಿದು ಕೊರೆವುದು ನೆಲನೋ ನೀರೋ ? ನೆಲ ನೀರಂತಾದುದು ಅಂಗಲಿಂಗ ಸಂಬಂಧ. ಉರಿ ಮರನಂತಾದುದು ಪ್ರಾಣಲಿಂಗ ಸಂಬಂಧ. ಇಂತೀ ನಾಲ್ಕರ ಗುಣ ಉಭಯಕೂಟವಾದುದು ಶರಣಸ್ಥಲ. ಆ ಸ್ಥಲ ಸುರಧನುವಿನ ಕೆಲವಳಿಯಂತೆ, ಮರೀಚಿ

ಕಾಜಲದ ವಳಿಯಂತೆ, ಮಂಜಿನ ರಂಜನೆಯ ಜಂಝಾ ಮಾರುತನಂತೆ, ಆ ಸಂಗ ನಿಃಸಂಗ ಐಕ್ಯಸ್ಥಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೪೪೭

ಉರಿನೀರು ಕುಂಬದಂತೆ ಆಗಬಲ್ಲಡೆ ಕಾಯಲಿಂಗ ಸಂಬಂಧಿ. ತರು ಧರಿಸಿದ ನೀರು ಉರಿಯಂತಾಗಬಲ್ಲಡೆ ಭಾವಲಿಂಗ ಸಂಬಂಧಿ. ಕರ್ಪುರ ಧರಿಸಿದ ಅಪ್ಪು ಉರಿಯ ಯೋಗದಂತೆ ಆಗಬಲ್ಲಡೆ ಪ್ರಾಣಲಿಂಗ ಸಂಬಂಧಿ. ಇಂತೀ ಇವನಿಪ್ಪ ಭೇದವನರಿದು ನಿಶ್ಚಯಿಸಿದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೪೪೮

ಊರು ಕೆಟ್ಟು ಸೂರೆಯಾಡುವಲ್ಲಿ ಆರಿಗಾರೂ ಇಲ್ಲ. ಬಸವಣ್ಣ ಸಂಗಮಕ್ಕೆ, ಚೆನ್ನಬಸವಣ್ಣ ಉಳುವಿಗೆ, ಪ್ರಭು ಕದಳಿಗೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ತಮ್ಮ ಲಕ್ಷ್ಯಭಾವಕ್ಕೆ ಮುಕ್ತಿಯನೆಯ್ದಿಹರು. ನನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೪೪೯

ಊರೊಳಗಿದ್ದು ಊರ ಸುಡಬೇಕಲ್ಲದೆ ಊರ ಹೊರಗಿದ್ದು ಊರ ಸುಡಬಹುದೇ ಅಯ್ಯಾ ? ಕ್ರಿಯೊಳಗಿದ್ದು ಕ್ರಿಯೆಯನರಿಯಬೇಕಲ್ಲದೆ ಕ್ರಿಗೆ ಹೊರಗಾಗಿ ಜ್ಞಾನ ಉಂಟೇ ಅಯ್ಯಾ ? ಕೈದಟ್ಟುವ ಠಾವಿನಲ್ಲಿ ಕಾಳಗವಲ್ಲದೆ ಕೈದಟ್ಟದ ಠಾವಿನಲ್ಲಿ ಕಾಳಗ ಉಂಟೇ ಅಯ್ಯಾ ? ನಾನು ನೀನಾದಡೆ ದೇವ, ನೀನು ನಾನಾದಡೆ ದೇವ. ಉಭಯವ ವೇಧಿಸಿದಲ್ಲಿ ತಾನು ತಾನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬ ॥

೪೫೦

ಎನ್ನರಿವು ಮರವು ಬಸವಂಗರ್ಪಿತ. ಎನ್ನ ಆಚಾರವಿಚಾರ ಬಸವಂಗರ್ಪಿತ. ಎನ್ನ ಭಾವ ನಿರ್ಭಾವ ಬಸವಂಗರ್ಪಿತ. ಎನ್ನ ಅಂತರಂಗ ಬಹಿರಂಗ ಬಸವಂಗರ್ಪಿತ. ನೀನಾನೆಂಬುದು ಬಸವಂಗರ್ಪಿತ. ಇಂತು ಬಸವಣ್ಣಂಗೆ ಎನ್ನ ನಿವೇದಿಸಿದೆನಾಗಿ ಉಭಯವೆಂಬುದು ಇಲ್ಲವಾದೆ. ನಿರಾಲಂಬದಲ್ಲಿ ನಿಜ ನಿವಾಸಿಯಾಗಿರ್ದೆನಯ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭ ॥

೪೫೧

ಒಡಲಿಲ್ಲದೆ ಆತ್ಮನಿರಬಲ್ಲುದೇ ? ಕ್ರಿ ಇಲ್ಲದೆ ಸತ್ಯ ನಿಲ್ಲಬಹುದೇ ? ಭಾವವಿಲ್ಲದೆ ವಸ್ತು ಈಡಪ್ಪುದೇ ? ಒಂದು ರಾಶಿಯಲ್ಲಿ ಒಂದ ಕಂಡು ಆ ದ್ವಂದ್ವವನೊಂದು ಮಾಡಿ ಒಂದೆಂಬುದನರಿತು ಪ್ರಾಣಕ್ಕೆ ಸಂಬಂಧವ ಮಾಡಿ ಕೂಡಿದ್ದುದು ಪ್ರಾಣಲಿಂಗ. ಆ ಉಭಯದ ಸಂವನಳಿದುದು ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೪೫೨

ಒಂದು ಶಿಲೆಯೊಡೆದು ಮೂರಾದ ಭೇದವ ನೋಡಾ ! ಒಂದು ಶಿಲೆ ಶೂಲ, ಕಪಾಲ, ದಿಂಡೆ, ಡಮರುಗ, ರುಂಡಮಾಲೆ ಐದು ತಲೆ. ತಲೆಯೊಳಗೊಬ್ಬಳು. ತೊಡೆಯೊಳಗೊಬ್ಬಳು. ಇಂತೀ ಕಡುಗಲಿಯ ದೇವನೆಂದೆಂಬುದು ನೋಡಾ ! ಎನ್ನ ದೇವಂಗೆ ಐದು ಮುಖವಿಲ್ಲ. ಈರೈದು ಭುಜವಿಲ್ಲ. ಎನ್ನ ದೇವಂಗೆ ತೊಡೆ ಮುಡಿಯೊಳಾರನು ಕಾಣೆ. ಹಿಡಿವುದಕ್ಕೆ ಭುಜವಿಲ್ಲ. ಕೊಡುವುದಕ್ಕೆ ವರವಿಲ್ಲ. ತೊಡುವುದಕ್ಕೆ ಆಭರಣವಿಲ್ಲ. ಒಡಗೂಡುವದಕ್ಕೆ ಪುರುಷನಿಲ್ಲ. ತನಗೆ ಮತ್ತಿಲ್ಲ. ತನ್ನನರಿದವರಿಗೆ ಗತಿ ಇಲ್ಲವಾಗಿ ಶೃತಿ ಇಲ್ಲ. ಸ್ಮೃತಿ ಇಲ್ಲವಾಗಿ ನಾದವಿಲ್ಲ. ನಾದವಿಲ್ಲವಾಗಿ ಬಿಂದು ಇಲ್ಲ. ಬಿಂದು ಇಲ್ಲವಾಗಿ ಕಳೆ ಇಲ್ಲ. ಇಂತಿವೆಲ್ಲವು ಇಲ್ಲವಾಗಿ ಹೊದ್ದಲಿಲ್ಲ. ಹೊದ್ದಲಿಲ್ಲವಾಗಿ ಸಂದಿಲ್ಲ. ಸಂದಿಲ್ಲವಾಗಿ ಸಂದೇಹವಿಲ್ಲ ನಿಃಕಳಂಕ ಮಲ್ಲಿಕಾರ್ಜುನನಲ್ಲದೆ ಮತ್ತೆಲ್ಲಿಯು ಇಲ್ಲ ॥ ೧೯ ॥

೪೫೩

ಕರಣನಾಲ್ಕು, ಮದವೆಂಟು, ವ್ಯಸನ ಏಳು, ಅರಿಷಡ್ವರ್ಗಂಗಳಲ್ಲಿ ಬುದ್ಧಿಯಾಗಿರಬೇಕೆಂದು ಹೇಳುತ್ತಿಪ್ಪ ಅಣ್ಣಗಳು ನೀವು ಕೇಳಿರೋ ಆತ್ಮ ಸಂಬಂಧವಾದಲ್ಲಿ ಆವ ಕರಣಂಗಳೂ ಇಲ್ಲ. ಆತ್ಮನಿಂದ ಒದಗಿದ ಇಂದ್ರಿಯಂಗಳಲ್ಲದೆ ಬೇರೆ ಕರಣಂಗಳಿಗೆ ಗುಣವಿಲ್ಲ. ಸ್ಥಾವರದ ಮೂಲಕ ಕಡಿದಲ್ಲಿ ಶಾಖೆಗಳಿಲ್ಲದ ಕಾರಣ, ಆತ್ಮನ ನಿಲವನರಿದವಂಗೆ ಬೇರೆ ಕರಣಂಗಳ ಬಂಧಿಸಲಿಲ್ಲವಾದ ಕಾರಣ, ಲಿಂಗವ ಕುರಿತಲ್ಲಿ ಅಂಗವ ಕುರಿಯಬಾರದು. ಅಂಗಕ್ಕೂ ಪ್ರಾಣಕ್ಕೂ ಹಿಂಗಲೆನ್ನಬಾರದು ನಿಃಕಳಂಕ ಮಲ್ಲಿಕಾರ್ಜುನನ ಸಂಗದಲ್ಲಿ ಲೀಯವಾದವಂಗೆ ॥ ೨೦ ॥

೪೫೪

ಕಲ್ಲಿನೊಳಗಣ ಅಪ್ಪುದಳ್ಳುರಿಯಲ್ಲಿಪ್ಪುದೇ ಹಿಳಿದಡೆ ಸಾರದು. ಉರು ಹಿದಡೆ ಹೊತ್ತದು. ತಮ್ಮ ಒಲವರದ ಕುಲಕ್ಕಲ್ಲದೆ ದ್ರವವಿಲ್ಲ. ಇಂತೀ ವಸ್ತುವನರಿವುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡ ಗೂಡುವದಕ್ಕೆ ॥ ೨೧ ॥

೪೫೫

ಗಾಜಿನ ಗೋಡೆಯ ಸುಣ್ಣ ವೇದಿಸಬಲ್ಲುದೇ ? ನಾಗರ ಹೆಡೆಯ ಚಿಕ್ಕೆರಬಲ್ಲುದೇ ? ಉರಿಯ ಪುತ್ತಳಿಯ ಅರಗು ಮುಟ್ಟಿ ಅಪ್ಪಬಲ್ಲುದೇ ? ಲಿಂಗಮಯ ಸಿರಿವಂತರ ಅಂಗವ ಸಂಗಿಸಬಲ್ಲವೆ ಇಂದ್ರಿಯಂಗಳು ? ಇಂತೀ ಗುಣವ ಹಿಂಗಿ ಲಿಂಗವೆ ತಾನಾಗಿಪ್ಪ ನಿಃಕಳಂಕ ಮಲ್ಲಿಕಾರ್ಜುನನ ॥೨೨॥

೪೫೬

ಕಾಯಗುಣವಿಡಿದು ಮಾಡುವನ್ನಕ್ಕ ಸದ್ಭಕ್ತನಲ್ಲ. ಜೀವ ಗುಣ ವಿಡಿದು ತಿರುಗುವನ್ನಕ್ಕ ಪರಶಿವ ರೂಪನಲ್ಲ. ಕ್ರಿಯನರಿದು ಆಚಾರದಲ್ಲಿ ನಿಂದು ಋಣಾತುರ್ಯ, ಮುಖ್ಯತೂರ್ಯ, ಸ್ವೇಚ್ಛಾತೂರ್ಯವೆಂಬ ಮೂರು ಮಾಟವ ಕಂಡು ಭಕ್ತಿ ಜ್ಞಾನ ವೈರಾಗ್ಯವೆಂಬ ತ್ರಿವಿಧ ವಿಶ್ವವನರಿದು ಮನ, ವಚನ, ಕಾಯ, ತ್ರಿಕರಣ ಶುದ್ಧಾತ್ಮನಾಗಿ ಆಪ್ಯಾಯನದ ಅನುವನರಿತು ಸಮಯದಲ್ಲಿ ಮಾನ್ಯರ ಇರವನರಿತು ಕೂಡುವಲ್ಲಿ ಇಂತೀ ಭಾವ ಸದ್ಭಕ್ತನ ಸ್ಥಲ. ಹೆಣ್ಣು ಹೊನ್ನು ಮಣ್ಣಿನಲ್ಲಿ ಸ್ತುತಿ ನಿಂದ್ಯಾದಿಗಳಲ್ಲಿ ತಥ್ಯ ಮಿಥ್ಯಂ ಗಳಲ್ಲಿ ವಿರಾಗನಾಗಿ, ಸುಖದುಃಖಂಗಳ ಸರಿ ಗಂಡು ನಿಃಕಳಂಕನಾಗಿ ಚರಿಸ ಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನನೆಂದೆಂಬೆ ॥ ೨೩ ॥

೪೫೭

ಕಾಯ ಪ್ರಕೃತಿ ಜೀವಪ್ರಕೃತಿ ಭಾವಪ್ರಕೃತಿ, ಸಂಚಾರ ಭ್ರಮೆ ಮುಂಚದೆ ಸಂಚಿತ ದುಷ್ಕರ್ಮಗಳ ಪಂತಿಯಲ್ಲಿ ಕುಳ್ಳಿರದೆ ಇದರಂಚೆ[೧]ಯ ತಿಳಿ! ಮುಂಚು ಬೇಗ! ನಿಃಕಳಂಕ ಮಲ್ಲಿಕಾರ್ಜುನನ ನಿಸ್ಸಂಗದ ಕೂಟವ ॥೨೪॥

೪೫೮

ಕಾಯ ಬಂಧನ ಭಾವ, ಭಾವ ಬಂಧನ ಜ್ಞಾನ, ಜ್ಞಾನ ಬಂಧನ ಸಕ ಲೇಂದ್ರಿಯ, ಇಂತೀ ಸ್ವರೂಪಂಗಳ ಕಲ್ಪಿಸುವಲ್ಲಿ ಕಾಯಕ್ಕೆ ಬಂಧವಲ್ಲದೆ

---

೧. ಇದರಚ್ಚೆಯ (ಪ).

ಜೀವಕ್ಕೆ ಬಂಧ ಉಂಟೇ ಎಂದೆಂಬರು. ಭೇರಿಗೆ ಬಂಧವಲ್ಲದೆ ನಾದಕ್ಕೆ ಬಂಧ ಉಂಟೇ ಎಂಬರು. ಉಭಯದ ಭೇದವ ತಿಳಿದಲ್ಲಿ ಕಾಯಕ್ಕೆ ಬಂಧ ಉಂಟೇ ಜೀವಕ್ಕಲ್ಲದೆ ? ಭೇರಿಗೆ ಬಂಧ ಉಂಟೇ ನಾದಕ್ಕಲ್ಲದೆ ? ಇಂತೀ ಅಳಿಉಳಿವ ಎರಡ ವಿಚಾರಿಸುವಲ್ಲಿ ಜೀವ ನಾನಾ ಭವಂಗಳಲ್ಲಿ ಬಪ್ಪುದ ಕಂಡು ಮತ್ತಿನ್ನಾರ ಕೇಳಲೇತಕ್ಕೆ ? ನಾದ ಸ್ಥೂಲ ಸೂಕ್ಷ್ಮಂಗಳಲ್ಲಿ ಹೊರಳಿ ಮರುಳುತ್ತಿಹುದ ಕಂಡು ಅರಡಿಗೊಳ್ಳಲೇಕೆ ? ಇಂತಿವ ಶ್ರುತದಲ್ಲಿ ಕೇಳಿ ದೃಷ್ಟದಲ್ಲಿ ಕಂಡು ಅನುಭಾನದಲ್ಲಿ ಅರಿದ ಮತ್ತೆ ಲಿಂಗಕ್ಕೆ ಪ್ರಾಣವೋ ಪ್ರಾಣಕ್ಕೆ ಲಿಂಗವೋ ಎಂಬುದ ಪ್ರಮಾಣಿಸಿದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೨೫ ॥

೪೫೯

ಕಾಲಜ್ಞಾನ ಕರ್ಮಜ್ಞಾನ ಭಾವಜ್ಞಾನದ ಭ್ರಮೆಯಳಿದು ನೀನು ನಾನೆಂಬ ಮದ ಮತ್ಸರ ಮುರಿದು ಭಕ್ತಿ ಜ್ಞಾನ ವೈರಾಗ್ಯವೆಂಬ ಸಂತೋಷವ ಮೆಟ್ಟಿ ನಿಂದು ನಿಜವೆ ತಾನಾಗಿಪ್ಪ ಪರಿಪೂರ್ಣಂಗೆ ಇಹಪರವೆಂಬುಭಯವಿಲ್ಲ. ಅವಂಗೆ ಪರಂಜ್ಯೋತಿ ಪ್ರಕಾಶಂಗೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೪೬೦

ಕುಸುಮದಲ್ಲಿ ವಾಸನೆ ಇದ್ದಡೇನು ಅದು ಎಸೆಯದನ್ನಕ್ಕ ಕುಶಲದಲ್ಲಿ ಆಸಿಕರಿದ್ದಡೇನು ಅದು ಎಸಗದನ್ನಕ್ಕ ? ಕುಟಿಲದ ವಸ್ತು ಕೈಯಲಿದ್ದಡೇನು ಅವನೆಸೆದು ಪ್ರಾಣವ ಬೆರಸದನ್ನಕ್ಕ ? ಇಂತೀ ಹುಸಿ ನುಸುಳ ಕಲಿತು ಬೆರಸಿದೆ ಲಿಂಗವನೇದಡೆ ಕಟ್ಟುಗ್ರದ ಪೆಟ್ಟನಂತೆ ಬಿಟ್ಟ ಶಕಟನಂತೆ ತುಷದ ಗಡಿಗೆಯಂತೆ ಇದು ಹಸನಲ್ಲ ಲಿಂಗೈಕ್ಯರಿಗೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೭ ॥

೪೬೧

ಕ್ರೋಧವ ಬಿಟ್ಟಲ್ಲದೆ ಇಚ್ಛಾಶಕ್ತಿಗೆ ಹೊರಗಲ್ಲ. ಮೋಹವ ಬಿಟ್ಟಲ್ಲದೆ ಕ್ರಿಯಾಶಕ್ತಿಗೆ ಹೊರಗಲ್ಲ. ವ್ಯಾಪಾರ ಮುಂತಾದ ಸಕಲ ಕೃತ್ಯದ ತಾಪವ ಬಿಟ್ಟಲ್ಲದೆ ಜ್ಞಾನಶಕ್ತಿಗೆ ಹೊರಗಲ್ಲ. ಇಂತೀ ತ್ರಿವಿಧ ನಿರ್ಲೇಪವಾಗಿಯಲ್ಲದೆ ಲಿಂಗೈಕ್ಯವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೨೮ ॥

೪೬೩

ಗುರು ಪೂಜಕರೆಲ್ಲರು ಬ್ರಹ್ಮನ ಪಾಶಕ್ಕೊಳಗಾದರು. ಲಿಂಗಪೂಜಕರೆಲ್ಲರು ವಿಷ್ಣುವಿನ ಪಾಶಕ್ಕೊಳಗಾದರು. ಜಂಗಮ ಪೂಜಕರೆಲ್ಲರು ರುದ್ರನ ಪಾಶಕ್ಕೊಳಗಾದರು. ಇಂತೀ ಮೂವರ ಹಂಗಿನಲ್ಲಿ ಸಿಕ್ಕಿ ಜ್ಞಾನಿಗಳೆಂತಾದಿರೋ? ಮುಟ್ಟಿ ಪೂಜಿಸುವದಕ್ಕೆ ರೂಹಿಲ್ಲದ ಲಿಂಗದ ದೃಷ್ಟವ ಕಾಬ ಪರಿ ಇನ್ನೆಂತೋ ? ಮರ್ತ್ಯದಲ್ಲಿ ಮಾಡುವ ಅಭ್ಯಾಸಿಗಲ್ಲದೆ ಅನಿತ್ಯವ ಬಿಟ್ಟ ನಿಜ ನಿಶ್ಶಂಕಂಗಲ್ಲ. ಸುಚಿತ್ತ ನಿರ್ಮುಕ್ತ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಐಕ್ಯವಿಲ್ಲ ॥ ೨೯ ॥

೪೬೪

ಗುರುಸೇವೆಯ ಮಾಡುವಲ್ಲಿ ಉತ್ಪತ್ತಿಯ ಒಡಲೊಡೆಯಬೇಕು. ಲಿಂಗ ಪೂಜೆಯ ಮಾಡುವಲ್ಲಿ ಸುಖದುಃಖ ಭೋಗಂಗಳ ಸಕಲ ಬುಡಗೆಡೆಯ ಬೇಕು. ಜಂಗಮ ಪೂಜೆಯ ಮಾಡುವಲ್ಲಿ ಚತುರ್ವಿಧ ಫಲಪದಂಗಳ ಭಾವ ನಷ್ಟವಾಗಬೇಕು ತ್ರಿವಿಧವ ತ್ರಿವಿಧದಿಂದ ಕಳೆದು ತ್ರಿವಿಧವ ತ್ರಿವಿಧದಿಂದ ಅರಿದು ತ್ರಿವಿಧವ ತ್ರಿವಿಧದಿಂದ ಕೂಡಿ ಬೆಳಗಿಂಗೆ ಬೆಳಗು ಒಳಗಾದಂತೆ ಷಟ್ಸ್ಥಲ ಭಾವ ಲೇಪವಾಯಿತ್ತು ಪ್ರಾಣಲಿಂಗದ ಸಂಗವ ಮಾಡಲಾಗಿ. ಇಂತೀ ಗುಣವ ತಿಳಿದು ನೋಡಲಾಗಿ ಐಕ್ಯವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿಜಭಾವದ ಬೆಳಗು ॥ ೩೦ ॥

೪೬೫

ಜಲಮಣಿಯ ಬೆಡಗನರಿಕ್ಕಬಹುದೆ ? ಬಯಲ ಬಂಧಿಸಬಹುದೇ ? ಒಲುಮೆಯ ರಸಿಕಕ್ಕೆ ಸಲೆ ನಿಲಯ ಉಂಟೇ ? ಇದು ಸಲ್ಲಲಿತ. ಇದರ ಬಲುಮೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

೪೬೬

ಜೀವನೆಂಬ ವೃಕ್ಷದಿಂದ ಆತ್ಮನ ಭೇದಿಸಿ ಪರಮಾತ್ಮನೆಂಬ ಸಕೀಲವ ಕಂಡು, ಅರಿವು ಕುರುಹುಗೊಂಡು ಆ ಅರಿವು ಇದಿರೆಡೆಗೆಟ್ಟಲ್ಲಿ ಎಣ್ಣೆ ಬತ್ತಿ ತೀರಿದ ಮತ್ತೆ ಬೆಳಗೆಂಬುದು ನಷ್ಟ. ಅದು ಸಾಕಾರದ ಮಾತಿನ ಮಾಲೆಯಲ್ಲಿ ಅದು ಮೂರ್ಛೆ, ಅಮೂರ್ಛೆ, ಅದು ಅರಿವಿನ ಮರವೆ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡಿದ ಸೂಚನೆ ॥ ೩೨ ॥

೪೬೬

ಜ್ಞಾತೃವಿನ ಚಕ್ಷುವಿಂದ ಕಾಬಲ್ಲಿ ಜಗದ ರೂಪ. ಜ್ಞಾನ ಚಕ್ಷುವಿನಲ್ಲಿ ಕಾಬ ಸ್ವಪ್ನಂಗಳು, ಜ್ಞೇಯ ಚಕ್ಷುವಿನಲ್ಲಿ ಕೂಡಿ ಕಾಬ ಸುಖಂಗಳು ಇಂತೀ ತ್ರಿವಿಧ ದೃಷ್ಟಂಗಳ ಕಾಬುವೆಲ್ಲವು ಜ್ಞಾತೃವಿನಲ್ಲಿ ಉಪದೃಷ್ಟ, ಜ್ಞಾನವಲ್ಲಿ ಸ್ವಪ್ನದೃಷ್ಟ, ಜ್ಞೇಯದಲ್ಲಿ ಕೂಟ ದೃಷ್ಟನಾಗಿ ಕಾಬುದು ತನುತ್ರಯದ ಭೇದವೋ? ಆತ್ಮತ್ರಯದ ಭೇದವೋ? ಆತ್ಮನೊಂದೆಂದಡೆ ಘಟ ಪರಿಕರಂಗಳಾಗಿ ತೋರುತ್ತಿಹವಾಗಿ ಆತ್ಮನ ಏಕವೆನ್ನಬಾರದು. ಆತ್ಮನ ಹಲವನೆಂದಡೆ ಮೃದು ಕಠಿಣ ಶೀತ ಉಷ್ಣಾದಿಗಳಲ್ಲಿ ಹೆಚ್ಚು ಕುಂದಿಲ್ಲದೆ ಆತ್ಮಂಗೆ ಒಂದೇ ಭೇದವಾಗಿ ತೋರುತ್ತಿಹುದಾಗಿ ಹಲವೆನಬಾರದು. ಇಂತೀ ಘಟ ಭೇದವನರಿತು ಆತ್ಮನ ಸುಖದುಃಖವನರಿತು ಭಕ್ತಿಗೆ ಸತ್ಯ, ವಿರಕ್ತಿಗೆ ಮಲತ್ರಯ ದೂರ, ಸರ್ವಜೀವಕ್ಕೆ ದಯ, ಹೆಚ್ಚು ಕುಂದಿಲ್ಲದೆ ನಿಶ್ಚಯವಾಗಿ ನಿಂದ ನಿಶ್ಚಿಂತಾಂಗನೇ ಷಟ್ಸ್ಥಲ ಬ್ರಹ್ಮಿ, ಸರ್ವಸ್ಥಲಭರಿತ, ಸರ್ವಾಂಗಲಿಂಗಿ, ಆತ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೆ ॥ ೩೩ ॥

೪೬೭

ತನುವಿಂಗೆ ಲಿಂಗಬಾಹ್ಯವಾಗ ಕಂಕುಳ ಕೂಸೇ? ಮನಕ್ಕೆ ಲಿಂಗಬಾಹ್ಯವಾಗ ತೊಂಡಿನ ದನವೇ? ಕಂಡ ಕಂಡವರಂಗದಲ್ಲಿ ಹಿಂಗಿಹೆನೆಂದರೆ ಬಂಧುಗಳ ಮನೆಯ ಆಂದಣಕಾರನೇ? ಇವರಂದದ ಮಾತು ಸಾಕು. ಲಿಂಗವಿಪ್ಪೆಡೆಯ ಹೇಳಿಹೆ ಕೇಳಿರಣ್ಣಾ ಸುಖಿಯಲ್ಲದೆ ದುಃಖಿಯಲ್ಲದೆ ಆಗಿಗೆ ಮನಗೊಡದೆ ಚೇಗೆಗೆ ದುಃಖಿತನಾಗದೆ ಕಂಡಕಂಡವರಲ್ಲಿ ಬಂಡುಗೆಲಿಯದೆ, ತೊಂಡಿನ ಜೀವದನದಂತೆ ಬಂದು ಹೊಯ್ಯುವರನರಿಯದು ಇವರಂದ[1]ವನರಿದ ಮತ್ತೆ ಉಭಯಸಂದನಳಿದು ಒಂದೂ ಎನ್ನದಿಪ್ಪುದೆ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೩೪ ॥

೪೬೮

ತಾನಳಿದು ಮತ್ತೆ ತಾನಾದುದ ಕಂಡೆ. ತಾನಾಗಿ ಮತ್ತೆ ಅಳಿದುದ ಕಂಡೆ. ಏನೂ ಇಲ್ಲದೆ ನೀನಾಗಿ ಮತ್ತೆ ನಾನಾದುದ ಕಂಡೆ ನಿಃಕಳಂಕ ಮಲ್ಲಿಕಾರ್ಜುನಲಿಂಗದಲ್ಲಿ ನಿಶ್ಚಿಂತನಾಗಿ ॥ ೩೫ ॥

---

೧. ವದನವ.

೪೭೯

ದಯವೆ ಭಕ್ತಿಗೆ ಬೀಜ. ಭಕ್ತಿಯೆ ಮುಕ್ತಿಗೆ ಬೀಜ. ಮುಕ್ತಿಯೆ ಸತ್ಯಕ್ಕೆ ಬೀಜ. ಸತ್ಯವೆ ಫಲಕ್ಕೆ ಬೀಜ. ಫಲವೆ ಭವಕ್ಕೆ ಬೀಜ. ಇಂತೀ ಭೇದವ ಭೇದಿಸಿ ಶ್ರುತಿ ಸ್ಮೃತಿ ತತ್ತ್ವಂಗಳಿಂದ ಬೇಡಿದವಳಿಗೆ ಬಯಕೆಯ ಕೊಟ್ಟು ಬೇಡದವರಿಗೆ ನಿಜವನಿತ್ತು ಆಸುಕಷ್ಟವೆಂಬಿವ ಸಂಪಾದಿಸದೆ ಉಭಯದ ತೆರನ ಸಂದನಳಿದಿಪ್ಪ ಲಿಂಗಾಂಗಿಗೆ ಆತನಂಗಕಿನ್ನಾವುದು ಸರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

೪೮೦

ದೀರ್ಘಕ್ಕೆ ದೀರ್ಘವನಿರಿಸಿ ಸಾಗಿಸಿ ಮುರಿವನಂತೆ ನಾದಕ್ಕೆ ನಾದವ ನೈದಿಸಿ ಭೇದಿಸಿ ಕಾಬನಂತೆ ನಿನ್ನೊಡನೆ ಇದ್ದು ನಿನ್ನ ಕಂಡ ಮತ್ತೆ ಎನ ಗಿನ್ನೇತರ ಸಾಧನ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೪೮೧

ದ್ರವ್ಯದ ಸಂಗದಿಂದ ಆರೈಸಿಕೊಂಬ ಅಪ್ಪು ದ್ರವ್ಯವ ಕಳೆದುಳಿದು ಆರೈಸಿಕೊಂಬುದೇ ? ಅಂಗದಲ್ಲಿ ದ್ವಂದ್ವವಾದ ಆತ್ಮ ಬಂಧಕ್ಕೆ ಈಡಪ್ಪುದಲ್ಲದೆ ನಿರಂಗನ ಬಂಧಿಸಬಹುದೇ ? ಆ ನೀರು ಸಾರವ ಕೊಟ್ಟು ದ್ರವ್ಯಕ್ಕೆ ಮತ್ತೆ ತುಷಾರವಾಗಿ ಸಾರವನೆಯ್ದಿದಂತೆ ವಸ್ತುಕ್ರೀವಿದನಾಗಿ ನಿತ್ಯಾನಿತ್ಯವ ಹೊತ್ತಾಡಿ ಭಕ್ತಿಕಾರಣವಾಗಿ ಭಕ್ತಿ ಮುಕ್ತಿಯಾಗಿ ಮುಕ್ತಿ ನಿಶ್ಚಯವಾದಲ್ಲಿ ಪ್ರಾಣಲಿಂಗ ಸಂಬಂಧ. ಪ್ರಾಣಪ್ರಾಣವಾದಲ್ಲಿ[೧] ಲೇಪವಾದ ಮತ್ತೆ ಐಕ್ಯಾನು ಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೩೮ ॥

೪೮೨

ಧಾನ್ಯ ಹೊಯಿದಿದ್ದ ಘಟ ಅಳತೆಗೆ ಬಪ್ಪುದೆ ಆ ಧಾನ್ಯವಲ್ಲದೆ ? ಘಟ, ಕರ್ಮವನುಂಬುದೆ ಆತ್ಮನಲ್ಲದೆ ? ಹಿಪ್ಪೆಗೆ ರುಚಿಯುಂಟೇ ಮಧುರ ಕ್ಕಲ್ಲದೆ ? ಅವು ಒಂದೊಂದೊಡವೆ[೨] ಇಪ್ಪ ಸಂಸ್ಥಾನವಲ್ಲದೆ ಆ ಸ್ವಸ್ಥಾನವ ನಿಶ್ಚಯಿಸಿ ಅರಿದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೩೯ ॥

---

೧. ಪ್ರಣವದಲ್ಲಿ (ಬ). ೨. ಒಂದೆಂದೊಡೆ (ಅ) ಒಂದಾದಡೆ (ನ).

೪೭೩

ನಾನಾರೆಂಬುವನರಿವಲ್ಲಿಯೇ ಅರಿವನೊಳಕೊಂಡುದು. ಆ ಅರಿವು ಐಕ್ಯವಾದಲ್ಲಿಯೇ ಗುರುವ ಭಾವಿಸಲಿಲ್ಲ. ಆ ಗುರು ಐಕ್ಯವಾದಲ್ಲಿಯೇ ಲಿಂಗವನರಿದುದು. ಆ ಲಿಂಗ ಐಕ್ಯವಾದಲ್ಲಿಯೇ ಜಂಗಮವ ಮರೆದುದು. ಆ ಜಂಗಮ ಐಕ್ಯವಾದಲ್ಲಿಯೇ ತ್ರಿವಿಧವ ಮರೆದುದು. ತ್ರಿವಿಧವ ಮರೆದಲ್ಲಿಯೇ ತನ್ನ ಮರೆದುದು. ತನ್ನ ಮರೆದಲ್ಲಿಯೇ ಇದಿರಿಟ್ಟುದನರಿದುದು. ಮತ್ತೆ ಅರಿದು ಮರೆಯಲಿಲ್ಲ. ಮರೆದು ಅರಿಯಲಿಲ್ಲ. ತೆರಹಿಲ್ಲವಾಗಿ ಭಾವಿಸಿ ಕಂಡಿಹೆನೆಂಬ ಭ್ರಮೆ ಎಲ್ಲಿಯದೋ ? ಪೂಜಿಸಿ ಕಂಡಿಹೆನೆಂಬ ಕ್ರಿಯೆ ಎಲ್ಲಿಯದೋ ? ಹೂವು ಬಲಿದು ಕಾಯಾಗಬೇಕಲ್ಲದೆ ಕಾಯಿ ಬಲಿದು ಹೂವಾಗಬಾರದು. ಹಣ್ಣು ಬಲಿದು ಬಣ್ಣವಹುದಕ್ಕೆ ಮೊದಲೆ ಕೊಂಬೆ ಮುರಿಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಐಕ್ಯವಾದ ಶರಣಂಗೆ ॥ ೪೦ ॥

೪೭೪

ನಿನ್ನಿರವು, ನಿನ್ನನರಿವನ ಇರವು ವ್ಯಾಪ್ತಿಕೆಯ ಚಕ್ರದಂತೆ. ನಿನ್ನನರಿವನ ಇರವು ತರು ಸಾರದ ಹಿಮದಾಶ್ರಯದಂತೆ. ನಿನ್ನನರಿವನ ಇರವು ಲೋಹದ ವಹ್ನಿಯ ಸಂಗದಂತೆ. ಇದಾರಿಗು ಅಸಾಧ್ಯ ನೋಡಾ ಅಸಮಾಕ್ಷ ಅನಾಮಯ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

**ಅರ್ಥ:— ಲಿಂಗದ ಸ್ವರೂಪವ ಆ ಲಿಂಗವನಂಗದಲ್ಲಿ ಸಂಬಂಧವ ಮಾಡಿಕೊಂಡು ಸರ್ವಾಂಗಲಿಂಗ ಸಂಬಂಧವ ಮಾಡಿಕೊಂಡು ಚರಿಸುವ ಶರಣನ ಸ್ವರೂಪ ಹೇಗೆಂದಡೆ ಕುಲಾಲನು ತಿಗರಿಗೆ ಮಣ್ಣ ಮಾಡಿ ಕೋಲಿನಿಂದ ತಿರುಹಿ ಮನದಲ್ಲಿ ನೆನೆದು ಕೈಯಲ್ಲಿ ಹಿಡಿದಲ್ಲಿ ಹಲವು ರೂಪಿನ ಭಾಂಡಗಳಾಗುವ ಹಾಗೆ ಶರಣನು ಲಿಂಗ ಸಂಬಂಧವ ಮಾಡಿಕೊಂಡು ಚರಿಸುವಲ್ಲಿ ಆ ಲಿಂಗವು ತ್ರಿವಿಧಾಂಗದಲ್ಲಿ, ತ್ರಿವಿಧ ಲಿಂಗ ಷಡ್ವಿಧಾಂಗದಲ್ಲಿ, ಷಡ್ವಿಧಲಿಂಗ ಮೂವತ್ತಾರಂಗದಲ್ಲಿ, ಮೂವತ್ತಾರು ಲಿಂಗವಾಗಿ ಸಂಬಂಧವಾಗಿಪ್ಪುದು. ಅಂಗದಲ್ಲಿ ಲಿಂಗ ಸಂಬಂಧವ ಮಾಡಿಕೊಂಡು ಸಕಲ ಪದಾರ್ಥವ ಲಿಂಗಕ್ಕರ್ಪಿಸಿ ಆ ಪ್ರಸಾದವ ಸ್ವೀಕರಿಸುವ ಶರಣನ ನಿಲುಕಡೆಯು ವೃಕ್ಷದ ಬುಡಕ್ಕೆ ನೀರನೆರದಲ್ಲಿ ಆ ಉದಕ ಸಾರವು ಎಲೆ, ಹೀಚು, ಕಾಯಿ, ಹಣ್ಣುಗಳೊಳಗೆಲ್ಲ ವೇಧಿಸಿಕೊಂಡಿರುವ ಹಾಗೆ ಸಕಲಪದಾರ್ಥವ ಲಿಂಗಕ್ಕರ್ಪಿಸಿ ಆ ಲಿಂಗ ಪ್ರಸಾದವ ಸ್ವೀಕರಿಸುವ ಶರಣನ ಪ್ರಸಾದ ತೃಪ್ತಿಯು ತ್ರಿವಿಧಲಿಂಗ, ಷಡ್ವಿಧಲಿಂಗ, ಮೂವತ್ತಾರು ಲಿಂಗಂಗಳೆಲ್ಲಕ್ಕು ತೃಪ್ತಿಯಾಗುತ್ತಿಹುದು. ಸುವರ್ಣಕಠ್ಯಿ ಅಥರ**

**ಙಂಗಳಿಗೂ ಭಿನ್ನವಿಲ್ಲದಿರುವ ಹಾಗೆ, ಕಾದ ಕಬ್ಬುನಕ್ಕೂ ಅಗ್ನಿಗೂ ಭಿನ್ನವಿಲ್ಲದಿರುವ ಹಾಗೆ ಶರಣಂಗೂ ಲಿಂಗಕ್ಕೂ ಭಿನ್ನವಿಲ್ಲದಿಪ್ಪುದು. ಇಂತಪ್ಪಾಚರಣೆ ಎಲ್ಲಕ್ಕು ಅಶಕ್ಯ ಕಂಡ್ಯಾ ಬೆಸನಾದ ಲೋಚನವನುಳ್ಳ ಸಂಸಾರಾದಿ ರೋಗರಹಿತವಾದ ಎಲೇ ಶಿವನೇ ಎಂಬುದರ್ಥ.**

೪೭೫

ನೇಮವ ಮಾಡುವರೆಲ್ಲರು ಬ್ರಹ್ಮನ ಪಾಶಕ್ಕೊಳಗಾದರು. ನಿತ್ಯವ ಮಾಡುವರೆಲ್ಲರು ವಿಷ್ಣುವಿನ ಪಾಶಕ್ಕೊಳಗಾದರು. ಜಪವ ಮಾಡುವರೆಲ್ಲರು ರುದ್ರನ ಪಾಶಕ್ಕೊಳಗಾದರು. ತಪವ ಮಾಡುವರೆಲ್ಲರು ರತಿಯ ಪಾಶಕ್ಕೊಳಗಾದರು. ಇಂತಿವು ಮೊದಲಾಗಿ ನಾನಾ ಕೃತ್ಯವ ಮಾಡುವ ಸಂಕಲ್ಪ ಜೀವಿಗಳೆಲ್ಲರು ನಾನಾ ಯೋನಿಯಲ್ಲಿ ಬಪ್ಪುದಕ್ಕೆ ತಮ್ಮ ತಾವೇ ಲಕ್ಷವಿಟ್ಟುಕೊಂಡರು. ಅಲಕ್ಷ್ಯ ಅತೀತ ಅನಾಮಯ ಅಮಲ ಅದ್ವಯ ಕಾಲಭೇದಚ್ಛೇದನಕುಠಾರ ನಾನಾ ಶಾಸ್ತ್ರ ನಿರ್ಲೇಪ ಸುಕೃತ್ಯ ವನದಾವಾನಲ ನಿಷ್ಕಾರಣ ಮೂರ್ತಿ ಸಹಜಭರಿತಂಗೆ ಹಿಡಿಯಲಿಲ್ಲವಾಗಿ ಬಿಡಲಿಲ್ಲ. ಅರಿಯಲಿಲ್ಲವಾಗಿ ಅರಿದೆನೆಂಬ ತೆರಹಿಲ್ಲವಾಗಿ ಮತ್ತೆ ಕುರುಹಿನಿಂದ ಕಂಡ ಅರಿಕೆ ಇನ್ನೇಕೋ ? ಸಿಪ್ಪೆಯ ಕಳೆದು ಸುಭಿಕ್ಷವ ಸೇವಿಸಿ ಬಿತ್ತನಳಿದುದೆ ನಿತ್ಯ. ಆ ನಿತ್ಯವ ಕಳೆದು ಮತ್ತೇನು ಎನ್ನದಿಪ್ಪುದೆ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೪೭೬

ಪುಷ್ಪಗಂಧದಂತೆ ಪ್ರಾಣಲಿಂಗ ಭಾವ. ನೀರು ಗಂಧದಂತೆ ಇಷ್ಟಲಿಂಗ ಭಾವ. ಇಂತೀ ನಾಲ್ಕರ ಯೋಗ ಕೂಡಿದಲ್ಲಿ ಶರಣಸ್ಥಲ ಭಾವ. ಇಂತೀ ಐದರ ಭಾವವನವಗವಿಸಿ ನಿಂದ ಐಕ್ಯಸ್ಥಲಂಗೆ ಅವಧಿಗೊಡಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೩ ॥

೪೭೭

ಪೃಥ್ವಿಯ ಅಂಗ ಭಕ್ತನಾವಲ್ಲಿ ಸರ್ವಸಮಾಧಾನಿಯಾಗಿ ಭೂತಹಿತನಾಗಿರಬೇಕು. ಅಪ್ಪುವಿನಂಗ ಮಾಹೇಶ್ವರನಾದಲ್ಲಿ ಮಲನಿರ್ಮಲವೆನ್ನದಿರಬೇಕು. ತೇಜದಂಗ ಪ್ರಸಾದಿಯಾದಲ್ಲಿ ಜಿಗುಪ್ಸೆ ಸುಖೇಚ್ಛೆ[೧]ಯನರಿಯದಿರ

೧. ಶಿಖಿಚ್ಛೆ (ಕ), (ಶಿಖಿಚ್ಛೆ=ದೊಡ್ಡತನದ ಆಶೆ?)

ಬೇಕು. ವಾಯುವಂಗ ಪ್ರಾಣಲಿಂಗಿಯಾದಲ್ಲಿ ಸುಗುಣ ದುರ್ಗುಣಂಗಳ ನರಿಯದಿರಬೇಕು. ಆಕಾಶದಂಗ ಶರಣನಾದಲ್ಲಿ ಲೇಖ ಅಲೇಖಂಗಳನರಿಯ ದಿರಬೇಕು. ಮಹದಾಕಾಶದಂತೆ ಐಕ್ಯನಾದಲ್ಲಿ ಸುರಾಳ ನಿರಾಳಂಗಳನರಿಯ ದಿರಬೇಕು. ಇಂತೀ ಷಟ್ಸ್ಥಲವ ಒಂದ ನೆಮ್ಮಿ ಒಂದ ವೇಧಿಸಬೇಕು. ವೇಧಿಸು ವನ್ನಕ್ಕ ವಿರಳನಾಗಿ ವೇಧಿಸಿ ನಿಂದಲ್ಲಿ ಅವಿರಳನಾಗಿ ತತ್ತ್ವಮಸಿ ಎಂಬ ಭಿತ್ತಿಯ ಮೆಚ್ಚದೆ ನಿಶ್ಚಿಂತನಾಗಿರಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥೪೪॥

೪೭೮

ಪೃಥ್ವಿಯೊಳಗಿದ್ದು ಸಾಯದಿರಬೇಕು. ಅಪ್ಪುವಿನೊಳಗಿದ್ದು ಚರಿಸ ದಿರಬೇಕು. ತೇಜದೊಳಗಿದ್ದು ಬೇಯದಿರಬೇಕು. ವಾಯುವಿನೊಳಗಿದ್ದು ಸಂಚರಿಸದಿರಬೇಕು. ಆಕಾಶದೊಳಗಿದ್ದು ಒಹುವರ್ಣಕ್ಕೆ ಅಲೇಖವಾಗಿರ ಬೇಕು. ಸಕಲ ಸುಖ ಭೋಗಂಗಳಲ್ಲಿದ್ದು ವಿರಾಗಿಯಾಗಿರಬಲ್ಲರೆ ಆರು ಸ್ಥಲ ಒಂದಾಯಿತ್ತು. ಒಂದರಲ್ಲಿ ಪಂಚವಿಂಶತಿ ತತ್ತ್ವ ಸಂದನಳಿದವು. ನಾಮ ರೂಪು ಕ್ರಿ ಎಂಬ ಭಾವದ ದ್ವಂದ್ವವಳಿದು ನಿಜ ಒಂದೇ ಎಂಬುದಕ್ಕೆ ತೆರಪಿಲ್ಲದೆ ಶರಣ ನಾದೆಯಲ್ಲಾ, ಶರಣ ಸನ್ಮತನಾಗಿ ಐಕ್ಯನಾದೆಯಲ್ಲಾ, ನಿಃಕಳಂಕ ಮಲ್ಲಿ ಕಾರ್ಜುನಾ ॥ ೪೫ ॥

೪೭೯

ಪೃಥ್ವಿ ಶೂನ್ಯ, ಅಪ್ಪು ಶೂನ್ಯ, ತೇಜ ಶೂನ್ಯ, ವಾಯು ಶೂನ್ಯ, ಆಕಾಶ ಶೂನ್ಯ ಇಂತೀ ಪಂಚ ಭೌತಿಕ ಶೂನ್ಯದ ಗುಣದ ವಿವರದ ಪರಿ ಭೇದದ ದೇವರ ಸದ್ಯೋಜಾತ ಮುಖದಲ್ಲಿ ಉದಕ ಉರಿದು ಬೆಂಕಿ ನುಂಗಿತ್ತ ಕಂಡೆ. ನಿಧಾನ ನೆಲನ ನುಂಗಿತ್ತ ಕಂಡೆ. ಮಡಕೆ ಕರಗಿ ಬೆಣ್ಣೆ ಉಳಿಯಿತ್ತು ನೋಡಾ ! ಉಳಿದುದ ಮತ್ತೆ ಹೇಳಲುಂಟೆ ಅಯ್ಯಾ ? ಬೀಜದೊಳಗಣ ವೃಕ್ಷ ಗಾಳಿಗೆ ಉರುಳಿ ಬೀಳುವ ತೆರನುಂಟೇ ? ಶಿಲೆಯೊಳಗಣ ಪಾವಕ ಸುಡ ಬಲ್ಲುದೆ ಅಯ್ಯಾ ? ಜೀವ ಸತ್ತು ಕಾಯವಳಿದ ಮತ್ತೆ ಕಾಯ ಸತ್ತು ಜೀವ ಉಳಿದ ಮತ್ತೆ ಕಾಬುದಿನ್ನೇನೊ ? ಕಾಯದ ಗುಣದಿಂದ ಜೀವವ ಮರೆದು ಕಾಬುದಿನ್ನೇನೊ ? ಜೀವ ಗುಣದಲ್ಲಿ ಕಾಯದ ಜೀವದ ಹಂಗಿನೊಳಗಿದ್ದು ಸಾವಲಿಂಗವ ದೇವರೆಂದು ಪೂಜಿಸುತ್ತಿಪ್ಪರು ನೋಡಾ. ಕರ್ತಾರನ ಕಮ್ಮಟ ದಲ್ಲಿ ಚಿಕ್ಕಮಕ್ಕಳ ಕೈಯ ಇಕ್ಕುಗೋಳಿನೊಳಗಾಯಿತ್ತು ನೋಡಾ ನಿತ್ಯ

ತೃಪ್ತನೆಂಬ ಲಿಂಗ ಸಿಕ್ಕಿತ್ತಯ್ಯ ಭವದಾಶೆಗೊಡಲಾಗಿ ನಿತ್ಯತ್ವನರಿಯದೆ ಇಷ್ಟದೊಳಗೆ ಸಿಕ್ಕಿ ಕೆಟ್ಟರಲ್ಲ. ಜಗವೆಲ್ಲ ಕೆಟ್ಟ ಕೇಡ ನೋಡಾ ತುಟ್ಟ ತುದಿಯಲ್ಲಿ ನಿಂದು ಬಿಟ್ಟೆನಯ್ಯಾ ಮರ್ತ್ಯದ ಮಹಗಣಂಗಳ ಕಟ್ಟಿಗೆಯ ಹೊತ್ತು ಸತ್ತವರಿಗಿನ್ನೆತ್ತಣ ಮುಕ್ತಿಯೋ ? ನಿಃಕಳಂಕ ಮಲ್ಲಿಕಾರ್ಜುನಾ ॥ ೪೬ ॥

೪೮೦

ಪಂಚ ಭೌತಿಕದಿಂದ ಬಂದ ತನುವಿನಲ್ಲಿ ಪಂಚಮುಖವನರಿವುದೇ ದೃಷ್ಟ. ಸಂಚಿತವ ಹರಿದು ವಸ್ತುವನರಿವುದಕ್ಕೆ ಸಂಚಾರವ ಹಿಂಗಿ ಅರಿವುದೇ ದೃಷ್ಟ. ಈ ಉಭಯದ ಸಂಚವನರಿದು ಮುಂಚಬಲ್ಲಡೆ ಆತನೇ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೪೮೧

ಫಲ ಅಪ್ಪುವ ನುಂಗಿ, ಅಪ್ಪು ಫಲವ ನುಂಗಿ, ಒಪ್ಪಿ ಘಟ್ಟಿಗೊಂಡ ಭೇದವೆ ಭಕ್ತಿಜ್ಞಾನ. ರುಚಿಯ ಜಿಹ್ವೆ ನುಂಗಿ, ಜಿಹ್ವೆಯ ರುಚಿ ನುಂಗಿ ಈ ಉಭಯದ ಭೇದವೆಲ್ಲಿಯೂ ಭಿನ್ನವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೮ ॥

೪೮೨

ಫಲದ ಸವಿಯ ವೃಕ್ಷವರಿದಡೆ ಕೊಡುವದೇ ಇದಿರಿಗೆ ? ಅಶನದ ಸವಿಯ ಕುಡಿಕೆಯರಿದಡೆ ಮಿಗುವದೇ ಅನ್ನ ? ಲಿಂಗಸಂಗಿಯಾದಡೆ ಕಂಡ ಕಂಡವರಲ್ಲಿ ಉಲಿವನೇ ? ನಿರಂಗ ಸಂಗವನೈದಿದ ಮಂಗಲೋತ್ತರನಂತೆ ಇದ ರಂದದ ಸಂಗ ಇದೇ ಹಿಂಗದ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೪೯ ॥

೪೮೩

ಬಲ್ಲವರಾದಡೆ ಗೆಲ್ಲಸೋಲಕ್ಕೆ ಹೊರಲೇಕಯ್ಯಾ ? ಮಹದಲ್ಲಿ ಅನುವನರಿತವಂಗೆ ಇಂತೀ ಹೋರುವ ಹೋರಟೆ ಏಕಯ್ಯಾ ? ಗೆಲ್ಲಗೂಳಿತನವಲ್ಲದೆ ಬಲ್ಲವರೆಂತಾದಿರಣ್ಣಾ ? ಅರಿಕೆಗೊಂಡವನೊಡಲು ನೋಂದಿಸಿದ ದೀಪದ ಕೊನೆಯ ಮೊನೆಯಂತೆ, ಶಿಶು ಕಂಡ ಕನಸಿನಂತೆ, ಪಶುವಿನ ಉದರದಲ್ಲಿ ಸೋಂಕಿದ ಶತವೇಧಿಯಂತೆ ಇದು ಲಿಂಗೈಕ್ಯವು. ಮುಟ್ಟಲಿಲ್ಲವಾಗಿ ಒಡಲಿಲ್ಲ. ಒಡಲಿಲ್ಲವಾಗಿ ನೆಳಲಿಲ್ಲ ನಿಃಕಳಂಕ ಮಲ್ಲಿಕಾರ್ಜುನನು ತಾನೆಯಾಗಿ ॥ ೫೦ ॥

೪೮೪

ಬೆಳಗಿಗೆ ಬೆಳಗನಿತ್ತಡೆ ನೋಡಬಲ್ಲವರಾರು? ಸವಿಗೆ ಸ್ವಾದವನಿಕ್ಕಿದಡೆ ಉಣಬಲ್ಲವರಾರು ? ಜ್ಞಾನವ ಹೇಳಿದಡೆ ಕೇಳಬಲ್ಲವರಾರು? ಕರ್ತ ನೀನಾಗಿ ಇದರಚ್ಚಿಗವ ಬಿಡಿಸಾ ನಿಃಕಳಂಕ ಮಲ್ಲಿಕಾರ್ಜುನಾ ॥ ೫೧ ॥

೪೮೫

ಭಕ್ತದೇವನಿಗೆ ನೀರು ತಾವರೆಯ ತೆರನಂತೆ, ಭಕ್ತದೇವನಿಗೆ ಕ್ಷೀರದ ನೀರಿನಂತೆ ನನಗೆ ನಿನಗೆ ಬೇರೊಂದು ನಿಜ ಉಂಟೇ ? ನಿಃಕಳಂಕ ಮಲ್ಲಿಕಾರ್ಜುನಾ ॥ ೫೨ ॥

೪೮೬

ಮಜ್ಜನಕ್ಕೆರವ ಮಹಿಮರೆಲ್ಲರು ಭೋಗಕ್ಕೊಳಗಾದರು. ಜ್ಞಾನವ ಹೇಳುವ ಹಿರಿಯರೆಲ್ಲರು ಉಂಟಿಲ್ಲವೆಂಬ ಸಂದೇಹಕ್ಕೊಳಗಾದರು. ಏನಿಲ್ಲವೆಂಬ ಜ್ಞಾನಿಗಳೆಲ್ಲರು ಶೂನ್ಯಕ್ಕೊಳಗಾದರು. ಈ ಮೂರರಂದವ ಹಿಂಗಿ ಇಂತಿವ ನೇನೂ ಎನ್ನದೆ ನಾನೀನೆಂಬುಭಯವನಳಿದವಂಗಲ್ಲದೆ ಲಿಂಗೈಕ್ಯವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೪೮೭

ಮುಚ್ಚಿ ಕಾಬುದು ಸ್ವಪ್ನದ ಇರವು. ತೆರದು ಕಾಬುದು ಜಾಗ್ರದ ಇರವು. ಸುಷುಪ್ತಿಯಲ್ಲಿ ಕಾಬುದು ಚಿತ್ತುವಿನಿರವು. ಚಿತ್ತಿನ ನಾಮ ನಷ್ಟ ವಾಗಿ ಸತ್ತ ಮತ್ತೆ ನಿಶ್ಚಯದಿರವು ನಿಃಕಳಂಕ ಮಲ್ಲಿಕಾರ್ಜುನಾ ॥ ೫೪ ॥

೪೮೮

ಮೂರು ಸ್ಥಲದಲ್ಲಿ ವೇಧಿಸಿ ಆರು ಸ್ಥಲದಲ್ಲಿ ಕೂಡಿ ಇಪ್ಪತ್ತೈದು ಸ್ಥಲವನವಗವಿಸಿ ನೂರೊಂದರಲ್ಲಿ ಭಾವಿಸಿ ನೂರ ಕಳೆದು ಒಂದರಲ್ಲಿ ಐಕ್ಯ ವಾಗಿ ನಿಂದ ಮತ್ತೆ ಉಭಯದ ಸುಳುಹು ಅಡಗಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೫೫ ॥

೪೮೯

ಮಂಜಿನ ರಂಜನೆಯ ನೀರಿಂಗೆ ತಟಾಕ ತುಂಬಿದುದುಂಟೇ ? ಮರೀಚಿಕಾ ಜಲದ ತೆರೆಯ ತಳ್ಳಿ ನೀರಕೊಂಡೆಹೆನೆಂಬುವರುಂಟೇ ? ಅಂಗಸ್ಥಲವಾರು, ಉಭಯ ಲಿಂಗಸ್ಥಲ ಮೂರು, ಏಕಪ್ರಾಣತತ್ತ್ವ ಇಪ್ಪತ್ತೈದು, ಪೂರ್ವ

ಉಭಯವನೆಯ್ದಿ ಉತ್ತರಕ್ಕೆ ನೂರೊಂದೆಂದಲ್ಲಿ ಕಲ್ಪಿತವ ಕಂಡು ಅಕಲ್ಪಿತ ನಾಗಬೇಕು ಅದು ಸ್ಥಲಭರಿತ ನಿರ್ದೇಹ ಐಕ್ಯಸ್ಥಲ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

೪೯೦

ಮುಂದಕ್ಕರಿದು ಕಂಡಿಹೆನೆಂದೆಂಬಾಗ ತನು ಶಿಲೆಯ ನೆಲೆ ಮನೆಯೇ ? ತಾ ನಡೆದು ಕಂಡಿಹೆನೆಂಬಾಗ ವಸ್ತು ಹೋದ ಹಾದಿಯೇ ? ಇಂತೀ ಉಭಯವ ನರಿದು ಕಾಬುದ ಕಂಡು, ಕೇಳುವಲ್ಲಿ ಕೇಳಿ, ಉಂಡಲ್ಲಿ ಉಂಡು, ಭಾವಿಸಿದಲ್ಲಿ ಭಾವಿಸಿ, ಹೊಳೆಯ ದಾಂಟಿದ ಮತ್ತೆ ಹರುಗೋಲದೇಕೆ ನಿಃಕಳಂಕ ಮಲ್ಲಿ ಕಾರ್ಜುನಾ ॥ ೫೭. ॥

೪೯೧

ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಮಿಕ್ಕವರಿಗೆ ಲೆಕ್ಕಕ್ಕೆ ಕಡೆ ಇಲ್ಲದೆ ಮಾಡಿ ಹೊಕ್ಕ ಭಕ್ತಿಯಲ್ಲಿ ಲೆಕ್ಕ ತಪ್ಪದೆ ಅವತಾರ ದಲ್ಲಿ ಬಂದು ಮರ್ತ್ಯಕ್ಕೆ ಬಸವೇಶ್ವರನೆಂಬ ಗಣನಾಥನಾಮವಂ ಪಡೆದು ಭಕ್ತರಿಗೆ ಮುಖ್ಯನಾಗಿ ಭಕ್ತಿಯ ತೋರಿ ಸತ್ಯದ ಬಟ್ಟೆಯಂ ಕಾಣದೆ ಚಿದ್ಘನ ಲಿಂಗವ ಪೊಗಳಲರಿಯದೆ ಬದ್ಧಕತನವನು ಸುಬದ್ಧವ ಮಾಡದೆ ಶುದ್ಧ ಶೈವ ಕಪ್ಪಡಿಯ ಸಂಗಮನಾದನಲ್ಲಿ ಐಕ್ಯವಾದ ಚಿದ್ರೂಪ ಚಿತ್ರಕಾಶ ಘನಲಿಂಗ ಕೈಯ್ಯಲ್ಲಿದ್ದಂತೆ ಹೊದ್ದಿದನೇಕೆ ರುದ್ರಮೂರ್ತಿಯು? ಇವ ರಜತಾದ್ರಿ ಯಲ್ಲಿದ್ದು ಸುಬದ್ಧನಾಗಿ ಪ್ರಳಯವಾಯಿತ್ತು ರುದ್ರಲೋಕವೆಲ್ಲ. ರುದ್ರಗಣಂಗ ಳೆಲ್ಲರು ಮರ್ದನಂಗೈದಲ್ಲಿ ಸುದ್ದಿಯ ಹೇಳುವನಾರನು ಕಾಣೆ. ಇನ್ನಿದ್ದವರಿಗೆ ಬುದ್ಧಿ ಇನ್ನಾವುದೋ ? ಶುದ್ಧ ಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ, ವೀರಶೈವವನಾಧರಿಸದೆ, ಆದಿಶೈವವ ನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು ಕಂಗಳಿನಲ್ಲಿ ನಿಂದು ಮನದಲ್ಲಿ ಸಿಂಹಾಸನಂಗೈದು ಸಕಲೇಂದ್ರಿಯವ ಮರೆದು ಕಾಯದ ಜೀವದ ಹೊಲಿ ಗೆಯ ಬಿನ್ನಾಣದಿಂ ಬಿಚ್ಚಿ ಬೇರೊಂದ ಅರಸಲಿಲ್ಲವಾಗಿ ಬಯಕೆ ಅರತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

೪೯೨

ಲಿಂಗಕ್ಕೊಂದು ತನಗೊಂದೆಂಬಾಗ ಆ ಅಂಗ ಲಿಂಗ ವಿರೋಧಿಯೇ ? ಆ ಇಷ್ಟಲಿಂಗವ ಆತ್ಮನ ನೆಲೆಯಲ್ಲಿ ಅರಿದಿಹೆನೆಂಬುದು ಇಂಬಲ್ಲವೆ ? ಇವು ಕುಲ ಛಲ ವಾಗ್ವಾದದ ಮಾತಲ್ಲದೆ ಬಲಿಕೆವಂತರ ನೀತಿಯಲ್ಲ. ಕೊಂಬಲ್ಲಿ ಕೊಡುವಲ್ಲಿ ಉಡುವಲ್ಲಿ ತೊಡುವಲ್ಲಿ ಲಿಂಗವನೊಡಗೂಡಿಪ್ಪುದು ತ್ರಿಶುದ್ಧಾತ್ಮನ ಇರವು. ಹೀಗಲ್ಲದೆ ಪತ್ರದ ಚಿತ್ರದಲ್ಲಿ ಎತ್ತಿ ನೋಡಿದಡೆ ತತ್ತು ಗೊತ್ತಾಗಿಪ್ಪುದು ನಿಃಕಳಂಕ ಮಲ್ಲಿಕಾರ್ಜುನಾ ॥ ೫೯ ॥

೪೯೩

ವರ್ತನ ಶುದ್ಧವಾದಲ್ಲಿ ಭಕ್ತಿಸ್ಥಲವಾಯಿತ್ತು. ಕ್ರೀಭಾವ ಶುದ್ಧವಾದಲ್ಲಿ ಮಾಹೇಶ್ವರ ಸ್ಥಲವಾಯಿತ್ತು. ನಡೆನುಡಿ ಶುದ್ಧವಾಗಲಾಗಿ ಪ್ರಸಾದಿಸ್ಥಲವಾಯಿತ್ತು. ಕಾಯ ಜೀವದ ಭೇದವನರಿಯಲಿಕ್ಕೆ ಪ್ರಾಣಲಿಂಗಿಯ ಸ್ಥಲವಾಯಿತ್ತು. ಸಕಲವನರಿದು ಹಿಡಿದು ಬಿಡುವಲ್ಲಿ ಶರಣಸ್ಥಲವಾಯಿತ್ತು. ಇಂತೀ ಐದರಲ್ಲಿ ಎರಡಳಿದು ಭೇದವಿಲ್ಲದೆ ನಿರಾಕರಿಸಿ ನಿಂದಲ್ಲಿ ಐಕ್ಯಸ್ಥಲವಾಯಿತ್ತು. ಇಂತೀ ಆರು ಸ್ಥಲವನರಿದು, ಮತ್ತಿದರೊಳಗಾದ ನಾನಾ ಸ್ಥಲಂಗಳ ತಿಳಿದು ನಿಂದ ಸಂಗನ ಬಸವಣ್ಣಂಗೆ ಚೆನ್ನಬಸವಣ್ಣಂಗೆ ಪ್ರಭು ಮಡಿವಾಳಯ್ಯಂಗೆ ನಮೋ ನಮೋ ಎನುತ್ತಿದ್ದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೦ ॥

೪೯೪

ವಸ್ತುವ ಕುರಿತು ಇಷ್ಟವ ನೋಡಬೇಕಲ್ಲದೆ ಇಷ್ಟವ ಕುರಿತು ವಸ್ತುವ ನೋಡಬಹುದೇ ? ಹಿಡಿತೆಯ ಹಿಡಿದು ಇರಿಯಬೇಕಲ್ಲದೆ ಮೊನೆಯ ಹಿಡಿದು ಇರಿವವರುಂಟೇ ? ನೆನಹು ರೂಪಿನಲ್ಲಿ ಅನುಕರಿಸಬಹುದಲ್ಲದೆ ರೂಪು ನೆನಹಿನಲ್ಲಿ ಅನುಕರಿಸಬಹುದೇ ? ತಿಟ್ಟವ ಲಕ್ಷಿಸುವುದು ಲೆಕ್ಕಣಿಕೆಯಲ್ಲದೆ ಆ ತಿಟ್ಟ ಲೆಕ್ಕಣಿಕೆಯ ಲಕ್ಷಿಸಬಹುದೇ ? ಇಂತೀ ದ್ವಂದ್ವವನರಿದು ಉಭಯದ ಸಂದಿನ ಬೆಸುಗೆ ಒಂದೆಂದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥೬೧॥

೪೯೫

ವಾದ್ಯ ಒಂದರಲ್ಲಿ ಬಹು ಸಂಚುಗಳ ಮುಟ್ಟಿ ತೋರುವುದು ಒಂದೋ, ಹಲವೋ ? ವೇಣು ಮುಹುರಿಗಳಲ್ಲಿ ಮೂವತ್ತೆರಡು ರಾಗ ಮಿಶ್ರಂಗಳ ಅರ

ವತ್ತು ನಾಲ್ಕರಲ್ಲಿ ಕೂಡಿ ನುಡಿವುದು ಒಂದೋ ಎರಡೋ ? ಆ ತೆರನಂತೆ ಪರಿಭಿನ್ನವಾಗಿ ಸ್ವಸ್ಥಾನಂಗಳಲ್ಲಿ ಮುಟ್ಟಿ ವೇಧಿಸಿಕೊಂಬ ವಸ್ತು ಒಂದಾದಲ್ಲಿ, ಅದು ಖಂಡನೆಯ ಪತ್ರದ ಚಂಡಿಕಾ[೧] ಕಿರಣದಂತೆ ಆ ಸಂಗವನರಿದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಭಿನ್ನರೂಪನಲ್ಲ ॥ ೬೨ ॥

೪೯೬

ಶುಕ್ತಿ ಕರಂಡದಲ್ಲಿ ಬಿದ್ದ ಅಪ್ಪು ಶುಕ್ತಿಯ ಭೇದವೋ ? ಕರಂಡದ ಭೇದವೋ ? ಅಪ್ಪುವಿನ ಭೇದವೋ ? ಕಾಯದಲ್ಲಿದ್ದ ಭಾವ, ಭಾವದಲ್ಲಿದ್ದ ಜೀವ, ಜೀವದಿಂದ ಭಾವವಾಯಿತ್ತೋ ? ಭಾವದಿಂದ ಕಾಯವಾಯಿತ್ತೋ ? ಪಾಷಾಣವ ಕೂಡಿದ ರತ್ನ,[೨] ರತ್ನವ ಕೂಡಿದ ಬೆಳಗು, ಬೆಳಗು ರತ್ನದಿಂದ ಲಾಯಿತ್ತೋ ? ರತ್ನ ಶಿಲೆಯಿಂದಾಯಿತ್ತೋ ? ಇಂತೀ ಲಿಂಗ ತ್ರಿವಿಧ. ಇಂತೀ ಭಾವ ತ್ರಿವಿಧ. ಇಂತೀ ಜೀವ ತ್ರಿವಿಧ. ಇಂತೀ ತ್ರಿವಿಧ ಸ್ಥೂಲಂಗಳಲ್ಲಿ, ತ್ರಿವಿಧ ಸೂಕ್ಷ್ಮಂಗಳಲ್ಲಿ, ತ್ರಿವಿಧ ಕಾರಣಂಗಳಲ್ಲಿ, ಅಳಿವ ಉಳಿವ ಉಭಯವನರಿತು, ನೆನೆವುದು ನೆನಹಿಸಿಕೊಂಬುದು ಈ ಉಭಯವನರಿತು, ಉಭಯ ಒಂದಾದಲ್ಲಿ ಪ್ರಾಣಲಿಂಗ ಉಭಯ ಸಂಬಂಧ. ಉಭಯ ಲೇಪವಾದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೬೩ ॥

೪೯೭

ಸಕಲ ರೂಪೆಂದು, ನಿಃಕಲನಿರವಯವೆಂದು ಲಕ್ಷಿಸಿ ನುಡಿವಾಗ ಸಕಲವ ಸರಿವುದು ನಿಃಕಲವೋ ಸಕಲವೋ ? ಸಕಲವೇ ರೂಪಿಗೊಳಗಾದ ವಸ್ತು. ನಿಃಕಲವೆ ಒಡಲುಗೊಂಡ ವಸ್ತು. ಅದು ಸೂತ್ರದ ನೂಲಿನಂತೆ ಕಡೆಗಾಣಿಸಿ ನಿಂದಲ್ಲಿ ಬೊಂಬೆಗೆ ಹಾಹೆ ಉಂಟೇ ? ಅಂಗಕ್ಕೆ ಕರ್ಮವಿಲ್ಲ ಆತ್ಮಂಗಲ್ಲದೆ. ಈ ದ್ವಂದ್ವವ ಸುಸಂಗದಲ್ಲಿ ನಿಂದು ತಾ ನೋಡಲಾಗಿ ಅಂಗನಿರಂಗವೆಂಬುದು ಅಲ್ಲಿಯೇ ಅಡಗಿತ್ತು. ಅದೇ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ॥೬೪॥

೪೯೮

ಸಕಲ ಸುಖಭೋಗಂಗಳಲ್ಲಿದ್ದೂ ಇಲ್ಲದಾತನ ಆತ್ಮನ ಇರವು ಎಂತುಟೆಂದಡೆ ನೀರೆಣ್ಣೆಯಂತೆ, ಜಲವಾಳುಕದಂತೆ, ಉದಕ ಕಲ್ಲಿನಂತೆ, ಅಂಬುಜ ಪತ್ರದ ಬಿಂದುವಿನಂತೆ ಸಕಲ ವಿಷಯದಲ್ಲಿ ತನು ನೋಯದೆ ಮನವಳಿಯದೆ

---

೧. ಚಂದ್ರಿಕಾ (ಬ) ೨. ರತಿ (ಕ)

ಆತ್ಮಬಂಧವಿಲ್ಲದೆ, ಅಲೇಪನಾಗಿರಬಲ್ಲರೆ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ. ಇಷ್ಟವನರಿಯದಿರೆ ಅಭಿಲಾಷೆಗೆ ದೀಪವ ಬೆಳಗಿಂಗೆ ಲೇಸೆಂದು ಬಂದು ಬೀಳುವ ಕೀಟಕನಂತಾಗದೆ ಕಾಯ ಸುಖವ ಮೆಚ್ಚಿ ಕರ್ಮಕ್ಕೊಳಗಾಗದೆ ಜೀವಸರ್ವೇಂದ್ರಿಯಂಗಳಲ್ಲಿ ಲೋಲಿತನಾಗದೆ ಬಂಧಮೋಕ್ಷ ಕರ್ಮಂಗಳ ಅವು ಬಂದಬಂದ ಠಾವಿನಲ್ಲಿ ಇಂಬಿಟ್ಟು ಉಭಯದ ಸಂವಳಿಯ ಬಿಟ್ಟು ಬೇರೊಂದೆಂಬ ಉಭಯ ಬೇರಾಗದಿರೆ ಅದು ಬಿಡುಮುಡಿಯ ಭೇದ ಒಳಗಡಗಿದಾತನ ಅರಿ. ವೃಷ್ಟದ ಬೇರ ಮುಟ್ಟಬೇಡ ಮತ್ತರಿತು ಉಭಯದ ಮುಟ್ಟದಿದ್ದಡೆ ಪ್ರಾಣಲಿಂಗ ಸಂಬಂಧಿ. ಆ ಸಂಬಂಧ ಸಮಯಕ್ಕೆ ಹೊರಗಾದಲ್ಲಿಯೇ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೬೫ ॥

೪೯೯

ಸರ್ವಸಾವಧಾನಿಯ ಇರವು ಅನಲನ ಅನಿಲನ ತೆರನಂತೆ ಅಂಕುರ ಅಪ್ಪುವಿನ ತೆರನಂತೆ ಸಾರದ ಸವಿಯ ತೆರದಂತೆ ಆಲಿ ನೂಲಿನ ತೆರದಂತೆ ಭಾವಲಿಂಗೈಕ್ಯವು ಸ್ವಾನುಭಾವಾತ್ಮಕ ನಿಃಕಳಂಕ ಮಲ್ಲಿಕಾರ್ಜುನಾ ॥ ೬೬ ॥

೫೦೦

ಸೂತ್ರವನಾಡಿಸುವಂಗೆ ಅದೇತರ ಸತ್ವ ನೀತಿಗುಣವ್ಪೋ ಅದರೊಳಗಿಪ್ಪ ಧಾತುವಿನ ಗುಣವ್ಪೋ? ಆಡಿಸುವಾತನ ಗುಣವ್ಪೋ? ತಂತುನಿಂದ ಕಂಬದಾಶ್ರಯದ ಗುಣವ್ಪೋ? ಅದೇತರಿಂದರಿವೆ? ಒಂದನಹುದೆನ್ನಬಾರದು ಒಂದನಲ್ಲೆನ್ನಬಾರದು ಇದರ ಸಂದುಸಂಶಯವ ಬಿಡಿಸಾ ದ್ವಂದ್ವರಹಿತ ಸಹಜ ಭರಿತ ನಿಃಕಳಂಕ ಮಲ್ಲಿಕಾರ್ಜುನಾ ॥ ೬೭ ॥

೫೦೧

ಸ್ಥೂಲತನು ಸೂಕ್ಷ್ಮತನು ಕಾರಣತನು ಇಂತೀ ತನುತ್ರಯದ ಭೇದವನರಿಯಬೇಕಣ್ಣಾ! ಸ್ಥೂಲತನು ಗುರುವಿಂಗೆ ಭಿನ್ನ. ಸೂಕ್ಷ್ಮತನು ಲಿಂಗಕ್ಕೆ ಭಿನ್ನ-ಕಾರಣತನು ಜಂಗಮಕ್ಕೆ ಭಿನ್ನ. ನಾದ ಗುರುವಿನಲ್ಲಿ ಅಡಗಿತ್ತು. ಬಿಂದು ಲಿಂಗದಲ್ಲಿ ಅಡಗಿತ್ತು. ಕಳೆ ಜಂಗಮದಲ್ಲಿ ಅಡಗಿತ್ತು. ಮಹಾಘನ ವಸ್ತುವಿನಲ್ಲಿ ಲೀಯ್ಯವಾಯಿತ್ತು. ಆದ ಬಳಿಕ ಗುರುವಿಂಗೆ ತನು ಎಂಬುದಿಲ್ಲ. ಲಿಂಗಕ್ಕೆ ಮನವೆಂಬುದಿಲ್ಲ. ಜಂಗಮಕ್ಕೆ ಧನವೆಂಬುದಿಲ್ಲ. ಪ್ರಸಾದಕ್ಕೆ ಜಿಹ್ವೆ ಎಂಬುದಿಲ್ಲ. ಅನು

ಪರಿಮ ಘನದಲ್ಲಿ ನಿಂದು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿಮ್ಮನರಿಸಿ ಕೊಳ್ಳಿರಣ್ಣಾ ॥ ೬೮ ॥

೫೦೨

ಹಿಡಿದು ಬಿಟ್ಟರೆ ಪ್ರಮಾದ, ಪ್ರಮಥರಿಗೆ ದೂರ. ಬಿಡದಿದ್ದರೆ ಮಹ ಬೆಳಗಿಗೆ ದೂರ. ಹಿಡಿಯಬಾರದು ಬಿಡಬಾರದು. ಇಂತೀ ಲಿಂಗೈಕ್ಯವನಿನ್ನಾರಿಗೆ ಉಸುರುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೯ ॥

೫೦೩

ಹುಟ್ಟುವದಕ್ಕೆ ಹಂಗಿಗರಾದವರೆಲ್ಲರು ಬ್ರಹ್ಮನ ಲೋಕರು. ಸುಖವ ಮೆಚ್ಚಿ ಭೋಗಿಸುವರೆಲ್ಲರು ವಿಷ್ಣುವಿನ ಲೋಕರು, ನಾನಾರುಚಿಗೊಳಗಾಗಿ ಏನೆಂದರಿಯದೆ ಸಾವರೆಲ್ಲರು ರುದ್ರನ ಲೋಕರು. ರೂಪೆಂಬೆನೆ ಆಶೆಯ ಬಣ್ಣ. ನಿರೂಪೆಂಬೆನೆ ನಾನಾ ಯೋನಿಯ ಚಿಹ್ನ. ಚಿದ್ರೂಪೆಂಬೆನೆ ರುದ್ರನ ಅಂಶೀಭೂತ. ಇಂತಿವನೇನೂ ಎನ್ನದಿಪ್ಪುದೆ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೭೦ ॥

೫೦೪

ಹೇಮ ಬಣ್ಣ ರಸವು ಅಗ್ನಿಯ ಸಂಗದಿಂದ ರಸ ಒಸರಿ ಸಂಗ ಪರಿಪೂರ್ಣವಾದಲ್ಲಿ ರಸ ಬಣ್ಣ ಘಟ ಎರವಿಲ್ಲದೆ ಘಟ್ಟಿಯಾದಂತೆ ಅಂಗ, ಲಕ್ಷಿಸಿಪ್ಪ ಲಿಂಗ, ಅದ ಲಕ್ಷಿಸುವ ಚಿತ್ತ, ಇವು ಹೆಪ್ಪುಗೊಂಡಂತೆ. ಈ ಗುಣ ಲಿಂಗಾಂಗಿಯ ಶುಭ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡಿದವನಂಗ ॥ ೭೧ ॥

೫೦೫

ಹೇರಂಡವ ಬಿತ್ತವ ತುಳಿದು ವಾರಿಯ ಕಲಸಿ ಬೇಯಿಸಿದಲ್ಲಿ, ವಾರಿ ಬೇರೆ, ತಾ ಬೇರಾದ ಭೇದವ ಬಲ್ಲರೆ ಇಷ್ಟಲಿಂಗ ಸಂಬಂಧಿ. ಹೂಡಿಗೂಡಿದ ನೀರು ಕದಡಿ ಏಕಭಾವವಾದಲ್ಲಿ ಹುಡಿಯನಹಗಿಸಿ, ನೀರನಿರ್ಮಲವ ಮಾಡ ಬಲ್ಲಡೆ ಭಾವಲಿಂಗ ಸಂಬಂಧಿ. ರುಚಿ ನೀರಿನಲ್ಲಿ ಕರಗಿ ತನ್ನಯ ಅಂಗದ ಕುರುಹಳಿವಲ್ಲಿ ಆ ತೆರನನರಿದಲ್ಲಿ ಪ್ರಾಣಲಿಂಗ ಸಂಬಂಧಿ. ಆ ಸಂಬಂಧವ ಸಂಬಂಧಿಸಿದಲ್ಲಿ ಉಭಯದ ಸೆರಗು ಕಳೆದೋರದೆ ನಿಂದುದು ಐಕ್ಯಾನುಭಾವ. ಅದು ಮಹಾ ಶರಣನ ಐಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೭೨ ॥

೫೦೬

ಹೊಯಿದ ಭೇರಿಯ ನಾದ ಸಾಗಿತ್ತೆಲ್ಲಿಗೆ ? ಅದನಾರು ಬಲ್ಲರು ವೇಧಿರವಸವ ? ಗುಡುಗಿನೊಳಗಣ ಗುಲುಗಡಗಿದ ಭೇದವ ಪೊಡವಿಯೊಳಗಣ ಅಂಬರದಂಗಣದ ಸಂಗವನಾರು ಬಲ್ಲರು ? ಹೊಯಿದ ಭೇರಿಯ ಕಾಣಿಸಬಹುದಲ್ಲದೆ, ನಾದವಡಗಿದ ಠಾವ ಭೇದಿಸಬಹುದೇ ಅಯ್ಯಾ ? ಆ ಶರಣನ ಇರವು ನಾದದ ಭೇದದಂತೆ, ಗುಡುಗು ಘರ್ಜನೆಯಲ್ಲಿ ಅಡಗಿದಂತೆ, ಇದನೋಡಬಲ್ಲುದೆ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೭೩ ॥

೫೦೭

ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಒಳಸುವದಲ್ಲದೆ ಅಳಿವುದಿಲ್ಲ ಮುಳುಗುವದಿಲ್ಲ. ಭವಸಾಗರದಲ್ಲಿ ಸಿಕ್ಕಿದ ಚಿತ್ತು ತೆರಹಿಂಗೊಡಲಿಲ್ಲ. ಜಲಪಾಷಾಣದಂತೆ, ನೆಲೆ ಬಿಂಬದಂತೆ, ಈ ಸುಲಲಿತ ಒಲುಗ್ಯೆಯ್ಯರಿಲ್ಲದ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ ॥ ೭೪ ॥

೫೦೮

ಸುಗಂಧವ ಕೊಡುವ ಮೃಗವೇಂದರೆ ನೋಯಿಸಿ ಬಂಧಿಸಿದರೆ ದುರ್ಗಂಧವಲ್ಲದೆ ಗಂಧ ಬಂದುದುಂಟೇ ? ಇಂತೀ ಅರಿವಿನ ತೆರನ ತೋರದಲ್ಲಿ ನುಡಿಯುವ ಮಾತಿನ ಬ್ರಹ್ಮವ ಒಲ್ಲೆವೆಂದು ಒತ್ತಿ ನುಡಿಯಬಹುದೇ ? ಸಾತ್ವಿಕ ಸದಾತ್ಮರ ಅವರಿಚ್ಛೆಯೊಳಗಿದ್ದು ಸುಚಿತ್ತವನರಿದು ಭೃತ್ಯತ್ವದಿಂದ ತನಗೆ ಸುಖೇಚ್ಛೆಯ ಕಾಣಿಸಿಕೊಳ್ಳಬೇಕಲ್ಲದೆ ತಾ ಕಷ್ಟನಾಗಿ ಮಹಾತ್ಮರ ದೃಷ್ಟವ ನೋಡಿಹೆನೆಂದರೆ ಸ್ವಪ್ನದಲ್ಲಿಯೂ ತಲೆದೋರದಾಗಿ ಇಂತೀ ನಿಶ್ಚಯದ ವಸ್ತುವನರಿತು ನಿಃಕಳಂಕ ಮಲ್ಲಿಕಾರ್ಜುನನ ಲಿಂಗದಲ್ಲಿ ಬೆಚ್ಚಂತಿರಬೇಕು ॥೭೫॥

# ೩. ಸಂಪೂರ್ಣ ಷಟ್ಸ್ಥಲ (ಬ)

೫೦೯

ಅಪ್ಪುವರತಲ್ಲಿಯೇ ಪೃಥ್ವಿಯ ಅಂಕುರ ನಷ್ಟ ಅಂಕುರನಷ್ಟವಾದಲ್ಲಿಯೇ ಮುಂದಣ ಬಿತ್ತಿಲ್ಲ. ಇಂತೀ ಭಾವ ತಿಳಿದು ಸ್ಥಲ ನಿಸ್ಥಲವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ಭಾವವಿರಹಿತನು ॥ ೧ ॥

೫೧೦

ಅಪ್ಪುವಿನೊಳಗಣ ಅಗ್ನಿಯಂತೆ, ಅಪ್ಪುವಿನೊಳಗೆ ಬೆರೆದು ಕೆಡದ ಕಿಚ್ಚಿನಂತೆ, ಸ್ಥಳ ಕುಳ ಭರಿತನಾಗಿ ಸ್ಥಲವಲ್ಲಿದ್ದು ಸ್ಥಲವನೇತಿಗಳವಲ್ಲಿ ಒಳಗು ಹೊರಗಾಯಿತ್ತು ಆ ಹೊರಗಣ ಹೊಲಬ ಕಂಡು ಆ ಹೊಲಬಿಗನ ಹೊಲನ ನೋಡಿ. ವಿರಳ ಅವಿರಳವೆಂಬುದನರಿತು ಕುರುಹು ನಷ್ಟವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನ ನಾಮ ನಷ್ಟ ॥ ೨ ॥

೫೧೧

ಅಂಗ ಭವಿ ಭಕ್ತಂಗೆ. ಮನ ಭವಿ ಮಹೇಶ್ವರಂಗೆ. ರುಚಿ ಭವಿ ಪ್ರಸಾದಿಂಗೆ. ಕುರುಹು ಭವಿ ಪ್ರಾಣಲಿಂಗಿಗೆ. ತ್ರಿವಿಧ ನಾಮ ಭವಿ ಶರಣಂಗೆ. ಕೂಟಸ್ಥಲ ಭವಿ ಐಕ್ಯಂಗೆ. ಇಂತೀ ಸ್ಥಲಂಗಳಲ್ಲಿ ಕುರುಹ ಕುರುಹಿನಲ್ಲಿ ಕಂಡು ಅರಿವ ಅರಿವಿನಲ್ಲಿ ತಿಳಿದು, ಐಕ್ಯ ಐಕ್ಯನಾವ ಮತ್ತೆ ಅದು ಕಲ್ಲಿನೊಳಗಣ ಬೆಳಗು, ಮುತ್ತಿನೊಳಗಣ ಅಪ್ಪು, ಕರ್ಪುರದೊಳಗಣ ಉರಿಯಂತೆ ದೃಷ್ಟವಿದು ನಿಃಪತಿಯಾಗಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೫೧೨

ಅಂಗಸ್ಥಲ ಮೂರು, ಲಿಂಗಸ್ಥಲ ಮೂರು, ಜ್ಞಾನಸ್ಥಲ ಮೂರೆಂಬಲ್ಲಿ, ಆತ್ಮವು ಹಲವು ರೂಪಾಗಿ ತೊಳಲುತ್ತಿದೆ ನೋಡಾ ಅಂಗಸ್ಥಲವ ಲಿಂಗ, ಲಿಂಗ ಸ್ಥಲದ ಜ್ಞಾನ, ಜ್ಞಾನಸ್ಥಲದ ಸರ್ವಚೇತನಾದಿಗಳೆಲ್ಲವು ಅಯ್ದುವ ಪರಿ ಎಂತು, ಅಯ್ದಿಸಿಕೊಂಬವನಾರೆಂದು ನಾನರಿಯೆ. ಹಿನ್ನಿಗೆ ದ್ವಯವಾದಡೆ ಹರಿವುದಲ್ಲದೆ ಮುಮ್ಮೊನೆಗುಂಟೇ ? ಉಭಯ ಪೂರ್ವಕ್ಕೆರಡು, ಉತ್ತರಕ್ಕೆ ಒಂದೆಂದಲ್ಲಿ ನಿಶ್ಚಯವ ತಿಳಿಯಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೫೧೩

ಆದಿ ಮಧ್ಯಾವಸಾನವ ತಿಳಿದು, ಆತ್ಮನೈಕ್ಯವೇಕೆಂಬುದು ಆದಾವ ಭಾವ ತಿಳಿದು ಹೇಳಿರಣ್ಣಾ ಆದಿಯ ತಿಳಿವುದು ಆದಾವ ಆತ್ಮ? ಮಧ್ಯವ ತಿಳಿವುದು ಆದಾವಾತ್ಮ? ಅವಸಾನವ ತಿಳಿವುದು ಅದು ಅರಿವೋ ಮರವೆಯೋ? ಕೆಂಡ ಕೆಟ್ಟಡೆ ಹೊತ್ತುವಪಲ್ಲಿದೆ ದೀಪ ನಂದಿದ ಕಿಡಿ ತುಷಮಾತ್ರಕ್ಕೆ ಹೊತ್ತಿದುದುಂಟೇ? ಇಂತೀ ಅಧ್ಯಾತ್ಮವ ತಿಳಿದಲ್ಲಿ ಮೂರು ಸ್ಥಲ ಮುಕ್ತ. ಉಭಯವಾದು ಸ್ಥಲ ಭರಿತ. ಮಿಕ್ಕಾದ ನೂರೊಂದೆಂದು ಗಾರಾಗಲೇತಕ್ಕೆ? ಪೂರ್ವದಲ್ಲಿ ನಿಂದು ಉತ್ತರದಲ್ಲಿ ಒಂದೆಂದು ಸಲೆ ಸಂದಲ್ಲಿ ನಾನಾ ಸ್ಥಲ ಐಕ್ಯ ನಿಃಕಳಂಕ ಮಲ್ಲಿಕಾರ್ಜುನಾ || ೫ ||

೫೧೪

ಲಿಂಗಸ್ಥಲ ಭಾವಸ್ವರೂಪವಾದಲ್ಲಿ ಪ್ರಾಣಲಿಂಗ, ಶರಣ, ಐಕ್ಯನೆಂಬ ತ್ರಿವಿಧವ ತಾಳ್ದು ಮೂರ್ತಿ ಕುರುಹುಗೊಂಬಲ್ಲಿ, ನಾನಾ ಮಧುರ ರಸದಂಡ ವೃಕ್ಷಂಗಳಲ್ಲಿ ಮಿಕ್ಕಾದ ಲತೆ ಪಚ್ಚೆ ಪೈರುಗಳಲ್ಲಿ ಕುಸುಮಗಂಧ ಮೃಗಗಂಧಂಗಳು ಸ್ಥಾವರ ಮುಂತಾದ ಸುಗಂಧ ಸುವಾಸನೆಗಳೆಲ್ಲಕ್ಕೂ ತದ್ರೂಪಿಂಗೆ ಹಿಂಗದಂತೆ ಬಂದೊದಗಿದ ಸಂಗದಂತೆ ಕುರುಹುಗೊಂಡೆಯಲ್ಲಾ! ಕಾಯದ ಜೀವದ ಉಭಯವ ಮಧ್ಯದಲ್ಲಿ ನಿಂದು ದೇವನಾದೆಯಲ್ಲಾ! ನಿನ್ನ ಲೀಲೆ ಕಾರಣವಾಗಿ ಸಂದೇಹಿಗಳಿಗೆ ಸಂಕಲ್ಪಿಯಾಗಿ ನಿರಂಗಿಗೆ ನಿರಾಲಂಬನಾಗಿ ಸಮ್ಯಕ್‌ಜ್ಞಾನ ಮುಕುರದಂತೆ ಸಂಬಂಧಿಸಿದೆಯಲ್ಲಾ[೧] ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ ನಿನ್ನಿರವ ನೀನೇ ಬಲ್ಲೆ || ೬ ||

೫೧೫

ಆವಾವ ವಸ್ತು ತನ್ನ ಸ್ಥಾನದಲ್ಲಿ ಕಾಲ ತುಂಬುವನ್ನಕ್ಕ ಫಲ ಕುಸುಮ ಚಂದನ ಸುಗಂಧ ಮುಂತಾದ ಮೌಕ್ತಿಕ ರತ್ನಂಗಳು ಕುಲಸ್ಥಾನವ ಬಿಟ್ಟು ಯೋಗ್ಯವಾದಂತೆ ಸ್ಥಲ ಬಂಧದಲ್ಲಿ ಬಲಿದು ಕಳೆದುಳಿದ ಮತ್ತೆ ಆರು ಮೂರು ಇಪ್ಪತ್ತೈದು ನೂರೊಂದು ಅವು ಕೂಡಿವಲ್ಲಿ ನಿಃಕಳಂಕ ಮಲ್ಲಿಕಾರ್ಜುನನಾರೆಂದರಿದೆನಯ್ಯಾ || ೭ ||

---

೧. ಸಂಬೋಧೆಯಾದೆಯಲ್ಲಾ (ಕ)

೫೧೬

ಇಷ್ಟಲಿಂಗ ಸಂಬಂಧಿಗಳು ಭಕ್ತಿಸ್ಥಲವನರಿಯರು. ಪ್ರಾಣಲಿಂಗ ಸಂಬಂಧಿಗಳು ಮಾಹೇಶ್ವರ ಸ್ಥಲವನರಿಯರು. ಭಾವಲಿಂಗ ಸಂಬಂಧಿಗಳು ಪ್ರಸಾದಿ ಸ್ಥಲವನರಿಯರು. ಶರಣಸ್ಥಲಭರಿತರು ಪ್ರಾಣಲಿಂಗಿಯ ಸ್ಥಲವನರಿಯರು. ಐಕ್ಯ ನಿರ್ಲೇಪವಾದಲ್ಲಿ ಶರಣಸ್ಥಲ ನಿಂದಿತ್ತು. ಇಂತೀ ಐದು ಸ್ಥಲವ ಆರೋಪಿಸಿ ಇದಿರಿಟ್ಟು ಕೂಡಿದಲ್ಲಿ ಆರು ಸ್ಥಲವಾಯಿತ್ತು. ಆರು ಸ್ಥಲ ವೇಧಿಸಿ ನಿಂದಲ್ಲಿ ನೀ ನಾನೆಂಬ ಭಾವ ಎಲ್ಲಿ ಅಡಗಿತ್ತು ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥೮॥

೫೧೭

ಇಂತೀ ಗುರುಸ್ಥಲವ ಲಿಂಗಸ್ಥಲವ ಅಂಗೀಕರಿಸಿ ನಿಂದ ಶರಣನ ಇರವು ವಾಯುವಿನ ಕೈಯ ಗಂಧದಂತೆ, ಸಾವಯವ ನಿರವಯವ ಭೇದಿಸುವ ಸುನಾದದಂತೆ, ಅದ್ರಿಯ ಮುಸುಕಿದ ಮುಗಿಲರಂಜನೆಯ ಸಂದೇಹದ ನಿರಂಜನದಂತೆ, ಅಂಬುಧಿಯ ಚಂದ್ರನ ಪೂರ್ಣದ ಬೆಂಬಳಿಯಂತೆ, ಇಂತೀ ನಿಸ್ಸಂಗದಲ್ಲಿ ಸುಸಂಗಿಯಾದ ಐಕ್ಯಂಗೆ ಬಂಧ ಮೋಕ್ಷಕರ್ಮಂಗಳೆಂಬ ಸಂದೇಹವಿಲ್ಲ ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೫೧೮

ಐಕ್ಯ ಶರಣ ಸನ್ಮತವಾಗಿ, ಶರಣ ಪ್ರಾಣಸನ್ಮತವಾಗಿ ಪ್ರಾಣಪ್ರಸಾದ ಸನ್ಮತವಾಗಿ ಪ್ರಸಾದ ಮಹೇಶ್ವರ ಸನ್ಮತವಾಗಿ ಮಹೇಶ್ವರ ಭಕ್ತಸನ್ಮತವಾಗಿ ಆ ಭಕ್ತನ ಸಮ್ಯಕ್ಕ್ರಿಸನ್ನದ್ಧನಾಗಿ ಚಕ್ರಿ ಇಕ್ಕಿದ ಕಿಚ್ಚಿನಂತೆ, ಅರ್ಕಚಂದ್ರನಂತೆ, ಆರಾರ ಚಿತ್ತಕ್ಕೆ ಹೆಚ್ಚು ಕುಂದಿಲ್ಲದೆ ನಿಶ್ಚಿಂತನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೫೧೯

ಒಂದು ಕಂಡು ಒಂದನರಿದಿಹೆನೆಂಬನ್ನಕ್ಕ ಸಂದೇಹಪದದಲ್ಲಿ ಅರಿವುದಿನ್ನೇನೋ ಒಂದನರಿತು ಒಂದಮರೆದು ಬೇರೊಂದ ಕಂಡಿಹೆನೆನುವ ಒಡಲದೇನೋ ? ಈ ದ್ವಂದ್ವವಳಿದು ನಿಂದ ನಿಜವೇ ಸಂದೇಹಕ್ಕೊಡಲಿಲ್ಲದೆ ನಿಂದುದು ಷಡುಸ್ಥಲಭರಿತ ಪರಿಪೂರ್ಣ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೫೨೦

ಒಂದು ಮೂರಾದ ಭೇದವ, ಮೂರು ಆರಾದ ಭೇದವ, ಆರು ಇಪ್ಪತ್ತೈದಾದ ಭೇದವ, ಇಪ್ಪತ್ತೈದು ನೂರೊಂದಾದ ಭೇದವ ಒಂದನರಿ

ಯುವ ಯೋಗಿಗಳ ಪಾಶವನಳಿವ ತೆರನಂತೆ. ಆ ನೂರು ಇಪ್ಪತ್ತೆಂಟರೊಳಗಡ ಗಿತ್ತು. ಆ ಆರು ಮೂರರಲ್ಲಿ ನಿಂದಿತ್ತು. ಆ ಮೂರು ಒಂದರಲ್ಲಿ ನಿಂದಿತ್ತು. ಒಂದಕ್ಕೆ ಸಂದೇಹವಳಿಯಿತ್ತು. ಇದರಂದವನಾರು ಬಲ್ಲರಯ್ಯಾ! ಸಂದೇಹ ದಲ್ಲಿ ಬಿದ್ದು ಲಿಂಗವನರಿಯದೆ ಭಂಗಿತರಾದರಯ್ಯಾ! ಆಗಮುಕ್ತಾತೀತ, ಅನಂತ ಭವರಹಿತ, ಆನಂದದಾವಾನಲ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥೧೨॥

೫೨೧

ಕರ್ಪೂರದ ಘಟ ಬೆಂದಂತೆ, ಭಿತ್ತಿಯ ಮೇಲಣ ಚಿತ್ರದ ಘಟನೆನದಂತೆ[೧] ಅಪ್ಪುವಿನ ಮೇಲಣ ಬಹುಮಣಿ ಲಕ್ಷಿಸಿದಂತೆ, ದೃಷ್ಟವಾಗಿ ದೃಕ್ಕಿಂಗೆ ಒಡಲಿಲ್ಲ ದಂತೆ, ಅರಿತು ಅಳಿದ ಸ್ಥಲಭರಿತಂಗೆ ಕುಳಭೇದವಿಲ್ಲ ನಿಃಕಳಂಕ ಮಲ್ಲಿ ಕಾರ್ಜುನನು ಅವಿರಳದ ಹೊಲಬಿಗನಾದ ಕಾರಣ ॥ ೧೩ ॥

೫೨೨

ಕಕ್ಷೆಯಲಿ ಲಿಂಗವ ಧರಿಸಿದ ಮತ್ತೆ ಕುಕ್ಷೆಯ ವರ್ತನವ ಬಿಟ್ಟು ಬಿಡ ಬೇಕು. ಕರಸ್ಥಲದಲ್ಲಿ ಲಿಂಗವ ಧರಿಸಿದ ಮತ್ತೆ ಪರದ್ರವ್ಯಕ್ಕೆ ಕೈಯ್ಯಾನದಿರ ಬೇಕು. ಉತ್ತಮಾಂಗದಲ್ಲಿ ಲಿಂಗವಧರಿಸಿದ ಮತ್ತೆ ಮತ್ಸರಗಳಿಗೆ ಶಿರಬಾಗ ದಿರಬೇಕು. ಅಮಳೋಕ್ಯದಲ್ಲಿ ಲಿಂಗವ ಧರಿಸಿದ ಮತ್ತೆ ತುತ್ತಿನ ಸಿದ್ಧಿಯವ ಬಿಟ್ಟಿರಬೇಕು. ಉರದ ಸಜ್ಜೆಯಲ್ಲಿ ಲಿಂಗವ ಧರಿಸಿದ ಮತ್ತೆ ಪರಸ್ತ್ರೀಯರ ಸಂಗವ ಬಿಡಬೇಕು. ಮುಖ ಸಜ್ಜೆಯಲ್ಲಿ ಲಿಂಗವ ಧರಿಸಿದ ಮತ್ತೆ ಸಕಲ ಗುಣವನರಿಯಬೇಕು. ಇಂತಿವನರಿಯದೆ ಸತ್ಕ್ರಿಯಲ್ಲಿ ನಡೆವನೆಂತಾದಿ ಯಯ್ಯಾ! ಭಕ್ತನಾವಡೆ ಮರ್ತ್ಯರ ಸಂಗ ಬಿಡಬೇಕು. ಮಹೇಶ್ವರನಾವಡೆ ಮಹಾ ವಿಚಾರವ ತಿಳಿಯಬೇಕು. ಪ್ರಸಾದಿಯಾದಡೆ ಪರದೂಷಣವ ಕೇಳ ದಿರಬೇಕು. ಪ್ರಾಣಲಿಂಗಿಯಾವಡೆ ಜಾಗ್ರತ್ಸ್ವಪ್ನ ಸುಷುಪ್ತಿಯಲ್ಲಿ ಮತ್ತನಲ್ಲ ದಿರಬೇಕು. ಐಕ್ಯನಾದ ಮತ್ತೆ ಸತ್ತು ಚಿತ್ತು ಆನಂದ ತ್ರಿವಿಧದ ಗೊತ್ತ ಮುಟ್ಟದಿರಬೇಕು. ಹೀಗಲ್ಲದೆ ಷಟ್ಸ್ಥಲಕ್ಕೆ ಸ್ಥಲ ಪರ ಬೊಮ್ಮಕ್ಕೊ ಇಲ್ಲ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿರ್ಲೇಪವಾದ ಶರಣ ॥ ೧೪ ॥

---

೧. ಘಟನ (ಬ)

೫೨೩

ಕಾಯ ಇಂದ್ರಿಯಂಗಳ ಮುಚ್ಚಿ ಇಹನ್ನಕ್ಕ ಭಕ್ತಿಸ್ಥಲವಿಲ್ಲ. ಆತ್ಮ ಹಲವು ವಿಷಯಂಗಳಲ್ಲಿ ಹರಿವನ್ನಕ್ಕ ಮಹೇಶ್ವರಸ್ಥಲವಿಲ್ಲ. ಹಿರಿದು ಕಿರಿದ ನರಿದು ರೋಚಕ ಅರೋಚಕವೆಂಬನ್ನಕ್ಕ ಪ್ರಸಾದಿಸ್ಥಲವಿಲ್ಲ. ಜಾಗ್ರದಲ್ಲಿ ಕಂಡು, ಸ್ವಪ್ನದಲ್ಲಿ ತೋರಿ, ಸುಷುಪ್ತಿಯಲ್ಲಿ ಅಳಿವನ್ನಕ್ಕ ಪ್ರಾಣಲಿಂಗ ಸಂಬಂಧಿಯಲ್ಲ. ಚತುರ್ವಿಧ ಫಲಪದಂಗಳಲ್ಲಿ ಕಾಬಕಾಣಿಕೆಯುಳ್ಳನ್ನಕ್ಕ ಶರಣ ಸ್ಥಲವಿಲ್ಲ. ಅರಿದೆ ಮರೆದೆನೆಂಬ ಉಭಯದ ಸಂದೇಹವುಳ್ಳನ್ನಕ್ಕ ಐಕ್ಯಸ್ಥಲ ವಿಲ್ಲ. ಇಂತೀ ಷಟ್ಸ್ಥಲಂಗಳಲ್ಲಿ ಸೋಪಾನದ ಮೆಟ್ಟಿನಂತೆ ಒಂದ ಮೆಟ್ಟಿ ಒಂದನೇರುವನ್ನಕ್ಕ ಸ್ಥಲಕುಳಭರಿತಸಾಗಬೇಕು. ಮೇಲನೇರಿ ಕೆಳಗೆ ಇಳಿಯೆ ನೆಂಬ ಭಾವ ನಿಂದಲ್ಲಿ ಆರನೆಣಿಸಲಿಲ್ಲ. ಮೂರೆಂದು ಬೇರೊಂದ ಮುಟ್ಟಲಿಲ್ಲ. ಕರಗಿದ ಭಂಗಾರಕ್ಕೆ ಕರಚರಣಾದಿಗಳು ಇಲ್ಲದಂತೆ, ಆತ ಕುರುಹಡಗಿದ ಷಟ್‌ಸ್ಥಲ ಬ್ರಹ್ಮ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೫೨೪

ಕಿವಿಯ ಮುಚ್ಚಿ ಕಣ್ಣಿಯಲ್ಲಿ ಕೇಳಿದಾಗ ಭಕ್ತಿಸ್ಥಲ. ಕಣ್ಣ ಮುಚ್ಚಿ ಕರ್ಣದಲ್ಲಿ ನೋಡಿದಾಗ ಮಹೇಶ್ವರ ಸ್ಥಲ. ಈ ಉಭಯವ ಮುಚ್ಚಿ ನಾಸಿಕ ದೋಹರಿ ನಷ್ಟವಾದಲ್ಲಿ ಪ್ರಸಾದಿಸ್ಥಲ. ಆ ಸುಗುಣ ದುರ್ಗುಣವೆಂಬುದು ನಿಂದಲ್ಲಿ ಪ್ರಾಣಲಿಂಗಿ ಸ್ಥಲ. ಆ ಪ್ರಾಣ ಪರಿತೋಷಂಗಳಲ್ಲಿ ಪ್ರವರ್ತನ ನಿಂದಲ್ಲಿ ಶರಣಸ್ಥಲ. ಆ ಶರಣಸಾರೂಪ್ಯ ಸಲೆ ಸಂದು ನಿಂದಲ್ಲಿ ಐಕ್ಯಸ್ಥಲ. ಐಕ್ಯವೆಂಬ ಕೂಟಸ್ಥಲ ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನನೆಂಬ ನಾಮಕ್ಕೆ ನಷ್ಟವಿಲ್ಲ ಆ ನಾಮವುಳ್ಳನ್ನಕ್ಕ ಎನ್ನ ಬಿಡದ ಸಂಸಾರಸಾಯದು ॥ ೧೬ ॥

೫೨೫

ಕೀಲಿಂಗೆ ಕೀಲ ಮಾಡಿಹೆನೆಂದಡೆ ಆ ತರುವಿಂಗೆ ಕಡೆ ನಡು ಮೊದಲಿಲ್ಲ. ಸ್ಥಲವ ಹಿಡಿದು ಸ್ಥಲವನಯ್ದಿಹೆನೆಂದಡೆ ಅದು ನಾಮರೂಪು. ಭಾವ ಹಿಡಿ ದಲ್ಲಿ ಅರಿತು ಬಿಡುವಲ್ಲಿ ಮರೆದಡೆ ಆತನೊಡಗೂಡಿಪ್ಪ ನಿಃಕಳಂಕ ಮಲ್ಲಿ ಕಾರ್ಜುನಾ ॥ ೧೭ ॥

೫೨೬

ಕೂಟದ ಲಕ್ಷಣವುಳ್ಳನ್ನಕ್ಕ ಐಕ್ಯಸ್ಥಲ. ಭಾವದ ಕಲ್ಪಿತವುಳ್ಳನ್ನಕ್ಕ ಶರಣಸ್ಥಲ. ಕೊಂಡಿಹೆ ಕೊಟ್ಟಿಹೆನೆಂಬನ್ನಕ್ಕ ಪ್ರಾಣಲಿಂಗಿಸ್ಥಲ. ಉಂಡಿಹೆ

ಉಚ್ಛಿಷ್ಟವೆನೆಂಬನ್ನಕ್ಕ ಪ್ರಸಾದಿಸ್ಥಲ. ಅರಿದಿಹೆ ಅರಿಹೆನೆಂಬನ್ನಕ್ಕ ಮಹೇಶ್ವರ ಸ್ಥಲ. ಗುರುವಿಂಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವ ಕೊಟ್ಟೆಹೆನೆಂಬನ್ನಕ್ಕ ಭಕ್ತಸ್ಥಲ. ಇವ ನಿಶ್ಚಯಿಸಿ ನಿಜ ಐಕ್ಯವೆಂದರಿತಲ್ಲಿ ಷಟ್ಸ್ಥಲ ಲೋಪ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೫೨೭

ಗುರುಸ್ಥಲ ಭಕ್ತ ವಂಶಿಕ. ಲಿಂಗಸ್ಥಲ ಮಹೇಶ್ವರ ವಂಶಿಕ. ಜಂಗಮ ಸ್ಥಲ ಪ್ರಸಾದಿ ವಂಶಿಕ. ಪ್ರಾಣಲಿಂಗಿ ಶರಣ ಐಕ್ಯನೆಂಬವು ತ್ರಿವಿಧ ಅನಾದಿಯ ಸೋಂಕು. ಅವು ಪೂರ್ವಗತಿಗೆ ಬಂದು ಉತ್ತರಗತಿಯನಯ್ದಿಸುವುದಕ್ಕೆ ಗೊತ್ತಾಗಿ ನಿತ್ಯಾನಿತ್ಯವೆಂಬ ಉಭಯದ ಹೆಚ್ಚುಕುಂದ ತಿಳಿವುದಕ್ಕೆ ದೃಷ್ಟವ ಕೊಟ್ಟೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯ ॥

೫೨೮

ಗುರುಸ್ಥಲವಾರು, ಲಿಂಗಸ್ಥಲ ಮೂರು, ಜಂಗಮಸ್ಥಲ ಒಂದೊಂದಲ್ಲಿ ಓಂಕಾರ ಬಿಂದು ಸಹಿತಾದಂತೆ ಆರೋಹ ಅವರೋಹವಾಗಿ ನಿಂದು ಏರಿದ ವಿಷ ಇಳಿದು ಸೋರುವಂತೆ ಆದಾರ ಗುಣವೆಂದು ಪ್ರಣಮದ ಬೇರನರಿತಲ್ಲಿ ಸರ್ವ ಸ್ಥಲ ಜಾರಿ ವಿಚಾರಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೫೨೯

ಗುರುಸ್ಥಲವೆಂದು ಬಂದೆ ಆಚಾರ್ಯನಾಗಿ. ಲಿಂಗಸ್ಥಲವೆಂದು ಬಂದೆ ರೋಹ ಅವರೋಹಂಗಳ ಪರಿಹರಿಸಿಹೆನೆಂದು. ಶರಣನಾಗಿ ಬಂದೆ ಭಕ್ತಿಜ್ಞಾನ ವೈರಾಗ್ಯ ತ್ರಿವಿಧದ ಗೊತ್ತು ಮುಕ್ತಿಯ ಮಾಡಿಹೆನೆಂದು. ದತ್ತೋತ್ತರಕ್ಕೆ ಕಲ್ಪ ತರುವಿಂಗೆ ಮತ್ತಾವ ವೃಕ್ಷಫಲಾದಿಗಳಿಗೆ ಅಪ್ಪು ಒಂದೇ. ಹಲವು ವೃಕ್ಷಂಗಳು ತಮ್ಮ ತಮ್ಮ ನಿಶ್ಚಿತದ ಸವಿಯಾದಂತೆ ನಾನಾಸ್ಥಲಕ್ಕೆ ದೇವ ನೀನೊಬ್ಬನೇ. ಊರೊಳಗಾದಲ್ಲಿ ಅರಸು ಆಳಿನೊಳಗಾದಲ್ಲಿ ಆಳಾದಂತೆ ಆದೆಯಲ್ಲಾ ಕ್ರಿಗೆ ತತ್ತಾಗಿ ಸಿಕ್ಕಿದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೫೩೦

ಚಕ್ರಿಯ ಚಿತ್ರದಂತೆ, ಚಿತ್ರಜ್ಞನ ಕೈಯ ಲೆಕ್ಕಣಿಕೆಯಂತೆ, ಅಪ್ಪುವಿನ ಮಡುವಿನ ಮತ್ಸ್ಯದ ಪಥದಂತೆ, ಇಂತೀ ಭಕ್ತಿ ಜ್ಞಾನ ವೈರಾಗ್ಯ ನಿಷ್ಪತ್ತಿಯಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ಹುಟ್ಟುಗೆಟ್ಟ ॥ ೨೨ ॥

೫೩೧

ಚಂದ್ರಕಾಂತದ ಶಿಲೆಯನೊಂದು ಹಳಿದಲ್ಲಿ ಬಿಂದು ಬಂದುದುಂಟೇ? ಸುಗಂಧದ ನನೆಯ ತಂದು ಬಂಧಿಸಿದಲ್ಲಿ ಆ ಸುವಾಸನೆ ಎಸಗಿತ್ತು. ಇಂತೀ ಉಭಯದಿಂದ ಅರಿವಲ್ಲಿ ಸ್ಥಲ. ಸ್ಥಲವ ನೆಮ್ಮಿ ನಿಸ್ಥಲವನರಿತಲ್ಲಿ ದೃಷ್ಟದ ಇಷ್ಟವಲ್ಲಿಯೇ ಲೋಪ ನಿಃಕಳಂಕ ಮಲ್ಲಿಕಾರ್ಜುನಾ ॥ ೨೩ ॥

೫೩೨

ನಾನಾ ಸ್ಥಲಂಗಳ ಹೊಲಬಿನ ಹೊಲಬ ವಿಚಾರಿಸುವಲ್ಲಿ ಸುಖದುಃಖ ವೆಂಬ ಉಭಯ ಉಂಟು. ತಾನರಿದು ನಡೆನುಡಿ ಸಿದ್ಧಾಂತವಾದಲ್ಲಿ ಇಹಪರ ಸುಖಿ ಭಾವಕ ಪರಿಭ್ರಮಣದಿಂದ, ಯಾಚಕ ಮಾತುಗಂಟಿತನದಿಂದ ವಸ್ತು ಭಾವದ ನಿಹಿತವನರಿಯದೆ ವಾಗ್ವಾದಕ್ಕೆ ಗೆಲ್ಲಸೋಲಕ್ಕೆ ಹೋರುವಲ್ಲಿ ಇಹ ಪರ ಉಭಯವಲ್ಲಿಗೆ ದುಃಖಿ. ಇಂತೀ ಸ್ಥಲಂಗಳ ಗರ್ಭೀಕರಿಸಿ ಆರುಸ್ಥಲವ ನಲ್ಲೆನ್ನದೆ ಮೂರುಸ್ಥಲವಿಲ್ಲೆನ್ನದೆ, ಬೇರೊಂದು ಸ್ಥಲ ಉಂಟೆಂದು ಊರೆಲ್ಲಕ್ಕೆ ದೂರದೆ ಆರಾರ ಅರಿವಿನಲ್ಲಿ, ಆರಾರ ಸ್ಥಲಂಗಳಲ್ಲಿ, ಆರಾರ ಕ್ರಿಯೆ ನೇಮಂಗಳ ಲ್ಲಿಪ್ಪ ವಿಶ್ವಾಸಕ್ಕೆ ತಪ್ಪುದಿಪ್ಪ ಆ ವಸ್ತುವ ಬೇರೊಂದು ಲಕ್ಷಿಸಿ ಕಟ್ಟುಗೊತ್ತಿಂಗೆ ತರಲಿಲ್ಲ. ದೃಷ್ಟವಲ್ಲವೆಂದು ಇದಿರಿಂಗೆ ಹೇಳಲಿಲ್ಲ. ತನ್ನ ಭಾವ ನಿಶ್ಚಯವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ಹುಟ್ಟುಗೆಟ್ಟ ॥ ೨೪ ॥

೫೩೩

ನೀರು ಕೂಡಿದ ಕ್ಷೀರ ಬೆಂದಲ್ಲದೆ ಮತ್ತಾ ನೀರುಸಾರವರತು ಹೊತ್ತದೆ ಉಳಿವ ಉಳವೆಯುಂಟೋ? ಇಕ್ಷುವಿನ ಸಾರ ಅಪ್ಪುವಿನ ಕೂಟದಿಂದ ಪಕ್ವ ವಾಗಿ ಮತ್ತೆ ಉಳಿದುದು ಸಕ್ಕರೆಯಾದಂತೆ, ಎಣ್ಣೆ ನೀರು ಕೂಡಿ ಬೆಂದು ಬಿನ್ನಾಣದಿಂ ಮೇಲೇರಿ ಆ ಉಭಯಕ್ಕೆ ಅನ್ಯವಿಲ್ಲದೆ ಬೇರೆಯಾದಂತೆ ಇಂತೀ ಸ್ಥಲವನಯ್ದು ನಿಸ್ಥಲವಾಗಬೇಕು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಹಟಸ್ಥಲ ಸಂಪೂರ್ಣ ॥ ೨೫ ॥

೫೩೪

ನೀರು ಪ್ರಳಯವಾದಲ್ಲಿ ನೋಡಲುಂಟೇ[1] ಭಾವಿಯ? ಆರನರಿತು, ಮೂರ ತಿಳಿದು, ಬೇರೊಂದಿದೆಯೆಂದು ಲಕ್ಷಿಸಿದಲ್ಲಿ, ಆ ಲಕ್ಷ್ಯ ನಿರ್ಲಕ್ಷ್ಯವಾಗ ಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೧. ತೋಡಲುಂಟೇ (ಅ)

೫೩೫

ಪಯವ ಕೂಡಿದ ಸೀರಿನಂತೆ, ಮಧುರವ ಕೂಡಿದ ಅಂಭಸಿಯಂತೆ, ತೈಲವ ಕೂಡಿದ ಉದಕದಂತೆ, ನೋಡಿ ಏರಕಾಸಲಿಕ್ಕೆ ಅಲ್ಲಿಯೇ ಅರತಂತೆ ಸ್ಥಲ ಬೇರಾಗಲಿಲ್ಲ. ಆ ಅರಿದ ಸ್ಥಲಂಗಳನರಿತು ಉಭಯ ತಲೆದೋರ ದಿದ್ದಲ್ಲಿಯೇ ನಿಃಕಳಂಕ ಮಲ್ಲಿಕಾರ್ಜುನನು ಷಡುಸ್ಥಲ ಸಂಪೂರ್ಣನು ॥ ೨೭ ॥

೫೩೬

ಪೂರ್ವತತ್ತ್ವ ಬಿಟ್ಟುದು ಭಕ್ತಿಸ್ಥಲ. ಮಧ್ಯದ ಭಾವವ ಬಿಟ್ಟುದು ಮಹೇಶ್ವರ ಸ್ಥಲ. ತ್ರಿವಿಧದ ಕೂಟವ ಬಿಟ್ಟುದು ಪ್ರಸಾದಿ ಸ್ಥಲ. ಗಮನ ನಿರ್ಗಮನವ ಬಿಟ್ಟುದು ಪ್ರಾಣಲಿಂಗಿಯ ಸ್ಥಲ. ಶ್ರುತದಲ್ಲಿ ಕೇಳಿ ಕೇಳದಂತೆ ದೃಷ್ಟದಲ್ಲಿ ಕಂಡು ಕಾಣದಂತೆ ಅನುಮಾನದಲ್ಲಿ ಅರಿದು ಅರಿಯದಂತೆ ಇದ್ದುದು ಶರಣಸ್ಥಲ. ವಿರಳ ಅವಿರಳವೆಂಬ ಸುಳುಹು ಸೂಕ್ಷ್ಮಂಗಳು ನಿಂದಲ್ಲಿ ಐಕ್ಯ ಸ್ಥಲ. ಇಂತೀ ಸ್ಥಲಂಗಳಲ್ಲಿ ಸ್ಥಿರೀಕರಿಸಿ ಆರೋಪಿಸಿ ಪೂರ್ವಕಕ್ಷೆಯ ಕಂಡು, ಮಧ್ಯ ಕಕ್ಷೆಯಲ್ಲಿ ನಿಂದು ಉತ್ತರ ಕಕ್ಷೆಯ ಕೂಡಿದಲ್ಲಿ ಆರು ಸ್ಥಲದ ಸೋಂಕಿಲ್ಲ. ಮೂರು ಸ್ಥಲದ ಮುಟ್ಟಿಲ್ಲ. ಬೇರೊಂದು ಸ್ಥಲವೆಂದು ಲಕ್ಷಿಸುವುದಕ್ಕೆ ಗೊತ್ತಿಲ್ಲ. ಅದು ಉರಿಯ ಬುಡ ತುದಿಯಂತೆ ಕತ್ತುವುದು ಪೂರ್ವವಾಗಿ ಮೇಲೆ ಹತ್ತಿ ಉರಿವುದು ಉತ್ತರವಾಗಿ ಆ ಉಭಯದ ಗೊತ್ತು ನಿಂದಲ್ಲಿ ಸ್ಥಲ ನಿಸ್ಥಲವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನು ದೃಷ್ಟಕ್ಕೆ ಗೋಚರವಹನು ॥ ೨೮ ॥

೫೩೭

ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚ ಭೌತಿಕಗಳಿಂದ ಜಗದುತ್ಪತ್ತಿ ಎಂಬುದು ಹುಸಿ. ನಾನೆಂಬುದೆ ಐದು, ಆ ಐದರಿಂದೊದಗಿದವೆ ಜಗದಾಲಯವಾದ ಮತ್ತೆ ಜಗವಿಲ್ಲ[೧]ವಾಗಿ ತನ್ನ ಗುಣವೆ ಪೃಥ್ವಿ, ತನ್ನ ಗುಣವೆ ಅಪ್ಪು, ತನ್ನ ಗುಣವೆ ತೇಜ, ತನ್ನ ಗುಣವೆ ವಾಯು, ತನ್ನ ಗುಣವೆ ಆಕಾಶ, ತನ್ನಿಂದನ್ಯವಪ್ಪುದಿಲ್ಲವಾಗಿ ಅದಕ್ಕೆ ದೃಷ್ಟ ಮರ್ಕಟ ದರ್ಪಣ ಸ್ಥಾನವೆಂದರಿವುದು. ಅಉಚಿತ ಬೀಜಕ್ಕುಚಿತ ಒಪ್ಪುದೆ ? ಅದಕ್ಕೆ ದೃಷ್ಟ ಪರುಷದ ಗಿರಿಯಲ್ಲಿ ಕಬ್ಬುನದ ವೊರಡೆ ಉಂಟೇ ? ಕ್ಷೀರದ ಶರಧಿಯಲ್ಲಿ

---

೧. ಜಗವೆಲ್ಲ (ಬ)

ಕನ್ನಿರ ಜಲ ಸ್ಥಾಪ್ಯ ಉಂಟೇ ? ಕಲ್ಪವೃಕ್ಷದಗ್ರದಲ್ಲಿ ತೋರದ ಫಲ ಉಂಟೇ ? ನೆರೆ ಸತ್ಯನಲ್ಲಿ ಪಾರ್ವಮನದವನುಂಟೇ ? ಇಂತಿವನರಿದು ಸದ್ಭಾವನಾದ ಮಹಾತ್ಮಂಗೆ ಗುರುವೆಂದರು, ಲಿಂಗವೆಂದರು, ಜಂಗಮವೆಂದರು. ಸ್ಥಾವರ ಒಂದಾದರೆ ಶಾಖೆಯು ಲಕ್ಷದ ತೆರನಂತೆ. ಅದಕ್ಕೆ ಪರ್ಯಾಯ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇಂತೀ ಷಟ್ಸ್ಥಲವೆಲ್ಲ ಬೆಳಗಿನ ಕಳೆಯು ನೊಳಗೊಂಡಿಪ್ಪ ಮಹಾತ್ಮನ ತ್ರಿಭುವನಾತೀತನೆಂದರಿಯದೆ ಬೀಗವ ತೆಗೆದಲ್ಲಿಯೇ ಕಂಡಿತ್ತು ಆಭರಣದಿರವು ನಿಃಕಳಂಕ ಮಲ್ಲಿಕಾರ್ಜುನಾ ॥ ೨೯ ॥

೩೩೮

ಪೃಥ್ವಿಯಂಗ ಭಕ್ತನಲ್ಲ. ಅಪ್ಪುವಿನಂಗ ಮಹೇಶ್ವರನಲ್ಲ. ಅಗ್ನಿಯಂಗ ಪ್ರಸಾದಿಯಲ್ಲ. ವಾಯುವಿನಂಗ ಪ್ರಾಣಲಿಂಗಿಯಲ್ಲ. ಆಕಾಶದಂಗ ಶರಣನಲ್ಲ. ಇಂತೀ ಪಂಚ ತತ್ತ್ವವ ಮೆಟ್ಟಿ ನೋಡಿ ಕೂಡಿಹೆನೆಂಬನು ಐಕ್ಯನಲ್ಲ. ಅದೇತೆಂದಡೆ, ಆ ಪೃಥ್ವಿ ಅಪ್ಪುವಿನ ಪ್ರಳಯಕ್ಕೊಳಗು. ಆ ಅಪ್ಪು ಅಗ್ನಿಯ ಆಪೋಷಣಕ್ಕೊಡಲು. ಆ ಅಗ್ನಿ ವಾಯುವಿನ ಭಾವಕ್ಕೊಳಗು. ಆ ವಾಯು ಆಕಾಶದ ಅವಧಿಗೊಡಲು ಇಂತೀ ಪಂಚ ತತ್ತ್ವಂಗಳಲ್ಲಿ ಬೆರಸಿ ಕೂಡಿಹೆನೆಂಬ ಷಟ್ಸ್ಥಲವ ನಾನರಿಯೆ. ಅದು ನಿಮ್ಮ ಭಾವ ನಿಮ್ಮಲ್ಲಿಯೇ ಆರರ ಹೊಳಹು. ಅದು ನಿಮ್ಮಯ ಲೀಲಾ ಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೩೦ ॥

೩೩೯

ಪಿಂಡ ಪಿಂಡಸ್ಥಲ. ಭಾವ ಭಾವಸ್ಥಲ. ಜ್ಞಾನ ಜ್ಞಾನಸ್ಥಲ. ಒಂದು ಕೆಂಡದ ಬುಡದಲ್ಲಿ ನಾನಾ ಉರಿ ದಿಕ್ಕುದಿಕ್ಕಿನಲ್ಲಿ ಹತ್ತಿ ಜೇವುದ ಕಂಡು ಲಕ್ಷಿಸಿದ ಮತ್ತೆ ಒಂದು ಮೂರಾಗಿ, ಮೂರು ಆರಾಗಿ, ಇಂತೀ ನಾನಾ ಭೇದಂಗಳ ತಾ ಕಂಡ ಮತ್ತೆ ಬಾಗಿಲವಳಿ ಹೊಳಹಿನಂತೆ ಅಯ್ಯುವದು ಒಂದೇ ದಾರಿ. ಆ ಭೇದವನರಿತಲ್ಲಿ ಅಭೇದ್ಯ ಮೂರ್ತಿ ಏಕಛತ್ರಕ್ಕೆ ನೀನೇ ಅರಸು ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

೩೪೦

ಬಿದ್ದ ಬೀಜ ಇಕ್ಕಿದ ಸಸಿ ಮುಂತಾದವುಕ್ಕೆ ಬೇರು ಬಿಟ್ಟಲ್ಲದೆ ಮೊಳೆಗೆ ಅಂಕುರವಿಲ್ಲ. ಸಸಿಗೆ ಹೊಸ ಬೇರು ಬಿಟ್ಟಲ್ಲದೆ ಎಲೆದೋರದು. ಚಿತ್ತವಸ್ತುವಿನಲ್ಲಿ ನಿಂದಲ್ಲದೆ ನಾನಾ ಸ್ಥಲಂಗಳ ವಿವರವ ಮುಟ್ಟದು. ಸಸಿ ಬಲಿದು ಹೊಸ

ಸುಳಿ ತೋರಿದಲ್ಲಿಯಲ್ಲದೆ ಆ ತುಷಪರ್ಣ ಬಿಡದು. ಅಂಗಕ್ಕೆ ಕ್ರಿ, ಆತ್ಮಂಗೆ ಅರಿವು, ಉಭಯಸಂಬಂಧವಾಗಿಯಲ್ಲದೆ ಲಿಂಗವೆಂಬ ಕುರುಹಿಲ್ಲ. ಆ ಕುರುಹು ಉಭಯವ ನೆಮ್ಮಿ ನಿಂದುದು ಭಕ್ತಿಸ್ಥಲ. ಆ ಭಕ್ತಿ ತ್ರಿವಿಧವ ನೆಮ್ಮಿ ನಿಂದುದು ಮಾಹೇಶ್ವರ ಸ್ಥಲ. ಆ ಮಾಹೇಶ್ವರ ಸ್ಥಲ ಮೂರ ಮೆಟ್ಟಿ ಆರ ಕಂಡುದು ಪ್ರಸಾದಿ ಸ್ಥಲ. ಆರಡಗಿ ಬೇರೆ ಒಂದೆಂದಲ್ಲಿ ಪ್ರಾಣಲಿಂಗಿ ಸ್ಥಲ. ಒಂದೆಂಬುದೆ ನಿಂದು ಸಂದನಳಿದಲ್ಲಿ ಶರಣಸ್ಥಲ. ಶರಣನ ಐದು ಗೂಡಿ ಪ್ರಮಾಣು ನಷ್ಟವಾದಲ್ಲಿ ಐಕ್ಯಸ್ಥಲ. ಇಂತೀ ಷಡ್ಭಾವ ಸ್ಥಲಂಗಳು ಆಕಾಶವ ನೆಮ್ಮಿ ಮಹದಾಕಾಶದೊಳಗಾಯಿತ್ತು. ಅದು ಭಾವವಿಲ್ಲದ ಬ್ರಹ್ಮ ನಿಃಕಳಂಕ ಮಲ್ಲಿಕಾರ್ಜುನಾ ॥ ೩೨ ॥

೪೪೧

ಬೀಜದಲ್ಲಿ ಅಂಕುರವಿದ್ದಂತೆ ಏಕಡಗಿದ ಮತ್ತೆ ಮೊಳೆದೋರಿ ಹಲವು ರೂಪಿಂಗೆಡೆಯಾಯಿತ್ತು. ಇರಿಸಿದಲ್ಲಿ ಏಕಗುಣ ಬಿತ್ತಿದಲ್ಲಿ ಹಲವು ಗುಣವಾಯಿತ್ತು. ಉಭಯದ ಹೊಲಬ ತಿಳಿದು ಪೂರ್ವ ಉತ್ತರವೆಂಬ ಉಭಯದ ಗೊತ್ತ ಮುಟ್ಟದೆ ನಿಶ್ಚಯವಾಗಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥ ೩೩ ॥

೫೪೨

ಬೇರು ಒಣಗಿದಲ್ಲಿ ಅಂಕುರ ಉಂಟೇ ? ಆರನರಿಯದೆ ಮೂರ ಪ್ರಮಾಣಿಸದೆ ವಿಚಾರಿಸ್ವಾತನ ಭೇದವನರಿಯದೆ ಮತ್ತೆ ತೋರಿಕೆ ಇನ್ನಾವುದು ಹೇಳಾ ಯುಗಜುಗ ಪ್ರಮಾಣಿಸುವುದಕ್ಕೆ ಮುನ್ನ ಆಚೆಯಲ್ಲಿ ನಾನರಿಯೆ ಈಚೆಯಲ್ಲಿ ನಾಬಲ್ಲೆ. ಆವ ಸ್ಥಲವಲ್ಲಿಯೂ ಸ್ಥಲಭರಿತನಾಗಿ ಹಿಡಿವಲ್ಲಿ ಕ್ರಿ ಶುದ್ಧವಾಗಿ ಅರಿವಲ್ಲಿ ಆತ್ಮಶುದ್ಧವಾಗಿ ಇಂತೀ ಉಭಯದ ಒಡಲನರಿದು ಒಡಗೂಡಬೇಕು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯಬಲ್ಲಡೆ ॥ ೩೪ ॥

೫೪೩

ಭಕ್ತನ ಅಂಗಸ್ಥಲ, ಮಾಹೇಶ್ವರನ ಭಾವಸ್ಥಲ, ಪ್ರಸಾದಿಯ ಜ್ಞಾನಸ್ಥಲ, ಪ್ರಾಣಲಿಂಗಿಯ ಉಭಯಸ್ಥಲ, ಶರಣನ ಏಕಸ್ಥಲ, ಐಕ್ಯದ ಕೂಟಸ್ಥಲ ಇಂತೀ ಆರು ಸ್ಥಲವ ವೇಧಿಸಿ ನಿಂದಲ್ಲಿ ಮಹದೈಕ್ಯ ಏಕಮೂರ್ತಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೫ ॥

೫೪೪

ಭಕ್ತನಂಗ ಕಾಮ. ಮಹೇಶ್ವರನಂಗ ಲೋಭ. ಪ್ರಸಾದಿಯಂಗ ಕ್ರೋಧ. ಪ್ರಾಣಲಿಂಗಿಯಂಗ ಮೋಹ. ಶರಣನಂಗ ಮದ. ಐಕ್ಯನಂಗ ಮತ್ಸರ. ಇಂತೀ ಷಡ್ಭಾವ ಸ್ಥಲಂಗಳ ಕೂಡುವಲ್ಲಿ ಸ್ಥೂಲವ ಕೂಡಿದಂಗ ಭಕ್ತನಾಗಿ ಸೂಕ್ಷ್ಮವ ಕೂಡಿದಂಗ ಮಹೇಶ್ವರನಾಗಿ ಕಾರಣವ ಕೂಡಿದಂಗ ಪ್ರಸಾದಿಯಾಗಿ ಇಂತೀ ಮೂರು ಭಕ್ತಿಸ್ವರೂಪವಾಗಿ ಆ ಸ್ಥೂಲದ ಕಳೆ ಪ್ರಾಣಲಿಂಗಿಯಾಗಿ ಆ ಸೂಕ್ಷ್ಮದ ಕಳೆ ಶರಣನಾಗಿ ಆಕಾಶದ ಕಳೆ ಐಕ್ಯನಾಗಿ ಏಕಮೂರ್ತಿ ತ್ರಿಮೂರ್ತಿಯಾಗಿ ಭಕ್ತಿ ಜ್ಞಾನ ವೈರಾಗ್ಯವೆಂಬುದನಾಧರಿಸಿದೆಯಲ್ಲಾ ಅದು ನಿನ್ನ ಲೀಲಾಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

೫೪೫

ಭಕ್ತನ ತ್ರಿವಿಧ ಲಿಂಗದ ಭೇದ ಚಿಪ್ಪಿನ ಮುತ್ತಿನ ಅಪ್ಪುವಿನಂತಿದ್ದಿತ್ತು. ಆ ತ್ರಿವಿಧದ ಆದಿಯನರಿದಲ್ಲಿ ಭಕ್ತಿಸ್ಥಲ ಸಂಪೂರ್ಣ. ಮಾಹೇಶ್ವರನ ತ್ರಿವಿಧ ಲಿಂಗದ ಭೇದ ವಾರಿ ವಾಯುವಿನ ಸಂಗದ ಕಲ್ಲಿನ ಬೆಗಡದಂತಿದ್ದಿತ್ತು. ಪ್ರಸಾದಿಯ ತ್ರಿವಿಧ ಲಿಂಗದ ಭೇದ ಉರಿಯ ತುದಿಯ ಮೇಲೆ ಎರದೆಣ್ಣೆಯ ಕೊಂಡುರಿವ ಸರದಂತಿದ್ದಿತ್ತು. ಪ್ರಾಣಲಿಂಗಿಯ ತ್ರಿವಿಧ ಲಿಂಗದ ಭೇದ ಹರಿವ ಅಪ್ಪುವಿನಲ್ಲಿ ಬರೆದ ಚಿತ್ತಾರದಂತಿದ್ದಿತು. ಶರಣನ ತ್ರಿವಿಧ ಲಿಂಗದ ಭೇದ ವಜ್ರದ ಬೆಳಗಿನ ಕಳೆಯ ಹೊಳಹಿನಂತಿದ್ದಿತ್ತು. ಐಕ್ಯನ ತ್ರಿವಿಧವಡಗಿದ ಭಾವ ಈ ಪೂರ್ವದ ಐದನವಗವಿಸಿ ಸ್ವಯವಾದುದು ಐಕ್ಯಾನುಭಾವ. ಇಂತೀ ಸ್ಥಲವನಯ್ದು ನಿಸ್ಥಲವಾದಲ್ಲಿ ನಿಃಕಳಂಕನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೫೪೬

ಭಕ್ತನ ಭಕ್ತ, ಮಾಹೇಶ್ವರನ ಮಾಹೇಶ್ವರ, ಪ್ರಸಾದಿಯ ಪ್ರಸಾದಿ, ಪ್ರಾಣಲಿಂಗಿಯ ಪ್ರಾಣಲಿಂಗಿ, ಶರಣನ ಶರಣ, ಐಕ್ಯನ ಐಕ್ಯನೆಂಬಲ್ಲಿ ದೃಷ್ಟವಾವುದು ಹೇಳಿರಣ್ಣಾ. ಘಟಬಿದ್ದಲ್ಲಿ ಆತ್ಮನೆಲ್ಲಿ ಅಡಗಿತ್ತು ಎಂಬುದನರಿದಲ್ಲಿ ಭಕ್ತನ ಭಕ್ತಿ ಸ್ಥಲ. ಕೆಚ್ಚಲ ಕೊಯಿದಿಕ್ಕಿದಲ್ಲಿ ಅಮೃತವಿಪ್ಪಿಡೆಯ ಬಲ್ಲಡೆ ಮಹೇಶ್ವರನ ಮಹೇಶ್ವರ ಸ್ಥಲ. ಇಂಗಳವ ಕೆಡಿಸಿ ನಂದಿದಲ್ಲಿ ಆ ವಹ್ನಿಯ ಅಂಗವೆಲ್ಲಡಗಿತ್ತೆಂಬುದನರಿದಲ್ಲಿ ಪ್ರಸಾದಿಯ ಪ್ರಸಾದಿಸ್ಥಲ. ರತ್ನದ ಶಿಲೆ

ಯೊಡೆದು ಪುಡಿಯಾದಲ್ಲಿ ರತಿಯೆಲ್ಲಿ ಅಡಗಿತ್ತೆಂಬುವನರಿದಲ್ಲಿ ಪ್ರಾಣಲಿಂಗಿಯ ಪ್ರಾಣಲಿಂಗ ಸ್ಥಲ. ವಾಸನೆಯ ಕುಸುಮವ ಹೊಸೆದು ವಾಸನೆ ಹೋಗಿ ಆ ಸುವಾಸನೆಯೆಲ್ಲಡಗಿತ್ತೆಂಬುದನರಿದಲ್ಲಿ ಶರಣನ ಶರಣಸ್ಥಲ. ಅನಲ ಆಹುತಿಗೊಂಡು ಬೇವಲ್ಲಿ ಆ ಭಾವವ ಭಾವಿಸಬಲ್ಲಡೆ ಐಕ್ಯನ ಐಕ್ಯಸ್ಥಲ. ಇಂತೀ ಆರು ಸ್ಥಲದ ಭೇದವನರಿತು ಮೂರು ಆರಾದ ಉಭಯವ ಕಂಡು ಇಂತೀ ಆರರೊಳಗೆ ಆರಾದ ಭೇದವ ಭಾವಿಸಿ ತಿಳಿದು ಮುಕುರದೊಳಗಣ ಬಿಂಬವ ಪ್ರತಿಬಿಂಬಿಸಿ ಕಾಬುದು ಒಂದೋ ಎರಡೋ ಎಂಬುದ ತಿಳಿದಲ್ಲಿ ಸರ್ವಸ್ಥಲ ಸಂಪೂರ್ಣ ಆತ ಸರ್ವಾಂಗ ಲಿಂಗೈಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೮ ॥

೫೪೭

ಭಕ್ತನ ಭಕ್ತನ ಮಹೇಶ್ವರನ ಭಾವ ವಾಯುವಿನ ಮರೆಯ ನಾನಾ ಸುಳುಹಿನಂತೆ ಧರೆ ಪಂಕಜ ಜಲದಂತೆ ಮಹೇಶ್ವರನ ಮಹೇಶ್ವರನ ಪ್ರಸಾದಿಯ ಭಾವ. ತರುಗಂಧದ ಅನಿಲನಂತೆ ಪ್ರಸಾದಿಯ ಪ್ರಸಾದಿಯ ಪ್ರಾಣಲಿಂಗಿಯ ಭಾವ. ಮರೀಚಿಕಾ ಜಲದ ತೆರೆಯ ಹೊಳಹಿನ ಅರುಣನ ಕಿರಣವ ಗ್ರಹಿಸಿ ಕೊಂಡಂತೆ ಪ್ರಾಣಲಿಂಗಿಯ ಪ್ರಾಣಲಿಂಗಿಯ ಶರಣಸ್ಥಲದ ಭಾವ. ತಿಲ ತೈಲ ನೀರಿನಂತೆ ಶರಣನ ಶರಣನ ಐಕ್ಯಸ್ಥಲದ ಭಾವ. ದರ್ಪಣದ ಬಿಂಬ ಬಿಂಬಿಸುವ ಉಭಯ ದೃಷ್ಟಿ ಏಕವಾದಂತೆ. ಐಕ್ಯನ ಐಕ್ಯನ ಮಹಾದೈಕ್ಯನ ಭಾವ ಮಿಂಚಿನ ಕುಡಿವೆಳಗಿನ ಸಂಚದ ಸಂಚಲದ ಸಂಚಾರ ಸಂಚರಿಸುವ ಸರದಂತೆ. ಇಂತೀ ಸ್ಥಲಕ್ಕೆ ಸ್ಥಲ, ಭಾವಕ್ಕೆ ಭಾವ, ಜ್ಞಾನಕ್ಕೆ ಜ್ಞಾನ ವೇಧಿಸಿ ಭೇದಿಸುವಲ್ಲಿ ದೃಕ್ಕು ದೃಶ್ಯಕ್ಕೆ ಒಡಲಿಲ್ಲದಿರಬೇಕು ನಿಃಕಳಂಕ ಮಲ್ಲಿಕಾರ್ಜುನಾ ॥೩೯॥

೫೪೮

ಭಕ್ತನಾದರೆ ಧರಿತ್ರಿಯಂತಿರಬೇಕು ಮಹೇಶ್ವರನಾದರೆ ಅಪ್ಪುವಿನಂತಿರಬೇಕು. ಪ್ರಸಾದಿಯಾದಡೆ ವಹ್ನಿಯಂತಿರಬೇಕು. ಪ್ರಾಣಲಿಂಗಿಯಾದಡೆ ಸುಷುಪ್ತಿಗೊಂಡ ವಿಷದಂತಿರಬೇಕು. ಶರಣನಾದಲ್ಲಿ ಮೌನಿಯಂತಿರಬೇಕು. ಐಕ್ಯನಾದಲ್ಲಿ ಕಂಡ ಪಿಳ್ಳೆಯಂತಿರಬೇಕು. ಈ ಹೀಗರಿದಡೆ ಆರರಲ್ಲಿ ಲೇಸು, ಮೂರರಲ್ಲಿ ಮುಕ್ತಿ. ಇದ ಮೀರಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೪೦ ॥

೪೪೯

ಭಕ್ತನಾದಲ್ಲಿ ಬ್ರಹ್ಮನ ಒಡಲೊಡೆಯಬೇಕು. ಮಹೇಶ್ವರನಾದಲ್ಲಿ ವಿಷ್ಣುವಿನ ಚೇತನಕ್ಕೆ ಸಿಕ್ಕದಿರಬೇಕು. ಪ್ರಸಾದಿಯಾದಲ್ಲಿ ರುದ್ರನ ಬಂಧನಕ್ಕೆ ಹೊದ್ದದಿರಬೇಕು. ಪ್ರಾಣಲಿಂಗಿಯಾವಲ್ಲಿ ಈಶ್ವರನ ಗೊತ್ತ ಮೆಟ್ಟದಿರಬೇಕು. ಶರಣನಾದಲ್ಲಿ ಸದಾಶಿವ ಮೂರ್ತಿಯ ತಪ್ಪಲ ತಪ್ಪಿರಬೇಕು. ಐಕ್ಯನಾದಲ್ಲಿ ಪರಶಿವನೆಂಬ ಪ್ರಮಾಣು ನಷ್ಟವಾಗಿರಬೇಕು. ಇಂತೀ ಸ್ಥಲಂಗಳ ನೆಮ್ಮಿ, ತೆಪ್ಪವ ಹತ್ತಿ ಒತ್ತುವನಂತೆ ತೆಪ್ಪ ತಪ್ಪಲಿಗೆ ಸೇರಿದ ಮತ್ತೆ ಒತ್ತುವುದು ಹತ್ತುವುದೆ ? ಆ ಹೊಳೆ ಕಾಲಿಂಗೆ ಹೊಲಬಾದ ಮತ್ತೆ ಪೂರ್ವವಿತ್ತ ಉತ್ತರ ವತ್ತ ಉಭಯ ನಷ್ಟವಾದುದೆತ್ತ ಅತ್ತಲೇ ತನ್ನಿಷ್ಟ ಮತ್ತೆ ನಿಃಕಳಂಕ ವಸ್ತು ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

೫೫೦

ಭಕ್ತ ಮಹೇಶ್ವರ ಪ್ರಸಾದಿ ಇಂತೀ ತ್ರಿವಿಧವನರಿತು ಆ ತ್ರಿವಿಧ ಸ್ಥಾನಂಗಳಲ್ಲಿ ಕಾಯ ಜೀವ ಭಾವ ಈ ತ್ರಿವಿಧವನರಿತು ಕಾಯದ ಕರ್ಮವ ಕಳೆದು ಜೀವನ ಭವವ ಹಿಂಗಿಸಿ ಭಾವದ ಪ್ರಕೃತಿಯನೊಂದಿಸಿ ಇಷ್ಟಲಿಂಗವ ದೃಷ್ಟದ ತನುವಿಂಗೆ ಪ್ರಮಾಣಿಸುವಲ್ಲಿ ಉತ್ಪತ್ತಿ ಸ್ಥಿತಿಲಯಂಗಳ ಹುಟ್ಟು ಗೆಡಿಸಿ ನಿತ್ಯಾನಿತ್ಯವನೀಕ್ಷಿಸಿ ತೋರಿ ಹಸ್ತಮಸ್ತಕ ಸಂಯೋಗವ ಮಾಡ ಬೇಕು ಅದು ಗುರುಸ್ಥಲದ ಭಾವ. ಅಲ್ಲಿ ಮೂರು ಸ್ಥಲ ಲೇಪ ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೫೫೧

ಭಕ್ತ ಮಹೇಶ್ವರ ಸ್ಥಲ ಏಕವಾದಲ್ಲಿ ಶಿಲೆ ಬಿಂದುವಿನ ಚಂದ್ರನ ಬಿಂಬ ದಂತಿದ್ದಿತ್ತು. ಪ್ರಸಾದಿಯ ಪ್ರಾಣಲಿಂಗಿಯ ಸ್ಥಲ ಏಕವಾದಲ್ಲಿ ಅರಗಿನ ಪುತ್ಥ ಳಿಯ ಅವಯವಂಗಳು ಉರಿ ಹರಿದು ಪರಿಹರಿಸಿದಂತಿದ್ದಿತು. ಶರಣನ ಐಕ್ಯ ಸ್ಥಲದ ಭಾವ ಕರ್ಪುರದ ಅಗ್ನಿ ಆಹುತಿಗೊಂಡಂತಿದ್ದಿತ್ತು. ಇಂತೀ ಆರು ಮೂರರಲ್ಲಿ ಅಡಗಿ ನಿಂದ ಕೂಟಸ್ಥಲ ಲೆಪ್ಪದ ಮೇಗಳ ಚಿತ್ರದ ದೃಕ್ಕಿನ ದೃಶ್ಯದಂತಿದ್ದಿತ್ತು. ಇಂತೀ ತ್ರಿವಿಧ ಸ್ಥಲ ಏಕರೂಪಾದಲ್ಲಿ ಆಕಾಶದ ವರ್ಣದ ಬಹು ರೂಪು ಗರ್ಭೀಕರಿಸಿದ ನಿರಾಕಾರದಂತಿದ್ದಿತ್ತು. ನಾಮವಿಲ್ಲದ ರೂಪು, ಭಾವವಿಲ್ಲದ ಮಾತು, ನೀನಾನೆಂಬ ಸ್ಥಲ ಅದೇನು ಹೇಳಾ ನಿಃಕಳಂಕ ಮಲ್ಲಿ ಕಾರ್ಜುನಾ ॥ ೪೩ ॥

೫೫೨

ಭಕ್ತಂಗೆ ಪೃಥ್ವಿಯಂಗವಾಗಿ ಮಹೇಶ್ವರಂಗೆ ಅಪ್ಪು ಅಂಗವಾಗಿ ಪ್ರಸಾದಿಗೆ ಅಗ್ನಿಯಂಗವಾಗಿ ಪ್ರಾಣಲಿಂಗಿಗೆ ಪವನನಂಗವಾಗಿ ಶರಣಂಗೆ ಆಕಾಶವಂಗವಾಗಿ ಐಕ್ಯಂಗೆ ಮಹಾಬೆಳಗು ಅಂಗವಾದಲ್ಲಿ ಪಂಚತತ್ತ್ವಕೂಡಿ ಒಂದರಲ್ಲಿ ಐದುವಲ್ಲಿ ಷಡುಸ್ಥಲ ರೂಪವಾಯಿತ್ತು. ಆರು ವರ್ಣಕ್ಕೆ ಅಪ್ಪು ಅರಸಾದಂತೆ ಏಕ ಛತ್ರ ಮಹಾರಾಜ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೪೪ ॥

೫೫೩

ಭಕ್ತಂಗೆ ಬೀಜ ರೂಪು. ಮಹೇಶ್ವರಂಗೆ ಅಂಕುರ ರೂಪು. ಪ್ರಸಾದಿಗೆ ಸಸಿ ರೂಪು. ಪ್ರಾಣಲಿಂಗಿಗೆ ಫಲರೂಪು. ಶರಣಂಗೆ ಆ ಕೆಯ್ಯ ಕೊಯ್ಯುವ ರೂಪು. ಐಕ್ಯಂಗೆ ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂರುವಾಗ ಹೊಟ್ಟುಕಳೆದು ಭತ್ತ ನಿಂದು ಹುಲ್ಲು ಹೊರೆಗಟ್ಟಿತ್ತು. ಒಕ್ಕಿದ ಮೇಟಿ ಕಿತ್ತಿತ್ತು. ಹುಲ್ಲು ಮೆದೆಗೆ ಹೋಯಿತ್ತು. ಹೊಳ್ಳು ಗೂಡು ಬಿದ್ದಿತ್ತು. ನಿಂದ ಭತ್ತ ಪುನರಪಿ ಬೀಜವಹುದಕ್ಕೆ ಮುನ್ನವೆ ನಿಃಕಳಂಕ ಮಲ್ಲಿಕಾರ್ಜುನನೆಂಬ ಹಗೆಯದಲ್ಲಿ ಹೊಯ್ಯಿತ್ತು ॥ ೪೫ ॥

೫೫೪

ಭಕ್ತಿಸ್ಥಲ ಅಳವಟ್ಟಲ್ಲಿ ಮಾಟಕೂಟವೆಂಬ ಕೋಟಲೆ ಏತಕ್ಕೊ ? ಮಾಹೇಶ್ವರ ಸ್ಥಲ ಅಳವಟ್ಟಲ್ಲಿ ಅಹುದಲ್ಲವೆಂಬ ಭವದುಃಖವೇತಕ್ಕೊ ? ಪ್ರಸಾದಿಸ್ಥಳ ಅಳವಟ್ಟಲ್ಲಿ ಉಂಡಿಹೆ ಉಟ್ಟಿಹೆನೆಂಬ ದಂದುಗವೇತಕ್ಕೊ ? ಪ್ರಾಣಲಿಂಗಿಸ್ಥಳ ಅಳವಟ್ಟಲ್ಲಿ ಜನನ ಮರಣವೆಂಬ ಕುರುಹದೇತಕ್ಕೊ ? ಶರಣಸ್ಥಳ ಅಳವಟ್ಟಲ್ಲಿ ಸುಖದುಃಖ ಭೋಗಾದಿಗಳಲ್ಲಿ ಹೊಡೆಗೆಡೆಯಲೇತಕ್ಕೊ ? ಐಕ್ಯಸ್ಥಳ ಅಳವಟ್ಟಲ್ಲಿ ನಾಮರೂಪು ಕ್ರಿ ಎಂಬ ಭಾವವ ಲಕ್ಷಿಸಲೇತಕ್ಕೊ ? ಇಂತೀ ಇವು ಮಿಾರಿದ ಆರಂಕಣದ ಮನೆಯ ಬಾಡಗೆಯ ಹಿಡಿದು ಘನಕಿರಿದೆಂದು ಹೊಯಿದಾಡುವರಂತೆ ಈ ದೂರಿನ್ನಾರಿಗೆ ಹೇಳುವೆ? ಗಾರಾಗದ ಮುನ್ನವೆ ತೋರಿಕೆ ಏತಕ್ಕಡಗದು ನಿಃಕಳಂಕ ಮಲ್ಲಿಕಾರ್ಜುನಾ ॥ ೪೬ ॥

೫೫೫

ಭಕ್ತಿಸ್ಥಲ ಅಳವಟ್ಟವಂಗೆ ಮಹೇಶ್ವರಸ್ಥಲವಿಲ್ಲ. ಮಹೇಶ್ವರ ಸ್ಥಲ ಅಳವಟ್ಟವಂಗೆ ಪ್ರಸಾದಿಸ್ಥಲವಿಲ್ಲ. ಪ್ರಸಾದಿಸ್ಥಲ ಅಳವಟ್ಟವಂಗೆ ಪ್ರಾಣಲಿಂಗಿಸ್ಥಲವಿಲ್ಲ. ಪ್ರಾಣಲಿಂಗಿಸ್ಥಲ ಅಳವಟ್ಟವಂಗೆ ಶರಣಸ್ಥಲವಿಲ್ಲ. ಶರಣಸ್ಥಲ ಅಳವಟ್ಟವಂಗೆ ಐಕ್ಯಸ್ಥಲವಿಲ್ಲ. ಐಕ್ಯಸ್ಥಲ ಅಳವಟ್ಟವಂಗೆ ನಾನಾಸ್ಥಲ ನಿಸ್ಥಲವಾಯಿತ್ತು. ಸ್ಥಲಕ್ಕೆ ಕ್ರೀಯ್ಯಾಗಿ ನಿಸ್ಥಲಕ್ಕೆ ನಿರವಯವಾಗಿ ನಿಜವಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೫೫೬

ಭಕ್ತಿಸ್ಥಲ ಬ್ರಹ್ಮನಾಶನ. ಮಹೇಶ್ವರಸ್ಥಲ ವಿಷ್ಣುನಾಶನ. ಪ್ರಸಾದಿಸ್ಥಲ ರುದ್ರನಾಶನ. ಪ್ರಾಣಲಿಂಗಿಯಸ್ಥಲ ಈಶ್ವರನಾಶನ. ಶರಣಸ್ಥಲ ಸದಾಶಿವ ನಾಶನ. ಐಕ್ಯಸ್ಥಲ ಪರವಸ್ತುಭಾವ ನಾಶನ. ಇಂತೀ ಸ್ಥಲಂಗಳನಾರೋಪಿಸುವಲ್ಲಿ ಪೂರ್ವವನಾಧರಿಸಿ ಉತ್ತರವ ನಿರೀಕ್ಷಿಸಿ ಮೇಲಣ ನಿಶ್ಚಯಪದವ ನಿಜವೆಂದು ನಿಶ್ಚಯಿಸಿದಲ್ಲಿ ನಿಃಕಳಂಕ ಮಲ್ಲಿಕಾರ್ಜುನನ ಸ್ಥಲನಿಸ್ಥಲವನಯ್ದಿತ್ತು ॥ ೪೮ ॥

೫೫೭

ಭಕ್ತಿಸ್ಥಲ ಮಹೇಶ್ವರನ ನಿರ್ವೀಜ. ಆ ನಿರ್ವೀಜ ಪ್ರಸಾದಿಯ ಪ್ರಣಮ. ಆ ಪ್ರಣಮ ಪ್ರಾಣಲಿಂಗಿಯ ಎರಡಳಿದ ಅರಿವು. ಆ ಅರಿವು ಶರಣನ ಪರಿಪೂರ್ಣ ಕಳೆ. ಆ ಕಳೆ ನಿಷ್ಪತ್ತಿಯಾದಲ್ಲಿ ಐಕ್ಯನ ನಿರವಯ. ಆ ನಿರವಯ ವಸ್ತು ಬೇರೊಂದೆಡೆ ಕುರುಹುಗೊಂಡಡೆ ಅದು ನಿನ್ನದಲ್ಲ. ಎನ್ನಂಗಕ್ಕೋಸ್ಕರವಾಗಿ ಲಿಂಗವಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೪೯ ॥

೫೫೮

ಭಕ್ತಿಸ್ಥಲವಾರು, ಮಹೇಶ್ವರಸ್ಥಲವಾರು, ಪ್ರಸಾದಿಸ್ಥಲವಾರು, ಪ್ರಾಣಲಿಂಗಿಸ್ಥಲವಾರು, ಶರಣಸ್ಥಲವಾರು, ಐಕ್ಯಸ್ಥಲನ ಐಕ್ಯ ಆರೆಂಬಲ್ಲಿ ನೇತಿಗಳದು ಸ್ಥಲ ನಿಂದ ಮತ್ತೆ ಐಕ್ಯನ ಆರು ಕೂಟವಾವುದಯ್ಯಾ ? ಅದು ದರ್ಪಣದ ಭಾವದೊಪ್ಪ. ಅದು ಭಾಗೀರಥಿಯ ಅಪ್ಪುವಿನ ಭೇದ. ಇದು ಆರಾರಭಾವಕ್ಕೂ ತಪ್ಪದಸ್ಥಲ. ಸಂದೇಹ ಉಳ್ಳನ್ನಕ್ಕ ಷಟ್ಸ್ಥಲ ಸಂದೇಹ ನಿಂದು ಒಂದೆಂದಲ್ಲಿ ಏಕಸ್ಥಲ. ಏಕಸ್ಥಲ ಪ್ರತಿರೂಪಾಗಿ ಕರ್ತೃ ಭೃತ್ಯನೆಂಬ

ಉಭಯ ರೂಪಾಯಿತ್ತು. ಉಭಯದ ರೂಪಿಂದ ಹಲವು ಸ್ಥಲ ಒಲವರ ವಾಯಿತ್ತು. ಆ ಹೊಲಬ ತಿಳಿದು ಸಲೆ ವಸ್ತು ಒಂದೆಂದಲ್ಲಿ ಸ್ಥಲಲೇಪ ನಿಃಕಳಂಕ ಮಲ್ಲಿಕಾರ್ಜುನ ಲಿಂಗವೆಂಬ ಕುರುಹು ಅಡಗಿದಲ್ಲಿ ॥ ೫೦ ॥

೫೫೯

ಭಾವ ತ್ರಿವಿಧ ನಿರ್ಭಾವ ತ್ರಿವಿಧ ದಂಪತಿ ಸಂಬಂಧವಾಗಿ ಆರು ಸ್ಥಲ ವಾಯಿತ್ತು. ಭೃತ್ಯಸ್ಥಲ ಮೂರು ಕರ್ತೃಸ್ಥಲ ಮೂರು ಈರಾರು **ಕೂಡಿ** ನಡೆವಲ್ಲಿ ಲಕ್ಷವಾಯಿತ್ತು. ಲಕ್ಷ ಅಲಕ್ಷವನರಿತು ಹಿಡಿವ ಬಿಡುವ ಭಾವ ಒಡಗೂಡಿದಲ್ಲಿ ಕಡೆನಡು ಮೊದಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೫೧ ॥

೫೬೦

ಭೃತ್ಯ ರೂಪೊಂದು ಭಕ್ತಿಸ್ಥಲ. ಕರ್ತೃ ರೂಪೊಂದು ವಸ್ತು. ಈ ಉಭಯದ ಜಗದ ಹಾಯಿ ನಡೆಯಬೇಕಾದಲ್ಲಿ, ಮೂರು ಭಕ್ತಿಸ್ಥಲವಾಯಿತ್ತು ಮೂರು ಕರ್ತೃ ಸ್ಥಲವಾಯಿತ್ತು. ಭಕ್ತ, ಮಹೇಶ್ವರ, ಪ್ರಸಾದಿ ಈ ತ್ರಿವಿಧ ಭಾವ ಭಕ್ತಿಸ್ವರೂಪು. ಪ್ರಾಣಲಿಂಗಿ, ಶರಣ, ಐಕ್ಯ, ಈ ತ್ರಿವಿಧ ಕರ್ತೃಸ್ವರೂಪು. ಇಂತೀ ಉಭಯ ಭೇದದಲ್ಲಿ ವಸ್ತು ಮರ್ತ್ಯಕ್ಕೆ ಬಂದು ಮುಂದೆ ಆಶ್ರಯವ ಕಟ್ಟಿದ ಕಾರಣ ಭಕ್ತಿಗೆ ಬಸವಣ್ಣನಾಗಿ ಆ ಭಕ್ತಿಯನೊಪ್ಪುಗೊಂಬುದಕ್ಕೆ ವಸ್ತುಪ್ರಭುದೇವನಾಗಿ ಬಂದಕಾರಣದಲ್ಲಿ ಉಭಯಸ್ಥಲ ಗೋಚರಿಸಪೆಂದು ಷಟ್ಸ್ಥಲವಾಯಿತ್ತು. ಆ ಸ್ಥಲದ ನಾಮ ರೂಪಿನಲ್ಲಿ ನಾನಾ ಸ್ಥಲ ಒಡಲಾಯಿತ್ತು. ಪೂರ್ವಗತಿಯಾದಲ್ಲಿ ಸ್ಥಲ ಉತ್ತರಗತಿಯಾದಲ್ಲಿ ನಿಸ್ಥಲ. ಉಭಯ ನಾಮರೂಪು ಲೇಪವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ನಿರ್ಲೇಪವಾದನು ॥ ೫೨ ॥

೫೬೧

ಮಣ್ಣು ನೀರಿನಂತೆ ಆದಾಗವೇ ಭಕ್ತನ ಭಕ್ತಿಸ್ಥಲ. ಭಂಗಾರ ಬಣ್ಣದಂತೆ ಆದಾಗವೇ ಮಾಹೇಶ್ವರನ ಮಾಹೇಶ್ವರ ಸ್ಥಲ. ಅನಲ ಅನಿಲನಂತಾದಾಗವೇ ಪ್ರಸಾದಿಯ ಪ್ರಸಾದಿಸ್ಥಲ. ದೀಪ ಒಂದರಲ್ಲಿ ಉದ್ಭೈಸಿ ಪ್ರತಿಜ್ಯೋತಿ ಪ್ರಮಾಣಿಸಿದಾಗವೇ ಪ್ರಾಣಲಿಂಗಿಯ ಪ್ರಾಣಲಿಂಗಸ್ಥಲ. ಶೃತ ಶೃತವ ಕೇಳಿ ದೃಷ್ಟ ದೃಷ್ಟವ ಕಂಡು ಅನುಮಾನ ಅನುಮಾನವನರಿದು ಸುಮ್ಮಾನ ತಲೆದೋರದಿದ್ದಾಗವೇ ಶರಣನ ಶರಣಸ್ಥಲ. ವಾರಿ ಶಿಲೆಯಂತೆ ಮಣಿಯದಾರ

ದಂತೆ, ಬುದ್ಬುದದ ನೀರಿನಂತೆ, ಮಣಿ ವಜ್ರದ ಬಂಧದಂತೆ, ಮರೀಚಿಕಾಜಲವ ತುಂಬಿ ತಂದ ಕುಂಭದಂತೆ, ಸಾಕಾರವಳಿದು ನಿರಾಕಾರ ಉಳಿದಲ್ಲಿ, ಐಕ್ಯನ ಐಕ್ಯ ಸ್ಥಲ. ಇಂತೀ ತ್ರಿವಿಧ ಭಕ್ತಿಸ್ಥಲ, ಇಂತೀ ತ್ರಿವಿಧ ಪ್ರಾಣಲಿಂಗಿ ಸ್ಥಲ, ಇಂತೀ ತ್ರಿವಿಧ ಶರಣಸ್ಥಲ, ಇಂತೀ ತ್ರಿವಿಧ ಐಕ್ಯಸ್ಥಲ, ಇಂತೀ ಷಟ್ಸ್ಥಲ ದ್ವಾದಶಂಗ ಳಾಗಿ ಕೂಡುವಲ್ಲಿ ತ್ರಯೋದಶಭಾವವಾಯಿತ್ತು. ಉಭಯವನೇಕೀಕರಿಸು ವಲ್ಲಿ ಒಂದೊಡಲಾದುದಾಗಿ, ರೂಪು ನಿರೂಪಿನಲ್ಲಿದ್ದು ನಿರೂಪನ ಕೂಡಬೇ ಕೆಂಬ ಕೂಟ ತ್ರಿವಿಧದ ಆಟವಾಯಿತ್ತು. ಗುರುವಿಂಗೂ ಗುರು ಉಂಟೆಂಬ ಭಾವ, ಲೀಗಕ್ಕೆ ಆಶ್ರಯ ಉಂಟೆಂಬುದೊಂದು ವಾಸ, ಜಂಗಮುಕ್ಕೂ ರುದ್ರನ ಪಾಶವ ಕೂಡಬೇಕೆಂಬುದೊಂದು ಆಶೆ, ಇಂತೀ ಮೂರರ ಮೂರು, ಈರಾರರ ಭಂಡ, ಇಪ್ಪತ್ತೈದರ ಅಗ್ಗದಲ್ಲಿ ಕೊಂಡು ದಶಹತ್ತರಲ್ಲಿ ಮಾರಿ ಒಂದೇ ಲಾಭ ವಾಯಿತ್ತು ಆ ಲಾಭವ ಮೊದಲಿನಲ್ಲಿ ಸರ್ವಭಕ್ತಿಸಂಪೂರ್ಣವಾಗಿ ಭಕ್ತಿಯ ನರಿವುದಕ್ಕೆ ಬಸವಣ್ಣನಾಗಿ, ನಿತ್ಯಾನಿತ್ಯವನರಿವುದಕ್ಕೆ ಚೆನ್ನಬಸವಣ್ಣನಾಗಿ, ಆಕಾರ ನಿರಾಕಾರಂಗಳಲ್ಲಿ ಭಕ್ತಿವಿರಕ್ತಿಯ ತಾಳ್ದ ಚೇತನ ಮೂರ್ತಿಗಳಲ್ಲಿ ಅವಿರಳನಾಗಿ ನಿಜವನಯ್ದಿದ ಪ್ರಭುದೇವರು ಮುಂತಾದ ಸಕಲ ಪ್ರಮಥರ ಪ್ರಸಾದವೆನಗೆ ಷಟ್ಸ್ಥಲ. ಇಂತೀ ಇವರೊಳಗಾದ ಏಕೋತ್ತರ ಶತಸ್ಥಲ ಮೊದಲಾದ ಭಾವವು ನಿಮ್ಮಲ್ಲಿಯೇ ಎಂದು ಅರಿದ ಮತ್ತೆ ಅದನೇನೆಂದು ಉಪಮಿಸುವೆ ? ಅದು ಭಾವವಿಲ್ಲದ ಬಯಲು ನಾಮವಿಲ್ಲದ ನಿರ್ಲೇಪ ನಿಜ ನೀನೆ ಎನ್ನುತ್ತಿದ್ದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೫೬೨

ಮೂರು ಸ್ಥಲದಲ್ಲಿ ಅಯ್ದಿಹೆನೆಂದಡೆ ಮಲ ಮೂರು ಮುಟ್ಟಲೀಸದಿವೆ ನೋಡಾ. ಆರು ಸ್ಥಲದಲ್ಲಿ ಕೂಡಿಹೆನೆಂದಡೆ ಅರಿ ಷಡುವರ್ಗಂಗಳು ಹಗೆಯಾಗಿ ಇವೆ ನೋಡಾ. ಐದು ಗುಣದಲ್ಲಿ ಅರಿದಿಹೆನೆಂದಡೆ ಈರೈದು ಕೊಂದು ಕೂಗು ತ್ತಿವೆ ನೋಡಾ. ಇವ ಸಂದನಳಿದು ಒಂದರಲ್ಲಿ ಕೂಡಿಹೆನೆಂದಡೆ ಇಂದ್ರಿಯಂಗಳ ಬಂಧ ಬಿಡದು. ಈ ಉಭಯ ಸಂದೇಹ ನೀನು ಎನ್ನಲ್ಲಿ ಬಂದರೆ ಬಿಡುಗು ನಿಃಕಳಂಕ ಮಲ್ಲಿಕಾರ್ಜುನಾ ॥ ೫೪ ॥

೫೬೩

ರುದ್ರ ತತ್ತ್ವಲಿಂಗ ಮೂರ್ತಿಯಾಗಿ, ಈಶ್ವರ ತತ್ತ್ವಶರಣ ಮೂರ್ತಿ ಯಾಗಿ, ಸದಾಶಿವ ತತ್ತ್ವ ಐಕ್ಯಕೂಟಸ್ಥನಾಗಿ, ನಾಮರೂಪು ಭಾವವಳಿದಲ್ಲಿ

ಪರಶಿವಮೂರ್ತಿ ಪರಾಪರದೊಳಗಾಯಿತ್ತು. ಅದು ಆರೋಹ ಅವರೋಹ ವಾದಲ್ಲಿ ಬಸವಣ್ಣ ಚೆನ್ನಬಸವಣ್ಣನೆಂದು ಒಂದು ಮೂರಾಗಿ, ಮೂರು ಆರಾಗಿ, ಆರು ಮಿಶ್ರವಾಗಿ ನೂರೊಂದರಲ್ಲಿ ತೋರಿ ಸ್ಥಲಕುಳಂಗಳೆಲ್ಲವು ಸುವರ್ಣದ ಸಾರದಂತೆ ಉರಿಗೆ ಕರಗಿ ಉರಿಯಡಗೆ ಮುನ್ನಿನಂತಿರವು. ಆ ತೆರ ಸ್ಥಲ ಕುಳವಿವರ, ಸ್ಫಟಿಕದ ಬಹು ವರ್ಣದಂತೆ ವರ್ಣವಳಿಯೆ ಘಟ ಉಳಿದ ಮತ್ತೆ ಮುನ್ನಿನಂದ ನಿಃಕಳಂಕ ಮಲ್ಲಿಕಾರ್ಜುನಾ ॥ ೫೫ ॥

೫೬೪

ಲಿಂಗಮೂರು, ಸ್ಥಲವಾರೆಂಬುದು ತಮ್ಮ ಸಂದೇಹದ ಗುಣ. ಲಿಂಗ ಒಂದು ಸ್ಥಲ ಒಂದೆಂಬುದು ಖಂಡಿತನ ಗುಣ. ಅವರವರೆಂದಂತೆ ಎನ್ನದೆ, ತನ್ನಿರವ ಭಿನ್ನವ ಮಾಡದೆ, ಮೂಢಸಾಧನೆಯವನೊಡನೆ ಕಾಡುವ ತೆರ ದಂತೆ ಅವನಿಗೆ ಚೊಕ್ಕೆಯ ಇವನಿಗೆ ನಿಶ್ಚಯ ಉಭಯವ ನೀವೇ ಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

೫೬೫

ವಾಯುವಿನ ಬೆಂಬಳಿಯ ಗಂಧ ಅದಾವ ಠಾವಿನಲ್ಲಿ ನಿಲ್ಲುವುದು ? ವಾರಿಯ ಬೆಂಬಳಿಯ ತೆರೆ ಅದಾವ ಠಾವಿನಲ್ಲಿ ಸೇರಿ ನಿಲ್ಲುವುದು ? ಈ ಭೇದವ ನರಿತು ತಿಳಿದಲ್ಲಿ ಅದು ಸ್ವಾನುಭಾವಸಿದ್ಧ ಐಕ್ಯಲೇಪ ನಿಃಕಳಂಕ ಮಲ್ಲಿ ಕಾರ್ಜುನಾ ॥ ೫೭ ॥

೫೬೬

ವೇದಂಗಳ ಉತ್ತರದಲ್ಲಿ ಶಾಸ್ತ್ರದ ಮಧ್ಯದಲ್ಲಿ ಪುರಾಣದ ಮೊದಲಲ್ಲಿ, ಪೂರ್ವ ಆದಿಯ ಇಷ್ಟದಲ್ಲಿ ಮಧ್ಯಭಾವ ಆತ್ಮನಲ್ಲಿ ಉತ್ತರ ತುತ್ತತುದಿ ಯಲ್ಲಿ ಮೆಟ್ಟಿ ನೋಡಲಾಗಿ ಹಿಂದೆಸೆಯಲ್ಲಿ ಕಂಡೆ. ಸ್ಥೂಲ ಸೂಕ್ಷ್ಮ ಕಾರಣ ಈ ಮೂರ ಮುಂದೆಸೆಯಲ್ಲಿ ಕಂಡೆ. ಭೂತ ಭವಿಷ್ಯದ್ವರ್ತಮಾನವ ಹಿಂದೆಸೆ ಮುಂದೆಸೆಯ ಬಿಟ್ಟು ಊರ್ಧ್ವಾಂಗ ಅಭಿಮುಖವಾಗಿ ನೋಡಲಾಗಿ ಮಹ ದಾಕಾಶವ ಕಂಡೆ. ಆ ಮಹದಾಕಾಶದ ಮಧ್ಯದಲ್ಲಿ ಒಂದು ನಿಃಕಲತತ್ತ್ವ, ಆ ನಿಃಕಲ ತತ್ತ್ವದ ರೂಪು ಆರೋಹ ಅವರೋಹವಾಗಿ ಎಡೆಯಾಡು ತ್ತಿಪ್ಪುದು. ಅದು ಅಂಗಕ್ಕೆ ಲಿಂಗವಾಗಿ ಆತ್ಮಂಗೆ ಅರಿವಾಗಿ ಹಿಂದು ಮುಂದ ಒಂದೇಯಾಗಿಪ್ಪ ನಿಜನಿಂದ ನಿಲವು ನಿಃಕಳಂಕ ಮಲ್ಲಿಕಾರ್ಜುನನು ದ್ವಂದ್ವ ವಳಿದ ನಿರಂಗ ॥ ೫೮ ॥

೫೬೭

ಸತ್ಕ್ರಿಯಾವಂತಂಗೆ ಭಕ್ತಿಸ್ಥಲವಿಲ್ಲ. ನಿರ್ಮಲ ಚಿತ್ತಂಗೆ ಮಹೇಶ್ವರ ಸ್ಥಲವಿಲ್ಲ. ಪರಿಪೂರ್ಣ ಭಾವಿಗೆ ಪ್ರಸಾದಿಸ್ಥಲವಿಲ್ಲ. ಉಭಯವಳಿದವಂಗೆ ಪ್ರಾಣಲಿಂಗಿಸ್ಥಲವಿಲ್ಲ. ಶ್ರುತ ದೃಷ್ಟ ಅನುಮಾನಕ್ಕೆ ಒಳಗಾಗನಾಗಿ ಶರಣ ಸ್ಥಲವಿಲ್ಲ. ಕೂಡಿಹೆ ಕೂಡೆಹೆನೆಂಬ ಭಾವವಿಲ್ಲದನಾಗಿ ಐಕ್ಯಸ್ಥಲವಿಲ್ಲ. ಇಂತೀ ಸ್ಥಲದಿಂದ ಸ್ಥಲವನ್ನೈಯ್ದುಸ್ಥಲ ಲೇಪವಾದ ಮತ್ತೆ ಮೀರಿದ ತೆರನ ನೀವೇ ಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೯ ॥

೫೬೮

ಸ್ಥಲವೆಂಬುದು ಘಟ, ಕುಳವೆಂಬುದು ಆತ್ಮ. ಇಂತೀ ಸ್ಥಲ ಕುಳವ ನರಿವುದು ಮಹಾ ಜ್ಞಾನ. ಇಂತೀ ಸ್ಥಲವನರಿತು ಕುಳವ ಕಂಡು ಇಂತೀ ಮೂರರ ಹೊಲಬ ಬಿಡಬೇಕು. ಬಿಡುವಲ್ಲಿ ಜಗವನರಿಯದೆ ಅರಿವಲ್ಲಿ ಭವಕ್ಕೆ ಒಡಲಿಲ್ಲದೆ ಈಚೆಯಡಿಯ ಬಿಟ್ಟು ಆಚೆಯಡಿಯ ಮೆಟ್ಟದೆ ನಿಹಿತದಡಿಯ ಮಡಮುಟ್ಟದೆ ಉಂಗುಷ್ಟ ಊರದೆ ದಾಟಬೇಕು ಆತನಡಿಗೆ ನಿಃಕಳಂಕ ಮಲ್ಲಿಕಾರ್ಜುನಾ ॥ ೬೦ ॥

೫೬೯

ಸ್ಥಲವ ಕಂಡಡೇನು ಸ್ಥಲವನರಿಯಬೇಕು. ಸ್ಥಲವನರಿತಡೇನು ಸ್ಥಲವ ವೇಧಿಸಬೇಕು. ಸ್ಥಲವ ವೇಧಿಸಿವಲ್ಲಿ ತಥ್ಯ ಮಿಥ್ಯಂಗಳು ಸತ್ತು ರಾಗದ್ವೇಷ ಪುಣ್ಯಪಾಪಂಗಳು ಎತ್ತಲೆಂದರಿಯದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸತ್ತೆ ನೆಂದು ಹೃದಯ ನಿಶ್ಚಯಿಸಿಕೊಂಡಿರಬೇಕು ॥ ೬೧ ॥

೫೭೦

ಸಂಚಿತ ಪ್ರಾರಬ್ಧ ಆಗಾಮಿಗಳೆಂಬ ತ್ರಿಸಂಚವನರಿತು ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವನರಿತು ಜ್ಞಾನ ವೈರಾಗ್ಯವೆಂಬ ಭಿತ್ತಿಯ ಕಂಡು ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಷ್ಟಯವ ಕಂಡು ರಸ ಗಂಧ ರೂಪು ಶಬ್ದಸ್ಪರ್ಶಂಗಳಲ್ಲಿ, ದಶವಾಯು ಅಷ್ಟಮದ ನವದ್ವಾರಂಗಳಲ್ಲಿ ಶೋಕ ಮೋಹ ರಾಗ ವಿರಾಗಂಗಳಲ್ಲಿ, ಇಂತಿವಲ್ಲಿ ಆತ್ಮನ ನಾನಾಗುಣ ಭೇದಂಗಳಲ್ಲಿ ಹಿಡಿವುದ ಹಿಡಿದು, ಬಿಡುವುದ ಬಿಟ್ಟು, ಒಡಗೂಡುವುದನೊಡ ಗೂಡಿ, ಮಹಾನಿಜ ಸಾಧ್ಯವಾದಲ್ಲಿ, ಕಾಯದ ಅಳಿವು ಜೀವದ ಭಾವ ಇವೆರ

ಡಳಿವನ್ನಕ್ಕ ಅಂಗಕ್ಕೆ ಆಚಾರ ಮನಕ್ಕೆ ಅರಿವು ಅರಿವಿಂಗೆ ಒಂದು ಕುರುಹು. ಆ ಕುರುಹು ನಿಃಪತ್ತಿಯಹನ್ನಕ್ಕ ಶೂಲದ ಮೇಲಣ ಘಟ ಚೇತನಹೋಹೆನ್ನಕ್ಕ ಅಭಿಲಾಷೆಯಿಂದ ಕೆಲವರ ಬೋಧಿಸಬೇಡ. ಇಂತೀ ಬಿಡು ಮುಡಿಗಳಲ್ಲಿ ಕಳೆದುಳಿದ ಮಹಾತ್ಮಂಗೆ ಹಿಂದುಮುಂದಿಲ್ಲ, ಸಂದು ಸಂಶಯವಿಲ್ಲ. ಪನ್ನಗಂಗೆ ತಲೆ ಬಾಲವಲ್ಲದೆ ತನ್ನಲ್ಲಿ ಉದಿಸಿದ ಕಾಳಕೂಟಕ್ಕುಂಟೇ ತಲೆ ಬಾಲವೆಂಬ ಭೇದ ? ಅರಿವನ್ನಕ್ಕ ಸ್ಥಲ, ಅರಿವು ಕರಿಗೊಂಡಲ್ಲಿ ಪರಿಪೂರ್ಣ. ಉಭಯದೊಡಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೬೨ ॥

೫೭೧

ಹಸಿದು ಅಶನವ ಮುಸಕಿಟ್ಟುಕೊಂಡಡೆ ಹಸಿವು ಹರಿದುದುಂಟೇ ? ತೃಷೆಯಾಗಿ ಅಪ್ಪುವಿನಲ್ಲಿ ಒಚ್ಚತ ಮುಳುಗಿದಡೆ ಆಪ್ಯಾಯನ ಅರತುದುಂಟೇ? ನಿಹಿತದ ಸ್ಥಲವ ಎಷ್ಟು ನುಡಿದಡೇನು ? ಆ ಸ್ಥಲ ಆತ್ಮನಲ್ಲಿ ನಿಹಿತವಾಗಬೇಕು. ಅದು ಮೃತ್ತಿಕೆಯ ತಿಟ್ಟದ ಉಭಯದಲ್ಲಿ ನಿಂದ ಕರುವಿನಂತೆ ಆ ತ್ರಿವಿಧದ ನೇತಿಗಳೆದು ನಿಂದ ಲೋಹದಂಗದಂತೆ. ಅದು ಭಕ್ತನ ಸತ್ಯದ ನಿಜ, ಅದು ಮಹೇಶ್ವರನ ಮಹಾಕೂಟ, ಅದು ಪ್ರಸಾದಿಯ ಪ್ರಸನ್ನ, ಅದು ಪ್ರಾಣಲಿಂಗಿಯ ಪರಮಸುಖ, ಅದು ಶರಣನ ಸನ್ನದ್ಧ, ಅದು ಐಕ್ಯನ ಅದೃಶ್ಯ. ಇಂತೀ ಷಡುಸ್ಥಲ ಭರಿತನಾಗಿ ಚಿತ್ರದ ಲೆಪ್ಪ ಒಡೆದಂತೆ ಮತ್ತೆ ಲಕ್ಷಣ ಉಂಟೇ ? ಲಕ್ಷಿಸಿ ಅಲಕ್ಷವಾದಲ್ಲಿ ಪೂರ್ವದಲ್ಲಿ ಕಂಡು ಉತ್ತರದಲ್ಲಿ ತಿಳಿದು ನಿಶ್ಚಯವಾದಲ್ಲಿ ಉಭಯದ ಕಕ್ಷೆ ಎತ್ತ, ನಾನೆತ್ತ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೬೩ ॥

೫೭೨

ಅರಿವಲ್ಲಿ ಉಭಯ, ಅರಿದಲ್ಲಿ ಏಕ. ಏಕಕ್ಕುಂಟೆ ಬಹುಶಾಖೆಯ ಸ್ಥಲ ? ಪೂರ್ವದಲ್ಲಿ ಸ್ವಸ್ಥನಾಗಿ ಉತ್ತರದಲ್ಲಿ ನಿಶ್ಚಯವಾದ ಮತ್ತೆ ಉಭಯದ ತತ್ತು ಮತ್ತರಿಗೆ ಹೊಡದಾಡಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೬೪ ॥

೫೭೩

ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲವನರಿಯಬೇಕೆಂಬಿರಿ. ಅರಿವುದಕ್ಕೆ ಕುರುಹು ತೆರದರುಶನವ ಕಾಣಿರಣ್ಣಾ. ಭಕ್ತ ಮಾಹೇಶ್ವರ ಪ್ರಸಾದ ಇವು ಮೂರು ಭಕ್ತನಂಗ. ಪ್ರಾಣಲಿಂಗಿ ಶರಣ

ಐಕ್ಯ ಇವು ಮೂರು ಜಂಗಮದಂಗ. ಮೂರಕ್ಕಾರು ಸತಿಪತಿ ಭೇದವನರಿದು ಆ ಆರರ ಒಡಗು ಇಪ್ಪತ್ತೈದರ ಬೀಜದ ಭೇದವನಂದು ಮತ್ತೆ ನೂರೊಂದು ಆರರೊಳಗಡಗಿ ಆರು ಐದರಲ್ಲಿ ನಿಂದು ಐದು ಮೂರರಲ್ಲಿ ನಿಂದು ಭೇದಿಸಿ ಮೂರು ಒಂದರಲ್ಲಿ ನಿಂದು ಸಂದೇಹವಳಿಯಿತ್ತು ಎನ್ನ ಭ್ರಮೆ ಹಿಂಗಿತ್ತು. ಇಂತೀ ನಾ ನೆಟ್ಟ ಸ್ಥಳ ಕುಳಂಗಳೆಲ್ಲವು ಆರಿಗತೀತವಾದ ಮತ್ತೆ ಭವದ ಗುರುವೆನಲೇಕೆ ? ಅವತಾರದಲ್ಲಿ ಲಿಂಗವೆನಲೇಕೆ ? ಅರಿದು ಮರೆದವನ ಜಂಗಮದೇವನೆನಲೇಕೆ ? ಇಂತಿವ ಕಂಡೂ ಕಾಣದ ನಂಬಿಯೂ ನಂಬದ ಸಂದೇಹಿಗಳಿಗೇಕೆ ಗುರುಲಿಂಗಜಂಗಮ ? ಪ್ರಮಥರ ಕ್ರಿಯೆಯಲ್ಲಿ ಮೋಸ ಜ್ಞಾನಕ್ಕೆ ಲಾಭವೇ ? ಇದು ದೃಷ್ಟ ದರ್ಪಣದ ಒಳಹೊರಗಿನಂತೆ ತಿಳಿದು ನೋಡಾ, ಉಭಯ ಸ್ಥಲವೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ ॥ ೬೫ ॥

# ೪. ಅಷ್ಟಾವರಣ

೫೭೪

ಅಚ್ಚಿನಲ್ಲಿ ಬೇಟದರಿವು ದೃಷ್ಟವಾಯಿತ್ತು. ಮನ ಮಚ್ಚಿ ಕೊಟ್ಟಲಿಂಗ ಹೃತ್ಕಮಲದಲ್ಲಿ ನೆಟ್ಟುದಿಲ್ಲಾ. ದೃಷ್ಟ ತಾನಾದಲ್ಲದೆ ಇದಿರಿಗೆ ದೃಷ್ಟವ ಕಟ್ಟಬಾರದು. ಕಟ್ಟಿಕೊಂಡ ಮತ್ತೆ ಗುರಿಯನೆಚ್ಚ ಕೈಯ್ಯ ಲಾಹರಿಯಂತಿರಬೇಕು. ರಣವ ಗೆಲಿದ ಧೀರ ಉದಾರನಂತಿರಬೇಕು. ಹೀಗಲ್ಲದೆ ಗುರುಸ್ಥಲದ ಅಡಕವೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೫೭೫

ಅಜಾಮಲ ಲಿಂಗವಾದಲ್ಲಿ ಲೆಕ್ಕದ ಬುಡ ನಿಶ್ಚಯವಾದಲ್ಲಿ, ಮತ್ತೆ ಕಾಷ್ಟದ ವೇಷ ಗುರುಚರಲಿಂಗವಾದಲ್ಲಿ, ಎನ್ನ ಕಾಯಕದ ಕಾಷ್ಟ. ಚಿನ್ನವಾದಲ್ಲಿ, ಮತ್ತಾವಾವ ಗುಣ ಅವಗುಣ ಹಿಂಗಿ ಲೇಸಾದಲ್ಲಿ ಅದು ತನ್ನಯ ವಿಶ್ವಾಸದಿಂದ ತನಗೆ ಆರೆಂಬುದನರಿತು ಕುರಿತು ಆ ಭಾವಕ್ಕೆ ಬಲೋತ್ತರನಾಗಿ ಇದ್ದಾತನಿರವು ಎಂತಿದ್ದಡಂತೆ ಸುಖ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೫೭೬

ಅಜಗಳದಲ್ಲಿ ಬಿಡು ಮೊಲೆ ಇದ್ದಡೆ ಅದಕ್ಕೆ ಗಡಿಗೆಯನಿಡಬಹುದೇ ? ದೃಢವೆನಗಿಲ್ಲದಲ್ಲಿ ಒಡಗೂಡುವಡಕ್ಕೆಡೆದೆರಹುಂಟೇ ? ತುಡುಗುಣಿಯಲಿ ಮಿಾಸಲುಂಟೇ ? ಅಡೆಯನರಿಯದೆ ಅರಿದವಂಗೆ ಮೃಡಭಕ್ತಿಯುಂಟೇ ? ಇಂತೀ ಭೇದದಲೊಡಗೂಡುವ ಗುರುಶಿಷ್ಯರ ಇರವು ಪರಿಭ್ರಮಣಿ ಬಂದು ಶರೀರವನೊಡಗೂಡಿದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೫೭೭

ಅಂಗಭವಿ ಗುರುವಿನ ಹಂಗು. ಮನಭವಿ ಲಿಂಗದ ಹಂಗು. ರುಚಿಭವಿ ಜಂಗಮದ ಹಂಗು. ಇಂತೀ ತ್ರಿವಿಧದ ಭೇದವನರಿಯಬೇಕು. ಅಂಗಭವಿಯ ಕಳೆದಲ್ಲದೆ ಭಕ್ತನ ಮಾಡಬಾರದು. ಮನಭವಿಯ ಕಳೆದಲ್ಲದೆ ಲಿಂಗವ ಕೊಡಬಾರದು. ತನುರುಚಿಯ ಕಳೆದಲ್ಲದೆ ಜಂಗಮದ ಪ್ರಸಾದವ ಕೊಳ್ಳಲಾಗದು. ಹೀಗಲ್ಲದೆ ಮಾತಿನ ಬಣಬೆಯ ಕಲಿತು ನೀತಿಯ ಹೇಳುವರೆಲ್ಲರು ತ್ರಿವಿಧಕ್ಕಾಚಾರ್ಯರಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೫೭೮

ಆಚಾರಗುರು, ಸಮಯಗುರು, ಜ್ಞಾನಗುರು. ಆಚಾರಗುರು ಬ್ರಹ್ಮನ ಕಲ್ಪವ ತೊಡೆಯಬೇಕು. ಸಮಯಗುರು ವಿಷ್ಣುವಿನ ಸ್ಥಿತಿಯ ಹರಿಯಬೇಕು. ಜ್ಞಾನ ಗುರು ಉತ್ಪತ್ತಿಸ್ಥಿತಿಲಯ ಮೂರನು ಕಳೆಯಬೇಕು. ಇಂತೀ ತ್ರಿವಿಧ ಗುರು ಏಕವಾದಲ್ಲಿ ಸದ್ಗುರು ಮದ್ಗುರು ಮಹಾಗುರುವೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೫೭೯

ಆತ್ಮ ತೇಜಕ್ಕೆ ಬೀಗಿ ಬೆರದು ಶಾಸ್ತ್ರದ ಸಂತೋಷಕ್ಕೆ ಸಾಧ್ಯವಾದಿಹೆವೆಂದು ವಚನದ ರಚನೆಗೆ ರಚಿಸಿದೆವೆಂದು ತರ್ಕಕ್ಕೆ ಹೊತ್ತು ಹೋರುವನ್ನಕ್ಕ ಗುರುವೆಂತಾದಿರೋ ? ಘಟದ ಮಧ್ಯದಲ್ಲಿ ಪೂಜಿಸಿಕೊಂಬವನಾರೆಂದರಿಯದೆ ಫಲವ ಹೊತ್ತಿಪ್ಪ ಮರನಂತೆ ಕ್ಷೀರವ ಹೊತ್ತಿಪ್ಪ ಕೆಚ್ಚಲದಂತೆ ನಿನ್ನ ನೀನೇ ತಿಳಿದು ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೫೮೦

ಆತ್ಮತೇಜವ ಬಿಟ್ಟಾಗಲೆ ಗುರುವನರಿದ. ಮನವಿಕಾರವ ಬಿಟ್ಟಾಗಲೆ ಲಿಂಗವನರಿದ. ಧನವಿಕಾರವ ಬಿಟ್ಟಾಗಲೆ ಜಂಗಮವನರಿದ. ಇಂತೀ ತ್ರಿವಿಧ ನಾಸ್ತಿಯಾದಂಗಲ್ಲದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸಹಜ ಭಕ್ತನಲ್ಲ ॥ ೭ ॥

೫೮೧

ಆ ಪರವನರಿದುದೆ ಕಪ್ಪರ. ತ್ರಿವಿಧವ ಮುರಿದುದೆ ಕಟ್ಟಿಗೆ. ಸರ್ವವ ಕೇಳಿಕೇಳದಂತಿರ್ಪುದೆ ಕುಂಡಲ. ರುದ್ರನ ಪಾಶವ ಕಿತ್ತು ಘಟ್ಟಿಗೊಂಬುದೆ ಜಡೆ. ಜ್ಞಾನ ವಿಜ್ಞಾನ ಸುಜ್ಞಾನ ಮಹಾಜ್ಞಾನ ಅಪರಜ್ಞಾನ ಇಂತೀ ಪಂಚ ಜ್ಞಾನವ ದಹ್ಯ ಮಾಡಿ ಬ್ರಹ್ಮಲಿಖಿತವ ತೊಡೆವಂತೆ ಧರಿಸುವದೆ ತ್ರಿಪುಂಡ್ರ. ಇಂತೀ ವೇಷವ ಧರಿಸಿ ಭಕ್ತನೆಂಬ ಭೂಮಿಯಲ್ಲಿ ಸಕಲ ಕರಣಂಗಳ ತೀರ್ಥ ಯಾತ್ರೆಯಂ ಮಾಡುತ್ತ ಕಳೆದುಳಿಯ ಬಲ್ಲಡೆ ಆತನೆ ಲಿಂಗಜಂಗಮ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೫೮೨

ಕಲ್ಲಿನೊಳಗೆ ವಲ್ಲಭನಿದ್ದಾನೆಂದು ಎಲ್ಲರು ಬಳಲುತಿಪ್ಪರು ನೋಡಾ ಅಲ್ಲೆಲ್ಲಿಯೂ ಕಾಣೆ. ತನ್ನಲ್ಲಿ ಕುರುವಿಟ್ಟು ಇದಿರಿಟ್ಟಲ್ಲಿಯಲ್ಲದೆ ಮತ್ತೆಲ್ಲಿ ಇಲ್ಲ

ವಾಗಿ. ಇದು ಬಲ್ಲಹರ ಬಲ್ಲಾತನಿಗಲ್ಲದೆ ತನ್ನ ಮರೆದು ಅನ್ಯವ ಕಂಡಿಹೆ ನೆಂದರೆ ಅದು ನನ್ನಿಯಲ್ಲ, ಹುಸಿ. ಮನ್ನಣೆಗೆ ಸಿಕ್ಕಿದ ಶಿಲೆಯ ಬಣ್ಣಿಸುತ್ತಿಪ್ಪ ವರ ನೋಡಾ ಬಣ್ಣಿಸುತ್ತಿಪ್ಪ ಅಣ್ಣಗಳೆಲ್ಲರು ಸನ್ನದ್ಧರಾದರೂ ಕೋಟೆಯಲ್ಲಿ ಸಿಕ್ಕಿ ಸತ್ತುದಿಲ್ಲ. ಎಲ್ಲರು ಕೋಟೆಯ ಹೊರಗಿದ್ದು ಸತ್ತು ಕೆಟ್ಟರಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೫೮೩

ಕಳ ಬಂದ ಕಳ್ಳ ಬೆಳ್ಳನ ಕಾಲದೆಸೆಯಲ್ಲಿ ಮರೆದು ನಿದ್ರೆಗೈದುದ ನೋಡಾ. ಈ ತೆರನರಿಯದೆ ಎಚ್ಚತ್ತ ಮತ್ತೆ ಮನೆಯ ಒಡೆಯನೆಂದಡೆ ಮೆಚ್ಚುವರೇ ? ಇದು ಕಾರಣ ಅರಿವ ಮನ ಪಾಶಕ್ಕೆ ಸಿಕ್ಕಿ ಪಾಷಾಂಡಿಗಳಪ್ಪ ಪಾಶವ ಹೊತ್ತು ತಿರುಗುವ ವೇಷಧಾರಿಗಳೆಲ್ಲರು ಜಂಗಮವಲ್ಲದೆ ಜ್ಞಾನ ಜಂಗಮವಲ್ಲ. ಕರದಲ್ಲಿ ಕಪ್ಪರವಿಲ್ಲ. ಕೈಯಲ್ಲಿ ಕಟ್ಟಿಗೆ ಇಲ್ಲ. ಕರ್ಣದಲ್ಲಿ ಮುದ್ರೆ ಇಲ್ಲ. ಶಿರದಲ್ಲಿ ಜಟಾ ಬಂಧವಿಲ್ಲ. ಕಕ್ಷೆಯಲ್ಲಿ ಭಸ್ಮ ಗಂಟಿಕೆ ಇಲ್ಲ. ಇಂತಿವೆಲ್ಲವು ರುದ್ರನ ವೇಷವ ಹೊತ್ತು ಗ್ರಾಸಕ್ಕೆ ತಿರುಗುವ ಘಾತಕರೆಲ್ಲರು ಜಂಗಮವೇ ? ಮನದಾಶೆಯ ಬಿಟ್ಟು, ರೋಷವ ಕಿತ್ತು, ಮಹದಾಶ್ರಿತನಾಗಿ ನಾನೆಂಬುದ ತಾನರಿದು ನಾ ನೀನೆಂಬ ಉಭಯವನೇನೆಂದರಿಯದೆ ತಾನು ತಾನಾದ ನಿಃಕಳಂಕ ಮಲ್ಲಿಕಾರ್ಜುನ ॥ ೧೦ ॥

೫೮೪

ಕುರುಹ ಕೊಡುವಲ್ಲಿ ಗುರುವಾಗಿ, ವೇಷವ ತೊಟ್ಟು ತಿರುಗುವಲ್ಲಿ ಚರವಾಗಿ, ಭಾಷೆಯ ಕೊಟ್ಟು ಮಾಡುವಲ್ಲಿ ಭಕ್ತನಾಗಿ, ಈ ತ್ರಿವಿಧದಾಟವು. ಇದರ ಭೇದ ಘನಲಿಂಗವ ಕೂಡಿಹೆನೆಂಬ ಕೂಟದ ಭೇದ. ಎತ್ತ ಸುತ್ತಿ ಬಂದಡೂ ವಂಕದ ತಪ್ಪಲಿನಲ್ಲಿ ಹೋಗಬೇಕು. ಇದು ನಿಶ್ಚಯ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೫೮೫

ಕಂತೆಯೊಳಗಣ ಕಪ್ಪಡವ ಹರಿದಲ್ಲದೆ ಕಾಯವಂಚಕನಲ್ಲ. ಕಪ್ಪರ ದೊಳಗಣ ಆಪ್ಯಾಯನವ ಹರಿದಲ್ಲದೆ ಜೀವ ಭಾವಕನಲ್ಲ. ಕಂಗಳೊಳಗಣ ಕಾಳಿಕೆ ಹಿಂಗಿದಲ್ಲದೆ ಜ್ಞಾನ ಭಾವಕನಲ್ಲ. ಕಾಯದೊಳಗಣ ಕಟ್ಟಿಗೆಯ ಮುರಿದು ಮಾಯೆಯೊಳಗಣ ಕಂತೆಯ ಹರಿದು, ಮನದೊಳಗಣ ಕಪ್ಪರವ

ನೊಡೆದು, ಸುತ್ತಿಸುಳಿದಾಡುವ ಕಣ್ಣ ಕಿತ್ತು ನಿಶ್ಚಯದ ನಿಜದಲ್ಲಿ ಚರಿಸುವ ಜ್ಞಾನ ಜಂಗಮಕ್ಕೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥೧೨॥

೫೮೬

ಕೊಂದು ಕುಟ್ಟಿ ದಂಡವ ತಕ್ಕೊಂಬುವಂಗೆ ಅದು ಬಂದಿಕಾರತನವೋ ಕೃಪೆಯೋ ಇದರಂದವ ತಿಳಿಯಬೇಕು. ಬಂದುಂಡು ಹೋಹ ಜಂಗಮಕ್ಕೆ ಇದರ ಸಂದನರಿಯದಿದ್ದರೆ ಬಂಧದಲ್ಲಿ ಬಿದ್ದ ವಿಹಂಗನಂತೆ ಇದರ ದಂದುಗವ ನೋಡಲಾರೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೫೮೭

ಕ್ರೀವಂತಂಗೆ ಅಂಗ ಭವಿ. ನಿಃಕ್ರೀವಂತಂಗೆ ಮನಭವಿ. ವೇಷವ ಹೊತ್ತು ತಿರುಗುವ ಜಂಗಮಕ್ಕೆ ಆಶೆ ಭವಿ. ಇನ್ನಾನೇವೆನಯ್ಯಾ ? ಹಿಡಿದ ಎಡೆಯು ಕಾದ ಮತ್ತೆ ಪಿಡಿವುದಿನ್ನಾವುದೋ ? ಆತ್ಮನು ಅಲಗಾದ ಮತ್ತೆ ಕೊಲು ವಹಗೆ ಬೇರಿಲ್ಲವಾಗಿ, ಹೇಳುವ ಜ್ಞಾನಿ ಸಂಸಾರಿಯಾದ ಮತ್ತೆ ಕೆಳೆಗೊಂಡವ ಕೆಟ್ಟನೋಡಾ. ಸಾಧನೆಯಿಂದ ಬಂದ ಓದುಗ ಕಳನೇರಿ ಕೈಯ ಮರೆದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೫೮೮

ಗುರು ಜಂಗಮದ ಪಾದೋದಕವ ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಆ ಲಿಂಗ ಮೊದಲೋ ಗುರುಚರ ಮೊದಲೋ ? ಅನಾದಿ ಬೀಜ ಲಿಂಗ. ಆದಿ ಬೀಜ ಗುರುಚರ. ಇಂತೀ ಉಭಯವನರಿದಲ್ಲಿ ಗುರುಚರಕ್ಕೆ ಲಿಂಗವೇ ಆದಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೫೮೯

ಗುರುವನರಿದವಂಗೆ ಗುರುವಿಲ್ಲ. ಲಿಂಗವನರಿದವಂಗೆ ಲಿಂಗವಿಲ್ಲ. ಜಂಗಮ ನರಿದವಂಗೆ ಜಂಗಮವಿಲ್ಲ. ಪ್ರಸಾದನರಿದವಂಗೆ ಪ್ರಸಾದವಿಲ್ಲ. ಪಾದೋದಕವ ನರಿದವಂಗೆ ಪಾದೋದಕವಿಲ್ಲ. ಇಂತಿವೆಲ್ಲವನರಿದು ಮರೆದವಂಗೆ ಅಲ್ಲಿಯೂ ಇಲ್ಲ. ಇಲ್ಲಿಯೂ ಇಲ್ಲ. ಮತ್ತೆ ಎಲ್ಲೆಡೆಯಲ್ಲಿಯೂ ತಾನೆ ಲೀಲೆಗೆ ಹೊರಗೆ. ಕಾಡ ಕೆಡದವನು ನಿರ್ಭಾವನು ನೀನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೬ ॥

೫೯೦

ಗುರುವನರಿಯದ ಕಾರಣ ತನುವ ಸವೆಯಬೇಕೆಂಬರು. ಲಿಂಗವನರಿಯದ ಕಾರಣ ಮನವ ಸವೆಯಬೇಕೆಂಬರು. ಜಂಗಮವನರಿಯದ ಕಾರಣ ಧನವ ಸವೆಯಬೇಕೆಂಬರು. ಇಂತೀ ತ್ರಿವಿಧವನರಿಯದ ಕಾರಣ ಮಾಟ ಕೂಟಕ್ಕೆ ಮಹಾ ಮನೆಯ ಕಟ್ಟಿ ಮಾಡುತ್ತಿದ್ದರಯ್ಯಾ ಮಹಾಗಣಂಗಳು. ತಾವು ಸ್ವೇಚ್ಛಾಪರರಲ್ಲದೆ ಬ್ರಹ್ಮನ ಹಂಗಿನಿಂದ ಬಂದ ಗುರುವನರಿಯರಾಗಿ ಅಹಂಕಾರವ ಮರೆದಲ್ಲಿಯೇ ಗುರುವನರಿದು, ಕೈಯಲ್ಲಿ ಕೊಟ್ಟು ಚಿತ್ತಪ್ರಕೃತಿ ಹರಿದಲ್ಲಿಯೇ ಲಿಂಗವನರಿದು, ಮಾಟದ ಅಲಸಿಕೆಯ ಅರಿದಾಗವೇ ಜಂಗಮವ ನರಿದು, ಇಂತೀ ತ್ರಿವಿಧ ಸ್ಥಲ ನಿರುತಂಗಲ್ಲದೆ ವರ್ಮವಿಲ್ಲಂದೆ. ಖ್ಯಾತಿ ಲಾಭಕ್ಕೆ ಮಾಡುವ ಭಕ್ತಿ ಆಣಿಯಲ್ಲಿ ಬಿದ್ದ ಬಣ್ಣವನರಸುವಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭ ॥

೫೯೧

ಗುರುವಾದರೆ ಕಾಲಿಲ್ಲದಿರಬೇಕು. ಲಿಂಗವಾದಡೆ ಬಾಯಿಲ್ಲದಿರಬೇಕು. ಜಂಗಮವಾದಡೆ ಅಂಗವಿಲ್ಲದಿರಬೇಕು. ಇವರು ಮೂವರು ಮೂವ್ವರ ಹಂಗಿಗರು. ತಾನೇತರ ಹಂಗಿಗನಪ್ಪ ಆ ಠಾವ ತೋರಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೫೯೨

ಗುರುವಿಲ್ಲವೆಂದೆ ಶಿಕ್ಷೆಯೊಳಗಣ ನೆಲೆಯ[1]ನರಿಯರಾಗಿ. ಲಿಂಗವಿಲ್ಲವೆಂದೆ ಜಂಗಮದ ತ್ರಿಕರಣವನರಿಯರಾಗಿ. ಜಂಗಮವಿಲ್ಲವೆಂದೆ ಗುರುವಿನ ಅನಾದಿ ಸಂಸಿದ್ಧಿಯನರಿಯರಾಗಿ. ತ್ರಿವಿಧವು ಇಲ್ಲವೆಂದೆ ತನ್ನ ತಾನರಿಯರಾಗಿ. ತನ್ನನರಿದಲ್ಲಿಯೇ ನಿಃಕಳಂಕ ಮಲ್ಲಿಕಾರ್ಜುನನೊಡಲುಗೊಂಡು ಕುರುಹಾದ ॥ ೧೯ ॥

೫೯೩

ಗುರುವೆಂದಡೆ ತನು, ಲಿಂಗವೆಂದಡೆ ಆತ್ಮ, ಜಂಗಮವೆಂದಡೆ ಆತ್ಮನರಿವು. ತ್ರಿವಿಧ ವ್ಯಾಪ್ತಿಯ ಕಳೆದುಳಿದ ಸಮ್ಯಕ್‌ಜ್ಞಾನದ ಸಂಬಂಧನು ನೀನೆ. ಅನುಪಮಲಿಂಗ ನಿರವಯ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

---

೧. ನಿಳಯ (ಬ)

ಅರ್ಥ— ಗುರುವೆಂಬದರ ಅರ್ಥವೇನಂದರೆ ಲಿಂಗದಲ್ಲಿ ಸಂಬಂಧವಾಗಿಪ್ಪುದು. ಲಿಂಗವೆಂಬುದರ ಅರ್ಥವೇನಂದರೆ ಮನದಲ್ಲಿ ಸಂಬಂಧವಾಗಿಪ್ಪುದು. ಜಂಗಮವೆಂಬುದರ ಅರ್ಥವೇನಂದರೆ ಚಿದಾತ್ಮನಲ್ಲಿ ಸಂಬಂಧವಾಗಿಪ್ಪುದು. ಮಲತ್ರಯಂಗಳ ವ್ಯಾಪ್ತಿಯ ಬೇರ್ಪಡಿಸಿ ತನುವೇ ಗುರು, ಮನವೇ ಲಿಂಗ, ಚಿದಾತ್ಮನೇ ಜಂಗಮವಾಗಿ, ಅವಶೇಷವಾಗಿರ್ದ ಸಮ್ಯಜ್ಞಾನದಲ್ಲಿ ಕೂಟಸ್ಥನಾದ ಶರಣನೇ ಶಿವನು ಉಪಮಿಸಬಾರದ ಲಯ ಗಮಂನಂಗಳಿಗೆ ಕಾರಣವಾದ ಎಲೆ ಶಿವನೇ ಎಂಬುದರ್ಥ.

೫೯೪

ಗುರುವೆಂಬೆನೆ ಕಂಡಕಂಡವರಿಗೆ ? ಲಿಂಗವಕೊಟ್ಟು ದ್ರವ್ಯಕ್ಕೆ ಹಂಗಿಗನಾದ. ಲಿಂಗವೆಂಬೆನೆ ? ಸಂಸಾರಕ್ಕೆ ಅಂಗವಕೊಟ್ಟ. ಜಂಗಮವೆಂಬೆನೆ ? ಕಂಡ ಕಂಡವರ ಅಂಗಳವ ಹೊಕ್ಕು ಬಂಧನಕ್ಕೊಳಗಾದ. ನಿನಗಿದರಂದವಾವುದಿಲ್ಲ ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೫೯೫

ಗುರು ಶಿಷ್ಯ ಸಂಬಂಧ ಕಮಠ ಕೂರ್ಮರಂತಿರಬೇಕು. ಗುರು ಶಿಷ್ಯ ಸಂಬಂಧ ಬಿತ್ತಳಿದ ಕಾರ್ಪಾಸದ ಪಾವಕನ ಸಂಗದಂತಿರಬೇಕು. ಗುರು ಶಿಷ್ಯ ಸಂಬಂಧ ಪಯಂದ ಅಪ್ಪುವಿನ ಸಂಗದಂತಿರಬೇಕು. ಗುರು ಶಿಷ್ಯ ಸಂಬಂಧ ಲೆಕ್ಕಣಿಕೆಯೊಳಡಗಿದ ಸುರೇಖೆಯ ಭಿತ್ತಿಯಂತಿರಬೇಕು. ಹೀಗಲ್ಲದೆ ಹಸ್ತಮಸ್ತಕ ಸಂಯೋಗವ ಮಾಡಿದ ಗುರುವಿನ ಇರವು ಒಡೆದ ಗಡಿಗೆಯಲ್ಲಿ ಸುಧೆಯ ತುಂಬಿ ಅದು ಇರಬೇಕೆಂದಡೆ ಪಡಿಗೆ ತೆರಹಿಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

೫೯೬

ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ ಈ ತ್ರಿವಿಧ ಭೇದವ ವಿವರಿಸಿ ಹೇಳಿಹೆ ಕೇಳಿರಣ್ಣಾ. ಗುರುಸ್ಥಲವೆ ವೇದಾಂತ. ಲಿಂಗಸ್ಥಲವೆ ಸಿದ್ಧಾಂತ. ಜಂಗಮಸ್ಥಲವೆ ಪ್ರಸಿದ್ಧಾಂತ. ಇಂತಿ ತ್ರಿವಿಧ ಭೇದ ಐಕ್ಯವಹ ತೆರನ ಸಮರ್ಪಣವೆಂತಹದಣ್ಣಾ ? ಗುರುಸ್ಥಲ ಸಂಗನಬಸವಣ್ಣನಾದ. ಲಿಂಗಸ್ಥಲ ಚೆನ್ನಬಸವಣ್ಣನಾದ. ಜಂಗಮಸ್ಥಲ ಪ್ರಭುವಾಗಿ ಬಂದ. ಬಂದಬಂದ ಇವರಂದವ ತಿಳಿದು ನೋಡಾ. ಗುರುಲಿಂಗ ಜಂಗಮವೆಂಬ ಸಂದೇಹದಲ್ಲಿ ನಿಂದು ಆನಂದಿಸುತ್ತಿರ್ಪ ಭವದ ಬಲಿಕೆಯ ಅಣ್ಣಗಳು ಕೇಳಿರೋ. ಕಾಯ ಬಸವಣ್ಣನಾದ. ಜೀವ ಚೆನ್ನಬಸವಣ್ಣನಾದ. ಅವರರಿವು ಕಳೆ ಪರಿಪೂರ್ಣ ಪರಂಜ್ಯೋತಿ

ಪ್ರಭುವಾದ. ಇಂತೀ ತ್ರಿವಿಧ ಭೇದವ ತೊಟ್ಟು ಬಂದು, ಭಕ್ತಿ ಮುಕ್ತಿ ವಿರಕ್ತಿ ಯಿಂದ ಮಹಾ ಮನೆಯ ಮಾಡಿ ಕೆಟ್ಟ ಬಸವಣ್ಣ. ಹೇಳಿ ಕೆಟ್ಟ ಚೆನ್ನ ಬಸವಣ್ಣ. ಉಂಡಿಹೆನೆಂದು ಗರ್ವದಲ್ಲಿ ಕುಳಿತು ಕೆಟ್ಟ ಪ್ರಭುದೇವರು. ಅಂತುಕ ದಲ್ಲಿರ್ದ ಸಂಗನ ಬಸವಣ್ಣ. ಸಂಕಲ್ಪದಲ್ಲಿದ್ದ ಚೆನ್ನಬಸವಣ್ಣ. ಸಂದೇಹದಂಗವ ತಾಳಿದ್ದ ಪ್ರಭುದೇವರು. ಇಂತಿವರಂಗದಲ್ಲಿ ಲಿಂಗ ಉಂಟೆಂಬೆನೆ ಜ್ಞಾನಕ್ಕೆ ದೂರ. ಇಲ್ಲವೆಂಬೆನೆ ಸಮಯಕ್ಕೆ ದೂರ. ಇಂತೀ ಉಭಯದ ಸಂದನಳಿದ ರೆಂಬೆನೆ ಪ್ರಭು ಸಂದೇಹಿಯಾದ. ಇವರೆಲ್ಲರು ಆಡುವ ಅಂದಣಗಿತ್ತಿಯ ಮನೆಯ ಉಂಬಳಿಕಾರರಾದರು. ಇದಕ್ಕೆ ಸಂದೇಹವಿಲ್ಲ. ಗುರುವೆಂದರೆ ಸರ್ವ ರಿಗೆ ಬೋಧೆಯ ಹೇಳಿ ಕರ್ಮಕಾಂಡಿಯಾದ. ಲಿಂಗವೆಂದಡೆ ಯುಗ ಜುಗಂಗಳ ಗೊಳಗಾಗಿ ಪ್ರಳಯಕ್ಕರುಹನಾದ. ಪ್ರಭುದೇವರು ಜಂಗಮುವೆಂಬೆನೆ ? ಗೆಲ್ಲ ಸೋಲಕ್ಕೆ ಹೋರಿ ಕಾಯದೊಳು ನಾನಿಲ್ಲವೆಂದು ಚಾವಟಿಗೊಳಗಾದ. ಎಲ್ಲಿಯು ಕಾಣೆ ಲೀಲೆಗೆ ಹೊರಗಾದವನ. ಭಕ್ತಿ ಮುಕ್ತಿ ವಿರಕ್ತಿ ಲೇಪವಾಗಿ ನಾನೆನ್ನದೆ ಇದಿರೆನ್ನದೆ ಜಗದಲ್ಲಿ ತಾನೇನು ಎನ್ನದಿಪ್ಪುದೆ ತ್ರಿವಿಧ ಸಮರ್ಪಣ. ಆಚಾರ ಭಾವ ವಿಕಾರ ರಹಿತ ನಿರಾಕಾರ ನಿರುತ ಪರಿಪೂರ್ಣನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೩ ॥

೫೯೭

ಗುರು ಭಾವಿಸಿದಲ್ಲಿ ಲಿಂಗವ ಮರೆಯಬೇಕು. ಲಿಂಗವ ಭಾವಿಸಿದಲ್ಲಿ ಜಂಗಮವ ಮರೆಯಬೇಕು. ಜಂಗಮವ ಭಾವಿಸಿದಲ್ಲಿ ಪ್ರಸಾದವ ಮರೆಯ ಬೇಕು. ಪ್ರಸಾದವ ಭಾವಿಸಿದಲ್ಲಿ ಪಾದೋದಕವ ಮರೆಯಬೇಕು. ಪಾದೋ ದಕವ ಭಾವಿಸಿದಲ್ಲಿ ಪ್ರಸನ್ನವನರಿಯಬೇಕು. ಅರಿದರಿದು ಮರೆವುದು ಎಡೆಯ ಕುರುಹಲ್ಲ ಮತ್ತೆ ಬೇಡುವವರ ಬಯಕೆಯು. ಎನ್ನೊಡೆಯ ಒಡಗೂಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೪ ॥

೫೯೮

ಚಿತ್ತಶುದ್ಧಾತ್ಮನಾದಲ್ಲಿಯೇ ಮಜ್ಜನದ ಮಂಡೆ. ಅಂಗದಾಪ್ಯಾಯನ ವರತಲ್ಲಿಯೇ ಉಂಬುದಕ್ಕೆ ಬಾಯಿ ಸಂದು ಸಂಶಯವ ಹರಿದಲ್ಲಿಯೇ ಲಿಂಗ ಸಂಸರ್ಗ. ಇದರಂದವ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೫ ॥

೫೯೯

ಜಗದಲ್ಲಿ ಸುಳಿವ ಗುರುಗಳ ಉಪದೇಶದ ಬೋಧೆಯ ಚೋರತನವ ಕಂಡು ಅಂಜಿದೆನಯ್ಯಾ. ಮನೆಯವರ ಕೂಡಿಕೊಂಡು[೧] ಅನ್ನವನಿಕ್ಕಿದಲ್ಲಿ ಸುಳಿವ ಚೋರರ ಕಂಡು ಗುರುವೆನ್ನಲಾರೆ. ಅದೆಂತೆಂದಡೆ ಮಹತ್ತರವಪ್ಪ ಜ್ಯೋತಿರ್ಮಯ ಲಿಂಗವ ಕೈಯ್ಯಲ್ಲಿ ಕೊಟ್ಟು, ಪಾತಕವಪ್ಪ ಫಲಭೋಗಂಗಳ ಕೈಯಲ್ಲಿ ಕೊಂಡು ಅಜಾತರೆಂದಡೆ ನಾಚಿದೆನಯ್ಯಾ. ಇಂತೀ ಭ್ರಾಂತರ ಕಂಡು ವಂದಿಸಲಾಗದು. ತನ್ನ ರೋಗಕ್ಕೆ ನಿರ್ವಾಹವ ಕಾಣದೆ ಇದಿರ ರೋಗವ ಮಾಣಿಸಿಹೆನೆಂದು ಮದ್ದಿನ ಚೀಲವ ಹೊತ್ತು ಸಾವಕದ್ದೆಹಕಾರರಂತೆ, ಕ್ಷುದ್ರ ಜೀವಿಗೆಲ್ಲಿಯದೋ ಸದ್ಗುರು ಸ್ಥಲ ? ಮತ್ತೆ ಸದ್ಗುರುವಾದರೆ ಆವ ಬದ್ಧನಾಗದಿರಬೇಕು. ತಂತ್ರದಲ್ಲಿ ಹೋಹ ಯಂತ್ರದಂತಿರಬೇಕು. ಮಂದಾರದಲ್ಲಿ ತೋರುವ ಸುಗಂಧದಂತಿರಬೇಕು. ಇಂತಪ್ಪ ಗುರುವಿಂಗೆ ಇಹವಿಲ್ಲ ಪರವಿಲ್ಲ ಭಾವಕ್ಕೆ ಭ್ರಮೆ ಇಲ್ಲ. ಆ ಗುರುವಿನ ಕೈಯಲ್ಲಿ ಬೋಧಿಸಿಕೊಂಡ ಶಿಷ್ಯಂಗೆ ತುಪ್ಪವನಿಕ್ಕಿದ ಚಿತಿಯಂತೆ ಸ್ಫಟಿಕವ ಸಾರಿದ ಒರತೆಯಂತೆ, ಹೀಗಲ್ಲದೆ ಗುರುಶಿಷ್ಯ ಸಂಬಂಧವಾಗಬಾರದು. ಇದನರಿಯದಿದ್ದಡೆ ಅಂಧಕನ ಕೈಯ ಅಂಧಕ ಹಿಡಿದಂತೆ ಪಂಗುಳನಲ್ಲಿ ಚಂದವನರಸುವನಂತೆ. ಸ್ವಯಾನಂದ ಭರಿತ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೬೦೦

ತಾನು ಹೊಳೆಯಲ್ಲಿ ಮುಳುಗಿ ಹೋಗುತ್ತ ಈಸಬಲ್ಲವರ ಗಂಡನೆಂಬಂತೆ ತಾ ನಾಶಕನಾಗಿ ಇದಿರಿನಲ್ಲಿ ನಿರಾಶೆಯನರಸುವನಂತೆ. ತಾನಿದ್ದು ತನ್ನ ಕಾಣದೆ ಕೆಟ್ಟು ಹೋದೆನೆಂದು ಅರಸುವನಂತೆ. ಇಂತೀ ಗುಣವುಳ್ಳನ್ನಕ್ಕ ಗುರುವಲ್ಲ. ಆ ಗುರುವಿನ ಬೆಂಬಳಿಯಿಂದಾದುದು ಲಿಂಗವಲ್ಲ. ಇದಕ್ಕೆ ಮುಂಡಿಗೆಯ ಹಾಕಿದೆ. ಎತ್ತುವ ಧೀರರನಾರುವ ಕಾಣೆ. ಇದು ಸತ್ತ ಹೆಣ. ನೆತ್ತಿ ಅರ್ತಿಯ ಮಾಡುವನಂತೆ ಸಚ್ಚಿದಾನಂದ ನಿಃಕಳಂಕ ಮಲ್ಲಿಕಾರ್ಜುನನವರ ಬಲ್ಲನಾಗಿ ಒಲ್ಲನು ॥ ೨೭ ॥

---

೧. ಮನೆಯ ಮಾಡಿಕೊಂಡು (ಡ)

೬೦೧

ಕಣುವಿರಬಲ್ಲುದೇ ಅತಿ ಶುಷ್ಕವಾದ ಪರ್ಣ ತರುವಿಡಿದ ಅನಲನ ನಡುವೆ? ಎಡಗೈ ಬಲ್ಲುದೆ ನಿರ್ಮಲವ? ಶುದ್ಧ ಚಿತ್ತ ಪರಮ ವಿರಕ್ತನ ಭಾವ ವಸ್ತುವ ಮುಟ್ಟಿದಲ್ಲಿ ತ್ರಿವಿಧ ಮಲಕ್ಕೆ ಸಿಕ್ಕುವದೆ? ಅರು ತನ್ನೊಳಗಿದ್ದರೂ ತಾನವರೊಳಗಿದ್ದರೂ ಕಾಜಿನ ಕುಪ್ಪಿಗೆಯಲಿಪ್ಪ ನೀರೆಣ್ಣೆಯಂತೆ ಸ್ಫಟಿಕದ ಮಧ್ಯದಲ್ಲಿ ಬಹು ವರ್ಣದ ಹೋರಿಯ ತೋರಿ ಹಿಡಿವವನಂತೆ ಅದು ಸ್ವಯ ವಲ್ಲದಿಪ್ಪ ಬಹು ಕ್ರಿಯಾ ವರ್ತಕನ ಲಕ್ಷಣದ ಭಿತ್ತಿಯ ತೆರನಂತೆ, ನಿಃಕಳಂಕ ಮಲ್ಲಿಕಾರ್ಜುನನೊಡಗೂಡಿದ ಪರಮವಿರಕ್ತನ ಭೇದ ॥ ೨೮ ॥

೬೦೨

ತೊಳೆದು ಕಂಡಿಹೆನೆಂದಡೆ ಅಂಗದವನಲ್ಲ. ಹೊದಿಸಿ ಕಂಡಿಹೆನೆಂದಡೆ ಮುಂಡೆಯವನಲ್ಲ. ಮಾತಾಡಿಸಿ ಕಂಡಿಹೆನೆಂದಡೆ ಬಾಯವನಲ್ಲ. ಇವರು ಮೂವರು ನೆರಕೆಯೊಳಗಾಗಿದ್ದಡೆ ನೆರಕೆಯ ಹೊರಗಿದ್ದು ಬರಿಕಾಯನಾಗಿದ್ದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೯ ॥

೬೦೩

ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರುವಾದಲ್ಲಿ ತ್ರಿವಿಧ ಕಾರಣಂಗಳ ನರಿತು, ಕರ್ಮ ಕ್ರಿ ಆಚಾರ ಸಂಬಂಧವ ಸಂಬಂಧಿಸಿ ಮಾಡುವಲ್ಲಿ ದೀಕ್ಷಾ ಗುರು. ಆ ಕ್ರಿ ತಪ್ಪಿದಲ್ಲಿ ಬಂಧನ ಮಾಡುವಲ್ಲಿ ಶಿಕ್ಷಾಗುರು. ಇಷ್ಟಕಾಮ್ಯ ಮೋಕ್ಷಂಗಳ ಗೊತ್ತ ಕೆಡಿಸಿ ನಿಶ್ಚಯಿಸಿ ಮಾಡುವಲ್ಲಿ ಮೋಕ್ಷಾಗುರು. ಇಂತೀ ಭೇದದ ಆಗನರಿತು ಭಗೀರಥನಂತಾಗಬಲ್ಲಡೆ ಪರಮ ಗುರು ನಿಃಕಳಂಕ ಮಲ್ಲಿಕಾರ್ಜುನಾ ॥ ೩೦ ॥

೬೦೪

ಧರೆ ಸಲಿಲ ಅನಲ ಅನಿಲ ಆಕಾಶ ಮುಂತಾದ ಭೇದಂಗಳ ಕಲ್ಪಿಸುವಲ್ಲಿ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಮೂರ್ತಿಗಳು ಕುರುಹುಗೊಂಬಲ್ಲಿ ನಾದ ಬಿಂದು ಕಳೆ ಲಕ್ಷಿಸುವಲ್ಲಿ ಆ ಪರಶಿವ ತತ್ತ್ವದಂಗ ಗುರು ರೂಪಾಗಿ ಆ ಪರತತ್ತ್ವದಂಗ ಲಿಂಗವಾಗಿ ಆ ಪರತತ್ತ್ವದಂಗ ಜಂಗಮವಾಗಿ ಆ ಜಂಗಮ ಲಿಂಗದಲ್ಲಿ ಲೀಯ್ಯವಾಗಿ ಆ ಲಿಂಗ ಗುರುವಿನಲ್ಲಿ ಲೀಯ್ಯವಾಗಿ ಆ ಗುರು ಉಭಯ ಸ್ಥಲವ ಗರ್ಭೀಕರಿಸಿ ಗುರುವೆಂಬ ಭಾವ ತನಗಿಲ್ಲದೆ ತರು

ಫಲವ ಹೊತ್ತಂತೆ, ಫಳ ರಸವನಿಂಬಿಟ್ಟುಕೊಂಡಂತೆ, ಅಂಗಕ್ಕೆ ಆತ್ಮತೇಜ ವರಿತು ಭಾವಕ್ಕೆ ಭೀಷ್ಮಿಸಿನಿಂದು ಮನ ಮಹವನೊಡಗೂಡಿದಲ್ಲಿ ಆತ ಸದ್ಗುರು ಮೂರ್ತಿಯ ಕರದಲ್ಲಿ ಬಂದ ಲಿಂಗ, ಕರ್ಣದಲ್ಲಿ ಹೇಳಿದ ಮಂತ್ರ, ಕಪಾಲವ ಮುಟ್ಟಿದ ತಂತ್ರ. ಅದು ಸದ್ಗುರು ಕಾರುಣ್ಯ. ಆ ಶಿಷ್ಯಂಗೆ ಜೀವ ನ್ಮುಕ್ತಿ. ಇದು ಆಚಾರ್ಯಮತ ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

೬೦೫

ನಾನಾ ಚಿಹ್ನವಿಚ್ಛಿನ್ನಂಗಳು ತಲೆದೋರದೆ ನಾನಾ ವೇಷ ಪಾಶ ರೋಷ ದೋಷ ನಾಶನಾಗಿ, ನಿರ್ಮಲಾಂಗನಾಗಿಪ್ಪುದು ಶಿವಲಿಂಗಸ್ಥಲ. ಫಲ ಭೋಗ ಭೋಜ್ಯಂಗಳು ನಿವೃತ್ತಿಯಾಗಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳಲ್ಲಿ ವಿರತನಾಗಿ ಹಸಿವು ತೃಷೆ ವ್ಯಸನಂಗಳಲ್ಲಿ ಅಲಕ್ಷಿತ ನಾಗಿ ಪಾಶ ಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ರಿಣಾ ತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯಂಗಳ ಉಂಬ ಠಾವಿನಲ್ಲಿ ಬದ್ಧ ನಾಗದೆ, ಸ್ತುತಿಯಲ್ಲಿ ನಿಲ್ಲದೆ, ನಿಂದೆಯಲ್ಲಿ ಓಡದೆ, ಆ ಉಭಯವ ಒಂದೂ ಅರಿಯದೆ ಸರ್ವಾಂಗಮುಖ ಜಂಗಮವಾಗಿ ಗುರುಲಿಂಗ ಉಭಯ ಸ್ಥಲವ ಗರ್ಭೀಕರಿಸಿ ನಿಂದ ಪರಮ ವಿರಕ್ತನ ಪಾದಾಂಬುವೆ ಮಜ್ಜನವಾಗಿ ಪ್ರಸಾ ದವೇ ಸಂಜೀವನವಾಗಿ ಆತನ ನಿಜ ಸ್ವರೂಪವ ಎನ್ನ ಕಂಗಳು ತುಂಬಿ ಹಿಂಗದಿದ್ದಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೩೨ ॥

೬೦೬

ನೆಟ್ಟಿದ್ದ ಲಿಂಗವ ಪ್ರತಿಷ್ಠೆ ಎಂಬರು. ಹುಟ್ಟಿದ ಲಿಂಗವ ಸ್ವಯಂಭು ಎಂಬರು. ಈ ಉಭಯದಲ್ಲಿ ಸ್ವಯಂಭು ಪ್ರತಿಷ್ಠೆಯನರಿವುತ್ತಿದ್ದವರ ಕಂಡು ಮರ್ತ್ಯದ ಮಹಾ ಜನಂಗಳು ಹೊತ್ತು ಹೋರಲೇಕೋ ? ಎನಗಿಷ್ಟವ ಕೊಟ್ಟ ಗುರು ಬಟ್ಟೆಯ ಹೇಳಿದುದಿಲ್ಲ. ಇದು ಪೃಥ್ವಿಯೊಳಗಣ ಮುತ್ತರದ ಅಚ್ಚಿಗವು. ಇದ ಬಿಡಿಸಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೩ ॥

೬೦೭

ಪಾದೋದಕದಿಂದ ಪದನಾಸ್ತಿಯಾಗಿರಬೇಕು. ಲಿಂಗೋದಕದಿಂದ ಅಂಗ ಮಂಗಳಮಯವಾಗಬೇಕು. ಪ್ರಸಾದೋದಕದಿಂದ ಆತ್ಮಭವಕ್ಕೆ ಬೀಜವಲ್ಲ ದಿರಬೇಕು. ಒಂದನಳಿದು ಒಂದ ಕಂಡಿಹೆನೆಂದಡೆ ತಾವು ತಾವು ನಿಂದಲ್ಲಿಯೇ ನಿರುತರು. ಎನಗಾ ಉಭಯದ ಬಂಧನವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ॥೩೪॥

೬೦೮

ಪಾದೋದಕ ಪ್ರಸಾದೋದಕ ಲಿಂಗೋದಕಂಗಳಲ್ಲಿ ಕೊಂಬ ಕೊಡುವ ಇಂಬಿಡುವ ಭೇದವನರಿಯಬೇಕು. ಪಾದೋದಕವ ಲಿಂಗಕ್ಕೆ ಮಜ್ಜನಕ್ಕೆರೆಯಲಿಲ್ಲ. ಪ್ರಸಾದೋದಕವ ಸೂಸಲಿಲ್ಲ. ಲಿಂಗೋದಕವ ತನ್ನಂಗಕ್ಕೆ ಕೊಳಲಿಲ್ಲ. ಅದೆಂತೆಂದಡೆ ಪಾದಕ್ಕೂ ಲಿಂಗಕ್ಕೂ ಸಂಬಂಧವಿಲ್ಲವಾಗಿ. ಆ ಪ್ರಸಾದೋದಕಕ್ಕೂ ಆತ್ಮಂಗೂ ಸಂಬಂಧವಿಲ್ಲವಾಗಿ. ಆ ಲಿಂಗೋದಕಕ್ಕೂ ಅಂಗಕ್ಕೂ ಸಂಬಂಧವಿಲ್ಲವಾಗಿ. ಇಂತೀ ತ್ರಿವಿಧಂಗಳಲ್ಲಿ ಕೊಡಬಲ್ಲಡೆ, ಕೊಳಬಲ್ಲಡೆ, ಆದಿ ಆಧಾರವನರಿತು, ಅನಾದಿ ಪೂರ್ವಯುಕ್ತವನರಿದು ಗುರುವಾರು ಲಿಂಗವಾರು ಜಂಗಮವಾರೆಂಬುದ ತಿಳಿದು ಪೂರ್ವ ಉತ್ತರಂಗಳಲ್ಲಿ ನಿಶ್ಚಯಿಸಿ ಪಾದೋದಕವಾರಿಗೆ ಪ್ರಸಾದೋದಕವಾರಿಗೆ ಲಿಂಗೋದಕವಾರಿಗೆಂಬುದನರಿತು ಮರಕ್ಕೆ ನೀರನೆರೆದಲ್ಲಿ ಬೇರಿಗೋ ಮೇಲಣ ಕೊಂಬೆಗೋ ಎಂಬ ಭೇದವ ಕಂಡು ಗುರುಲಿಂಗಜಂಗಮ ಮೂರೊಂದೆನಬೇಕು. ಹೀಗಲ್ಲದೆ ಕಾಬರ ಕಂಡು ಮಾಡಿದಡೆ ಅದು ಭವಭಾರಕ್ಕೊಳಗು ನಿಃಕಳಂಕ ಮಲ್ಲಿಕಾರ್ಜುನಾ ॥ ३४ ॥

೬೦೯

ಪಾದೋದಕ ಮಂಡೆಗೆ ಮಜ್ಜನ. ಪ್ರಸಾದೋದಕ ಜಿಹ್ವೆಗೆ ಭಾಜನ. ಲಿಂಗೋದಕಂಗಳು ಅಂಗಕ್ಕೆ ಲೇಪನ. ಈ ಮೂರು ಮುನ್ನಿನ ಅನಾದಿಯ ಲಿಂಗದ ಸೋಂಕು. ಆದಿಯಿಂದತ್ತ ನೀವೇ ಬಲ್ಲಿರಿ ನಾನರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ३६ ॥

೬೧೦

ಬ್ರಹ್ಮನ ಉತ್ಪತ್ತಿಯ ಕಳೆದಲ್ಲದೆ ಲಿಂಗಕ್ಕೆ ಮಜ್ಜನಕ್ಕೆರೆಯಲಾಗದು. ರುದ್ರನ ಲಯವ ಹಿಂಗಿದಲ್ಲದೆ ಲಿಂಗಸಂಗಿಯಾಗಬಾರದು. ವಿಷ್ಣುವಿನ ಸ್ಥಿತಿಯನರಿದಲ್ಲದೆ ಲಿಂಗಕ್ಕೆ ನೈವೇದ್ಯವ ತೋರಲಾಗದು. ಮಾತಿನ ಗೆಲ್ಲಸೋಲಕ್ಕೆ ಹಿರಿಯರಾದರಲ್ಲದೆ ಬಲ್ಲವರಾದುದಿಲ್ಲ. ಭಕ್ತರೆಂಬವರು ಉಂಟು ಇಲ್ಲವೆಂಬ ಸಂದೇಹದಲ್ಲಿ ಸಂಕಲ್ಪ ಜೀವಿಗಳಾದರು. ಇಂತೀ ಉಭಯದ ತೆರನನರಿಯದೆ ಜಂಗಮವೆಂತಾದಿರಣ್ಣ ? ಇಂತೀ ದ್ವಯದ ಅವಧಿಯನರಿಯದೆ ಭಕ್ತರೆಂತಾದಿ

ರಪ್ಪಾ ? ಅಗ್ನಿಯೊಳಗಡಗದ ಹೆಂಡತಿಗೆ[೧] ಗಂಡನಾದಂತೆ. ಇದಕ್ಕಿನ್ನೇವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೬೧೧

ಬಡವಂಗೆ ನಿಧಾನದ ಕಡವರ ಕೈಸಾರಿತ್ತಯ್ಯಾ. ಕಾಣಬಾರದ ಬಯಲು ರೂಪುಗೊಂಡಿತ್ತಯ್ಯಾ. ನಿರಾಳ ನಿರ್ಣಯದ ಮೇಲೆ ನಿಂದಿತ್ತು. ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪ ಪ್ರಭುದೇವರ ಕಂಡು ಬದುಕಿದೆ ಕಾಣಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೮ ॥

೬೧೨

ಮಣ್ಣಿನ ಗುಣವನರಿದು ಕಳೆದಡೆ ಗುರು ಶುದ್ಧಾತ್ಮನೆಂಬೆ. ಹೆಣ್ಣಿನ ಗುಣವನರಿದು ಕಳೆದಡೆ ಗುರು ಲಿಂಗಾತ್ಮನೆಂಬೆ. ಹೊನ್ನಿನ ಗುಣವನರಿದು ಕಳೆದಡೆ ಗುರು ಜಂಗಮಾತ್ಮನೆಂಬೆ. ಹೀಗಲ್ಲದೆ ವೇಷದ ಒಲುಮೆಯ ಮಾತು ಗಾರರ ಮೆಚ್ಚ. ಅಜಾತನಲ್ಲದೆ ಒಪ್ಪ ನಿಃಕಳಂಕ ಮಲ್ಲಿಕಾರ್ಜುನಾ ॥ ೩೯ ॥

೬೧೩

ಮಹಾಂಧಕಾರದಲ್ಲಿ ಸಂದಿಲ್ಲದೆ ಹೊದ್ದಿ ಬಾಹಾಗ ಬಂದುದ ಬಲ್ಲೆಯಾ? ಈಗ ಮಾಡುವ ಮಾಟದ ಅಂದವ ಬಲ್ಲೆಯಾ ? ನೀ ಸಂಗವ ಮಾಡುವ ಲಿಂಗದ ಪುಂಗವ ಬಲ್ಲೆಯಾ ? ಇದಕ್ಕೆ ಸಾರಂದಗಾರಿಕೆಯ ಮಾತೇಕೆ ? ಅದು ನೀ ಬಂದುದ ಬೆಂಬಳಿಯ ಕಂಬಳಿಯಲ್ಲದೆ ಲಿಂಗವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೦ ॥

೬೧೪

ಮಾಂಸ ಪಿಂಡವ ಕಳೆದು ಮಂತ್ರ ಪಿಂಡವ ಮಾಡಿದೆವೆಂದು ಸಂತೈಸಿ ಕೊಂಡಿಪ್ಪ ಆದ್ಯರು ಕೇಳಿರಯ್ಯಾ. ಭ್ರಮರ ಕೀಟನ ತಂದು ಆಳಿದು ತನ್ನಂತೆ ಮಾಡಿದುದಿಲ್ಲವೆ ? ಚಕ್ರಿ ಮೃತ್ತಿಕೆಯ ತಂದು ತನ್ನ ನೆನಹಿನಲ್ಲಿ ತೋರುವ ಗುಣದ ಕುಂಭವ ಮಾಡಿದುದಿಲ್ಲವೆ ? ಕಾರುಕ ಶಿಲೆಯ ತಂದು ತನ್ನ ಮನಕೆ ತೋರಿದುದ ಮಾಡಿದುದಿಲ್ಲವೆ ? ಇಂತಿವೆಲ್ಲವು ಹಿಡಿದವರ ಗುಣಕ್ಕೊಳಗಾಗ್ಯಾದವು. ಇದನರಿಯದೆ ನಾವು ಗುರುವಾದೆವೆಂದು ಇದಿರು ಶಿಷ್ಯರಾದರೆಂದು ಭಾವಿಸಿ ಸೇವೆಯ ಕೊಂಬ ಗುರು ಹರಿದ ಹರಗೋಲನೇರಿ ತೊರೆಯ ಹಾಯ್ದು

---

೧. ಅಜ್ಞಿಗೊಳಗಾಗದ ಹೆಂಡತಿಗೆ (ಬ)

ದಕ್ಕೆ ತೆರಪಿಲ್ಲವೆಂದೆ. ಆಗದ ಗಡಿಗೆಯಲ್ಲಿ ನೀರ ತುಂಬಿ ಸುರಿವ ತೆರ ನಿಮಗಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

೬೧೫

ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಮಂಡೆಯ ಕುರುಹನರಿಯೆ. ಲಿಂಗಕ್ಕೆ ಬಡಿಸಬಲ್ಲಡೆ ಬಾಯ ನೆಪ್ಪ ಕಾಣೆ. ಇದಕ್ಕಿನ್ನೇವೆ ? ಇನ್ನಾರಿಗೆ ಹೇಳುವೆ ? ಕೊಟ್ಟ ಗುರುದೃಷ್ಟವ ಹೇಳಿದುದಿಲ್ಲ. ಕುರುಡರ ಹಿಡಿದು ಹಾಳ ಹಗೆಯದಲ್ಲಿ ಬೀಳುವ ತೆರನೆನಗಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೬೧೬

ಲಿಂಗಪ್ರಾಣ ಪ್ರಾಣಲಿಂಗವಾದ ನಿರಂಗನಿರವು ಹೇಗಿರಬೇಕಂದಡೆ— ಉಡಿಯೊಳಗಣ ಮಣಿ ಸರದಂತೆ ಧರೆಯೊಳಗಣ ಸುರತರುವಿನಂತೆ ಕರಿಯೊಳಗಣ ಭರಿಯಂತೆ ಮಣಿಯೊಳಗಣ ವಿವರದಂತೆ ಶರಧಿಯೊಳಗಣ ಸಾರದಂತೆ, ಇಂತಲ್ಲದೆ ಭರದಲ್ಲಿ ತಿರುಗುವ ಸುಳುಹಿನ ಅರೆಬಿರಿದಿನವರು ಅಯ್ಯಗಳೆ ? ಎನ್ನ ಗುರು ಭವರೋಗ ವೈದ್ಯ, ಪರಶಿವ ಮೂರ್ತಿ, ಪರಬ್ರಹ್ಮ ಗುರು ತಾನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೩ ॥

೬೧೭

ಲಿಂಗವನರಿದನಾಗಿ ಗುರುವೆಂಬುದ ಬಲ್ಲ. ಪ್ರಸಾದವನರಿದನಾಗಿ ಜಂಗಮವೆಂಬುದ ಬಲ್ಲ. ಜಂಗಮವನರಿದನಾಗಿ ಪಾದೋದಕವೆಂಬುದ ಬಲ್ಲ. ಪಾದೋದಕವೆಂಬುವ ಬಲ್ಲನಾಗಿ ಬ್ರಹ್ಮನ ಲಿಪಿಯೊಳಗೆ ಸಿಲುಕ ವಿಷ್ಣುವಿನಲ್ಲಿ ಕಟ್ಟುವೊಡೆಯ ರುದ್ರನ ಶೂಲದಲ್ಲಿ ಭಂಗಿಸಿಕೊಳ್ಳ. ಇಂತೀ ಅಗ್ಗಳೆಯಂಗೆ ಜಗದ ನುಗ್ಗುಗಳು ಸರಿಯೆಂದರೆ ಸಿಗ್ಗಾಗದಿಪ್ಪರೆ ? ಚಿದ್ರೂಪನ ಇರವಿಂಗೆ ಹೊದ್ದಿದೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥ ೪೪ ॥

೬೧೮

ಲಿಂಗಾಂಗಿಗಳೆಂದು ಜಗದಲ್ಲಿ ಸುಳಿವ ಜಂಗಮಲಿಂಗವೆ ಕೇಳಿರಯ್ಯಾ ಭೃತ್ಯನ ಬಿನ್ನಹವ. ಲಿಂಗವೆ ಅಂಗವಾದ ಮತ್ತೆ ಹೆಣ್ಣಿನ ವಿಷಯಕ್ಕೆ ಸಿಕ್ಕಿ ಬಣ್ಣಗೆಟ್ಟಿರಲ್ಲಾ. ಹೊನ್ನಿನಾಶೆಗೆ ಸಿಕ್ಕಿ ಪ್ರಸನ್ನವಪ್ಪ ಲಿಂಗವ ಮರೆದಿರಲ್ಲಾ. ಮಣ್ಣಿಗೆ ಆಶೆ ಮಾಡಿ ಘನಲಿಂಗವನರಿಯದೆ ಘಾಸಿಯಾದಿರಲ್ಲಾ. ಜಂಗಮಃ ಲಿಂಗವೆಂದು ನುಡಿದಡೆ ಸಮಯಕ್ಕೆ ದೂರ. ತಾಳಿದರೆ ಜ್ಞಾನಕ್ಕೆ ದೂರ. ಬಿಡ

ಬಾರದು ಪೂಜಿಸಿ ಹಿಡಿಯಬಾರದು ಮನಮುಟ್ಟದಾಗಿ. ಹಡಿ ಎಡೆಯಲ್ಲಿ ಸಿಕ್ಕಿದ ತುಡುಗುಣಿ ನಾಯಂತೆ ಮೊರೆ ಇಡುತ್ತಿದ್ದೇನೆ ನಿಮ್ಮಡಿಗಳ ಬಿಡು ಮುಡಿಯನರಿಯದೆ ಎನ್ನೊಡೆಯಾ ನೀ ಕೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೪೫ ॥

೬೧೯

ವೇಷಾಡಂಭಿನ ಮಾತಿನ ಬಿನ್ನಾಣಿಗಳಿಗೆ ಗ್ರಾಸ ಉಂಟಲ್ಲದೆ ನೀವಿಲ್ಲ. ಇಂತೀ ಉಭಯವನತಿಗಳದ ನಿರತಿಶಯ ಲಿಂಗಾಂಗಿಗೆ ಗ್ರಾಸದಾಶೆ ಇಲ್ಲ. ಸರ್ವ ಸುಖದಾಲಯದ ಪಾಶದ ಕಟ್ಟಿಲ್ಲ. ಅವರವರ ಕಂಡಲ್ಲಿಯೇ ಸುಖಿ. ನಿಧಾನಿಸಿ ಕೂಡಿದಲ್ಲಿಯೇ ತೃಪ್ತ. ಆತ ತ್ರಿವಿಧ ಮಲದ ಹಂಗಿನವನಲ್ಲ. ಆತಗೆ ಗ್ರಾಮ ನಿಳಯ ಬಂಧಂಗಳಿಲ್ಲ. ಮಾತಿನ ರಚನೆಯ ಪಾಶದವನಲ್ಲ. ಆತ ಸರ್ವಾಂಗ ಲಿಂಗ ಸನುಮತ ಇದು ನಿಃಕಳಂಕ ಮಲ್ಲಿಕಾರ್ಜುನನ ಒಡಗೂಡಿದ ಪರಮ ವಿರಕ್ತನ ಭೇದ ॥ ೪೬ ॥

೬೨೦

ಶತಭಿನ್ನ ಪತ್ರದಲ್ಲಿ ತೋರುವ ಪ್ರಕಾಶ ಒಂದೋ ಹಲವೋ ಎಂಬುದ ತಿಳಿ. ಘಟದಲ್ಲಿ ತೋರುವ ಪ್ರಪಂಚ ಒಂದೋ ಹಲವೋ ತಿಳಿ. ಮುಕುರದಲ್ಲಿ ಹಲವ ನೋಡಿದಡೆ ನುಂಗಿದ ಮುಕುರ ಒಂದೋ ಹಲವೋ ತಿಳಿ. ಅದರಂದವ ಬಲ್ಲರೆ ಲಿಂಗದ ಸಂದ ಬಲ್ಲನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೭ ॥

೬೨೧

ಸದ್ಗುರು ಚರ ಸ್ಮಶಾನ ದೀಕ್ಷೆಯ ಮಾಡಲಾಗದು. ಪ್ರೇತಾಂಗಕ್ಕೆ ವಿಭೂತಿ ರುದ್ರಾಕ್ಷಿಯ ಕಟ್ಟಬಹುದೇ ಶಿವಲಿಂಗ ಹೊರತೆಯಾಗಿ? ಬೀಜ ಹೊರತೆಯಾದ ವೃಕ್ಷ ಉಂಟೇ ? ಕಾಂತಿ ಹೊರಗಾದ ಬೆಳಗುಂಟೇ ? ಭೂತ ಕಾಯಕ್ಕೆ ಶಿವಾಧಿಕ್ಯವೆಂಬ ಪಟ್ಟ ಉಂಟೇ ? ತಾ ಪಂಚಾಚಾರ ಭರಿತನಾಗಿದ್ದು ಇಷ್ಟಲಿಂಗವಿಲ್ಲದವನ ಮನೆಯ ಹೊಕ್ಕು ಶಿಷ್ಯನೆಂದಡೆ ಆತ ಘಟ್ಟವ ಭಂಡ ನೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೮ ॥

೬೨೨

ಲಿಂಗ ಬಾಹ್ಯಂಗೆ ಲಿಂಗಬಾಹ್ಯನಾಗಬೇಕಲ್ಲದೆ ಸುಜಾತಿಯ ಬೆರಸಿದು ದುಂಟೇ ? ಇಂತೀ ಆರು ಶೈವವ ಹೊದ್ದದ ವೀರಶೈವವೆಂದ ಮತ್ತೆ ಇದ

ವಿೂರಲಿಲ್ಲ. ಪಂಚಾಚಾರ ಶುದ್ಧಂಗೆ ಇಂತೀ ಪದವನೇರಿ ಬದುಕಿದ ನಿಃಕಳಂಕ ಮಲ್ಲಿಕಾರ್ಜುನಾ ॥ ೪೯ ॥

೬೨೩

ಸರ್ವ ನಿರ್ವಾಣವಾದಲ್ಲಿ ಗುರುಸ್ಥಲ. ಲಯ ನಿರ್ವಾಣವಾದಲ್ಲಿ ಲಿಂಗ ಸ್ಥಲ. ಇಷ್ಟ ಕಾಮ್ಯ ಮೋಕ್ಷಂಗಳು ಉತ್ಪತ್ತಿ ಸ್ಥಿತಿ ಲಯ ಆಣವ ಮಾಯಿಕ ಕಾರ್ಮಿಕ ನವಗುಣಂಗಳು ನಿಂದು ಶಬ್ದ ಮುಗ್ಧವಾದಲ್ಲಿ ಜಂಗಮಸ್ಥಲ. ಇಂತೀ ಸ್ಥಳ ಕುಳಂಗಳ ವಿವರವ ವೇಧಿಸಿ ಸರ್ವಜ್ಞಾನ ಪರಿಪೂರ್ಣವಾಗಿಪ್ಪ ತ್ರಿವಿಧ ಮೂರ್ತಿ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೇ ॥ ೫೦ ॥

೬೨೪

ಹೊರಗಣ ಮಾತ ಹೇಳಿ ಒಳಗು ಶುದ್ಧವನರಿಯದಿರೆ ಕೂಷ್ಮಾಂಡ ಕೊಳಕಾದಂತೆ ಬಯಲ ಬಹಿರೂಪವ ತೊಟ್ಟು ಹಿರಿಯರು ವಿರಕ್ತರೆಂದು ಹೆಣ್ಣು ಹೊನ್ನು ಮಣ್ಣೆಂಬ ಜಗದ ಹುದುವಿನ ಒಡವೆಗೆ ಹೊಡದಾಡಲೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೧ ॥

೬೨೫

ಇಂತೀ ಸ್ಥಲಂಗಳ ವಿವರ ಕಾಬ ಕಣ್ಣಿದ್ದು ಕನ್ನಡಿಯ ನೋಡುವನಂತೆ ನಡೆವ ಕಾಲಿದ್ದು ದಡೆಯನೂರಿ ನಡೆವವನಂತೆ ಇರಿವ ಕೈ ಇದ್ದು ಕೆಯ್ದು ಹಿಡಿದು ಇರಿವವನಂತೆ ದೃಷ್ಟಕ್ಕೆ ದೃಷ್ಟವ ಕೊಟ್ಟು ನೀ ತಪ್ಪಿಸಿಕೊಂಬರೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೨ ॥

೬೨೬

ಕಾಯ ಜೀವದ ನಡುವೆ ಒಂದು ಭಾವಿಸಿ ಇಷ್ಟಲಿಂಗವೆಂದು ಕೊಡುವಾಗ ಆ ಲಿಂಗ ಕಾಯಕ್ಕೊ ? ಜೀವಕ್ಕೊ ? ಕಾಯಕ್ಕೆಂದಡೆ ಕಾಯದೊಳಗಾಗಿ ಹೂಣಿಸಿಕೊಂಬುದು. ಜೀವಕ್ಕೆಂದಡೆ ಜೀವ ನಾನಾ ಭವಂಗಳಲ್ಲಿ ಬಪ್ಪುದು. ಆ ಲಿಂಗ ಉಭಯಕ್ಕೆಂದಡೆ ಇನ್ನಾವುದು ಹೇಳಾ ? ಅಂಗಕ್ಕೆ ಲಿಂಗವಾದಡೆ ಬಣ್ಣ ಭಂಗಾರದಂತಿರಬೇಕು. ಜೀವಕ್ಕೆ ಲಿಂಗವಾದಡೆ ಅನಲ ಅನಿಲನಂತಿರ ಬೇಕು. ಉತ್ಪತ್ತಿಗೆ ನಷ್ಟಕ್ಕೆ ಉಭಯದ ಒಡಲನರಿತಲ್ಲಿ ಅದು ಲಿಂಗಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೬೨೭

ಚೇತನವಳಿದು ಅಚೇತನ ವಸ್ತು ರೂಪಾಗಿ ಬಂದಿತ್ತದೇತಕ್ಕೆ ಎಂಬುದು ತಿಳಿವುದೆ ? ಭಂಗಾರವ ಕಳೆದರೆ ಬಣ್ಣವ ನೋಡಬಾರದು. ಕುಸುಮವ ಕಳೆದರೆ ಗಂಧವ ಕಾಣಬಾರದು. ದರ್ಪಣದ ಘಟವ ಕಳೆದು ನೋಡಲಿಕ್ಕೆ ಪ್ರತಿಬಿಂಬಿಸುವದೆ ? ಅಂಗವ ಕಳೆದು ಲಿಂಗವನರಿಯಬಾರದು. ಲಿಂಗವ ಕಳೆದು ಆತ್ಮನನರಿವ ಪರಿ ಇನ್ನೆಂತೋ ? ಆತ್ಮನ ಚೇತನವ ಬಿಟ್ಟು ನಿಹಿತ ಜ್ಞಾನವನರಿಯಬೇಕೆಂಬ ಅಜಾತರು ಕೇಳಿರೋ. ಅಂಗವ ಕಳೆದು ಲಿಂಗವ ಕಂಡೆನೆಂಬುದು ಲಿಂಗವಳಿದು ಆತ್ಮನನರಿದೆನೆಂಬುದು ಆತ್ಮನಳಿದು ಅರಿವನರಿದೆನೆಂಬುದು ಅದೇತರ ಮರೆ ಹೇಳಿರೋ. ತೃಷೆಯರತು ನೀರ ಕೊಳಬಹುದೇ ? ಆಪ್ಯಾಯನವರತು ಓಗರವನುಣಬಹುದೆ ? ಸತ್ಕ್ರೀ ಇಲ್ಲದೆ ಲಿಂಗವನರಿಯಬಹುದೇ ? ಲಿಂಗಕ್ಕೆ ಅರ್ಚನೆ ಪೂಜನೆ ಹೀನವಾಗಿ ವಸ್ತುವನರಿತೆನೆಂಬ ನಿಶ್ಚಯವಂತರು ನೀವೇ ಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

೬೨೮

ಉರಿ ಆತ್ಮಸ್ಥಾವರಂಗಳಲ್ಲಿ ನಂದದಿಹನ್ನಕ್ಕ ನೀರು ಒಂದರಲ್ಲಿ ಇಂಗದಿಹನ್ನಕ್ಕ ಬೆಳಗು ಒಂದರಲ್ಲಿ ಸಂದಳಿದಿಹನ್ನಕ್ಕ ಲಿಂಗವೆಂಬುದೊಂದು ಪ್ರಮಾಣುಂಟು. ಆ ಪ್ರಮಾಣು ಅಪ್ರಮಾಣವಾಹನ್ನಕ್ಕ ಭಾವ ಮೂರು, ನಿರ್ಭಾವ ಮೂರು, ಸ್ಥಲವಾರು, ತತ್ವವೈದು. ಇಂತಿವು ಕೂಡಿ ಅಳೆದು ಮರಳಲಿಕ್ಕೆ ಹಲವು ಸ್ಥಳ ಕುಳ ಬೇರಾಯಿತ್ತು. ಬಂಗಾರವೊಂದು ಹಲವು ತೊಡಿಗೆಯ ಹೊಲಬಾದಂತೆ ತನ್ನಿಷ್ಟ ತದೃಷ್ಟ ಉಭಯವ ಕೂಡುವನ್ನಬರ ನಿಃಕಳಂಕ ಮಲ್ಲಿಕಾರ್ಜುನನೆಂದೆನುತ್ತಿರಬೇಕು ॥ ೫೫ ॥

೬೨೯

ಉಂಟು ಉಂಟೆಂದು ಸಂದೇಹಕ್ಕೀಡಾಗದೆ ಇಲ್ಲ ಇಲ್ಲವೆಂದು ಶೂನ್ಯಕ್ಕೊಳಗಾಗದೆ ಇಂತೀ ಕ್ರೀ ಒಳಗಿನಲ್ಲಿ ನಿಃಕ್ರಿ ತೆರಪಿನಲ್ಲಿ ಉಭಯ ಚಕ್ಷು ಒಡಗೂಡಿ ಕಾಬಂತೆ ನೋಡುವುದು ಉಭಯ ನೋಡಿಸಿಕೊಂಬುದು ಒಂದೇ. ಒಂದೇ ಕ್ರೀಯ್ಯಲ್ಲಿ ಇಪ್ಪ ಅರುವಿನಲ್ಲಿ ಸ್ವಸ್ಥ[೧], ಈ ಉಭಯ ನೀನಾಹನ್ನಕ್ಕ ದೃಷ್ಟವಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೫೬ ॥

---

೧. ಪ್ರಾಣ (ಕ)

## ೫. ಅವಿದ್ಯೆ

೬೩೦

ಅರಿವ ಹೇಳುವರೆಲ್ಲರು ಮರವೆಯಲ್ಲಿ ಬಿದ್ದು ಮೂರಲಿ ಹಿಡಿದರಲ್ಲಾ. ಅದು ಬಾಯಿಗೆ ಪಸಲೆ. ಕೈಗೆ ಕಳಂಕು. ಜ್ಞಾನಕ್ಕೆ ದೈವ. ಇದ ಭಾವಿಸು ವರಿಗೇಕೆ ಜ್ಞಾನ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೬೩೧

ಕಳೆ ಮೊಳೆಯ ಕಿತ್ತಲ್ಲದೆ ಹೊಲ ಶುದ್ಧವಲ್ಲ. ಹೊಲೆ ಮಲವ ಕಳೆ ದಲ್ಲದೆ ಮನ ಶುದ್ಧವಲ್ಲ. ಜೀವದ ನೆರೆಯನರಿದಲ್ಲದೆ ಕಾಯ ಶುದ್ಧವಲ್ಲ. ಕಾಯ ಜೀವದ ಸುಚವನರಿದಲ್ಲದೆ ಜ್ಞಾನಲೇಪಿಯಲ್ಲ. ಇಂತೀ ಭಾವದ ಭ್ರಮಿತರಿಗೇಕೆ ಜ್ಞಾನದ ಒಳಗು ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೬೩೨

ಕೋಲ ಹಿಡಿದು ನಾವೆಯನೇರಿದ ಮತ್ತೆ ಅದು ಭಾವಿಸದು ತೋಯುವ. ಜ್ಞಾನವನರಿದು ಆ ಭಾವ ಭ್ರಮೆಯನಾಚರಿಸದು. ವಿದ್ಯೆಯಲ್ಲಿ ಸಾಗುವ ನೊಡಲು ತೆಪ್ಪದ ಮೇಲಿಪ್ಪ ಒಪ್ಪದ ಒಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೬೩೩

ಗುರು ಭಕ್ತನಂಗ. ಲಿಂಗ ಮಹೇಶ್ವರನಂಗ. ಜಂಗಮ ಪ್ರಸಾದಿಯಂಗ. ಇಂತೀ ತ್ರಿವಿಧ ಸ್ಥಲಂಗಳಲ್ಲಿ ತ್ರಿವಿಧವಡಗಿ ತ್ರಿವಿಧ ಇದಿರಿಟ್ಟು ತ್ರಿವಿಧ ಐಕ್ಯ ವಾಗಿ ಬೆಳಗಿಂಗೆ ಕಳೆದೋರಿ ಕಳೆಗೆ ಕಾಂತಿ ಪ್ರಜ್ವಲಿಸುವಂತೆ ಅರ್ಕನ ಕಿರಣ ವಂತೆ ಸಾಕಾರ ರೂಹಿಂಗೆ ಉಭಯ ಚಕ್ಷುವಾಗಿ ಬೆಳಗಿನಿಂದ ಬೆಳಗ ಕಂಡಂತೆ ಸ್ಥಲವ ನೆಮ್ಮಿ ಸ್ಥಲದಲ್ಲಿ ಒಲವರವಿಲ್ಲದೆ ನೋಡಲಿಕ್ಕೆ ಸ್ಥಲಭರಿತನೆಲ್ಲಿಯು ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

# ೬. ವಾಗದ್ವೈತ

೬೩೪

ಅಂಗದ ನಿರಾಭಾರಿಗಳೆಲ್ಲರು ಕೂಡಿ ಲಿಂಗದ ಹೊಲಬ ಬಲ್ಲೆವೆಂದು ಅನಂಗನ ಬಲೆಯೊಳಗೆ ತಾವಿಲ್ಲವೆಂದು ಸಕಲದ ಸಂಸರ್ಗವನೊಲ್ಲೆವೆಂದು ಮತ್ತೆ ಕೀಳರೊಳಗೆ ಸಕಲ ಭೋಗವ ಮಾಡುವ ವಿಕಳತೆಗೊಂಡವರ ನೋಡಾ. ಪ್ರಕೃತಿ ಹರಿದು ಸುಖವ ಮೆಚ್ಚಿ ತಿರುಗದಿಪ್ಪ ಅಖಿಳಂಗೆ ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೬೩೫

ಆದಿ ಅನಾದಿ ಅಂತರಾದಿ, ನಾದ ಬಿಂದು ಕಳೆ, ಸ್ಥೂಲ ಸೂಕ್ಷ್ಮ ಕಾರಣ, ಆದಿ ಮಧ್ಯ ಅವಸಾನಂಗಳಲ್ಲಿ ಜಗದಲ್ಲಿ ಸಾಧಿಸುತ್ತಿಪ್ಪ ಗುಡ್ಡರುಗಳು ನೀವು ಕೇಳಿ ಕೇಳಿರೋ. ಅಭೇದ್ಯ ಲಿಂಗವ ಭೇದಿಸಿ ಸುಬುದ್ಧಿಯಿಂದ ಕಂಡ ಪರಿ ಇನ್ನೆಂತೋ ? ಮಾತಿನ ಮಾಲೆಯ ಕಲಿತು, ಸಂತೆಯ ಹೋತಿನಂತೆ ಹೋರುವ ತೂತಜ್ಞಾನಿಗಳಿಗಿನ್ನೇತರ ವಿರಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ ॥ ೨ ॥

೬೩೬

ಆರೂಢನಾಗಿ ತಿರುಗುತ್ತ ಮೂಢರ ಬಾಗಿಲಲ್ಲಿ ನಿಂದು ಬೇಡಲೇಕೆ ಭಿಕ್ಷವ ? ಕಾಡಲೇಕೆ ಮರ್ತ್ಯರ ? ರೂಢಿಯೊಳಗೆ ಸಿಕ್ಕಿ ಆಡುವಂಗೆ ಆ ರೂಢಿ ಬೇಡವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

೬೩೭

ಇಕ್ಕುವದಕ್ಕೆ ಮುನ್ನವೆ ಬಾಯಾರಿ ಕೊಡುವುದಕ್ಕೆ ಮುನ್ನವೆ ಕೈಯ್ಯಾಂತ ಮತ್ತೆ ಮಾತಿನ ಮಾಲೆಯ ತೂತರುಗಳ ಕಂಡು ನಿರ್ಜಾತ ನಡಗಿದ ನಿಃಕಳಂಕ ಮಲ್ಲಿಕಾರ್ಜುನಾ ॥ ೪ ॥

೬೩೮

ತಲೆಯ ಹಿಡಿಯಲರಿಯದೆ ನಡುವೆ ಹಿಡಿದ ಮತ್ತೆ ಕಚ್ಚದೆ ಸರ್ಪನೇನ ಮಾಡುವುದು ? ಹಗೆಯ ಕೊಲಹೋಗಿ ಅವನ ಕಡುಗಲಿತನಕ್ಕಂಜಿ ಅಡಿ

ಗೆರಗಿದಡೆ ಅವನೊಡಗೂಡಿದಡೆ ಇರಿಯದೆ ಮಾಣ್ಬನೆ ? ಮೃಡನೊಡೆಯ ನರಿಯದೆ ನಡುರಂಗದಲ್ಲಿ ಬೀಳುವ ಕುರಿಗಳಿಗೇಕೋ ನೆರೆ ಅರಿವು ? ಕರಿ ಗೊಂಡವಂಗಲ್ಲದೆ ಬರಿಯ ಮಾತಿಗುಂಟೇ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

೬೩೯

ಕೆಸರ ತೊಳೆವರಲ್ಲದೆ ಉದಕವ ತೊಳೆವವರುಂಟೇ ಅಯ್ಯಾ ? ಕನ್ನಡಿಯ ಬೆಳಗುವರಲ್ಲದೆ ಮಣ್ಣ ಬೆಳಗುವರೆ ಅಯ್ಯಾ ? ನಿಚ್ಚಣಿಯ ಹಲ್ಲಿಗೆ ಅಂತರವಲ್ಲದೆ ಕೀಳುಮೇಲುಂಟೆ ಅಯ್ಯಾ ? ಕಾಳು ಹೃದಯದಲ್ಲಿ ಜಾಣಂಗೆ ತೆರಪಿಲ್ಲ. ಅವನಿಗದೇ ಭಂಗ ನಿಃಕಳಂಕ ಮಲ್ಲಿಕಾರ್ಜುನಾ ॥ ೬ ॥

೬೪೦

ತತ್ತ್ವಬ್ರಹ್ಮವ ನುಡಿದು ಹಿರಿಯರೆಲ್ಲರು ಮೃತ್ಯುವಿನ ಬಾಯ ತುತ್ತಾದರು. ಇಹಪರದ ಸುದ್ದಿಯ ಹೇಳುವ ಗುರುಹಿರಿಯರೆಲ್ಲರು ಅನ್ನವ ನೀಡಿ ಹೊನ್ನ ಕೊಡುವ ಅಣ್ಣಗಳ ಮನೆಯ ಎತ್ತುವ ಕೂಸಾದರು. ಇನ್ನಾರಿಗೆ ಹೇಳುವೆ ಆರೂಢನ ಸುದ್ದಿಯ ನಿಃಕಳಂಕ ಮಲ್ಲಿಕಾರ್ಜುನಾ ॥ ೭ ॥

೬೪೧

ತಾನೇ ಬಲ್ಲಹನೆಂದು ಇಲ್ಲದ ಹುಸಿಯ ಹುಸಿವ ಗೆಲ್ಲಗೂಳತನಕ್ಕೆ ವಲ್ಲಭನೆಂದು ಇವರೆಲ್ಲರು ಅರಿಯರೆಂದು ಬಲ್ಲಹ ನಾನೆಂದು ನಿಲ್ಲದೆ ಹೋರುವ ಖುಲ್ಲನ ನೋಡಾ. ಕಳ್ಳರ ಹಾದಿಯೊಳಗಿಪ್ಪ ಅನುವಿನ ನೆರೆವೋಟನಂತೆ ಕೊಳ್ಳದೆ ಬೆಲೆಯ ಬೇಡಿ ಕಾಡುವ ಖುಲ್ಲನ ಬಲ್ಲತನದಂತೆ ಇವರೆಲ್ಲರ ಹಿರಿಯರೆಂದಡೆ ಕಲ್ಲಿಯೊಳಗಾದ ಮೃಗದಂತೆ ಇಂತಿವರೆಲ್ಲಕ್ಕೆ ಬಲ್ಲತನವೇಕೋ ನಿಃಕಳಂಕ ಮಲ್ಲಿಕಾರ್ಜುನಾ ॥ ೮ ॥

೬೪೨

ನಾನು ನೀನೆಂಬುಭಯವ ಭೇದಿಸಲೇಕೆ, ವಸ್ತು ತಾನಾದ ಮತ್ತೆ ? ಇಷ್ಟವನರಿಯದೆ ಆತ್ಮತೇಜಕ್ಕೆ ಮಾತಿನ ಘಾತಕಕ್ಕೆ ಪ್ರಖ್ಯಾತರ ಧಾತು ಕುಂದಿತೆಂದು ಮಾತಿಗೆ ಮಾತ ನುಡಿದು ಗೆದ್ದನೆಂಬ ಪಾಷಾಂಡಿಗಳಿಗೇಕೆ ಸುಚಿತ್ತದ ಸಮ್ಯಕ್ ಜ್ಞಾನ ನಿಃಕಳಂಕ ಮಲ್ಲಿಕಾರ್ಜುನಾ ॥ ೯ ॥

೬೪೩

ತಾನೊಂದ ನೆನೆದು ಮಾಡಿ ಆಯಿತೆಂದಡೆ ತಾನು ಬ್ರಹ್ಮನೆ ? ತಾನೊಬ್ಬರಿಗೆ ಕೊಟ್ಟು ಸುಖವನಿತ್ತೆನೆಂದಡೆ ತಾನು ವಿಷ್ಣುವೆ ? ತಾನೊಬ್ಬರ ಕೊಂದು ಸತ್ತನೆಂದರೆ ತಾನು ರುದ್ರನೆ ? ಇಂತಿವನೇನು ಅರಿಯದೆ ಅಹಂ ಬ್ರಹ್ಮವೆಂಬ ಭಾವ ಭ್ರಮಿತರಿಗೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦ ॥

೬೪೪

ಬಲ್ಲೆ ಬಲ್ಲೆನೆಂದು ಎಲ್ಲರೊಳಗೆ ಗೆಲ್ಲಸೋಲವೇತಕ್ಕೆ ? ಬಲ್ಲತನವಲ್ಲಿಯೇ ಉಳಿಯಿತ್ತು. ಮಿಥ್ಯ ತಥ್ಯವ ತಲೆಯಲ್ಲಿ ಹೊತ್ತು ಹೋರಬೇಡ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧ ॥

೬೪೫

ಭೂಮಿಯಲ್ಲಿ ಪೂಜಿಸಿಕೊಂಬವರಾರೂ ಹಿರಿಯರಲ್ಲ. ವೇದ ಶಾಸ್ತ್ರ ಪುರಾಣ ಆಗಮ ಶ್ರುತಿ ಸ್ಮೃತಿ ತತ್ತ್ವದಿಂದ ಇದಿರಿಗೆ ಬೋಧಿಸಿ ಹೇಳುವ ರೆಲ್ಲರು ಹಿರಿಯರಪ್ಪರೇ ? ನುಡಿದಂತೆ ನಡೆದು, ನಡೆದಂತೆ ನುಡಿದು, ನಡೆ ನುಡಿ ಸಿದ್ಧಾಂತವಾಗಿಯಲ್ಲದೆ ಆರೂ ಹಿರಿಯರಾಗಬಾರದು. ಗೆಲ್ಲಸೋಲಕ್ಕೆ ಹೋರಿ ಬಲ್ಲಿದರಾದೆವೆಂದು ತಮ್ಮಲ್ಲಿದ್ದ ಹುಸಿಯ ಹುಸಿವ ಕಲ್ಲೆದೆಯರ ನೋಡಾ. ಇವರೆಲ್ಲರ ಬಲ್ಲತನವ ಕಂಡು ನಿಲ್ಲದೆ ಹೋದ ನಿಃಕಳಂಕ ಮಲ್ಲಿಕಾರ್ಜುನ ॥ ೧೨ ॥

೬೪೬

ಮಾತ ಹೇಳುವ ಹಿರಿಯರೆಲ್ಲರು ನೀತಿಗೊಡಲಾದರು ನಿಜಾರ್ತನ ಮರೆದು. ಭ್ರಾಂತಿಗೆ ಸಿಕ್ಕಿದ ಮತ್ತೆ ಇನ್ನೇತರ ಮಾತು ? ಸೂತ್ರದ ಬೊಂಬೆಯ ನೂಕುವ ಪಾಶದಂತೆ ಇವರೇತರ ಹಿರಿಯರು ನಿಃಕಳಂಕ ಮಲ್ಲಿ ಕಾರ್ಜುನಾ ॥ ೧೩ ॥

೬೪೭

ಮಾತಿಗೆ ಮಾತನಾಡಿಹೆನೆಂದಡೆ ಪಥಕ್ಕೆ ಕಡೆಮೊದಲಿಲ್ಲ ನಿಜಾರ್ತನ ನರಿವುದಕೆ. ಮಿಕ್ಕಿನ ಶಾಸ್ತ್ರ ಸಂತೆಯ ಮಾತು ಅದೇತಕ್ಕೆ ಬಾತೆ ? ಭಾಸುರ ತೇಜ ನಿಜಾರ್ತನು ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

೬೪೮

ಮಾತಿನ ಮಾಲೆಯು ಎಷ್ಟಾದಡುಂಟು. ಖ್ಯಾತಿಯ ಮಾಟ ಜಗ ದೊಳಗೆ ಎಷ್ಟಾದಡುಂಟು. ಜಗದೀಶನನರಿವ ಆತಸಿದ್ಧ ತಾವು ಭಾನುರ ತೇಜ ಪ್ರಕಾಶ ಅದರಿಂದಾಚೆಯ ಮಾತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೬೪೯

ಮಾತಿನ ಮಾತಿಗೆ ಹೊರಲೇಕೆ? ಆತನ ಅರಿದಿದ್ದವಂಗೆ ಜಗದ ನುಡಿಯ ನುಡಿವ ಭ್ರಾಂತರ ಸುದ್ದಿಯಾಕೆ? ನಿಭ್ರಾಂತಂಗೆ ಊರಿಸಿರಿ ಹೊರಗು ನಿಃಕಳಂಕ ಮಲ್ಲಿಕಾರ್ಜುನಾ ॥ ೧೬ ॥

೬೫೦

ಮಾತು ಮಾತಿನೊಳಗೇಕೆ ಅಜಾತನ ಸಂಪ್ರಾಜ್ಯ? ಆ ನಿತ್ಯವಂತನ ದೇತರೊಳಗಿದ್ದಿಹನೆಂಬುದನರಿಯದೆ, ಉದರದ ಹುತ್ತಕ್ಕಾಗಿ ಮಹಾಸುಖದ ದಾಸೆಯ ಸಂಬಯಸಲೇಕೆ? ಇಂತೀ ತುತ್ತಜ್ಞಾನಿಗಳ ಮೆಚ್ಚ ನಿಃಕಳಂಕ ಮಲ್ಲಿಕಾರ್ಜುನಾ ॥ ೧೭ ॥

೬೫೧

ಹಳುವಿನೊಳಡಗಿದ ಪಳ್ಳುರಿ ಅದು ಸುಲಲಿತದಿಂದಲ್ಲದೆ ಅಲ್ಲಿಂದೇಳದು. ಬಲ್ಲವರೊಳಗಣ ಸೊಲ್ಲಿಗತೀತನು ಒಳ್ಳಿದರನಲ್ಲದೆ ಒಲ್ಲನು. ಅಲ್ಲದ ನೆಲನು ಬೆಳವುದಕೆ ಹುಲ್ಲಲ್ಲದೆ ಜಾಲಿಯುಂಟೇ? ವಾಗದ್ವೈತಕ್ಕೆ ಹೋರುವರಲ್ಲಿ ಬಲ್ಲವರಿಪ್ಪರೇ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೮ ॥

೬೫೨

ಹುಲ್ಲಿನ ಸಾರವ ಮೆಲ್ಲುವ ಪಶು ಬಲ್ಲುದಲ್ಲದೆ ಒಳ್ಳಿತ್ತ ಮನುಜರು ಬಲ್ಲರೆ? ಅಲ್ಲಿ ಇಲ್ಲಿ ಹೋರಿಹೆವೆಂಬ ಬುಲ್ಲರು ಬಲ್ಲರೆ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೯ ॥

೬೫೩

ಕಲ್ಲಿಯ ಬಿಗಿದರೆ ತಲ್ಲೀಯ್ಯವಾದ ಕಲ್ಲಿ ಕೀಳುವದೆ ಅಯ್ಯಾ? ಈ ಸೊಳ್ಳುಗರ ಮಾತಿಗೆ ಬಲ್ಲವನಲ್ಲಿ ಸಿಕ್ಕುವನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

# ೭. ಬೆಡಗಿನ ವಚನಗಳು

೬೫೪

ಅರಗಿನ ಮಣಿಯ ಮಾಡಿ ಉರಿಯ ನೇಣ ಕಟ್ಟಿ ಹಿರಿಯರೆಲ್ಲರು ಪವಣಿಸಲರಿಯರು. ಈ ಮಣಿಯ ಗುಣಕ್ಕೆ ಗುಣಜ್ಞರಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

೬೫೫

ಅಂಬರದಲ್ಲಿ ಒಂದು ಕೋಡಗ ಹುಟ್ಟಿ ಕೊಂಬಿಲ್ಲದೆ ನೆಗವುತ್ತಿಪ್ಪುದ ಕಂಡೆ. ಮತ್ತಾ ಕೊಂಬಿನ ಮೇಲಣ ಕೋಡಗ ಅಂಬರವ ಕಾಣದೆ ಲಂಘಿಸಿ ನಿಲವುದಕ್ಕೆ ನೆಲದುಂಗವ ಕಾಣದೆ ಕೊಂಬಿನಲ್ಲಿಯೇ ಇದ್ದುದ ಕಂಡೆ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿಯದೆ ॥ ೨ ॥

೬೫೬

ಅರಿವ ಅರಿವು ತಾನೊಂದು ಇದಿರಿಟ್ಟು ಆ ಸುವಸ್ತು ಅರಿವೆನ್ನದೆ ಕುರುಹೆನ್ನದೆ, ಮುಕುರ ತನ್ನಿಂದ ತಾ ಮುಕುರದಿಂದ ಉಭಯ ಕುರುಹುಗೊಂಡು ಹೆರೆಹಿಂಗದಂತೆ ಅಲ್ಲಿಯೇ ದೃಷ್ಟ ನಷ್ಟವೆಂಬುದಕ್ಕೆ ಸೂಚನೆ. ಇಷ್ಟದ ಮೇಲೆ ದೃಷ್ಟವಿಲ್ಲ ಎಂಬುದಕ್ಕೆ ಭಿತ್ತಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩ ॥

ಅರ್ಥ:— ತನ್ನ ನಿಜವನು ತಿಳಿಯುವ ಮಹಾಜ್ಞಾನವು, ತಾನು ಮಹಾಲಿಂಗವೆ ಇಷ್ಟಲಿಂಗವೆಂದು ಲಕ್ಷವಿಟ್ಟು ಆಚರಿಸುವ ಆಚರಣೆಯು, ಭೇದದಿಂದ ಅಂತರಂಗದಲ್ಲಿ ಜ್ಞಾನ, ಬಹಿರಂಗದಲ್ಲಿ ಕ್ರೀಯಾಗಿ ಕುರುಹುದೋರಿತ್ತು. ಆ ಇಷ್ಟಲಿಂಗವು ಜ್ಞಾನದಲ್ಲಿ ಭಿನ್ನವಿಲ್ಲದೆ, ಆ ಜ್ಞಾನದಲ್ಲಿ ಪ್ರಾಣಲಿಂಗವಾಗಿ ಕ್ರೀಯಲ್ಲಿ ಇಷ್ಟಲಿಂಗವಾಗಿರ್ಪುದು. ದರ್ಪಣವು ಒಬ್ಬಾತ್ಮನಿಂದ ಉಂಟಾಗಿ, ಆ ಆತ್ಮನು ದರ್ಪಣದಿಂದ ಬಿಂಬ ಪ್ರತಿಬಿಂಬವೆಂಬೆರಡು ರೂಪಾಗಿ ಭಿನ್ನವಿಲ್ಲದಿರುವ ಹಾಗೆ, ಆ ದರ್ಪಣವ ತೆಗೆದಲ್ಲಿ ಆ ಎರಡು ರೂಪುಗಳು ಅಲ್ಲಿಯೇ ಅಡಗುವವು ಎಂಬ ಹಾಗೆ, ಆ ಮಹಾಜ್ಞಾನವು ಅಂತರಂಗ ಬಹಿರಂಗದಲ್ಲಿ ಜ್ಞಾನಕ್ರಿಯಾ ಸ್ವರೂಪಿನಿಂದ ವ್ಯಾಪಿಸಿಕೊಂಡಿರಲು ಆ ಮಹಾಲಿಂಗವು ಜ್ಞಾನದಲ್ಲಿ ಪ್ರಾಣಲಿಂಗವಾಗಿ ನೆಲೆಗೊಂಡಿಪ್ಪುದು. ಆ ಜ್ಞಾನಕ್ರಿಯಾಸ್ವರೂಪವಾದ ಮಹಾಜ್ಞಾನವು ಮಹಾಲಿಂಗದಲ್ಲಿ ಅಡಗಲು, ಆ

ಎರಡು ರೂಪನೊಳಗೊಂಡು ಆ ಮಹಾಲಿಂಗವು ತಾನೊಂದೇಯಾಗಿಪ್ಪುದೆಂಬು ದರ್ಥ. ಇಷ್ಟದ ಮೇಲೊಂದು ಉಪಮಾನವಿಲ್ಲ, ಎಂದರೆ ಕುಂಭದ ಉಪಮಾನ ವೆಂದರಿವುದೆಂಬುದರ್ಥ.

೬೫೭

ಅಂಬುವಿನ ಸಾರ ಒಡಗೂಡಿದಲ್ಲಿ ಆ ಮಣ್ಣು ಕುಂಭವೆಂಬುದಕ್ಕೆ ಕುರುಹುಗೊಟ್ಟು, ಘನ ಕಿರಿದಿಲ್ಲದೆ ಕುಂಭದಲ್ಲಿಯೇ ಲೀಯ್ಯವಾದಂತೆ ನಿಃಕಳಂಕ ಮಲ್ಲಿಕಾರ್ಜುನಲಿಂಗದಲ್ಲಿಯೇ ಲೀಯ್ಯ ॥ ೪ ॥

೬೫೮

ಅಹಂಮಮತೆ ಅಹಂಕಾರವೆಂಬ ಘಟವ ಹೊತ್ತು, ಆತ್ಮನೆಂಬ ಶುಕನು ಅರಿವು ತಲೆದೋರಿದಾಕ್ಷಣ ಅಹಂಕಾರ ನಷ್ಟವಾಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿಯಲಾಗಿ ॥ ೫ ॥

೬೫೯

ಅಜ ಅರ್ಕನ ಕೊಂಬಿನಲ್ಲಿ ನಿಂದು ಭಜನೆವಂತರ ಕಂಡು ತ್ರಿಜಗವೆಲ್ಲವು ತಾನೆಂದು ಗಜಬಜೆಯಲ್ಲಿ ಅಡಗಿತ್ತು ನಿಃಕಳಂಕ ಮಲ್ಲಿಕಾರ್ಜುನಲಿಂಗವ ನರಿಯದೆ ॥ ೬ ॥

೬೬೦

ಅರಿದೆನರಿದೆನೆಂದು ಮರವೆಯ ಕೋಟೆಯ ತೊಳಸುತ್ತ ಅರಿವಿನ ಹೊಲದಲ್ಲೈದಾನೆಂದು ಜ್ಞಾನಹೀನ ಬರುಬರಲ್ಲಿ ಹೊಡೆದಾಡುತ್ತ ಹಿಂದಣ ಉಭಯ ಭೇದವನರಿವುದಕ್ಕೆ ಮುಂದಕ್ಕೆ ಶುಭಸೂಚನೆ ನಿಃಕಳಂಕ ಮಲ್ಲಿ ಕಾರ್ಜುನಲಿಂಗವನರಿವುದಕ್ಕೆ ॥ ೭ ॥

೬೬೧

ಅನಾಚಾರದಲ್ಲಿ ಆಚಾರವಡಗಿ ಭಕ್ತನಲ್ಲದೆ ಭವಿಯಾಗಿ ನಿತ್ಯನಲ್ಲದೆ ಅನಿತ್ಯನಾಗಿರ್ದವಂಗಲ್ಲದೆ ಮೂರು ಕುಳವಿಲ್ಲ. ಆರು ಕುಳದಲ್ಲಿ ಬಲ್ಲವನಲ್ಲದೆ ಇಂತಿವರೊಳಗಾದ ನೂರೊಂದು ಕುಳಕ್ಕೆ ಸ್ಥಲಜ್ಞನಲ್ಲ. ಇಂತಿವ ಬಲ್ಲವರೆಲ್ಲ ರಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗವು ಸೊಲ್ಲಿನೊಳಗಾಗಿಹನು ॥ ೮ ॥

೬೬೨

ಅರಿದರಿವಿನ ಕುರುಹಿನಲ್ಲಿ ನಿರಿಗೆಯ ನಿಜವ ಕುರುಹ ಕಂಡ ಮತ್ತೆ ಮರೆದರೆಂಬುದಕ್ಕೆ ಸೂಚನೆ— ಮತ್ತಾ ಭೇದದ ವೇದನೆಯಲ್ಲಿ ನಿಧಾನಿಸ

ಲಿಕ್ಕಾಗಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ನಿಕ್ಷೇಪಕ್ಕೆ ಇದಿರೆಡೆ ಕುರುಹ ಕೊಟ್ಟಂತಿರ್ದುದು ॥ ೯ ॥

೬೬೩

ಅಣುಮಾತ್ರವಪ್ಪ ವಾಯುವ ಮನದ ಕೊನೆಯ ಮೊನೆಯಲ್ಲಿ ಸಪ್ತ ಸಮುದ್ರ ದಿಗ್ವಳಯದ ಗಿರಿಗಳು ಮುಂತಾದವ ತನ್ನ ಸತ್ವದಲ್ಲಿ ಎತ್ತುವುದ ಕಂಡೆ. ಕೊಂಡು ಹೋಹುದ ಕಂಡುದಿಲ್ಲಾ. ಎತ್ತಿ ಅಯ್ದಿಹೆನೆಂಬುದರಲ್ಲಿ ವಾಯು ಸತ್ವ ನಷ್ಟವಾಯಿತ್ತು. ಇಂತೀ ಗುಣವ ತ್ರಿಗುಣಾತ್ಮಕರು ತಿಳಿದು ಜಡ ಅಜಡವೆಂಬುದ ಕಳೆದು ನಿಃಕಳಂಕ ಮಲ್ಲಿಕಾರ್ಜುನಲಿಂಗವನೊಳಗು ಮಾಡಿರೆ ॥ ೧೦ ॥

೬೬೪

ಅಶ್ವತ್ಥ ವೃಕ್ಷದ ಪರ್ಣದ ತುದಿಯ ಮೊನೆಯಲ್ಲಿ ಅಪ್ಪುವಿನ ಬಿಂದು ಬೀಳುವದಕ್ಕೆ ಮುನ್ನವೆ ಈ ಘಟದಿಂದ ನಷ್ಟವಹ ಆತ್ಮನು ಆಸೆ ಎಂಬ ಸಮುದ್ರ, ಅಹಂಕಾರವೆಂಬ ಗಿರಿಗಳ ತೇಜಸ್ವಿನಂತೆ ಇದ್ದಿಹೆನೆಂಬ ಆತ್ಮನ ಹೊದ್ದಿಹ ಶುಭಸೂಚನೆ. ಅದು ಸಾಧ್ಯವಲ್ಲ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿದವರಿಗಲ್ಲದೆ ವೇದ್ಯವಾಗದು ॥ ೧೧ ॥

೬೬೫

ಆಕಾಶದಲಾಡುವ ಪಕ್ಷಿ ಆಕಾಶವ ನುಂಗಿ ಮಹದಾಕಾಶದಲ್ಲಿ ಆಡು ತ್ತಿದ್ದಿತ್ತು. ಆಡುವ ಪಕ್ಷಿಯು, ಪಕ್ಷಿಯೊಳಗಾದ ಆಕಾಶವ, ಪಕ್ಷಿಗೆ ತೆರಪುಗೊಟ್ಟ ಮಹದಾಕಾಶವ ಒಂದು ಶಾಖೆಯಲ್ಲಿ ಒಡಗೂಡಿ ಷಡ್ಭಾಗವಾದ ಕುಕ್ಕುಟನ ಕೊರಳ ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೨ ॥

೬೬೬

ಆತ್ಮ ತೇಜದಲ್ಲಿ ಪೂಜಿಸಿಕೊಂಬ ಹಿರಿಯರುಗಳೆಲ್ಲರು ಕೆಟ್ಟ ಕೇಡ ನೋಡಾ. ಅಂದಣ ಸತ್ತಿಗೆ ಕರಿ ತುರಗಂಗಳಿಂದ ನಾನಾ ಭೂಷಣ ಸುಗಂಧದ ಸುಖದಿಂದ ಮಚ್ಚಿ ಪೂಜಿಸಿಕೊಂಬ ಹಿರಿಯರೆಲ್ಲರು ಬೋಧೆಯ ಹೇಳಿ ಬೋಧಿಸಿಕೊಂಡುಂಬ ಹಿರಿಯರುಗಳೆಲ್ಲರು ಹಿರಿಯರಲ್ಲದೆ ಕಿರಿಯರಾದವ ರಾರೂ ಇಲ್ಲ. ಇದುಕಾರಣ ಅಂಧಕನ ಕೈಯ ಅಂಧಕ ಹಿಡಿದಂತೆ. ಹೆಣನ

ಕಂಡಂಜುವಂಗೆ ರಣದ ಸುದ್ದಿ ಏಕೋ ? ತನು ಸುಖವ ಮೆಚ್ಚಿದ ಗುರು ತನ್ನ ಮುಟ್ಟಿದ ಭಕ್ತಂಗೆ ನಿಶ್ಚಯವ ಹೇಳಲಾಗಿ ಅವನಿಗಿನ್ನೆತ್ತಣ ಮುಕ್ತಿಯೋ ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೩ ॥

೬೬೭

ಆಕಾಶದಲ್ಲಿ ಗುಡಿಗಿ ಅಡಗುವ ಭೇದವ, ಮಿಂಚಿನ ಹರಿತದ ಸಂಚಾರವ, ಅದರ ಸಂಚವನಂಜಿಸುವ ಭೇದವ ಮುಂಚಬಲ್ಲಡೆ, ವಸ್ತುವಿಪ್ಪೆಡೆಯ ಸಂಚವ ಬಲ್ಲಡೆ ಬಲ್ಲರೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪ ॥

ಅರ್ಥ:— ಮೇಘದಲ್ಲಿ ಹುಟ್ಟಿದ ಗುಡುಗು ಆ ಮೇಘದಲ್ಲಿ ಅಡಗುವ ಹಾಗೆ, ಮಿಂಚಿನಲ್ಲಿ ಹುಟ್ಟುವ ಪ್ರಕಾಶವು ಆ ಮಿಂಚಿನಲ್ಲಿ ಅಡಗುವ ಹಾಗೆ, ಅದರ ಕೂಟವ ಕೀಳಲ್ಪಡಿಸಿ, ಭಕ್ತನಾಗಿಯಾದರೂ ವಿರಕ್ತನಾಗಿಯಾದರೂ ವ್ರತಸ್ಥನಾಗಿಯಾದರೂ ತಾ ನಿಂದ ಸ್ಥಳದಲ್ಲಿ ಮೀರಿ ಆಚರಿಸಬಲ್ಲಡೆ, ಬ್ರಹ್ಮದ ನಿಲುಗಡೆಯನ್ನು ಆ ಬ್ರಹ್ಮದಲ್ಲಿ ಕೂಡುವ ಕೂಟವನು ಬಲ್ಲವರೆಂಬೆನೆಂಬುದರ್ಥ.

೬೬೮

ಇಂತೀ ಹೊಲಕೆ ಹೋಗುತ್ತಿದ್ದವನ ಕಂಡು ಊರೆಲ್ಲ ನೆರೆದು ಬೇಡ ಬದುಕೆಂದಡೆ ಆರೆನೆಂದ. ಅದಕ್ಕೆ ಆಕೆಯು ದೂರೆಂದಡೆ ಅವ ಬತಗೇಡಿ. ಅವಳ ತಾತಾ ಕೈಯ್ಯ ಕೊಟ್ಟಡೆ ಇಪ್ಪೆನೆಂದು ಕೂಡಿದ. ಅಜಾತರೊಂದಾಗಿ ಹೇಳಿದ ನೀತಿ ಲೇಸಾಯಿತ್ತು ಅತ್ತೆ ಅಳಿಯಂಗೆ. ಅತ್ತೆ ಅಳಿಯನ ಒಲ್ಲೆನೆಂದು ಹೊತ್ತು ಹೋರುತ್ತಿರಲಾಗಿ ಆ ಅಳಿಯ ಅತ್ತೆಯ ಹಿಡಿದು ಆಳಿದ. ಉಟ್ಟ ಸೀರೆ ಮೊತ್ತದ ಭಗವ ಕಂಡು ಒತ್ತಿ ಹಿಡಿಯಲಾಗಿ ನಿಶ್ಚಯವಾಯಿತ್ತು ಅತ್ತೆಯ ಭಗ. ಹುಟ್ಟಿದರು ಮೂವರು ನೆಲದಲ್ಲಿ ಇಬ್ಬರ ನಡುವೆ ಒಬ್ಬನಾಗಿ. ಇಬ್ಬರ ಬಿಟ್ಟು ಒಬ್ಬನ ಹಿಡಿದು ಅಬ್ಬರಿಸಲಾಗಿ ಅವನೆದ್ದುಬ್ಬಿ ಹೊಯಿದ ಹೋಗುಳಿನಲ್ಲಿ ಅತ್ತೆ ತಂದ ಅಳಿಯನ ನಾಮ ನಷ್ಟವಾಯಿತ್ತು. ಇಂತಿವರು ಎತ್ತಲೆಂದರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫ ॥

೬೬೯

ಇದ್ದುದ ಇಲ್ಲದಲ್ಲಿ ನೋಡಲಿಕ್ಕೆ ಅಲ್ಲಿಯೇ ಅಡಗಿತ್ತು. ಇಲ್ಲದುದ ಇದ್ದುದೆಂದು ನೋಡಲಿಕ್ಕಾಗಿ ಅದು ಇದ್ದಲ್ಲಿಯೇ ತಲ್ಲೀಯ್ಯವಾಯಿತ್ತು. ಇಂತೀ ಉಭಯವ ಕಡೆಗಾಣಿಸಲಾಗಿ ನಿಃಕಳಂಕ ಮಲ್ಲಿಕಾರ್ಜುನನ ಲಿಂಗದಲ್ಲಿಯೇ ಇದ್ದಿತ್ತು ॥ ೧೬ ॥

**ಅರ್ಥ:—** ಅಂಗದಲ್ಲಿ ನೆಲೆಗೊಂಡಿರುವ ಲಿಂಗವನ್ನು ಸಕಲ ಪ್ರಪಂಚವಿಲ್ಲದ ಜ್ಞಾನದಿಂದ ನೆನೆಯಲೇಕೆ ? ಆ ಜ್ಞಾನದಲ್ಲಿ ಇಷ್ಟಲಿಂಗವೇ ಪ್ರಾಣಲಿಂಗವಾಯಿತ್ತು. ಸಕಲ ಪ್ರಪಂಚ ಇಲ್ಲದ ಜ್ಞಾನದಿಂದ ಇಷ್ಟಲಿಂಗವೇ ಪ್ರಾಣಲಿಂಗವಾಗಿಪ್ಪುದೆಂದು ನೆನೆಯಲಿಕ್ಕಾಗಿ ಆ ಇಷ್ಟಲಿಂಗದಲ್ಲಿಯೇ ಪ್ರಾಣಲಿಂಗವಡಗಿತ್ತು. ಇಷ್ಟ ಪ್ರಾಣ ಲಿಂಗವ ಸಂಬಂಧವ ಮಾಡಿಕೊಂಡು ಜ್ಞಾನ ಕ್ರೀಯುಕ್ತನಾಗಿ ಆಚರಿಸುವ ಆಚರ ಣೆಯು ಇದರಿಂದ ಬಿಟ್ಟು ಇನ್ನಿಲ್ಲವೆಂದು ಬೋಧಿಸಲಾಗಿ ತನುಮನಂಗಳು ಇಷ್ಟ ಪ್ರಾಣಲಿಂಗದಲ್ಲಿಯೇ ಕೂಡಿಪ್ಪವೆಂಬುದರ್ಥ.

೬೭೦

ಇಚ್ಛಾಶಕ್ತಿ ಎಂಬ ಪಾಶದ ಭ್ರಮೆಯು ಈಷಣತ್ರಯದ ಹಾಲ ಕುಡಿದು ಜೀವನೆಂಬ ಮಹಿಷ ನಾನಾ ವ್ಯಾಮೋಹವೆಂಬ ಬಹು ಜನಂಗಳೆನಿ ಸುವ ಇಂದ್ರಿಯಂಗಳಲ್ಲಿ ಹೂಣಿ ಹೊಕ್ಕು ಹೊಡೆದಾಡುತ್ತಿರಲಾಗಿ ತನ್ನ ಕಲ್ಪಿತದ ಉತ್ಪತ್ತಿಯನರಿಯದೆ, ಸತ್ತಿಹೆನೆಂಬ ಭ್ರಾಂತಿಯಿಂದ ನಿಜವಸ್ತುವ ಮುಟ್ಟದೆ ಹೋಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ದೃಷ್ಟನಷ್ಟಭಾವಿಯಾದ ಕಾರಣ ॥ ೧೭ ॥

೬೭೧

ಇಷ್ಟವೆನ್ನದೆ ಬಿಟ್ಟು ಕಟ್ಟಿ ನಿತ್ಯಕೃತ್ಯನೆಂದು ಕಟ್ಟಳೆ ಇಲ್ಲದೆ ಮನ ಮುಟ್ಟದಲ್ಲಿಯೆ ನಿಶ್ಚಯವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ ॥ ೧೮ ॥

೬೭೨

ಹೆಣ್ಣು ಬೇಡುವಂಗೆ ಹೆಣ್ಣೇ ಪ್ರಾಣ, ಹೊನ್ನ ಬೇಡುವಂಗೆ ಹೊನ್ನೇ ಪ್ರಾಣ, ಮಣ್ಣ ಬೇಡುವಂಗೆ ಮಣ್ಣೇ ಪ್ರಾಣ. ಮನದ ಕುರುಹನರಿದವರ ನಾರನೂ ಕಾಣೆ. ಕುರಿತು ಬಂದಲ್ಲಿ ಕುರುಹಿಂಗೆ ಮಾಡುವದೇ ಶಾಂತಿಗುಣ. ಅರಿಕೆವಿಡಿದು ಬಂದಲ್ಲಿ ತನುಮನಧನ ತೆರಹಿಲ್ಲದೆ ಲೇಪವಾಗಿಪ್ಪುದೇ ಅರಿವುದು ಅಂಥ ಸದ್ಭಕ್ತನ ಇರವು. ಲಾಂಛನಕ್ಕೆ ನಮಿಸಿ ಆಪ್ಯಾಯನಕ್ಕೆ ನೀಡಿ, ತಾ ತಪ್ಪಿಪ್ಪ ಭಕ್ತನ ಒಪ್ಪಕ್ಕೆ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ ॥೧೯॥

**ಅರ್ಥ:—** ಹೆಣ್ಣ ಅರ್ಥಿಸುವಂಗೆ ಆ ಹೆಣ್ಣೇ ಪ್ರಾಣವಾಗಿರ್ಪುದು. ಹೊನ್ನ ಅರ್ಥಿಸುವಂಗೆ ಹೊನ್ನೇ ಪ್ರಾಣವಾಗಿಪ್ಪುದು. ಹೊಲಗದ್ದೆಗಳ ಅರ್ಥಿಸುವಂಗೆ ಅದೇ

ಪ್ರಾಣವಾಗಿಪ್ಪುದು. ಮನದ ಕುರುಹಾದ ಪ್ರಾಣಲಿಂಗಸಂಬಂಧವನರಿದವರ ನೊಬ್ಬರನೂ ಕಾಣೆ. ಭಕ್ತನಿಂದ ವಸ್ತುವ ಪಡೆಯಬೇಕೆಂದು ಕುರುಹಿಟ್ಟು ಬಂದಲ್ಲಿ ಆ ಕುರಿತು ಬಂದ ಜಂಗಮಕ್ಕೆ ಇಚ್ಛಾ ಪದಾರ್ಥವ ಕೊಟ್ಟು ಭಕ್ತಿಯ ಮಾಡುವದೇ ಭಕ್ತಿಯ ಗುಣವು. ಸತ್ಯಾಸತ್ಯದ ವಿಚಾರವ ತಿಳಿದು, ಭಕ್ತಿ ಜ್ಞಾನ ವೈರಾಗ್ಯವಿಡಿದಾ ಚರಿಸುವ ಜ್ಞಾನಿಗಳು ಬಂದಲ್ಲಿ ತನು ಮನ ಧನಂಗಳು ತೆರಪಿಲ್ಲದೆ ಅವರ ಭಕ್ತಿಯಲ್ಲಿ ಕೂಡಿರುವದೇ ತನ್ನ ನಿಜವನು ತಿಳಿದ ಸದ್ಭಕ್ತನ ನಿಲುಕಡೆಯು. ಶಿವಲಾಂಛನ ಸರ್ವೋತವಾದ ಜಂಗಮಕ್ಕೆ ನಮಸ್ಕಾರವ ಮಾಡಿ ಹಸಿವಿಗನ್ನವನಿಕ್ಕಿ, ಆ ಭಕ್ತಿ ಯಿಂದಾಗುವ ಫಲಪದಂಗಳಿಗೆ ತಾ ವಿಲಕ್ಷಣವಾಗಿಪ್ಪ ಶಿವಭಕ್ತನ ನಿಲುಕಡೆಗೆ ಸಾಂದ್ರ ನಮಸ್ಕಾರವೆಂಬುದರ್ಥ.

೬೭೩

ಊರ ಮುಂದೊಂದು ದೇವರ ಗುಡಿಯ ಕಂಡೆ. ದೇವರಿಲ್ಲದೆ ದೇಗುಲ ನಿಂದಿತ್ತು. ದೇಗುಲದೊಳಗಣ ತಮ್ಮಡಿ ಆರೈದು ನೋಡುತ್ತಿದ್ದ ತನ್ನೋಗರ ದೊಡೆಯನ ಕಾಣದೆ. ಇದನಿನ್ನಾರಿಗೆ ಹೇಳುವೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೦ ॥

೬೭೪

ಊರಿಗೆ ಹೋಹಾಗ ಓಣಿಯ ಕೆಲದಲ್ಲಿ ಕಟ್ಟಿದ ಕಳ್ಳರ ಕಂಡೆ. ಅವರ ವರ್ಣ ಒಬ್ಬ ಕಪೋತ ಒಬ್ಬ ಕೃಷ್ಣ. ಕಪೋತನ ಕಾಲ ಹೊಯಿದು ಕೃಷ್ಣನ ಕೊಲ್ಲಗೆಡಹಿ ಹೋಗುತ್ತಿರಲಾಗಿ ಓಣಿಯ ತಪ್ಪಲ ಹಾದಿಯಲ್ಲಿ ಕಟ್ಟಿದ್ದ ನೊಬ್ಬ ಕಳ್ಳ. ಅವನ ಕಂಡು ಕೂಗುವರೆ ಬಾಯಿಲ್ಲ. ಇರಿವಡೆ ಕೈ ಇಲ್ಲ. ಮೀರಿ ಹೋದಿಹೆನೆಂದಡೆ ಹಾದಿಗೆ ಹೊಲಬಿಲ್ಲ. ಇದು ಅವನ ಕೌಳಿಕವೋ ? ಎನ್ನ ಭಾವದ ಭ್ರಮೆಯೋ ? ಮುಂದಣವನ ಸುದ್ದಿಯ ಹಿಂಗಿ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೧ ॥

೬೭೫

ಊರಿನ ಹಾದಿಯಲ್ಲಿ ಹೋಗುತ್ತಿರಲಾಗಿ ಇದಿರು ಬಂದಿತ್ತೊಂದು ಹಾವು. ಎನ್ನ ಅರುವಿಲ್ಲದ ಠಾವಿನಲ್ಲಿ ಅದ ಮೀರಿ ಹೋಗಲಂಜಿದೆ. ಓಡಿದಡೆ ಅಟ್ಟಿತ್ತು ಮೀರಿದಡೆ ಕಚ್ಚಿತ್ತು. ಗಾರಾದೆನಯ್ಯಾ ಈ ಹಾವ ಕಂಡು. ಹೋಗ ಲಿಲ್ಲ ನಿಲ್ಲಲಿಲ್ಲ. ಇದಕ್ಕಾರದೆ ಮೀರಿ ಹಿಡಿದ ಹಾವು ನಟ್ಟನಡುವೆ ಹಿಡಿಗೊಳ

ಗಾಗೆ ಕಚ್ಚಿತ್ತು. ಆ ಹಾವಿಗೆ ತಲೆ ಇದ್ದಂತೆ ಬಾಲದಲ್ಲಿ ವಿಷ. ಬಾಲದ ವಿಷ ಹತ್ತಲಾಗಿ ಊರೆಲ್ಲ ಸತ್ತರು ನಾ ಬದುಕಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

೬೭೬

ಉದಕದ ಬಾಯಲ್ಲಿ ಒಂದು ರಸದ ಗಿರಿ ಹುಟ್ಟಿ ಹೊಸ ಮಾಣಿಕ್ಯವ ನುಂಗಿತ್ತ ಕಂಡೆ. ನುಂಗುವಾಗ ಒಂದು, ಗುಟಿಸುವಾಗ ಎರಡು, ಸ್ವಸ್ಥಾನದಲ್ಲಿ ನಿಂದಾಗ ಮೂರು. ಅದರಂಗವ ತಿಳಿದು ಕಳೆಯಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ ॥ ೨೩ ॥

ಅರ್ಥ:— ಚಿತ್ತದ ಭಾವದಲ್ಲಿ ಒಂದು ಶಿವಾಪೇಕ್ಷೆ ಎಂಬ ಅದ್ರಿ ಉಂಟಾಗಿ ನೂತನವಾದ ಮಹಾಪ್ರಕಾಶವನುಳ್ಳ ಮಹಾಲಿಂಗವನೆ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗವಾಗಿ ಗ್ರಹಿಸಿಕೊಂಡಿಪ್ಪನು. ದೀಕ್ಷಾತ್ರಯುಗಳಿಂದ ಗ್ರಹಿಸುವಾಗ ಒಂದನೆಯದಾದ ಇಷ್ಟಲಿಂಗವು ಅಂಗದಲ್ಲಿ ಸಂಬಂಧವಾಗಿಪ್ಪುದು. ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಜ್ಞಾನದಿಂದ ಗ್ರಹಿಸುವಾಗ ಎರಡನೆಯದಾದ ಪ್ರಾಣಲಿಂಗವು ಮನದಲ್ಲಿ ಸಂಬಂಧವಾಗಿಪ್ಪುದು. ನಿರ್ಗುಣ ಪೂಜಾ ಕ್ರಿಯೆಗಳನ್ನು ಕೈಕೊಂಡು ಆತ್ಮನಲ್ಲಿ ನೆಲೆಗೊಂಬಾಗ ಮೂರನೆಯದಾದ ಭಾವಲಿಂಗವಾಗಿ ಸಂಬಂಧವಾಗಿಪ್ಪುದು. ತ್ರಿವಿಧ ಲಿಂಗಸಂಬಂಧದ ಒಪ್ಪವನರಿದು ತನುತ್ರಯಂಗಳ ವರ್ತನೆಯ ನಷ್ಟವ ಮಾಡಬಲ್ಲಡೆ ತ್ರಿವಿಧ ಲಿಂಗವನೊಳಕೊಂಡು ತೋರುವ ಮಹಾಲಿಂಗವೇ ತಾನೆಂದು ತಿಳಿಯಬಲ್ಲನೆಂಬರ್ಥ.

೬೭೭

ಉರಿದು ಸತ್ತುದು ಮತ್ತರಿದು ನಾನಾ ಭೇದಂಗಳ ಘಟ ಮಠಂಗಳ ಆಶ್ರಯಕ್ಕೊಡಲಾಗಿ ಮತ್ತೆ ಭಸ್ಮವಾಗಿ ಒಡಲಡಗಿದ ತೆರದಂತೆ ಇಂತೀ ತ್ರಿವಿಧದ ಕುರುಹಿನ ಲಕ್ಷದ ಭೇದ ಒಪ್ಪಿರಬೇಕು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ॥ ೨೪ ॥

೬೭೮

ಎಲ್ಲವ ಮೀರಿಹ ಸಮ್ಯಕ್‌ಜ್ಞಾನ ಸಂಸಾರಕ್ಕೊಳಗಾಗಿ ಹರಿದು ಭೇದಿಸುವ ಅರಿವು ತಾಪತ್ರಯದ ಉರಿಗೊಳಗಾಗಿ ಮತ್ತಾ ಅರಿವನರಿಸಿ ವಸ್ತುವ ನೊಡಗೂಡಿಹೆನೆಂಬುದಕ್ಕೆ ಸೂಚನೆ— ಮತ್ತಾ ಇಂದ್ರಿಯಂಗಳು ಬೆಂದು

ಇಂಗಿ ಹೋದಲ್ಲಿ ನಿರಂಗ ವಸ್ತು ನಿಂದಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಕೂಡಿ ಎರಡಳಿದಿಹೆನೆಂಬ ಚದುರತೆಯುಂಗ ॥ ೨೫ ॥

೬೭೯

ಒಂದು ಬಾಳೆ ಕಂದನ ಹೊತ್ತು ಬಂದಿತ್ತು. ಹುಟ್ಟಿದ ಕಂದನ ಎಡ ಕೈಯಲ್ಲಿ ಗಡಿಗೆ, ಬಲದ ಕೈಯಲ್ಲಿ ಕಟ್ಟಿಗೆ, ಮಂಡೆಯ ಮೇಲೆ ಕಿಚ್ಚು. ಇದ ಸಹಿತವಾಗಿ ಅಟ್ಟುಂಬುದಕ್ಕೆ ನೆಲ ಹೊಲನ ಕಾಣದೆ ತಿಟ್ಟನೆ ತಿರುಗಿ ಘಟ್ಟದ ಒತ್ತಿನಲ್ಲಿ ಕಟ್ಟಕಡೆಯಲ್ಲಿ ಒಂದು ಬಟ್ಟ ಬಯಲು ಮಳಲಿದ್ದಿತ್ತು. ಕೈಯ್ಯ ಕಂದನಲ್ಲಿರಿಸಿ ಕಟ್ಟಿಗೆ ಹೊರೆಯ ಕಟ್ಟು ಬಿಟ್ಟು ಮಸ್ತಕದ ಬೆಂಕಿಯ ಕಟ್ಟಿಗೆಯ ಒತ್ತಿನಲ್ಲಿರಿಸಿ ಒತ್ತಿನ ಕಾಲ ಕಾಣದೆ ಹೊಲಬುದಪ್ಪಿ ಆ ಹೊಲದೊಳಗೆ ತಿರುಗಿ ನೋಡಿ ಪಶ್ಚಿಮದಲ್ಲಿ ಕಂಡ ಪಚ್ಚೆಯ ಕಲ್ಲ, ಉತ್ತರದಲ್ಲಿ ಕಂಡ ಪುಷ್ಕರದ ಕಲ್ಲ, ಪೂರ್ವದಲ್ಲಿ ಕಂಡ ಬಿಳಿಯ ಕಲ್ಲ ಮೂರೂ ಕೂಡಿ ಮಡಿಕೆಯ ಮಂಡೆಯ ಮೇಲಿರಿಸಲಾಗಿ ಕಂಡಿತ್ತು ಕಲ್ಲಿನ ಇರವು. ಉದಕವನರಸಿ ಅಳಲುತ್ತಿದ್ದಿತ್ತು ಬೆಂಕಿ. ಆ ಬೆಂಕಿ ಬೇಗೆಗಾರದೆ ಉದಕ ಒಡೆದು ಮಡಿಕೆ ನಿಂದಿತ್ತು. ನಿಂದ ಮಡಿಕೆಯ ಅಂಗವ ಕಂಡು ಇದರ ಹಂಗೇನೆಂದು ಕೈಬಿಡಲಾಗಿ ಮಡಿಕೆ ಅಡಗಿತ್ತು. ಮೂರು ಕಲ್ಲಮೇಲಿನ ಮಧ್ಯದಲ್ಲಿ ಕಟ್ಟಿಗೆಯ ಸುಟ್ಟವನ ಮಕ್ಕಳುಂಡರು. ಮಿಕ್ಕವರೆಲ್ಲ ಹಸಿದರು. ಅವರಸುವು ಗಸಣೆಗೊಳಗಾಯಿತ್ತು. ಇಂತೀ ಹುಸಿಯದೆ ಹಸಿವ ತೊಟ್ಟು ದೆಸೆಗೆಟ್ಟೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ ॥ ೨೬ ॥

೬೮೦

ಐದು ವರ್ಣದ ಪಶುವಿನ ಬಸುರಿನಲ್ಲಿ ಮೂರು ವರ್ಣದ ಕರು ಹುಟ್ಟಿ ಒಂದೇ ವರ್ಣದ ಹಾಲ ಸೇವಿಸಿ ಹಲವು ಹೊಲದಲ್ಲಿ ತಿರುಗಾಡುತ್ತಿದ್ದಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗದ ಕುಳದ ಹೊಲಬುಗಾಣದೆ ॥ ೨೭ ॥

೬೮೧

ಔದುಂಬರದ ಕುಸುಮದಲ್ಲಿ ಪಾದರಿ ಫಲವಾಗಿ ಆ ಫಲ ಬಲಿದು ಎಲವದ ಮರನಲ್ಲಿ ಹಣ್ಣಾಯಿತ್ತು. ಆ ಹಣ್ಣನೊಡದು ನೋಡಲಾಗಿ ರಸವಿಲ್ಲದೆ ತುಷಾರ ಹಾರಿತ್ತು. ಇಂತೀ ಅಂಗವಿದ್ದು ನಿರಂಗವಾಗಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ ॥ ೨೮ ॥

೬೬೨

ಕಣ್ಣಿಲ್ಲದವ ಕನ್ನಡಿಯ ನೋಡಿ ಕಂಡ. ಬಾಯಿಲ್ಲದವ ಹೊಟ್ಟೆತುಂಬಿ ಉಂಡು ದಣಿದ. ತಾನಿದ್ದು ಸತ್ತ. ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಗೆ ಹೊದ್ದಿ ಹೋಗುತ್ತಿರ್ದ ॥ ೨೯ ॥

೬೬೩

ಕಾಡೆಮ್ಮೆಯ ಹಾಲ ಊರ ಕೋಣ ಕುಡಿದು ಮತ್ತಾರನು ಲೆಕ್ಕಿಸದೆ ಬಹುಜನರ ನೋಯಿಸಿ ಬಾಹಲ್ಲಿ ಒಂದಾಡಿನ ಬಾಲದ ಹೊಯ್ಲಿಂಗಂಜಿ ಓಡಿ ಹೋಯಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ವೇಧಿಸಲರಿಯದೆ ॥ ೩೦ ॥

೬೬೪

ಕಾಲ[1] ಹಿಡಿದು ಆನೆಯನೇರಿದ ಮತ್ತೆ ಅದು ಭಾವಿಸದು ನೋಡಾ. ಲೋಕಜ್ಞಾನವರಿದು ಭಾವ ಭ್ರಮೆಯಲ್ಲಿ ಚರಿಸಿದಡೆ ಅರಿಯಬಾರದು ನೋಡಾ. ಅರಿದಲ್ಲಿ ಸಾಗುವನೊಡಲು ತೆಪ್ಪದ ಮೇಲಿಪ್ಪ ಒಪ್ಪದ ಓಲೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

೬೬೫

ಕಾಳೋದರವೆಂಬ ಕಾಳರಕ್ಕಸಿಯ ಬಸುರಲ್ಲಿ ಒಬ್ಬ ಭಾಳಲೋಚನ ಹುಟ್ಟಿದ. ಆತ ಕಾಲಸಂಹಾರಿ ಕಲ್ಪಿತನಾಶಕ. ಆತ ಕಾಳೋದರ ರಕ್ಕಸಿಯ ಕೊಂದ. ಆ ತಾಯ ಕೊಂದ ನೋವಿಲ್ಲ. ಹೆತ್ತ ತಾಯ ಕೊಂದ ಅನಾಚಾರಿ. ನಿಃಕಳಂಕ ಮಲ್ಲಿಕಾರ್ಜುನ ಕಟ್ಟುಮೆಟ್ಟನವನಲ್ಲ ॥ ೩೨ ॥

೬೬೬

ಕೀಲಿನೊಳಗೊಂದು ಕೀಲವ ಕಂಡೆ. ಆ ಕೀಲಿನೊಳಗೊಂದು ಸಕೀಲವ ಕಂಡು ಸಕಲವನೆಲ್ಲವನರಿದೆ. ಆ ಅರಿವು ಮರವೆಗೊಳಗಾಯಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗದರಿವಿನಲ್ಲಿ ॥ ೩೩ ॥

೬೬೭

ಕುಕ್ಕುಟನ ಗರ್ಭದಲ್ಲಿ ಒಂದು ಮಾರ್ಜಾಲ ಹುಟ್ಟಿ ಹೆತ್ತ ತಾಯ ತಿಂದು ತತ್ತಿಯ ಬಿಟ್ಟಿತ್ತು. ಈ ಗುಣ ಉಭಯದೃಷ್ಟ ನಿಃಕಳಂಕ ಮಲ್ಲಿಕಾರ್ಜುನಾ ॥ ೩೪ ॥

---

೧. ಕೋಲ (ಬ).

೬೮೮

ಕೆರೆಯೊಳಗಣ ಮೊಸಳೆ ತಡಿಯನುಂಡುಕೊಂಡಿತ್ತು ಉಡುವ. ಆ ಉಡುವಿನ ಬಡಿಗೆಯಲಿಡಲಾಗಿ ಅದು ಆ ಬಡಿಗೆಯ ನುಂಗಿ ತನ್ನ ಬಳಗವ ನೊಡಗೂಡಿತ್ತಾಗಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೫ ॥

೬೮೯

ಕೊರಳಿಗೆ ಒಂದು ನೇಣಿನಲ್ಲಿ ಸಂದೇಹ ಬಿಡದು. ಎರಡು ನೇಣಿನಲ್ಲಿ ಹಿಂಗಿ ಹೋಗದು. ಮೂರು ನೇಣಿನಲ್ಲಿ ಮುಕ್ತಾಯವಾಗದು. ಹಲವು ನೇಣಿನಲ್ಲಿ ಕಟ್ಟುವಡೆದುದು ಕೂಸು. ಅದಕ್ಕೆ ಒಲವರವೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

೬೯೦

ಕಲ್ಲಿನೊಳಗಣ ದಳ್ಳುರಿಯು ಹುಳ್ಳಿಯ ಕಿಚ್ಚಿನಂತೆ ಅಲ್ಲಿಯೇ ಉರಿಯ ಬಲ್ಲುದೇ ? ಕ್ರೀಯಲ್ಲಿಗೆ ಸ್ಥಲ, ಜ್ಞಾನದಲ್ಲಿಗೆ ಕೂಟ, ಸ್ವಾನುಭಾವದಲ್ಲಿಗೆ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

೬೯೧

ಕಾಯಸಮಾಧಿಯನೊಲ್ಲೆ. ನೆನಹು ಸಮಾಧಿಯನೊಲ್ಲೆ. ಕೈಲಾಸವೆಂಬ ಭವಸಾಗರವನೊಲ್ಲೆ. ನೀ ಎನ್ನ ಅಲ್ಲಿಗಿಲ್ಲಿಗೆಂದೆಳೆಯದೆ ನಿನ್ನಲ್ಲಿಗೆ ಕೂಟಸ್ಥವ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೩೮ ॥

೬೯೨

ಕಾಯ ಹಸಿದು ಓಗರವ ಬೇಡುವಾಗ ಲಿಂಗಾರ್ಪಿತವೆಲ್ಲಿ ಆಯಿತ್ತೋ ? ಮನ ತನುವ ಬಿಟ್ಟು ‹ ವರ್ಗ ವಿಕಾರದಲ್ಲಿ ಭ್ರಮಿಸುವಾಗ ಸಾವಧಾನಿಗಳೆಂತಾದಿರೋ ? ಸ್ಥೂಲದಲ್ಲಿ ಪಿಡಿದು ಸೂಕ್ಷ್ಮದಲ್ಲಿ ಮರೆದು ಕಾರಣದಲ್ಲಿ ಏನೆಂದರಿಯದೆ ಜಗದುತ್ಪತ್ತಿಗೆ ಒಳಗಾದವರ ಪ್ರಾಣಲಿಂಗಿಗಳೆಂಬೆನೆ ? ಎನ್ನೆನು. ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು[೧] ಶಾಸ್ತ್ರದ ಸಂತೆಯವರು, ಪುರಾಣದ ಪುಂಡರು, ತರ್ಕದ ಮರ್ಕಟರು, ಭಾವಸಾಗರದ ಬಾಲಕರು, ತತ್ತ್ವವನರಿಯದ ಮತ್ತರು. ಇಂತಿವರು ಕೆಟ್ಟ ಕೇಡ ನೋಡಿ ಗುರುವಿನ ಕೊರಳ ಕೊಯ್ದು ಲಿಂಗದ ತಲೆಯೊಡೆದು ಜಂಗಮದ ಸಂದ ಮುರಿದೆ,

---

೧. ಹಾದಿಗರು (ಬ).

ದ್ವಂದ್ವವ ಹಿಂಗಿದೆ, ಸಂದನಳಿದೆ, ಸದಮಲಾನಂದವ ಹಿಂಗಿದೆ, ಹೊಂದದ ಬಟ್ಟೆಯಲ್ಲಿ ಸಂದೆನಯ್ಯಾ ಮಹಾದಾನಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೯ ॥

೬೯೩

ಕೆಚ್ಚಲಿನ ಹಾಲಲ್ಲಿ ತುಪ್ಪವಿಪ್ಪ ಭೇದವ ಬಲ್ಲರೆ ಬಲ್ಲರೆಂಬೆ. ಬೆಂಕಿಯೊಳಗಣ ಬೇಗೆಯ ಬಲ್ಲರೆ ಬಲ್ಲರೆಂಬೆ. ವಾಯುವಿನೊಳಗಿಪ್ಪ ಸಂಚಾರವ ಬಲ್ಲರೆ ಬಲ್ಲರೆಂಬೆ. ಬೀಜದೊಳಗಿಪ್ಪ ರಸಾಂಕುರವ ಬಲ್ಲರೆ ಬಲ್ಲರೆಂಬೆ. ಕಾಯದೊಳಗಿಪ್ಪ ಪ್ರಾಣದ ನೆಲೆಯ ಬಲ್ಲರೆ ಬಲ್ಲರೆಂಬೆ. ಚಂದನದೊಳಗಣ ಗಂಧವ ಬಂಧಿಸಿ ಹಿಡಿಯಬಲ್ಲರೆ ಬಲ್ಲರೆಂಬೆ. ಲಿಂಗವಿಪ್ಪೆಡೆಯ ಬಲ್ಲರೆ ಬಲ್ಲರೆಂಬೆ. ಶಿಲೆಯೊಳಗಿಪ್ಪ ಕುಲಾಲ[೧] ಬೆಳಗಿ ತೊಳಗುವ ಆ ಮಲಿನರ ಮುಖವ ಕಂಡು ಮತ್ತೆ ದಿಂಗುವಿಡಿಯಲೇಕೋ ? ದಿಂಗುವಿಡಿದು ಭಂಡರಾದ ಲೆಂಡರಿಗೇಕೋ ಲಿಂಗದ ಸುದ್ದಿ ನಿಃಕಳಂಕ ಮಲ್ಲಿಕಾರ್ಜುನಾ ॥ ೪೦ ॥

೬೯೪

ಕೈಯಲ್ಲಿ ಕುರಿತು ಹಿಡಿದು, ಕಣ್ಣಿನಲ್ಲಿ ನೋಡಿ, ಆತ್ಮದಲ್ಲಿ ಅರಿದು ತನ್ನ ತಾನೇ ತಿಳಿದು ಕೈಯಲ್ಲಿದ್ದುದೇನು ? ಕಣ್ಣಿನಲ್ಲಿ ನೋಡಿದುದೇನು ? ಆತ್ಮನಿಂದ ಅರಿದುದೇನು ? ಇಂತೀ ತ್ರಿವಿಧಗುಣವ ತಿಳಿಯಬೇಕಣ್ಣಾ. ಕೈಯಲ್ಲಿದ್ದುದು ಕಡದ ಲಿಂಗವೊ ? ಕಣ್ಣಿನಲ್ಲಿ ನೋಡಿದುದು ಬಣ್ಣದ ಲಿಂಗವೋ ? ಆತ್ಮನಿಂದರಿದುದು ಬಯಲ ಲಿಂಗವೋ ? ಕೈಗೂ ಕಣ್ಣಿಗೂ ಮನಕ್ಕೂ ಭಿನ್ನವಾಯಿತ್ತು. ಲಿಂಗಪ್ರಾಣ, ಪ್ರಾಣಲಿಂಗಿಗಳನಿನ್ನಾರನೂ ಕಾಣೆ. ಭಾವಿಸಲಿಲ್ಲ ಭ್ರಮೆಗೊಳಗಾಯಿತ್ತು. ಆದಿಯ ಶರಣರೆಲ್ಲರು ಹೋದರಲ್ಲಾ ಹೊಲಬುಗೆಟ್ಟು. ನಾದಕ್ಕೊಳಗಾಯಿತ್ತೆಲ್ಲ. ಆತ್ಮನ ಕಳೆಯನೆಯ್ದಿದವರಿನ್ನಾರನೂ ಕಾಣೆ. ಕಳಾತೀತ ಪರಂಜ್ಯೋತಿ ಪ್ರಕಾಶ ನೀನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೧ ॥

ಅರ್ಥ:— ಹಸ್ತದಲ್ಲಿ ಇಷ್ಟ ಲಿಂಗವನು ಕುರುಹಿಟ್ಟು ಪಿಡಿದು ಸುಜ್ಞಾನ ದೃಷ್ಟಿಯಲ್ಲಿ ಪ್ರಾಣಲಿಂಗವ ನಿರೀಕ್ಷಿಸಿ, ಆತ್ಮನಲ್ಲಿ ಭಾವಲಿಂಗ ಸಂಬಂಧವ ತಿಳಿದು, ತಮ್ಮ ಜ್ಞಾನದಿಂದ ತಾವೇ ಅರಿದು ನಾವು ತ್ರಿವಿಧಲಿಂಗ ಸಂಬಂಧಿಗಳೆಂದು ಹೇಳು

---

೧. ಕುಲಹೀನನ (ಡ)

ತ್ತಿಹರು. ಕೈಯಲ್ಲಿರುವದು ಇಷ್ಟಲಿಂಗವೆಂದು ಜ್ಞಾನದೃಷ್ಟಿಯಲ್ಲಿ ನೋಡಿದುದು ಪ್ರಾಣಲಿಂಗವೆಂದು ಆತ್ಮನಲ್ಲಿ ತಿಳಿದುದು ಭಾವಲಿಂಗವೆಂದು ಈ ತ್ರಿವಿಧ ಲಿಂಗ ಒಂದೇ ಎಂಬ ಸಮರಸ ಭಾವವನರಿಯಬೇಕು. ಎಲೇ ಹಿರಿಯರುಗಳಿರಾ ಕೈಯಲ್ಲಿ ರುವುದು ಪಂಚಸೂತ್ರ ಪ್ರಮಾಣದಿಂದ ಕಟೆದು ತಿದ್ದಿ ತೀರ್ಚಿ ಒಪ್ಪವಿಟ್ಟುದು ಲಿಂಗ ವೆಂದಲ್ಲಿ ಅಹುದೆಂಬರು. ಸುಜ್ಞಾನ ದೃಷ್ಟಿಯಲ್ಲಿ ನಿರೀಕ್ಷಿಸಿದುದು ಸಾಕಾರ ನಿರಾಕಾರ ದೊಡನೆ ಕೂಡಿದ ಮಂತ್ರಮೂರ್ತಿಯಾದ ಪ್ರಾಣಲಿಂಗವು ಎಂದಲ್ಲಿ ಅಹುದೆಂಬರು. ಆತ್ಮನಿಂದ ತಿಳಿದು ನಿರಾಕಾರವಾದುದು ಭಾವಲಿಂಗವೆಂಬಲ್ಲಿ ಅಹುದೆಂಬರು. ಕೈಯಲ್ಲಿಪ್ಪ ಇಷ್ಟಲಿಂಗಕ್ಕೂ ಸುಜ್ಞಾನದಲ್ಲಿ ನೋಡಿದ ಪ್ರಾಣಲಿಂಗಕ್ಕೂ ಆತ್ಮನಲ್ಲಿ ತಿಳಿದ ಭಾವಲಿಂಗಕ್ಕೂ ಬೇರಾಯಿತ್ತು. ಪ್ರಾಣಲಿಂಗದಲ್ಲಿ ಪ್ರಾಣವು ಕೂಡಿ, ಪ್ರಾಣ ದಲ್ಲಿ ಪ್ರಾಣಲಿಂಗವು ಕೂಡಿ, ಪ್ರಾಣ ಪ್ರಾಣಲಿಂಗ ಸಮರಸ ಉಳ್ಳವರನೊಬ್ಬರನೂ ಕಾಣೆ. ತ್ರಿವಿಧ ಲಿಂಗವು ಒಂದೇ ಎಂಬ ಸಮರಸ ಭಾವದಿಂದೆ ಭಾವಿಸಲಿಲ್ಲ. ಭಿನ್ನ ಭಾವಿಗಳು ಭಿನ್ನಭಾವ ಭ್ರಾಂತಿಗೆ ಈಡಾದರು. ಜ್ಞಾನಿಗಳೆನಿಸಿಕೊಂಬ ಶರಣರು ಗಳೆಲ್ಲರು ಸತ್ಪಥ ಮಾರ್ಗಕ್ಕೆ ವಿಲಕ್ಷಣರಾಗಿ ಭಿನ್ನಭಾವಿಗಳಾಗಿ ಹೋದರಲ್ಲಾ. ಇವರೆಲ್ಲರು ಪ್ರಾಣನ ಪ್ರಪಂಚಿಗೆ ಒಳಗಾದರು. ಆತ್ಮನಲ್ಲಿ ಬೆಳಗುವ ಮಹಾಲಿಂಗವೇ ಇಷ್ಟಪ್ರಾಣ ಭಾವಲಿಂಗವಾಗಿಪ್ಪುದೆಂದರಿದು ತ್ರಿವಿಧ ಭಕ್ತಿವಿಡಿದು ಆಚರಿಸಿ ಮಹಾ ಲಿಂಗದಲ್ಲಿ ಕೂಡುವರನೊಬ್ಬರನೂ ಕಾಣೆ. ಪರಂಜ್ಯೋತಿ ಪ್ರಕಾಶವನುಳ್ಳ ಮಹಾ ಲಿಂಗವೇ ನೀನು ಪ್ರಾಣನ ವರ್ತನೆ ಇಲ್ಲದ ಚಿತ್ಪ್ರಾಣನಲ್ಲಿ ಪ್ರಾಣಲಿಂಗವಾಗಿಪ್ಪೆ. ದೇಹದ ವರ್ತನೆ ಇಲ್ಲದ ಆಚಾರಲಿಂಗದಲ್ಲಿ ಇಷ್ಟಲಿಂಗವಾಗಿಪ್ಪೆ. ಆತ್ಮನ ವರ್ತನೆ ಇಲ್ಲದ ಚಿದಾತ್ಮನಲ್ಲಿ ಭಾವಲಿಂಗವಾಗಿಪ್ಪೆ. ಎಂದರಿದು ಸಮರಸದಿಂದ ಆಚರಿಸು ತ್ತಿರುವೆನೆಂಬುದರ್ಥ.

೬೯೫

ಕಿಂಚಿತ್ತು ಜೀವನು ಆಶೆ ಎಂಬ ಫಳದ ದೆಸೆಯಿಂದ ವ್ಯಾಪಾರಕ್ಕೊಳ ಗಾದ ಕಾರಣ ಕಾಯಿ ಕೈಗೆ ಸಖ್ಯವಿಲ್ಲ ಎಂಬುದಕ್ಕೆ ಭೇದ. ಇಂತೀ ಜೀವನ ಗುಣವ ಹರಿದು ಆಶಾಪಾಶವ ಕಿತ್ತು ಈ ಉಭಯ್ಯದ ಗುಣವ ನೇತಿಗಳೆದಲ್ಲಿ ಚಿತ್ತ ಪಕ್ಷವಾಯಿತ್ತು. ಅದೇ ಸುಚಿತ್ತದ ಹಣ್ಣು ನಿಃಕಳಂಕ ಮಲ್ಲಿಕಾರ್ಜುನಾ ॥ ೪೨ ॥

೬೯೬

ಕಾಷ್ಟ ಬೆಂದು ಕರಿಯಾದ ತೆರದಂತೆ, ನಾನಾ ಲೋಹಂಗಳು ಭೇದ ಕ್ಕೊಡಲಾಗಿ ಮತ್ತೆ ವಹ್ನಿಯ ಭಾವದಲ್ಲಿ ಬಯಲಾದ ತೆರದಂತೆ. ಇಂತಿವ ನರಿದವನ ನಿಶ್ಚಯ ಕರಿಗೊಂಡವನ ನಿಶ್ಚಯದ ಚಿತ್ತ ಗುರು ಪರ ಚರ

ತ್ರಿವಿಧ ಏಕವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಏಕೀಕಾರವಾದವನಂಗ ।೪೩ ॥

೬೯೭

ಕೋಡಗ ಜೋಗಿಯನಾಡಿಸುವುದ ಕಂಡೆ. ಹಾವು ಹಾವಾಡಿಗನ ಗಾರುಡವನಿಕ್ಕಿ ಹೇಳಿಗೆಯ ಬಂಧನದಲ್ಲಿ ಕೂಡಿ ಕಾಡುವುದ ಕಂಡೆ. ಉರಿ ಗೆಂಡ ತೃಣಕ್ಕಂಜಿ ಅಲ್ಲಿಯೇ ಅಡಗಿ ತನ್ನ ಉಷ್ಣವಿಲ್ಲದುದ ಕಂಡೆ. ಇಂತೀ ದೃಷ್ಟವ ಮರೆದು ಇಷ್ಟವನರಿಯದ ವಿಶ್ವಾಸಹೀನರು ನಿಃಕಳಂಕ ಮಲ್ಲಿ ಕಾರ್ಜುನ ಲಿಂಗವನರಿಯದೆ ಹೋದರು ॥ ೪೪ ॥

೬೯೮

ಕಣ್ಣು ಕಳದು ದೃಷ್ಟಿ ಕಾಬುದ ಕಂಡೆ. ಬಯಲು ಬಡಿವಡಸಿಕೊಂಡು ಬಂಧನದಲೊಡಗೂಡುವದ ಕಂಡೆ. ಈ ಯಂಗ ನಿರಂಗವ ಉಭಯ ಭಾವ ವಳಿದು ತಿಳಿಯಲಾಗಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ತನ್ನೊಳಗಾದ ಚೋದ್ಯ ॥ ೪೫ ॥

೬೯೯

ಗೆಲ್ಲಾಳುಗಳೆಲ್ಲರು ಬಿಲ್ಲನೂರಿ ನಿಂದಿರಲಾಗಿ ಬಿಲ್ಲ ಹೆದೆ ಹರಿದು ಬಿಲ್ಲಿನ ಹೆದೆಯಕೊಪ್ಪು ಅಲ್ಲಲ್ಲಿಗೆ ತೊಡುವು ಮೆಲ್ಲಗೆ ಇರಿಸಿದಡೆ ಅದರಲ್ಲಿಯೆ ಸಿಕ್ಕಿತ್ತು. ಆ ಹೆದೆಯ ಇಳುಹುವರ ಕಾಣೆ. ಬಲ್ಲತನದಿಂದ ಬಿಲ್ಲು ಬೆರಗಾಯಿತ್ತು. ಬಿಲ್ಲು ಹಿಡಿವಾತ ಮರೆದೊರಗಿದ. ಮರೆದೊರಗಿದವನರಿಯಲಾಗಿ ಬಿಲ್ಲಿನ ಹೆದೆ ಇಳಿಯಿತ್ತು. ಸೈವೆರಗು ಬಿಟ್ಟಿತ್ತು. ಅಂಬಿನ ಕಣ್ಣು ಎಲ್ಲಿ ಹೋದವೆಂದರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೪೬ ॥

೨೦೦

ಘಟವೆಂಬ ಹೋಟಾರ, ಜೀವನೆಂಬ ವೇತಾಳ, ಅರಿವೆಂಬ ಶಿಶು, ಅದ ರಿಂದುದಿಸಿದ ದಿವ್ಯಜ್ಞಾನ ಕುರುಹುಗೊಂಡು ತ್ರಿವಿಧ ಕುರುಹುಗೆಟ್ಟಿತ್ತು. ಇಂತೀ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ ॥ ೪೭ ॥

೨೦೧

ಘಟವೆಂಬ ಪರ್ವತದಲ್ಲಿ ಪಂಚೇಂದ್ರಿಯವೆಂಬ ಗುಹೆ. ಅದರ ಮುಖ ದಲ್ಲಿ ಇಂದ್ರಿಯಂಗಳು ಒಂವಕ್ಕೈದು ಆ ಮುಖಂಗಳಿಂದ ದ್ವಂದ್ವವ ಹಿಂಗಿ

ನಿಂದುದೆ ಲಿಂಗಾಂಗಿಯ ಶುಭ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗ ದವಸಂಗ ॥ ೪೮ ॥

೭೦೨

ಘಟದೊಳಗೆ ರಸವಿದ್ದು ರಸದೊಳಗೆ ಘಟವಿದ್ದು ಸಂಗಗುಣದಿಂದ ನೀರಾಗಿ ಸಂಗ ಹಿಂಗಲಿಕ್ಕೆ ಉಭಯದಂಗವೂ ಒಂದಾದ ತೆರದಂತೆ ಈ ಗುಣ ಲಿಂಗಾಂಗಿಯ ಸಂಗದ ವಿವರ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಕೂಡಿದ ಪರಮಸುಖಿಯ ಅಂಗ ॥ ೪೯ ॥

೭೦೩

ಚಿತ್ರದ ಹುಲಿ ಮನುಷ್ಯರ ಕಚ್ಚಬಲ್ಲುದೇ ? ಮರ್ತ್ಯದೊಳಗೆ ಈಶ ಲಾಂಛನವ ಹೊತ್ತವರಿಗೆಲ್ಲ ನಿತ್ಯತ್ವ ಉಂಟೇ ? ಇದರ ರಚ್ಚೆಯ ಹೊರಲಾ ರದೆ ಮರ್ತ್ಯಕ್ಕೆ ಹೊರಗೆಂದ ನಿಶ್ಕಟ ಶರಣ ನಿಃಕಳಂಕ ಮಲ್ಲಿಕಾರ್ಜುನಾ॥೫೦॥

ಅರ್ಥ:— **ಚಿತ್ರದಲ್ಲಿ ಬರೆದ ವ್ಯಾಘ್ರನು ಮನುಷ್ಯರ ಕಚ್ಚಿ ಪ್ರಾಣವ ಕೊಲ್ಲ ಬಹುದೇ ? ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಲಾಂಛನವ ಧರಿಸಿದವರಿ ಗೆಲ್ಲಕ್ಕು ಶಿವತತ್ತ್ವ ಉಂಟೇ ? ಇವರ ಕೂಡೆ ರಚ್ಚೆಕಚ್ಚಿನಲ್ಲಿ ವಾದ ಮಾಡಲಾರದೆ ಕರಣಂಗಳ ಚಲನತ್ವವಿಲ್ಲದ ಶರಣನು ಮರ್ತ್ಯದ ಉಪಾಧಿ ಜಂಗಮಕ್ಕೆ ವಿಲಕ್ಷಣ ನೆಂದೆನೆಂಬುದರ್ಥ.**

೭೦೪

ಚಿತ್ತದ ಭಾವದಲ್ಲಿ ಆಪೇಕ್ಷವೆಂಬ ಮೊತ್ತದ ಅದ್ರಿ ಲಕ್ಷಿಸಿ ಸುಚಿತ್ತವ ನುಂಗಿತ್ತೆಂಬುದಕ್ಕೆ ಸೂಚನೆ. ನಿತ್ಯಾನಿತ್ಯವ ತಿಳಿದು ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ನಿರೀಕ್ಷಿಸಬೇಕು ॥ ೫೧ ॥

೭೦೫

ಮನವ[೧] ಕುರುಹನರಿದಲ್ಲದೆ ಅರಿಯಬಾರದು. ಚಂದನದ ಗುಣವ ಸುರ್ದನಂಗೈದಲ್ಲದೆ ಗಂಧವ ಕಾಣಬಾರದು. ಇಕ್ಷುದಂಡದ ಪರಿಯ ಬಂಧಿಸಿ ದಲ್ಲದೆ ವಿಶೇಷವ ಕಾಣಬಾರದು. ನಾನಾ ರಸಂಗಳ ಗುಣವ ಸವಿದಲ್ಲದೆ ಕಾಣ ಬಾರದು. ಕ್ಷೀರದ ಘಟ್ಟಿಯ ಮಥನದಿಂದಲ್ಲದೆ ರುಚಿಸಬಾರದು. ಮಹಾತ್ಮರ ಸಂಗ ಮಹಾನುಭಾವದಿಂದಲ್ಲದೆ ಕಾಣಬಾರದು. ಇದುಕಾರಣ **ಮಾತುಮಾತಿ**

---

೧. **ಚಿನ್ನದ** (ಬ)

ಗೆಲ್ಲಕ್ಕೊ ಮಹದನುಂಟೆ ? ಲಿಂಗವ ಸೋಂಕಿದ ಮನಕ್ಕೆ ಲಿಂಗಾಭಿಮಾನ ವಾವುದೆಂದಡೆ ಶೇಷನ ಅವಸಾನದಂತಿರಬೇಕು. ತ್ರಾಸಿನ ಪಾಸದ ಭಾಷಾಂಗ ದಂತಿರಬೇಕು. ಹೀಗಲ್ಲದೆ ಸರ್ವಾನುಭಾವಿಗಳೆಂತಾದಿರಣ್ಣಾ ? ಕೊಲ್ಲದ ಕೊಲೆಯ, ಗೆಲ್ಲದ ಜೂಜುವ, ಬಲ್ಲತನವಿಲ್ಲದ ಬರಿವಾಯ ಮಾತಿನ ಗೆಲ್ಲ ಸೋಲಕ್ಕೆ ಹೋರಿದಡೆ ಒಲ್ಲಭ ನಿಃಕಳಂಕ ಮಲ್ಲಿಕಾರ್ಜುನನವರನೊಲ್ಲನಾಗಿ ॥ ೫೨ ॥

೭೦೬

ಜಂಗಮವೆಂದು ಮಂದಿಸಿ ಮಾಡಿ ಪಙ್ತಿಯಲ್ಲಿ ವಿಂಗಡಿಸಿ ಲೆಕ್ಕವ ಮಾಡುವ ದಂಡದ ಮನೆಯಲ್ಲಿ ಕೂಳನುಂಬ ಜಂಗಮವು ಬಂಡುಗೆಲೆದು ಬೇಡಿ ತಂದ. ಭಂಡ ಡೊಂಬರ ಎಂಜಲ ತಿಂದಂತೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

೭೦೭

ಜನನದಲ್ಲಿ ಜನಿಸಿದ ಆತ್ಮನು ಸ್ಥಿತಿಗತಿಯಲ್ಲಿ ಹೊರಳಿ ಮರಳುತ್ತಿದ್ದಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯದೆ ॥ ೫೪ ॥

೭೦೮

ಉತ್ಪತ್ತಿ ಎಂಬ ಬ್ರಹ್ಮನ ಬಲೆಯಲ್ಲಿ ಸಿಲುಕಿ ಮುಳುಗಿದರು ಬಲ್ಲೆನೆಂಬ ಬ್ರಹ್ಮಿಗಳು. ಇಂತೀ ಅಳಿ ಉಳಿವ ಕಳೆದು ತನ್ನ ತಾನರಿದು ಅರಿವಿನ ಘನದರಿವಿನಲ್ಲಿ ಪರಿಪೂರ್ಣವಾದವಂಗೆ ಮಾಯೆಯ ಅಡ್ಡಿಗನಲ್ಲ. ಇವ ಸಂಸಾರ ಧರ್ಮವ ತೊಡಹುವವನಲ್ಲವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೫೫ ॥

೭೦೯

ಜ್ಞಾನದಲ್ಲಿ ಸುಳಿವ ಜಂಗಮದಿರವು ಹೇಗಿರಬೇಕೆಂದಡೆ ಅಂಬುಧಿಯ ಕೂಡಿದ ಸಂಭೇದದಂತಿರಬೇಕು. ಮುಖ ಶಿರ ಬೋಳಾದಡೇನೋ ಹುಸಿ ಕೊಲೆ ಕಳವು ಪಾರದಾರ ಅತಿ ಕಾಂಕ್ಷೆಯ ಬಿಡದನ್ನಕ್ಕರ. ಗಡ್ಡ ಜಡೆ ಕಂಥೆ ಲಂಭನನ ತೊಟ್ಟ ಭೈರವನಂತೆ ಜಗದೊಳಗೆ ಸುಳಿವ ಬದ್ಧಕತನದಲ್ಲಿ ದ್ರವ್ಯಕ್ಕೆ ಗೊಡ್ಡೆಯರ ನಿರಿವ ದೊಡ್ಡ ಮುದ್ರೆಯ ಕಳ್ಳರು ತುರುಬು ಚಿಮ್ಮುರಿಗಳ ಕಟ್ಟಿ ಹಗರಣದ ನಿರಿಗುರುಳ ಬಾಲೆಯರ ಮುಂದೆ ತಿರುಗುತ್ತಿಪ್ಪ ಬರಿವಾಯ ಭುಂಜಕರುಗಳು ತಾವು ಅರಿವುಳ್ಳವರೆಂದು ಬೀಗಿ ಬೆರೆಯುತ್ತಿಪ್ಪರು.

ಅರುವಿನ ಶುದ್ಧಿಯನರಿದ ಮಹಾತ್ಮಂಗೆ ಹಲುಬಲೇಕಯ್ಯಾ ವೊಲೆಯ ಕಾಣದ ಹಸುಳೆಯಂತೆ ಅರುವಿನ ಶುದ್ಧಿ ಕರಿಗೊಂಡವಂಗೆ ನರಗುರಿಗಳ ಭವ ನವ ಕಾಯಲೇಕೊ ? ಅರುವೇ ಅಂಗವಾದ ಲಿಂಗಾಂಗಿಗೆ ಬರುಬರ[೧] ಭ್ರಾಂತರ ನೆರೆ ಸಂಗವೇಕೆ ? ಇದು ಕಾರಣ ತುರುಬೆಂದುದಿಲ್ಲ, ಜಡೆ ಎಂದುದಿಲ್ಲ, ಬೋಳೆಂದುದಿಲ್ಲ. ಅರಿವು ಕುರುಹಿಂಗೆ ಸಿಕ್ಕದು. ಅರಿದುದು ಮರೆಯದಾಗಿ ಮರೆದು ಅರಿದುದಕ್ಕೆ ಕುರುಹಿಲ್ಲವಾಗಿ ಇಂತೀ ಸಂಚಿತ ಪ್ರಾರಬ್ಧ ಆಗಾಮಿಗೆ ಹೊರಗಾದುದು ಜ್ಞಾನಜಂಗಮಸ್ಥಲ. ಹೀಗಲ್ಲದೆ ಗೆಲ್ಲಸೋಲಕ್ಕೆ ಹೋರಿ ಬಲ್ಲವರಾದೆವೆಂಬವರ ವಲ್ಲಭ ನಿಃಕಳಂಕ ಮಲ್ಲಿಕಾರ್ಜುನನವರನೊಲ್ಲನಾಗಿ ॥ ೫೬ ॥

೭೧೦

ಜ್ಞಾನವೆಂಬ ಭಾವದಲ್ಲಿ ಜ್ಞಾನ ತಲೆದೋರಿ ಸುಜ್ಞಾನವ ತನ್ನಂತೆ ಕೂಡಲಂಜಿ ತನ್ನಿಂದ ತಾನೆ ತನ್ನಷ್ಟವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿ ಕಾರ್ಜುನಾ ॥ ೫೭ ॥

೭೧೧

ತನ್ನ ತಾನರಿದ ಎಚ್ಚರಿಕೆಯಲ್ಲಿ ಅಹುದು ಅಲ್ಲವೆಂಬುದ ಕುರುಹದೋರಿ ದಿವರಾತ್ರಿಯಲ್ಲಿ ಉಭಯಕ್ಕೂ ದೃಕ್ಕುಸರಿಗಾಬುದಾಗಿ ಲಕ್ಷವ ಬಿಟ್ಟು ನಿರ್ಲ ಕ್ಷವ ಕಂಡು ನಿಶ್ಚಯವಾಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ನಿರ್ಲಕ್ಷಿತನಾದ ವಿಲಕ್ಷ ॥ ೫೮ ॥

೭೧೨

ತನ್ನ ಸಂಕಲ್ಪದಿಂದ ಅಹುದು ಅಲ್ಲವೆಂಬುದ ತಿಳಿಯಲರಿಯದೆ ಜೀವನು ಲಕ್ಷವ ಕಾಣದೆ ಲಕ್ಷಿಸಲರಿಯದೆ ಉಭಯ ಕುಳದ ಹೊಲನ ಕಾಣದೆ ತಾ ನಿಂದುದೇ ನಿರ್ಲಕ್ಷವೆಂದು ಹೋರುವನಂಗದ ಆತ್ಮನ ಸೂಚನೆ ತಾ ನಿಂದ ಲ್ಲಿಯೇ ನಿಜಸುಖಿ ಎಂದು ಮುಂದುಗಾಣದೆ ಹಿಂದನರಿಯದೆ ಒಂದು ಕೊಂಬಿ ನಲ್ಲಿಯೇ ಹಿಡಿದು ಹೋರುವ ಮನಮರ್ಕಟ ಜೀವನಂಗ ನಿಃಕಳಂಕ ಮಲ್ಲಿ ಕಾರ್ಜುನಾ ॥ ೫೯ ॥

---

೧. ಬರಿವಾಯ (ಬ)

ಅರ್ಥ:— ತನ್ನ ಭಿನ್ನ ಜ್ಞಾನದಿಂದ ಶಿವತತ್ವವೇ ಅಹುದು, ಜಗತ್ಪ್ರಪಂಚವೇ ಅಲ್ಲ, ಎಂಬುದನರಿಯಲರಿಯದೆ ಜೀವಾತ್ಮನು ಅಂತರಂಗದಲ್ಲಿ ಕುರುಹಾದ ಪ್ರಾಣಲಿಂಗವನ್ನು ಕಾಣದೆ, ಆ ಪ್ರಾಣಲಿಂಗವನ್ನು ಕ್ರಿಯೆಯಲ್ಲಿ ಇಷ್ಟಲಿಂಗವಾಗಿ ಕುರುಹಿಡಲರಿಯದೆ ಅಂತರಂಗ ಬಹಿರಂಗದ ಇಷ್ಟಪ್ರಾಣಲಿಂಗ ಸಂಬಂಧವಾದ ಜ್ಞಾನ ಕ್ರೀವಿಡಿದಾಚರಿಸಲರಿಯದೆ ತಾನದ್ವೈತಾಹಂಕಾರದಲ್ಲಿ ಇದ್ದ ಹಾಗೆ ನಿರಾಕಾರವಾದ ಬ್ರಹ್ಮವೇ ತಾನೆಂದು ವಾದಿಸುವನ ಅಂಗದಲ್ಲಿ ಆತ್ಮನಲ್ಲಿ ಇಷ್ಟಪ್ರಾಣಲಿಂಗ ಸಂಬಂಧವಿಲ್ಲವೆಂಬುದೇ ಸಂಜ್ಞೆ. ತಾನದ್ವೈತಾಹಂಕಾರದಲ್ಲಿದ್ದ ಹಾಗೆ, ಸ್ವಕೀಯವಾದ ಬ್ರಹ್ಮವೇ ತಾನೆಂದು ಅವಸಾನದಲ್ಲಿ ಮಹಾಲಿಂಗದಲ್ಲಿ ಕೂಡಲರಿಯದೆ ಮೊದಲು ನಿಃಕಲ ಬ್ರಹ್ಮಕ್ಕೆ ಜ್ಞಾನ ಚಿತ್ತಿನಿಂದ ಅಂಗವಾಗಿದ್ದನೆಂದು ತಿಳಿಯಲರಿಯದೆ, ಅದ್ವೈತಾಹಂಕಾರ ಬಂದನೇ ದೃಢವಿಡಿದು ಅಹಂ ಬ್ರಹ್ಮವೆಂದು ವಾದಿಸುವ ಮರ್ಕಟನೆನಿಸಿಕೊಂಬ ಜೀವಾತ್ಮನಾಚರಣೆ ಎಂಬುದರ್ಥ.

೭೧೩

ತಾನರಿದ ಅರಿವಿನಲ್ಲಿ ಆ ಮರೆದ ಮರವೆಯೇ ಮರೆಯಾಗಿ ಮೇಲೆರಡಳಿದು ನಿಜ ಒಂದಾಯಿತ್ತೆಂಬುದಕ್ಕೆ ಸೂಚನೆ— ಕಲ್ಲಿನಲ್ಲಿ ಹುಟ್ಟಿದ ಕಾಂತಿ ಕಲ್ಲಿನ ಕಳೆ ಎಲ್ಲವ ನುಂಗಿ ರತ್ನವೆನಿಸಿಕೊಂಬ ತೆರನಂತೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡಿದವನಂಗ ॥ ೬೦ ॥

೭೧೪

ತಿಳಿದು ವಿಚಾರದಲ್ಲಿದ್ದ ಆತ್ಮನು ಪ್ರಕೃತಿಯ ಮರವೆಯೆಂಬ ಹೊಲೆಗೇರಿಯಲ್ಲಿ ನಿಂದು ಅರಿದು ಮರವೆ ಎಂಬ ಸುರಾಪಾನವ ಕೊಂಡು ದ್ವೇಷವೆಂಬ ಕಟಿಕರ ಮನೆಯ ಹೊಕ್ಕು ಸರ್ವಪಾತಕದ ಮಾಂಸವ ಕೊಂಡು ಮತ್ತೆ ಮದ್ಯಕ್ಕೆ ಬಂದು ತನ್ನಿರವ ತಾನೆ ವಿಚಾರಿಸಿಕೊಂಡು ಈ ಇರವಿಂಗೆ ಈ ತೆರನಲ್ಲವೆಂದರಿದು ಉಭಯದ ನಿಳಯವ ಬಿಟ್ಟು ಮಧ್ಯದಲ್ಲಿ ಪರಮಾರ್ಥವಾಸಿಯಾಗಿ ನಿಂದೆನೆಂಬ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿವುದಕ್ಕೆ ॥ ೬೧ ॥

೭೧೫

ದಿವ್ಯ ತೇಜೋಪ್ರಕಾಶ ಪರಂಜ್ಯೋತಿ ವಸ್ತು ಪರಬ್ರಹ್ಮವು ತನ್ನ ಕೈಯಲ್ಲಿರ್ದು ಅದನರಿಯದೆ ಬೇರೆ ಅಲ್ಲಿಲ್ಲಿ ಉಂಟೆಂದು ಕಳ್ದೆದೆಯಾಗುತ್ತ, ತನ್ನಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ಸರ್ವಸಮಾಧಾನ ಸುಚಿತ್ತ

ವಿರ್ದ ಮತ್ತೆ ಇತ್ಯಾದಿಗಳಲ್ಲಿ ನೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ ? ಸಕಲಾಗಮ ಶಾಸ್ತ್ರಯುಕ್ತಿಗಳ ತಾ ತಿಳಿದು, ಪಾಷಾಂಡಿ ಗುರುವಿನ ಕೈಯಲ್ಲಿ ಸಕಲ ಸಂಸಾರಿ ಘಾತಕನ ಬಾಯಮಾತಿನಲ್ಲಿ ಸಾಯನೆಂಬದಿದು ನಿಜ ನಿಶ್ಚಯದ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗದರಿವು ಕರತಳಾಮಳಕ॥೬೨॥

೭೧೬

ನಡುನೀರ ಮಧ್ಯದಲ್ಲಿ ಅಗಮ್ಯದ ಜ್ಯೋತಿ ಉರಿವುತ್ತಿದೆಕೊ, ಆಗಲದೆ ನೋಡಲಿಕ್ಕೆ ನೀರಿನ ಮೇಲೆ ಉರಿವುತ್ತಿರ್ಪುದು, ಹೊದ್ದಿ ನೋಡಲಿಕ್ಕೆ ನೀರಿನೊಳಗೆ ಮುಳುಗಿ ಉರಿವುತ್ತಿರ್ಪುದು, ಅದು ಆ ಜ್ಯೋತಿಯ ಗುಣವೋ ತನ್ನ ಭ್ರಾಂತಿಯ ಗುಣವೋ ಎಂಬುದ ತಿಳಿದಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲನೆಂಬೆ ॥ ೬೩ ॥

೭೧೭

ನಾರಿಸುತನ ಆರೈಕೆಗೊಂಬವನ ಬೇರಿನ ಬಿಲ್ಲು ನುಂಗಿತ್ತು. ಬಿಲ್ಲಿನಾಬಾಗಿನಲ್ಲಿ ಇವರೆಲ್ಲರು ಸಿಕ್ಕಿದರು. ಬಿಲ್ಲಿನ ನಾರಿಯ ಇಲಿ ಬಂದು ಕಡಿಯಲಾಗಿ ನಾರಿ ಜಾರಿತ್ತು. ಬಿಲ್ಲು ಮುರಿಯಿತ್ತು. ಬಿಲ್ಲಿನೊಳಗಾಡುವ ಚೊಲ್ಲೆಹಗಾರರೆಲ್ಲಿಯೂ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೬೪ ॥

೭೧೮

ನಾನಾ ಭವಂಗಳಲ್ಲಿ ಸುಳಿದು ಸೂಸುವ ಆತ್ಮನು, ನಾನಾರೆಂಬುದ ತಾನರಿದಲ್ಲಿ ತಾನಾಡುವ ಹೊಲ ತನ್ನಲ್ಲಿಯೇ ಲೇಪ. ಮಾರಿ ತೋರಿಕೆಯಾದ ಇದಿರಿಟ್ಟಾದ ಜ್ಞಾತೃಜ್ಞೇಯ ಭಾವಂಗಳೆಲ್ಲವು ಪ್ರಣವುದಲ್ಲಿಯೇ ಐಕ್ಯವಾದ ಮತ್ತೆ ಅರಿವಿನ ಕುರುಹು ಎರಡಿಲ್ಲವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನನು ನಿರ್ಲೇಪವಾದ ಕಾರಣ ॥ ೬೫ ॥

೭೧೯

ನಾನಾ ವರ್ಣದ ನೀರನುಂಡು ಆವರ್ಣ ನೀರೆರಡಿಲ್ಲದೆ ಅವಗವಿಸಿದಂತೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡಿರಬೇಕು ॥ ೬೬ ॥

೭೨೦

ನಾನೆಂಬುದದೇನೆಂದು ತಿಳಿದಲ್ಲದೆ ಭಾವದ ಭ್ರಮೆ ಬಿಡದು. ಭ್ರಮೆಯೊಳಗೆ ತನ್ನಯ ಭ್ರಾಮಕ ಹಿಂಗಿದಲ್ಲದೆ ಕಂಡುದ ಕಾಣಬಾರದೆಂಬುದಕ್ಕೆ

ಸೂಚನೆ. ರತ್ನ ಮುತ್ತು ಬಿಗಡವನಿಕ್ಕಿದಲ್ಲಿ ಉದರಿದ ಚೂರ್ಣದಲ್ಲಿ ಕಳೆ ಕಾಂತಿ ಇಲ್ಲ. ಘಟದ ಬೆಂಬಳಿಯಲ್ಲಿ ಕಳೆ ಕಾಂತಿ ಎಂದರಿವುದು ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಕುರುಹಿಗೆ ಒಡಲಾದ ಭೇದ ॥ ೬೭ ॥

೭೨೧

ನೀರು ನೆನೆದುದ ಕಂಡೆ. ಹೆಚ್ಚದ ಕುಂದದ ವಾರುಧಿ ಉರವಣಿಸಿ ಸಾರಿ ಹೋದುದ ಕಂಡೆ. ಇಂತಿವನಾರ್ಕೈದು ನೋಡಲಾಗಿ ನೀರು ನೆನೆದುದಿಲ್ಲ ವಾರುಧಿ ಸಾರಿದುದಿಲ್ಲ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಯೇ ಲೀಯ್ಯವಾಗಬಲ್ಲಡೆ ॥ ೬೮ ॥

೭೨೨

ನೂಲೆಳೆಯ ಗಾತ್ರದ ಮರದಲ್ಲಿ ಬೆಟ್ಟದ ಘೋರದ ಕಾಯಿ ಫಲವಾಯಿತ್ತು. ಅದು ಹಣ್ಣಾಗದು ನೋಡಿರಯ್ಯಾ. ಇನ್ನೆಂತೊ ? ಏರಬಾರದು ಮರನ ಕೊಯ್ದು ಹಿಡಿಯಬಾರದು ಕಾಯ. ಈ ಭೇದವನರಿದು ಮರನೇರದೆ ಕಾಯ ಮುಟ್ಟದೆ ಹಣ್ಣಿನ ರುಚಿಯ ಚನ್ನಾಗಿ ಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ತನ್ನಲ್ಲಿ ನಿರ್ಲೇಪ ಸಂಬಂಧಿ ॥ ೬೯ ॥

೭೨೩

ಪರಿಪೂರ್ಣವಪ್ಪ ಸಮ್ಯಕ್‌ಜ್ಞಾನವಂತರೆಲ್ಲರು. ಆಶೆ ಎಂಬ ಪಾಶವು ತಲೆದೋರೆ ತಮ್ಮ ಜ್ಞಾತೃ ಅಲ್ಲಿಯೆ ಶ್ರೇಷ್ಠಗೆಟ್ಟಿತ್ತು. ಸಕಳ ನಿಷ್ಕಳವೆಂಬ ಭಯವ ಮರೆದ ಲಿಂಗಸುಖಿಗಳೆಲ್ಲರು ಭೋಗ ಭೋಜ್ಯಂಗಳೆಂಬ ತಾಮಸಕ್ಕೆ ಸಿಕ್ಕಿ ಭ್ರಾಮಕರಾದರೆಂಬುದಕ್ಕೆ ಸೂಚನೆ. ಇಂತೀ ಭಾವದ ಭ್ರಮೆಯ ಮರೆದು ಜೀವ ವಿಕಾರಿಗಳಾಗದೆ ಸರ್ವಜ್ಞಾನಿಗಳಾಗಿ ನಿಃಕಳಂಕ ಮಲ್ಲಿಕಾರ್ಜುನ ಜಾಣಲಿಂಗವನರಿವಡೆ ॥ ೭೦ ॥

೭೨೪

ಪಂಚೇಂದ್ರಿಯಂಗಳಿಂದ ಹುಟ್ಟಿದ ಸ್ಥೂಲ ಸೂಕ್ಷ್ಮ ಕಾರಣ ತನುತ್ರಯವೆಂಬ ಮೂರಂಗವನರಿದೆನರಿದಿಹೆನೆಂಬದು ಭ್ರಾಂತಿನ ಹೊಲಸು. ಮರಳಿ ಅರಿವ ಮರೆದು ಹಲವು ಆಗಮಂಗಳ ಹೊಲಬಿನಲ್ಲಿ ತಿಳಿದು ಹೋರಟೆಗೊಳಗಾದವರೆಲ್ಲರು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿದುದಿಲ್ಲವೆಂಬುದಕ್ಕೆ ಸೂಚನೆ ॥ ೭೧ ॥

೭೨೫

ಪೂಜಿಸುವ ಇಷ್ಟದಲ್ಲಿ ಅರಿವ ಆತ್ಮನಡಗಿ ಪರಿಭ್ರಮಣ ನಿಂದು ಆ ಪರ ಬ್ರಹ್ಮದಿಂದ ಇಹಪರವೆಂಬ ಉಭಯದ ಕುರುಹು ಅಡಗಿ ತೋರುವುದು ತೋರಿಸಿಕೊಂಬುದು ತನ್ನಿಷ್ಟವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೨ ॥

೭೨೬

ಪೃಥ್ವಿಯ ಗುಣವ ಅಪ್ಪು ನುಂಗಿತ್ತಾಗಿ ಪೃಥ್ವಿಯ ಗುಣವಿಲ್ಲ. ಅಪ್ಪುವಿನ ಗುಣವ ಅನಲ ನುಂಗಿತ್ತಾಗಿ ಅಪ್ಪುವಿನ ಗುಣವಿಲ್ಲ. ಅನಲನ ಗುಣವ ಅನಿಲ ನುಂಗಿತ್ತಾಗಿ ಅನಲನ ಗುಣವಿಲ್ಲ. ಅನಿಲನ ಗುಣವ ಆಕಾಶ ನುಂಗಿತ್ತಾಗಿ ಅನಿಲನ ಗುಣವಿಲ್ಲ. ಆಕಾಶದ ಗುಣವ ಆತ್ಮನೇ ನುಂಗಿತ್ತಾಗಿ ಆಕಾಶದ ಗುಣವಿಲ್ಲ. ಇದು ಕಾರಣ ಐದರ ಗುಣದಲ್ಲಿ ಅರ್ಪಿಸಿ ಮುಕ್ತಿಯ ಕಂಡೆನೆಂಬ ನಿಷ್ಠೆ ನಿಮಗೆಲ್ಲಯದೋ ? ಹೊಯ್ದುರಿಸಿದ ಹೊಯಿಗಲದಂತೆ ಭೋಗಿಸಿಹೆನೆಂದಡೆ ಕರ್ತೃತ್ವವಿಲ್ಲ. ದರ್ಶನವ ಹೊತ್ತು ತಿರುಗುವವಕ್ಕಲ್ಲದೆ ಜ್ಞಾನಕ್ಕೆ ಸಂಬಂಧಿಗಳಲ್ಲ. ಐದರ ಗುಣವಡಗಿ ಮೂರರ ಗುಣ ಮುಗಿದು, ಆರರ ಗುಣ ಹರಿದು ಏಳನೆ ಗುಣ ಜರಿದು ಎಂಟರ ಗುಣದ ತೊಂಟತನವ ಬಂಧಿಸಿ ತೋರುವದಕ್ಕೆ ಮುನ್ನವೇ ಮನ ಜಾರಿನಿಂದ ಮತ್ತೆ ವಿಾರಲಿಲ್ಲವಾಗಿ, ಸ್ವಯ ಚರ ಪರವೆಂಬ ತ್ರಿವಿಧವನರಿದು ಹೊರಗಾಗಿ ಮೂರು ಮೊಟದ ಬೆಡಗನರಿದು ವಿಚಾರಿಸದೆ ಉದರ ಘಾತಕತನಕ್ಕೆ ಹೊಟ್ಟೆಯ ಹೊರೆವರೆಲ್ಲ ಜಂಗಮವೇ ? ಅಂತಲ್ಲ, ನಿಲ್ಲಿರಣ್ಣಾ. ನೀವೇ ಲಿಂಗಜಂಗಮವಾಗಬಲ್ಲಡೆ ನಾನಾರೆಂಬುದ ವಿಚಾರಿಸಿಕೊಳ್ಳಿರಣ್ಣಾ. ನೀವು ಪೂಜೆಯ ಮಾಡಿಸಿಕೊಂಬುದಕ್ಕೆ ವಿವರ. ಪೂಜೆಯ ಮಾಡುವ ಭಕ್ತಂಗೆ ಭಾರಣೆಯ ವಿದ್ಯವ ಹೊತ್ತ ವಿಧಾತೃ[೧]ನಂತಿರಬೇಕು. ಅವಸಾನದಲಿಪ್ಪ ಶೇಷನಂತಿರಬೇಕು. ಜಲವ ನಂಬಿದ ಜಲಚರದಂತಿರಬೇಕು. ಆಡುವ ಪಶುವಿನ ಲಾಗಿನಂತಿರಬೇಕು. ಇಂತಿವೆಲ್ಲವ ಕಳೆದುಳಿದು ಆಚಾರಲಿಂಗಮೂರ್ತಿ ತಾನಾಗಿ ನಿಂದಾತ ನಿಃಕಳಂಕ ಮಲ್ಲಿಕಾರ್ಜುನ ತಾನಾ ॥ ೭೩ ॥

---

೧. ಪದಾಂತ (ಪ)

ಅರ್ಥ:— ಚಿತ್‌ಪೃಥ್ವಿಯೇ ಅಂಗವಾದ ಭಕ್ತನ ಶ್ರದ್ಧಾಭಕ್ತಿಯನ್ನು ಚಿದಪ್ಪು ಅಂಗವಾದ ಮಹೇಶ್ವರನ ನೈಷ್ಠಿಕಾ ಭಕ್ತಿ ಒಳಕೊಂಡಿತ್ತಾಗಿ, ಚಿತ್‌ಪೃಥ್ವಿಯಂಗವಾದ ಭಕ್ತನ ಶ್ರದ್ಧಾಭಕ್ತಿ ಇಲ್ಲ. ಆ ಶ್ರದ್ಧಾಭಕ್ತಿಯೇ ನೈಷ್ಠಿಕಾ ಭಕ್ತಿಯಲ್ಲಡಗಲು ಭಕ್ತನೇ ಮಹೇಶ್ವರನಲ್ಲಿ ಆಚಾರಲಿಂಗವೇ ಗುರುಲಿಂಗದಲ್ಲಿ ಅಡಗಿಪ್ಪುದು. ಚಿದಪ್ಪುವೇ ಅಂಗವಾದ ಮಾಹೇಶ್ವರನ ನೈಷ್ಠಿಕಾ ಭಕ್ತಿಯನ್ನು ಚಿದಗ್ನಿಯೇ ಅಂಗವಾದ ಪ್ರಸಾದಿಯ ಸಾವಧಾನ ಭಕ್ತಿಯೊಳಕೊಂಡಿತ್ತಾಗಿ ಚಿದಪ್ಪುವೇ ಅಂಗವಾದ ಮಾಹೇಶ್ವರನ ನೈಷ್ಠಿಕಾಭಕ್ತಿ ಇಲ್ಲ. ಆ ನೈಷ್ಠಿಕಾ ಭಕ್ತಿಯೇ ಸಾವಧಾನ ಭಕ್ತಿಯಲ್ಲಡಗಲು ಮಾಹೇಶ್ವರನೇ ಪ್ರಸಾದಿಯಲ್ಲಿ, ಗುರುಲಿಂಗವೇ ಶಿವಲಿಂಗದಲ್ಲಿ ಅಡಗಿಪ್ಪುದು ಚಿದಗ್ನಿಯೇ ಅಂಗವಾದ ಪ್ರಸಾದಿಯ ಸಾವಧಾನ ಭಕ್ತಿಯನ್ನು ಚಿದ್ವಾಯುವೇ ಅಂಗವಾದ ಪ್ರಾಣಲಿಂಗಿಯ ಅನುಭಾವ ಭಕ್ತಿ ಒಳಕೊಂಡಿತ್ತಾಗಿ ಚಿದಗ್ನಿಯೇ ಅಂಗವಾದ ಪ್ರಸಾದಿಯ ಸಾವಧಾನ ಭಕ್ತಿ ಇಲ್ಲ. ಆ ಸಾವಧಾನ ಭಕ್ತಿ ಅನುಭಾವ ಭಕ್ತಿಯಲ್ಲಡಗಲು ಪ್ರಸಾದಿಯು ಪ್ರಾಣಲಿಂಗಿಯಲ್ಲಿ, ಶಿವಲಿಂಗವು ಜಂಗಮದಲ್ಲಿ ಅಡಗಿಪ್ಪುದು. ಚಿದ್ವಾಯುವೇ ಅಂಗವಾದ ಪ್ರಾಣಲಿಂಗಿಯ ಅನುಭಾವ ಭಕ್ತಿಯ ಚಿದಾಕಾಶವೇ ಅಂಗವಾದ ಶರಣನ ಆನಂದ ಭಕ್ತಿಯೊಳಕೊಂಡಿತ್ತಾಗಿ ಚಿದ್ವಾಯುವೇ ಅಂಗವಾದ ಪ್ರಾಣಲಿಂಗಿಯ ಅನುಭಾವ ಭಕ್ತಿ ಇಲ್ಲ. ಆ ಅನುಭಾವ ಭಕ್ತಿ ಆನಂದ ಭಕ್ತಿಯಲ್ಲಡಗಲು ಪ್ರಾಣಲಿಂಗಿಯೇ ಶರಣನಲ್ಲಿ, ಜಂಗಮ ಲಿಂಗವೇ ಪ್ರಸಾದ ಲಿಂಗದಲ್ಲಿ ಅಡಗಿಪ್ಪುದು. ಚಿದಾಕಾಶವೇ ಅಂಗವಾದ ಶರಣನ ಆನಂದ ಭಕ್ತಿ ತನ್ನನು ಐಕ್ಯನ ಸಮರಸ ಭಕ್ತಿ ಒಳಕೊಂಡಿತ್ತಾಗಿ, ಆ ಚಿದಾಕಾಶವೇ ಅಂಗವಾದ ಶರಣನ ಆನಂದ ಭಕ್ತಿ ಇಲ್ಲ. ಆ ಆನಂದ ಭಕ್ತಿ ಸಮರಸ ಭಕ್ತಿಯಲ್ಲಡಗಲು ಶರಣನೇ ಐಕ್ಯನಲ್ಲಿ, ಪ್ರಸಾದಲಿಂಗವೇ ಮಹಾಲಿಂಗದಲ್ಲಿ ಅಡಗಿಪ್ಪುದು. ಈ ಐಕ್ಯವು ಮಹಾಲಿಂಗದಲ್ಲಿ ಅಡಗಿದ ಕಾರಣ ಪಂಚೇಂದ್ರಿಯಂಗಳಲ್ಲಿ ಬರಲ್ಪಟ್ಟ ಪಂಚ ವಿಷಯಂಗಳನ್ನು ಪಂಚವಿಧ ಭಕ್ತಿಯಿಂದ ಸಮರ್ಪಿಸಿ ಆ ಪಂಚ ಪ್ರಸಾದವ ಸ್ವೀಕರಿಸಿ ಮೋಕ್ಷಪಡೆದೆನೆಂಬ ನಿಷ್ಠೆ ನಿಮಗಿಲ್ಲ. ದೋಸೆಯ ಹೊಯ್ದು ಕಡೆಗಿರಿಸಿದ ಹಂಚಿನಹಾಗೆ ಮಹಾಲಿಂಗದಲ್ಲಿ ಸಮರಸವಾದ ಶರಣನ ಹಾಗೆ, ಪಂಚೇಂದ್ರಿಯಂಗಳಲ್ಲಿ ಪಂಚವಿಧ ಲಿಂಗವ ಸಮರಸವ ಮಾಡಿಕೊಂಡು ಪಂಚವಿಷಯಗಳನರ್ಪಿಸಿ ಆ ಪಂಚ ಪ್ರಸಾದವನನುಭವಿಸಿಹೆನೆಂದಡೆ ಜ್ಞಾನವಿಲ್ಲ, ಸ್ವತಂತ್ರವಿಲ್ಲ. ಲಾಂಛನ ಧಾರಕರಾಗಿ ಆಶೆ ಮುಂದುಗೊಂಡು ಚರಿಸುವದಕ್ಕೆ ಕಾರಣವಲ್ಲದೆ ಮಹಾಜ್ಞಾನ ವಿಡಿದಾಚರಿಸಿ ಮಹಾಲಿಂಗದಲ್ಲಿ ಸಮರಸವಾಗುವ ಜ್ಞಾನ ಜಂಗಮ ಮೂರ್ತಿಗಳಲ್ಲಿ ಪಂಚೇಂದ್ರಿಯಂಗಳಲ್ಲಿ ಪಂಚವಿಧಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಆಚರಣೆಯು ನಿಷ್ಪತ್ತಿಯಾಗಿ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಆಚರಣೆಯು ನಿಷ್ಪತ್ತಿಯಾಗಿ ಷಡಾಧಾರ ಚಕ್ರಂಗ

ಳಲ್ಲಿ ಷಡ್ವಿಧಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಆಚರಣೆಯು ನಿಷ್ಪತ್ತಿಯಾಗಿ ಅಷ್ಟಮದಂಗಳ ವರ್ತನೆಯ ಲಂಡತನವ ನಷ್ಟವ ಮಾಡಿ ಅಷ್ಟವಿಧ ಭಕ್ತಿಯಾಗಿ ಅಳವಡಿಸಿಕೊಂಡು ಆಚರಿಸುವಲ್ಲಿ, ಆ ಅಷ್ಟಮದಂಗಳ ವರ್ತನೆ ಕಾಣಿಸುವದಕ್ಕೆ ಮೊದಲೆ ಮನೋಪ್ರಪಂಚಕ್ಕೆ ವಿಲಕ್ಷಣವಾಗಿ, ಲಿಂಗದಲ್ಲಿ ಕೂಡಿದ ಬಳಿಕ ಆ ಅಷ್ಟಮದಂಗಳು ಮನವ ಮಾರಿ ಚರಿಸಲಿಲ್ಲವಾಗಿ ಸ್ವಯಸ್ಥಲ ಚರಸ್ಥಲ ಪರಸ್ಥಲವೆಂಬ ತ್ರಿವಿಧ ಸ್ಥಲದ ಆಚರಣೆಯನ್ನು ತಿಳಿದು ಉಪಾಧಿ ಲಾಂಛನಕ್ಕೆ ವಿಲಕ್ಷಣವಾಗಿ ಉಪಾಧಿ ನಿರುಪಾಧಿ ಸಹಜ ಮಾಟದ ಕುಶಲತ್ವವನ್ನು ಜ್ಞಾನ ಗುರುಬೋಧೆಯಿಂದ ತಿಳಿದು ಇವರು ಉಪಾಧಿಕರು ನಿರುಪಾಧಿಕರು ಸಹಜ ಮಾಟವನುಳ್ಳವರು ಎಂದು ಪರಾಂಬರಿಸದೆ ಹೊಟ್ಟೆಹೊರಕತನಕ್ಕೆ ಒಡಲು ಹೊರಕರೆಲ್ಲ ಜಂಗಮವೇ ? ಅಲ್ಲ. ಜ್ಞಾನಜಂಗಮ ಸ್ಥಲವು ಹಾಗಲ್ಲ. ನಿಲ್ಲಿರಣ್ಣಾ. ನೀವೇ ಶಿವಜಂಗಮ ಮೂರ್ತಿಗಳಾಗಬಲ್ಲಡೆ ನಾವು ಸ್ವಯಸ್ಥಲ ಚರಸ್ಥಲ ಪರಸ್ಥಲದೊಳಗೆ ಇಂಥ ಆಚರಣೆಯುಳ್ಳವರು ಎಂದು ನಿಮ್ಮಾಚರಣೆಯನ್ನು ಪರಾಂಬರಿಸಿಕೊಳ್ಳಿ. ನೀವು ಭಕ್ತರಿಂದ ಭಕ್ತಿಯ ಮಾಡಿಸಿಕೊಂಬುದಕ್ಕೆ ವಿಚಾರವು ಹೇಗೆಂದಡೆ—ಭಕ್ತಿಯ ಮಾಡುವ ಭಕ್ತಂಗೆ ಧಾರಣೆಯ ವಿದ್ಯೆಯನ್ನು ತಳೆದಾಡುವ ವಿಧಾತ್ರನು ಸರ್ವಭಾರವನ್ನು ತಾನೇ ಹೊತ್ತಿಪ್ಪನು ಎಂಬಹಾಗೆ ಆ ಭಕ್ತನಲ್ಲಿ ಉಂಟಾದ ಗುಣಂಗಳನ್ನು ತಾನೇ ಒಳಕೊಂಡು ಭಕ್ತಿಯ ಕೈಕೊಳ್ಳುತ್ತಿರಬೇಕು. ಜೀವ ಗ್ರಹಿಸಿದ ಮೀನಿನ ಸಂಚಾರವು ಕುರುಹುಗಾಣಿಸದಿರುವ ಹಾಗೆ ತಾನು ಉಪಾಧಿ ನಿರುಪಾಧಿ ಸಹಜ ಮಾಟಂಗಳಲ್ಲಿ ಕುರುಹು ಹಿಡಿಸಿಕೊಳ್ಳದಿರಬೇಕು. ಒಬ್ಬಾತನ ಎದೆಯ ಮೇಲೆ ನಿಂದು ಕಾಣಿಸುವ ಪಶುವೆಂಬುದು ತನ್ನ ಭಾರವ ಅವನ ಮೇಲೆ ಬಿಡದೆ ತನ್ನಲ್ಲಿಯೇ ಅಡಗಿಸಿಕೊಂಡಿರುವದು ಎಂಬ ಹಾಗೆ ತನ್ನಲ್ಲಿ ಹುಟ್ಟಿದ ಕೋಪ ಕ್ರೋಧಾದಿ ಗುಣಂಗಳನ್ನು ತನ್ನಲ್ಲಡಗಿಸಿಕೊಂಡಿರಬೇಕು. ಈ ಪ್ರಕಾರವಾದ ಉಪಾಧಿಗುಣಂಗಳೆಲ್ಲವನ್ನು ಬೇರ್ಪಡಿಸಿ ನಿರುಪಾಧಿ ಎಲ್ಲವ ಶೇಷವಾಗಿ ಜ್ಞಾನ ಜಂಗಮ ಮೂರ್ತಿಯೇ ತಾನಾಗಿ ನೆಲೆಗೊಂಡಾತನೇ ಶಿವನೆಂಬುದರ್ಥ.

೭೨೭

ಬಂದ ಚಂದಣಗಿತ್ತಿಯರೆಲ್ಲರು ಓಗರವನುಂಡು ಹೋದರಲ್ಲದೆ ಮದವಣಿಗನ ಕಂಡು ಹೋದುದಿಲ್ಲ. ನಿಬ್ಬಣ ಬಂದವರೆಲ್ಲರು ಆಧಿಗೆ ಹೋದರು ಮೇಲೆ ನೀರ ಮಿಂದು. ಇದು ಒಬ್ಬುಳಿಕೆ ಇಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೭೪ ॥

೭೨೮

ಬಯಲೊಳಗಣ ಬಯಲಿನಲ್ಲಿ ಒಂದು ಕಲ್ಪತರು ಹುಟ್ಟಿ ಫಲವಿಲ್ಲದೆ ಬಂಜೆಮರನಾದುದ ಕಂಡೆ. ಇದ ತಿಳಿದು ನೋಡಲಿಕ್ಕಾಗಿ ಬಯಲು

ಬಯಲ ಕೂಡಿ ಆ ಕಲ್ಪತರು ಫಲವ ಎಡೆಬಿಡುವಿಲ್ಲದುದ ಕಂಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯಲಾಗಿ ॥ ೭೫ ॥

೭೨೯

ಬಾಳಾಂಬಕ ಬಲೆಗೆ ಸಿಕ್ಕಿದ. ಲೀಲಾಂಗ ಕಾಲಕ್ಕೆ ಒಳಗಾದ. ಪುಷ್ಪೋದ್ಭವ ಹೆಡಗಟ್ಟಿಗೀಡಾದ. ಇವರು ಮೂವರು ದೇವರೆಂದು ಆರಾಧಿಸಿ ಜೇನ ಮಡಕೆಯಲ್ಲಿ ಸಿಕ್ಕಿದ ನೊಣದಂತಾದಿರಯ್ಯಾ. ಅಂಟೆಗೆ ಸಿಕ್ಕಿದ ವಿಹಂಗ ನಂತಾದಿರಣ್ಣಾ. ಆ ಹಾವರ ಕಂಡೆನಗಂಜಿಕೆಯಾಯಿತ್ತಯ್ಯಾ. ಈ ಮೂವರ ಬಿಡಲಾರದೆ ಬಾಳಾಂಬಕನ ಬಾಳದಲ್ಲಿ ಧರಿಸಿದೆ. ವಿಷ್ಣುವ ಅಕ್ಷಿಯಲ್ಲಿ ಧರಿಸಿದೆ. ಬ್ರಹ್ಮನ ಬಾಯಲ್ಲಿ ಧರಿಸಿದೆ. ಅಳವಡಿಸಿ ಈ ಮೂವರ ಕೊಂದ ಭೇದವಿದು. ಲಲಾಟದಲ್ಲಿ ಇದ್ದವನ ತಲೆಯ ಹೊಯ್ದೆ. ಅಕ್ಷಿಯಲ್ಲಿದ್ದವನ ಕುಕ್ಷಿಯ ಕುಕ್ಕಿದೆ. ಬಾಯಲ್ಲಿದ್ದವನ ಬಸುರೊಡೆಯ ಹೊಯಿದೆ. ಹೀಗೆ ಹೊಯ್ಯಲಾಗಿ ಅವರು ಬದುಕಿದರು, ನಾ ಸತ್ತೆ. ಸತ್ತವರಿಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ ॥ ೭೬ ॥

೭೩೦

ಬೆಣ್ಣೆಯ ಮಡಕೆಯಲ್ಲಿ ಕಿಚ್ಚು ತುಂಬಿ ಉರಿವುತ್ತಿದ್ದುದ ಕಂಡೆ. ಕಿಚ್ಚು ಕರಗಿ ಬೆಣ್ಣೆ ಉಳಿಯಿತ್ತು. ಉಳಿದ ಉಳುಮೆಯ ಒಡಗೂಡಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ ॥ ೭೭ ॥

೭೩೧

ಬೆಂಕಿಗೆ ಶೈತ್ಯಕೊಂಡು, ಉದಕಕ್ಕೆ ಉರಿಹುಟ್ಟಿ ಮತ್ತಾ ಉದಕವನರಸುವದ ಕಂಡೆ. ಮಡಕೆ ನಿಂದುರಿದು ಅಕ್ಕಿ ಉಳಿಯಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಮರೆಯಲಾಗಿ ॥ ೭೮ ॥

೭೩೨

ಬೀಜದೊಳಗಣ ವೃಕ್ಷ ಉಲಿಯಬಲ್ಲುದೇ ? ರತ್ನದೊಳಗಣ ಉರಿ ಹೊತ್ತಬಲ್ಲುದೇ ? ಭಿತ್ತಿಯ ಮೇಲಣ ಚಿತ್ರ ಬಟ್ಟೆಯ ನಡೆಯ ಬಲ್ಲುದೇ ? ಇದರಚ್ಚುಗವ ಕಂಡು ಮತ್ತೆ ಹಿರಿಯರೆಂದರೆ ಅದೆತ್ತಣ ಭೀತಿ ಎನಗೆ ನಿಃಕಳಂಕ ಮಲ್ಲಿಕಾರ್ಜುನಾ ॥ ೭೯ ॥

೭೩೩

ಭಕ್ತಂಗೆ ಹೆಣ್ಣು ಬೇಡ, ಹೊನ್ನು ಬೇಡ, ಮಣ್ಣು ಬೇಡ ಎಂದು ಹೇಳಿ, ತಾ ಮುಟ್ಟುವನ್ನಬರ ಆ ಬೋಧೆ ಹುಸಿ ಎಂದೆ. ತಾನು ಮುಟ್ಟದೆ ತನ್ನ ಮುಟ್ಟಿಪ್ಪ ಭಕ್ತನ ತಟ್ಟದೆ, ಕರ್ಮಕ್ಕೆ ಕರ್ಮವನಿತ್ತು, ತಾ ನಿರ್ಮಗನಾಗ ಬಲ್ಲಡೆ ಹೊಳೆಯಲ್ಲಿ ಹಾಕಿದ ಸೋರೆಯಂತೆ, ಅನಿಲ ಕೊಂಡು ಹೋಹ ಎಲೆ[1]ಯಂತೆ, ಏತಕ್ಕೂ ಹೊರಗಾಗಿ ಜಗದಾಶೆ ಇಲ್ಲದಿರ್ಪ ವೇಷಕ್ಕೆ ಒಳಗಲ್ಲದಾತನ ಜಗದೀಶನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೮೦ ॥

ಅರ್ಥ:— ಭಕ್ತರುಗಳಿಗೆ ಹೆಣ್ಣಿನ ಮೇಲಿನ ಕಾಂಕ್ಷೆಯು ಬೇಡ, ಹೊನ್ನಿನ ಮೇಲಿನ ಕಾಂಕ್ಷೆಯು ಬೇಡ, ಮಣ್ಣಿನ ಮೇಲಿನ ಕಾಂಕ್ಷೆಯು ಬೇಡ ಎಂದು ಬೋಧಿಸಿ, ತಾನು ಮಲತ್ರಯಂಗಳ ಹಿಡಿವ ಪರಿಯಂತರದಲ್ಲಿ ತಾ ಬೋಧಿಸುವ ಬೋಧೆ ಸಟೆ ಎಂದು ಹೇಳುವೆನು. ತಾ ಮಲತ್ರಯಂಗಳ ಪ್ರಪಂಚಕ್ಕೊಳಗಾಗದೆ ಜಂಗಮ ಭಕ್ತಿಯಲ್ಲಿ ಕೂಡಿಪ್ಪ ಭಕ್ತನ ಭಕ್ತಿಯಲ್ಲಿ ಆಸಕ್ತನಾಗದೆ ಉಪಾಧಿ ಭಕ್ತರಿಗೆ ಉಪಾಧಿ ಭಕ್ತಿಯನ್ನೆ ಬೋಧಿಸಿ ತಾನು ಜ್ಞಾನಿಯಾಗಿರಬಲ್ಲಡೆ ನದಿಯೊಳಗೆ ಹಾಕಿದ ಸೋರೆಯ ಕಾಯಿಯಂತೆ ಸಾಗಿ ಹೋಗುವನು.

೭೩೪

ಭಗದಲೊಂದು ಬಕ ಹುಟ್ಟಿ ಅರುಹಿರಿಯರೆಲ್ಲರ ಭಗದೊಳಗು ಮಾಡಿತ್ತು. ಆ ಭಗವನು ಆ ಬಕವನೊಂದು ಇರುಹೆಯ ಮರಿ ನುಂಗಿತ್ತ ಕಂಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯಲಾಗಿ ॥ ೮೧ ॥

೭೩೫

ಭವಾರಣ್ಯದಲ್ಲಿ ಒಂದು ವನಚರ ಹುಟ್ಟಿತ್ತು. ಅದಕ್ಕೆ ಮೂರು ಮುಖ ತಲೆದೋರಿ ಆರು ಕೊಂಬಿನ ಹಣ್ಣನರಸುತ್ತಿದ್ದಿತ್ತು. ಆರು ಮೂರರೊಳಗಡ ಗಿದುದನರಿಯದೆ, ಮೂರು ಒಂದರೊಳಗಾದುದನರಿಯದೆ, ಹಲವು ಕೊಂಬೆಗೆ ಹಾರೈಸಿ ಒಂದೂ ಹಣ್ಣ ಮೆಲ್ಲಲರಿಯದೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ನರಿಯದೆ ಹೋಯಿತ್ತು ॥ ೮೨ ॥

---

೧. ಉಲಿ (ಬ)

೭೩೬

ಮದವಳಿಗ ಮದವಳಗಿತ್ತಿಯ ಮುಟ್ಟದೆ ಅತ್ತೆಯು ಭಗವ ಮುಟ್ಟಿ ನೋಡಿ ಎನ್ನ ಮದವಳಿಗೆಯ ಹೆತ್ತ ತಾವೆಂದು ಮತ್ತರಿದು ಮುಟ್ಟದೆ ಭಗವ ನೋಡುತ್ತ ಬಟ್ಟಬಯಲಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೮೩ ॥

೭೩೭

ಮದವಳಿದು ಸರ್ವವ ನೇತಿಗಳದ ಮತ್ತೆ ಸರ್ವವ ಕೂಡಿಕೊಂಡಿಪ್ಪ ಇಚ್ಛಾಶಕ್ತಿಯ ಮುಟ್ಟದೆ ಕೊಟ್ಟ ಮದವಳಿಗೆಯ ತಂದಾತ ಅವರವ್ವೆಗೆ ಅಳಿಯನಾದುದನರಿದು ಉತ್ಪತ್ತಿ ಜಗನ್ಮಾಯೆ ಎಂದರಿದು ಈ ಗುಣ ಜ್ಞಾನದೊಳಗಣ ಜ್ಞಾನ ಉಭಯ ದೃಷ್ಟಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಾ ॥ ೮೪ ॥

೭೩೮

ಮನವೆಂಬ ಮರ್ಕಟನು ವ್ಯಾಪಾರವೆಂಬ ಸಂಸಾರದಲ್ಲಿ ಹುಟ್ಟಿ, ತ್ರಿಗುಣಾತ್ಮಕನಾಗಿ ಸ್ಥೂಲವ ಸ್ಥೂಲವೆಂದು, ಸೂಕ್ಷ್ಮವ ಸೂಕ್ಷ್ಮವೆಂದು, ಕಾರಣವ ಕಾರಣವೆಂದು, ಆರನರಸಿಹೆನೆಂದು ದಿವ್ಯಜ್ಞಾನವನರಿಯದೆ, ಪ್ರಕೃತಿಭಾವವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯದೆ ॥ ೮೫ ॥

೭೩೯

ಮೂಗೇಣಗಲದ ಬಾವಿಗೆ ಆರುಗೇಣಗಲದ ಗಾತ್ರದ ಕುಂಭವ ಬಿಟ್ಟು ಹುರಿಗೂಡದ ಕಣ್ಣಿಯಲ್ಲಿ ಸೇದುತ್ತಿರಲಾಗಿ ನೀರು ನೆಲನ ಮುಟ್ಟದೆ ಕುಂಭವ ಬಿಟ್ಟು ಕಣ್ಣಿಯಲ್ಲಿ ತುಂಬಿ ಬಂದಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಗೆ ॥ ೮೬ ॥

೭೪೦

ಮಣ್ಣೂ ನೀರೂ ಸ್ವಸ್ಥವಾಗಿ ಮೃತ್ತಿಕೆ ಕುಲಾಲನ ಚಿತ್ತಕ್ಕೆ ಒಪ್ಪಿದಲ್ಲಿ, ಏನ ಹಿಡಿವಡೂ ಲಕ್ಷಿಸುವ ತೆರನಂತೆ ಚಿತ್ರಜ್ಞ ಜಾತಿ ವರ್ಗವನರಿದು, ಪೃಥ್ವಿಪಟಂಗಳಲ್ಲಿ ದೃಷ್ಟವ ತೋರಿ ಬರುವಂತೆ ಇಂತೀ ತನ್ನ ಲಕ್ಷದ ದೃಷ್ಟದಲ್ಲಿ ಉಭಯ ತನ್ನಷ್ಟವಾಗಿಪ್ಪ ಭೇದವೆಂಬುವಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನನ ಲಿಂಗವನರಿದವನ ಸಂಗ ॥ ೮೭ ॥

**ಅರ್ಥ:—** ಮೃತ್ತಿಕೆಯೂ ಜಲವೂ ಕೂಡಿ ಹದವಾಗಿ ಆ ಹದವಾದ ಮಣ್ಣು ಕುಂಬಾರನ ಮನಕ್ಕೆ ಒಪ್ಪಿಗೆಯಿಂದ ಅವರೂಪ ಮಾಡಬೇಕೆಂದು ನೆನೆದು ಹಿಡಿದಡೂ, ಆ ರೂಪುಗಳೇ ಕುರುಹಾಗಿ ನಿಲುಕಡೆಯ ಹಾಗೆ, ಭಾವ ಚಿತ್ರಿಕನು ಸ್ತ್ರೀವರ್ಗ ಪುರುಷವರ್ಗ ಮೃಗವರ್ಗ ವನವರ್ಗ ಗಿರಿವರ್ಗ ದೇವತಾವರ್ಗ ರಾಕ್ಷಸವರ್ಗ ಮೊದಲಾದವ ಬರೆಯಬೇಕೆಂದು ಮನದಲ್ಲಿ ತಿಳಿದು ಮಣ್ಣುಗೋಡೆಗಳಲ್ಲಿ ಪಾವು ಡಂಗಳಲ್ಲಿ ಇಂಥ ರೂಪು ಬರೆವುತ್ತಿದ್ದೇನೆ ಎಂದು ಹೇಳಿ ಲೇಖನವ ಮಾಡಿದಲ್ಲಿ, ಆ ರೂಪುಗಳೇ ಒಪ್ಪವಾಗುವ ಹಾಗೆ ಈ ಪ್ರಕಾರದಿಂದ ತನ್ನ ಕುರುಹಾದಂಗದಲ್ಲಿ ಸಾಕಾರವಾದ ಇಷ್ಟಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವಲ್ಲಿ, ಅಂಗಲಿಂಗ ವೆಂಬ ಭಾವ ನಷ್ಟವಾಗಿ ಭಿನ್ನಭಾವ ನಷ್ಟವಾಗಿ ಸಮರಸ ಭಾವದಿಂದ ಆಚರಿಸುವಲ್ಲಿ, ಸರ್ವಾಚಾರ ಸಂಪತ್ತಿನಾಚರಣೆ ಉಂಟಾಗುವದೆಂಬುದಕ್ಕೆ ಸಂಜ್ಞೆ. ಇಷ್ಟಲಿಂಗ ಸಂಬಂಧವ ತಿಳಿದ ಶರಣನಾಚರಣೆ ಹೀಗೆಂಬುದರ್ಥ.

೭೪೧

ಪಂಚ ಮುಖದ ಗಿರಿಯ ಗಂಹರದಲ್ಲಿ ಮುಂಚಿದರಯ್ದುವ ಹುಲಿಗಳ ಕಂಡೆ. ಆ ಹುಲಿ ಒಂದಕ್ಕೆ ಐದು ಬಾಯಿ, ಆ ಬಾಯೊಳಗೆ ಹೊಕ್ಕು ಹುಲಿಯ ಕುಲಗೆಡಿಸಬೇಕು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯ ಬಲ್ಲಡೆ ॥ ೮೮ ॥

೭೪೨

ಮದಸೊಕ್ಕಿದ ಗಜ ಅಜಕ್ಕಂಜಿ ಅಡಿ ಇಡಲಮ್ಮದುದ ಕಂಡೆ. ಕಡು ಗಲಿ ಬಂಟ ಕತ್ತಲೆಗಂಜಿ ಒಡಗೂಡುವರು ಬೇಕೆಂದು ಅಡಿಗಡಿಗಂಜುವುದ ಕಂಡೆ. ಇಂತಿವರೆಲ್ಲರು ನಳಿಕೆಯ ಕೀರನಂತೆ ಲಾಗವ ಮರೆದು ಬಳಲಿ ಧರೆಗೆ ಸೇರುವಾಗ ಆಗಲರಿದಂತಾಗದೆ ಬೇಗರಿದುಕೊಳ್ಳಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಕೂಡಬಲ್ಲಡೆ ॥ ೮೯ ॥

೭೪೩

ಮೃತ್ಪಿಂಡದ ಹದನ ಚಕ್ರಿಯ ಚಿತ್ತದ ಕರದಂತೆ, ಚಿತ್ರಜ್ಞನ ಚಿತ್ತದ ಲೆಕ್ಕಣಿಕೆಯ ಒಪ್ಪದಂತೆ. ಇಂತೀ ಆತ್ಮನ ದೃಷ್ಟ ತನ್ನ ಇಷ್ಟದ ಲಕ್ಷದಲ್ಲಿ. ಇಂತೀ ಉಭಯ ದೃಷ್ಟವಿದ್ದಂತೆ ಚಿತ್ತ ಅಚ್ಚೊತ್ತಿರಬೇಕು ನಿಃಕಳಂಕ ಮಲ್ಲಿ ಕಾರ್ಜುನ ಲಿಂಗದಲ್ಲಿ ॥ ೯೦ ॥

೭೪೪

ಕರ್ಮಕ್ರೀ ನಷ್ಟವಾಗಿ ವರ್ಮವನರಿದುದು ಕರ್ಮಕ್ರೀ ನಷ್ಟವೆಂಬುದಕ್ಕೆ ದೃಷ್ಟ. ಜಿಹ್ವೆಯ ಲಂಪಟತ್ವದಿಂದ ಕ್ಷುಧಾಪೋಷಕನಾಗಿ ಮುಟ್ಟದೆ ವಸ್ತುವಿನ ದೆಸೆಯಿಂದ ಲಕ್ಷಿಸಿಕೊಂಬನಾಗಿ ತನುವಿನ ಬಾಯಿ ನಷ್ಟವೆಂಬುದಕ್ಕೆ ದೃಷ್ಟ. ನಾನೆಂಬುದದೇನೂ ಇಲ್ಲದೆ ಇದ್ದುದಾಗಿ ತಾ ಸತ್ತೆನೆಂಬುದಕ್ಕೆ ದೃಷ್ಟ. ಇಂತೀ ಸೂಚನೆ ಯುಕ್ತಾತ್ಮ ನಿಶ್ಚಯವಂತಂಗೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಸಾಧಿಸಿ ಭೇದಿಸಿ ಅರಿವಂಗೆ ॥ ೯೧ ॥

೭೪೫

ವಿಶ್ವಾಸದ ಹರವರಿಯಲ್ಲಿ ವಿಶ್ವಮಯಸ್ಥಲಕುಳಂಗಳಾದವು. ಅದು ನಾನಾ ತಟಾಕಂಗಳಲ್ಲಿ ತೋರುವ ದಿನಕರನಂತೆ, ಹಲವುಮಯ ತೋರುವುದಲ್ಲಿಗಲ್ಲಿಗೆ ಒಲವರವಿಲ್ಲದೆ. ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ. ಸ್ಥಲದ ನೆಲೆ ಒಂದೆಂತರಿತಲ್ಲಿ ಏಕಸ್ಥಲಮೂರ್ತಿ ನೀನೆ. ಏಕವು ಸಾಕೆಂದಲ್ಲಿ ನಿರಾಕಾರನಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ ॥ ೯೨ ॥

೭೪೬

ವೃಕ್ಷ ಬೀಜವ ನುಂಗಿತ್ತೋ ಬೀಜ ವೃಕ್ಷವ ನುಂಗಿತ್ತೋ ಎಂಬುದನರಿದಾಗವೆ ಭಕ್ತಿಸ್ಥಲ. ಮುತ್ತು ಜಲವ ನುಂಗಿತ್ತೋ ಜಲವ ಮುತ್ತು ನುಂಗಿತ್ತೋ ಎಂಬುದನರಿದಾಗವೆ ಮಾಹೇಶ್ವರ ಸ್ಥಲ. ಪ್ರಭೆ ಪಾಷಾಣವ ನುಂಗಿತ್ತೋ ಪಾಷಾಣ ಪ್ರಭೆಯ ನುಂಗಿತ್ತೋ ಎಂಬುದನರಿದಾಗವೆ ಪ್ರಸಾದಿ ಸ್ಥಲ. ವಹ್ನಿ ಕಾಷ್ಟವ ನುಂಗಿತ್ತೋ ಕಾಷ್ಟವ ವಹ್ನಿ ನುಂಗಿತ್ತೋ ಎಂಬುದನರಿದಾಗವೆ ಪ್ರಾಣಲಿಂಗಿ ಸ್ಥಲ. ಸಾರ ಬಲಿದು ಶರಧಿಯ ಕೂಡಿದಾಗವೆ ಶರಣಸ್ಥಲ. ವಾರಿ ಬಲಿದು ವಾರುಧಿಯಂತಾದಾಗವೆ ಐಕ್ಯ ಸ್ಥಲ. ಹೀಗಲ್ಲದೆ ಷಟ್ಸ್ಥಲ ಬ್ರಹ್ಮಿಗಳೆಂತಾದಿರಣ್ಣಾ ? ಕರೆಯದ ಪಶುವಿಂಗೆ ತೃಣವ ಗಳಿಸುವನಂತೆ, ಒಲ್ಲದ ಸತಿಯಲ್ಲಿ ರತಿಕೂಟವ ಬಯಸುವನಂತೆ, ಗೆಲ್ಲತನಕ್ಕೆ ಹೋರುವಲ್ಲಿ ಬಲ್ಲತನವನರಸುವನಂತೆ, ಕೊಲ್ಲಿಯಾವಿನಲ್ಲಿ ಸಲ್ಲೀಲೆಯನರಸುವನಂತೆ, ಬಲಿದ ವಂಶದಲ್ಲಿ ಕಳಿಲೆಯನರಸುವನಂತೆ, ಬರಿ ಮಾತಿಂಗೆಡೆಯಾದುದುಂಟೆ ? ಬಯಲುಕೊಂಡ ಘನಕ್ಕೆ ಅವಧಿಗೊಡಲಿಲ್ಲ. ಉರಿಕೊಂಡ ಕರ್ಪುರಕ್ಕೆ

ರೂಪಿಂಗೆಡೆ ಇಲ್ಲ. ಬಯಲ ಬಡಿವಡವಂಗೆ ಕೈಗೆ ಮೆತ್ತಿಗಿಲ್ಲ. ಮನಮುಹದಲ್ಲಿ ನಿಂದವಂಗೆ ಆರನೆಣಿಸಲಿಲ್ಲ, ಮೂರ ಮುಟ್ಟಲಿಲ್ಲ. ವಿಾರಿ ತೋರಿದ ಘನ ತನ್ನಲ್ಲಿ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಾ ॥ ೯೩ ॥

೭೪೭

ಶಿಶುವಿನ ಬಸುರಿನಲ್ಲಿ ತಾಯಿ ಹುಟ್ಟಿ, ತಾಯುಳಿದು ಶಿಶು ಉಳಿಯಿತ್ತು. ಉಳಿದ ಉಳುಮೆಯ ತಿಳಿಯಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ನೊಡಗೂಡಬಲ್ಲನೆಂಬೆ ॥ ೯೪ ॥

೭೪೮

ಶ್ವಾನ ಜ್ಞಾನಿಗಳೆಲ್ಲರು ಸಮ್ಯಕ್‌ಜ್ಞಾನವ ಬಲ್ಲರೆ ? ಲೌಕಿಕ ಧ್ಯಾನ ಮೌನಿಗಳೆಲ್ಲರು ಸ್ವಾನುಭಾವಿಗಳಹರೇ ? ಇದರ ಭಾವವನರಿಯದೆ ಭ್ರಮೆ ಯೊಳಗಿಪ್ಪ ವಸ್ತುವಿನ ಠಾವನರಿಯದೆ ವಾಯವಾಗಿಹ ಇಂತೀ ಗಾವಿಲರಿಗೆಲ್ಲಿ ಯದೋ ಸಮ್ಯಕ್‌ಜ್ಞಾನದ ಹೊಲಬು ? ಇಂತಿವರ ನೀನೇ ಬಲ್ಲೆ ನಾನರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯೫ ॥

೭೪೯

ಸಂಚಾರದಿಂದ ಸುಳಿದಾಡುವ ಆತ್ಮನ ಆಧಾರದ ಕುಂಡಲಿಯ ಸರ್ಪನ ಮಾಡಿ ಮುಳುಗಿ ನುಂಗುವಾಗ ವಿಾರಿ ಅರಿದಿಹೆವೆಂಬ ಅರಿವು ಎಲ್ಲಿ ತಲೆ ದೋರಿತ್ತು ? ಆ ಗುಣ ಪೂಜಿಸಿದಲ್ಲಿ ಪುಣ್ಯವೆಂಬುದಕ್ಕೆ ಸೂಚನೆ. ಪೂಜೆ ಪುಣ್ಯವೆಂಬುದನರಿಯದೆ ಘಟಮಠದೊಳಗಣ ಬಯಲಿನಂತೆ ಪ್ರಸಿದ್ಧವೆಂಬು ದಕ್ಕೆ ತೆರನು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡಿದವನಂಗ ॥೯೬॥

೭೫೦

ಸುಕ್ಷೇತ್ರದಲ್ಲಿ ಒಂದು ಕ್ಷೇತ್ರದ ಗಿರಿ ಹುಟ್ಟಿತ್ತು. ಅದು ಮೊದಲಲ್ಲಿ ಸುರಾಪಾನದ ಮನೆ. ಕಡೆಯಲ್ಲಿ ಮಾಂಸಕಟಿಕರ ವಾಸ. ನಡುಮಧ್ಯದಲ್ಲಿ ಶೀಲವಂತರಾಲಯವ ಕಂಡೆ. ಅದಾವ ಶೀಲವೆಂದು ತಾನರಿತಡೆ ಭಾವಭ್ರಮೆ ಇಲ್ಲ. ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ತಾನು ತಾನೇ ॥ ೯೭ ॥

೭೫೧

ಹಣ್ಣು ಮರನ ನುಂಗಿ ಏರುವದಕ್ಕೆ ಠಾವಿಲ್ಲದೆ ಹಣ್ಣನೊಡೆದು ಮರನ ಕಂಡು, ಆ ಮರದ ಹಣ್ಣ ಪರೀಕ್ಷಿಸಬಲ್ಲಡೆ ಆತನೇ ಪರಮ ಸುಖಿ ನಿಃಕಳಂಕ ಮಲ್ಲಿಕಾರ್ಜುನಾ ॥ ೯೮ ॥

೭೫೨

ಹಸಿದು ಹಕ್ಕಿ ಹಣ್ಣಿಗೆ ಹೋದರೆ, ಹಣ್ಣು ಹಕ್ಕಿಯ ನುಂಗಿತ್ತು. ಹಣ್ಣಿನ ರಸ ಹಕ್ಕಿಯೊಳಡಗಿತ್ತು. ಆ ಹಣ್ಣು ಹಾರಿ ಹಕ್ಕಿಯ ಕೊಂಬಿನ ಮೇಲೆದ್ದಿತ್ತು[1]. ಆ ಮರನ ಹತ್ತಲಾಗಿ ಮರದ ಕವಲೆ ಹಿಸಿತ್ತು. ಹಕ್ಕಿಯು ಇದ್ದ ಕೊಂಬ ಹಿಡಿಯಲಾಗಿ ಕೊಂಬು ಮುರಿಯಿತ್ತು. ಹಕ್ಕಿ ಆಕಾಶದಲ್ಲಿ ಅಡಗಿತ್ತು. ಅಡಗಿದ ಹಕ್ಕಿಯು ತಾನುಡಿದಲ್ಲದೆ ಕಾಣಬಾರದು. ತಾ ನುಡಿವುದಕ್ಕೆ ಮುನ್ನವೆ ಮಡದಿಯರ ನಡುವೆ ಸಿಕ್ಕಿತ್ತಯ್ಯಾ ಮುಡುಬ. ಆ ಮುಡುಬನ ಬಾಯಲ್ಲಿ ಸಡಗರಿಸುತಿಪ್ಪವರಾರೆಂದು ಅರಿದು ನೋಡಾ ನರನ ಶರೀರವ ಹೊತ್ತ ಬರಿವಾಯ ಭುಂಜಿಕರಿಗೆ ಕರಿಗೊಂಡವನ ಸುದ್ದಿಯೇಕೋ? ಮೆಟ್ಟಿದ್ದ ಮರವನ್ನು ಬಿಟ್ಟಿದ್ದ ಪಕ್ಷಿಯನ್ನು ತೊಟ್ಟಿನೊಳಗೆ ತಿರುಗುವ ಹಣ್ಣನು ಆ ರಟ್ಟೆ ನುಂಗಿತ್ತ ಕಂಡೆ ನಿಃಕಳಂಕ ಮಲ್ಲಿಕಾರ್ಜುನಾ ॥ ೯೯ ॥

೭೫೩

ಹದ್ದ ಹಾವು ನುಂಗುವಾಗ ಸಿದ್ಧರೆಲ್ಲರು ನೋಡುತ್ತಿದ್ದರು. ಪ್ರಸಿದ್ಧರಲ್ಲದ ಕಾರಣ ಸಿದ್ಧರು ಸಿದ್ಧಿಯಲ್ಲಿಯೇ ಮುಳುಗಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಹೊದ್ದಿದುದಿಲ್ಲಾ ॥ ೧೦೦ ॥

೭೫೪

ಹಾವ ಹಿಡಿವುದಕ್ಕೆ ಗಾರುಡವ ಹೇಳಿದುದಿಲ್ಲ. ಕುತ್ತುವ ಹಸುವಿನ ಕೊಂಬ ಹಿಡಿಯ ಕಲಿಸಿದುದಿಲ್ಲ. ತಿಂಬ ಹುಲಿಗೆ ಅಂಗವ ತಪ್ಪಿಸುವುದ ಕಲಿಸಿದುದಿಲ್ಲ. ನಿನಗಿದು ನಿಂದೆಯತನವೆ? ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ ॥ ೧೦೧ ॥

೭೫೫

ಹಿರಿದಪ್ಪ ಮಹಾಮೇರುವೆಯ ತುದಿಯಲ್ಲಿ ಒಂದರಗಿಳಿ ತತ್ತಿಯನಿಕ್ಕಿ ಆ ತತ್ತಿ ಗಿರಿಯ ನುಂಗಿತ್ತ ಕಂಡೆ. ಗಿಳಿ ಕುರುಹಿಲ್ಲದೆ ಹಾರಿ ಹೋಯಿತ್ತು. ನಿಃಕಳಂಕ ಮಲ್ಲಿಕಾರ್ಜುನ ಲಿಂಗವೆ ನೀವೇ ಬಲ್ಲಿರಿ ॥ ೧೦೨ ॥

---

೧. ಮೇಲಿದ್ದಿತ್ತು (ಪ)

೭೫೬

ಹೋಟಾರದಲ್ಲಿ ಒಂದು ವೇತಾಳ ಹುಟ್ಟಿತ್ತು. ವೇತಾಳನ ಚಿತ್ತದಲ್ಲಿ ಶಿಶು ಬೆಸಲಾಗಿ ಮಾಣಿಕ್ಯವ ಕಂಡಿತ್ತು. ಆ ಮಾಣಿಕ್ಯದ ಬೆಳಗಿನಲ್ಲಿ ಹೋಟಾರದ ಕತ್ತಲೆ ಕೆಟ್ಟು ವೇತಾಳನ ಚಿತ್ತದ ಕತ್ತಲೆ ಹರಿದು ಶಿಶುವಿನ ಕೈಯ ರತ್ನ ಮೂರು ದೆಸೆಯ ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನನ ಸಂಗ ಸುಖದಿಂದ ॥ ೧೦೩ ॥

೭೫೭

ಅಯ್ಯಾ ನಾ ನಿನಗಂಜುವೆ. ಕಚ್ಚುವ ಹಾವ ಕೈಯಲ್ಲಿ ಹಿಡಿಸಿದೆ. ಕುತ್ತುವ ಹಸುವ ಬಾಗಿಲಲ್ಲಿ ಕಟ್ಟಿದೆ. ತಿಂಬ ಹುಲಿಯ ಅಂಗಳದಲ್ಲಿ ಕೂಡಿದೆ. ನಿನ್ನಂಗವಿದೇನೋ? ಅಭಂಗ ನಿಃಕಳಂಕಮಲ್ಲಿಕಾರ್ಜುನಾ ॥ ೧೦೪ ॥

ಟೀಕೆ:— ಸುಜ್ಞಾನೋದಯವಾದ ಶರಣನು ಸರ್ವಾಂಗ ಲಿಂಗವ ಸಂಬಂಧವ ಮಾಡಿ ಗುರುಮಾರ್ಗಾಚಾರವ ಬಿಡದೆ ಇರು ಎಂದು ಬೋಧಿಸಿದ ಜ್ಞಾನ ಗುರುವಿಂಗೆ ಭಯ ಭೀತಿ ಭೃತ್ಯಾಚಾರದಿಂದ ಬಿನ್ನಹವ ಮಾಡುತ್ತಿದ್ದೆವೆಂಬುದೀಗ ಅಯ್ಯಾ ನಾ ನಿನಗಂಜುವೆ ಎಂಬ ಶಬ್ದಕ್ಕರ್ಥ. ಇಂತು ಸಂಕಲ್ಪ ಭಾವದಿಂದ ಸರ್ವಾಂಗವ ಆವ ಗ್ರಹಿಸಿಕೊಂಡಿದ್ದ ಮನಸ್ಸನ್ನು ಶ್ರೀಗುರು ನಿವೃತ್ತಿ ಮಾಡಿ ಶಿವಭಾವದಲ್ಲಿ ಏಕಾರ್ಥವ ಮಾಡಿದನೆಂಬುದೀಗ ಕಚ್ಚುವ ಹಾವ ಕೈಯಲ್ಲಿ ಹಿಡಿಸಿದೆ ಎಂಬ ಶಬ್ದಕ್ಕರ್ಥ. ಅಹಂಕಾರ ಮಮಕಾರಗಳೆಂಬ ಕೋಡುಗಳಿಂದ ಮಥಣೆಸುತ್ತಿರ್ದ ಜೀವನೆಂಬ ಪಶುವನ್ನು ಶ್ರೀಗುರು ನಿತ್ಯಾನಿತ್ಯ ವಿವೇಕದಿಂದ ಬೋಧಿಸಿ ಸಜ್ಜೀವ ಸ್ವರೂಪ ಮಾಡಿ ಭಕ್ತಿ ದ್ವಾರದಲ್ಲಿ ಸ್ವಾನುಭಾವ ಸೂತ್ರದಿಂದ ಸಂಬಂಧಿಸಿದನೆಂಬುದೀಗ ಕುತ್ತುವಹಸುವ ಬಾಗಿಲಲ್ಲಿ ಕಟ್ಟಿದೆ ಎಂಬ ಶಬ್ದಕ್ಕರ್ಥ. ಕಾಲವ್ಯಾಘ್ರನ ಮರಣ ಬಾಧೆಯ ಕೆಡಿಸಿ ನಿತ್ಯವಾದ ಆಚಾರದಲ್ಲಿ ಅನಿಮಿಷ ನಿರೀಕ್ಷಣೆಯಿಂದ ಏಕಾರ್ಥವ ಮಾಡಿದನೆಂಬುದೀಗ ತಿಂಬ ಹುಲಿಯ ಅಂಗಳದಲ್ಲಿ ಕೂಡಿದೆ ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಸರ್ವಾಂಗವು ಚಿತ್ಪ್ರಕಾಶವಾದ ಚಿದ್ಘನ ಲಿಂಗದಲ್ಲಿ ಏಕಾರ್ಥವಾದ ಬಳಿಕ ಜೀವನ ಜೀವ ಭಾವವು ಅನಿತ್ಯವಾದ ತನುವಿನ ವರ್ತನೆಯು ಕಾಲನ ಮರಣ ಬಾಧೆಯು ನಿವೃತ್ತಿಯಾದ ಭೇದವ ಕಂಡು ಶರಣನಾಶ್ಚರ್ಯಂಬಟ್ಟನೆಂಬುದೀಗ ನಿನ್ನಂಗವಿದೇನೋ ಅಭಂಗ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೫೮

ಅಷ್ಟಕುಲ ದಿಗ್ದೇಶವನೆಲ್ಲವನು ತತ್ತಿಯೊಳಗಣ ತುಪ್ಪುಳು ನುಂಗಿತ್ತು. ತುಪ್ಪುಳು ಬಲಿದು ಮತ್ತೆ ಹಾರಲಾಗಿ ತತ್ತಿಯ ನುಂಗಿತ್ತು. ಮಹಾಹಕ್ಕಿಯ

ತುಪ್ಪುಳು ತತ್ತಿಯ ಚಿತ್ತು ನುಂಗಿತ್ತು. ನುಂಗಿದ ಚಿತ್ತುವ ಅಭಂಗ ಕೊಂಡಿತ್ತು. ಅದಕ್ಕೆ ಸಂಗ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಾ॥ ೧೦೫ ॥

**ಟೀಕೆ:—** ಅಷ್ಟತನುಗಳೆಂಬುದೀಗ ಅಷ್ಟಕುಲವೆಂಬ ಶಬ್ದಕ್ಕರ್ಥ. ತನುತ್ರಯ ಮುಖ್ಯವಾದ ಸಕಲ ತತ್ವಂಗಳ ಸಮೂಹವೆಂಬುದೀಗ ದಿಗ್ದೇಶವನೆಲ್ಲವನು ಎಂಬ ಶಬ್ದಕ್ಕರ್ಥ. ಪಂಚಭೂತಾಶ್ರಯವಾದ ದೇಹದಲ್ಲುದಯಿಸಿದ ಶಿವಜ್ಞಾನ ಪ್ರಕಾಶವು ಆ ಸಮೂಹವನವಗ್ರಹಿಸಿತ್ತೆಂಬುದೀಗ ಅಷ್ಟಕುಲದಿಗ್ದೇಶವನೆಲ್ಲವನು ತತ್ತಿಯೊಳಗಣ ತುಪ್ಪುಳು ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶವು ಉದಯವಾದ ಶರಣನು ಶ್ರೀಗುರು ಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಯಾಗಿ ಭಕ್ತಿಜ್ಞಾನವಿಡಿದಾಚರಿಸುತ್ತಿದ್ದನೆಂಬುದೀಗ ತುಪ್ಪುಳು ಬಲಿತು ಮತ್ತೆ ಹಾರಲಾಗಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಆಚಾರ ಸ್ವರೂಪವಾದ ಚಿದಂಗವು ಚಿದ್ಘನ ಅಂಗವನವಗ್ರಹಿಸಿತ್ತೆಂಬುದೀಗ ಮತ್ತಾ ತತ್ತಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಜ್ಞಾನ ಕ್ರಿಯೆವಿಡಿದಾಚರಿಸುತ್ತಿದ್ದ ಶರಣನ ಸುಜ್ಞಾನ ಪ್ರಕಾಶವನ್ನು ಸೂಕ್ಷ್ಮವಾದ ಪರಿಪೂರ್ಣವಾದ ಜ್ಞಾನ ಚಿತ್ತು ಅವಗ್ರಹಿಸಿತ್ತೆಂಬುದೀಗ ಮಹಾ ಹಕ್ಕಿಯ ತುಪ್ಪುಳು ತತ್ತಿಯ ಚಿತ್ತು ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಚಿತ್ತನ್ನು ಅಖಂಡ ಪರಿಪೂರ್ಣವಾದ ಮಹಾ ಘನಲಿಂಗವು ಅವಗ್ರಹಿಸಿತ್ತೆಂಬುದೀಗ ನುಂಗಿದ ಚಿತ್ತುವ ಅಭಂಗ ಕೊಂಡಿತ್ತೆಂಬ ಶಬ್ದಕ್ಕರ್ಥ. ಆ ಚಿದ್ಘನ ಲಿಂಗದಲ್ಲಿ ಸಮರಸೈಕ್ಯವಾದ ಚಿತ್‌ಸ್ವರೂಪನಾದ ಶರಣನು ಇದಿರಿಟ್ಟಾಚರಿಸಲಿಲ್ಲವೆಂಬುದೀಗ ಅದಕ್ಕೆ ಸಂಗ ನಿರ್ಲೇಪ ನಿಃಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೫೯

ಅಂಧಕ ಪಂಗುಳನಾದ ಪಂಗುಳ ಅಂಧಕನಾದ. ಈ ಉಭಯದ ಬೆಂಬಳಿಯನರಿಯಬೇಕು. ಮಂಜರಿ ವಿಹಂಗನ ಕೊಂದು ಉಭಯವನರಿಯಬೇಕು. ಪರಮ ಜೀವನೊಳಗಡಗಿ ಪರಮನಾದ ಉಭಯವ ತಿಳಿಯಬೇಕು. ಬೆಂಕಿ ಮರದೊಳಗಿರ್ದು ಮಥನದಿಂದ ಮರನ ಸುಟ್ಟು ಮರ ಬೆಂಕಿಯಾದ ತೆರನರಿತಡೆ ಪ್ರಾಣಲಿಂಗ ಸಂಬಂಧಿ. ಪ್ರಾಣಲಿಂಗವೆಂಬ ಉಭಯ ಸ್ವಯ ನಿಂದಲ್ಲಿ ಐಕ್ಯಾನುಭಾವಿ ನಿಃಕಳಂಕಮಲ್ಲಿಕಾರ್ಜುನಾ ॥ ೧೦೬ ॥

**ಟೀಕೆ:—** ಭಿನ್ನಜ್ಞಾನವಿಲ್ಲದ ಪರಿಪೂರ್ಣಜ್ಞಾನ ಗುರುಶಿಷ್ಯರೂಪವನೈದಿದ್ದ ಆ ಚಿದ್ರೂಪನಾದ ಶಿಷ್ಯನೆ ಸದ್ರೂಪನಾದ ಗುರುತತ್ವವನೊಳಕೊಂಡು ಸೇವ್ಯಗುರು ಸ್ವರೂಪವಾಗಿರ್ದನೆಂಬುದೀಗ ಅಂಧಕ ಪಂಗುಳನಾದ, ಪಂಗುಳ ಅಂಧಕನಾದನೆಂಬ ಶಬ್ದಕ್ಕರ್ಥ. ಇಂತಪ್ಪ ಗುರು ಶಿಷ್ಯರೆಂಬುಭಯವು, ಪರಬ್ರಹ್ಮದಲ್ಲಿ ಸಮರಸೈಕ್ಯವಾದ ಭೇದವನರಿದ ಶರಣನೆಂಬುದೀಗ ಈ ಉಭಯದ ಬೆಂಬಳಿಯನರಿಯಬೇಕೆಂಬ ಶಬ್ದಕ್ಕರ್ಥ.

ಮಾಯಾಶಕ್ತಿಯಳಿದು ಜ್ಞಾನಶಕ್ತಿ ಸ್ವರೂಪವಾಗಿ, ಅಂತಪ್ಪ ಜ್ಞಾನಶಕ್ತಿ ಜೀವನ ಅಜ್ಞಾನವ ನಷ್ಟಮಾಡಿ ಸುಜ್ಞಾನವ ಪ್ರಭಾವಿಸಿ ಕೊಡುತ್ತಿಹುದೆಂಬುದೀಗ ಮಂಜರಿ ವಿಹಂಗನ ಕೊಂದು ಉಭಯುವನರಿಯಬೇಕೆಂಬ ಶಬ್ದಕ್ಕರ್ಥ. ಅಂತು ಪರಮಾತ್ಮ ತತ್ವವು ಜೀವಾತ್ಮನೊಳಡಗಿ, ಆಜೀವನ ಗುಣವ ಕೆಡಿಸಿ ಪರಮಾತ್ಮ ಸ್ವರೂಪವ ಮಾಡಿ ತೋರುತ್ತಿಹುದೆಂಬುದೀಗ, ಪರಮ ಜೀವನೊಳಡಗಿ ಪರಮನಾದ ಉಭಯುವ ತಿಳಿಯಬೇಕೆಂಬ ಶಬ್ದಕ್ಕರ್ಥ. ಮರದೊಳಗಂತರ್ಗತವಾಗಿರ್ದ ಅಗ್ನಿ ಮಥನದಿಂ ಬಹಿರ್ಗತವಾಗಿ ಮರನ ದಹಿಸಿ ಅಗ್ನಿಯೇ ಉಳಿದಂತೆ ಶರಣನ ಮಹಾನುಭಾವಾಂತರಂಗದಲ್ಲಿ ಚೈತನ್ಯ ಸ್ವರೂಪವಾಗಿರ್ದ ಮಹಾಘನ ಲಿಂಗವು ಶ್ರೀಗುರು ಕಾರುಣ್ಯ ಮಹಾನುಭಾವ ಸಂಯೋಗದಿಂದ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬಂದು ಶರಣ ಸರ್ವಾಂಗವನವಗ್ರಹಿಸಲು ತನು ಮನ ಭಾವವಳಿದು ಚಿದಾಗ್ನಿ ಸ್ವರೂಪವಾದ ಲಿಂಗವೇ ಉಳಿಯಿತ್ತೆಂಬುದೀಗ ಬೆಂಕಿ ಮರದೊಳಗಿರ್ದು ಮಥನದಿಂದ ಮರನ ಸುಟ್ಟು ಮರ ಬೆಂಕಿಯಾದ ತೆರನನರಿತಡೆ ಪ್ರಾಣಲಿಂಗ ಸಂಬಂಧಿ ಎಂಬ ಶಬ್ದಕ್ಕರ್ಥ. ಲಿಂಗಾಂಗವೆಂಬುಭಯುವಳಿದು ಪರಬ್ರಹ್ಮವಾದನೆಂಬರಿವಡಗಿ ನಿಷ್ಪತ್ತಿಯಾಯಿತ್ತೆಂಬುದೀಗ ಪ್ರಾಣಲಿಂಗವೆಂಬುಭಯ ಸ್ವಯನಿಂದಲ್ಲಿ ಐಕ್ಯಾನುಭಾವಿ ನಿಃಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೦

ಆಕಾಶ ಸತ್ತಿತ್ತು ಬಯಲಿತ್ತಿತ್ತು[೧]. ವಾಯು ಹೊತ್ತಿತ್ತು. ಬೆಂಕಿ ಸತ್ತ ಠಾವಿನಲ್ಲಿ ಸುಟ್ಟಿತ್ತು. ಕೈ ಇಲ್ಲದ ಮೋಟ ಹಿಡಿ ಖಂಡವ ಕೊಯ್ದ. ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದ. ಪರಿಣಾಮವಿಲ್ಲದೆ ಸಂತೋಷಿಯಾದನಯ್ಯಾ. ಆತನಿರವು ಇಹದಲ್ಲಿ ಅಜ್ಞಾನಿ ಪರದಲ್ಲಿ ಸುಜ್ಞಾನಿ ಇಹ ಪರವೆಂಬ ಸಂದನಳಿದಲ್ಲದೆ ಲಿಂಗವಂತನಲ್ಲ. ಲಿಂಗ ಪ್ರಾಣದ ಮೇಲೆ ನಿಂದುದಕ್ಕೆ ಸಾಕ್ಷಿ. ಉರಿಕೊಂಡ ಕರ್ಪುರದಂತೆ, ವಿಷಕೊಂಡ ಘಟದಂತೆ, ಪಟಕೊಂಡ ಸೂತ್ರದಂತೆ, ಸೂರ್ಯಕೊಂಡ ಪ್ರಕಾಶದಂತೆ ಹಾಗಿರಬೇಕು ಮನ. ಲಿಂಗವ ಕೊಂಡ ಮನಕ್ಕೆ ಇದೇ ದೃಷ, ನಿಃಕಳಂಕಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಗೆ ॥ ೧೦೭ ॥

ಟೀಕೆ:— ಸುಜ್ಞಾನೋದಯವಾದ ಆತ್ಮನು ಶ್ರೀಗುರು ಕಾರುಣ್ಯದಿಂ ತ್ರಿವಿಧ ಲಿಂಗ ಸಂಬಂಧವಾಗಲು ತ್ರಿವಿಧ ಭಕ್ತಿಗಳಿಂದಾಚರಿಸಿದ ಚಿದಾತ್ಮನು ಸದ್ರೂಪವಾದ ಬ್ರಹ್ಮವೆ ಆದನೆಂಬುದೀಗ ಆಕಾಶ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾಕಾಶ ಸ್ವರೂಪವಾದ ಶರಣನ ಉನ್ಮನೀ ತತ್ವಸ್ವರೂಪವಾದ ಮನಸ್ಸು ಶಿವೋಹಂ

---

೧. ಬಯಲು ಒತ್ತಿತ್ತು (ಡ)

ಶಿವೋಹಂ ಎಂದಿತ್ತೆಂಬುದೀಗ ಬಯಲತ್ತಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ರೂಪ ನಾದ ಶರಣನ ಚಿತ್ಪ್ರಾಣಾನಿಲನು ಶಿವೋಹಂ ಭಾವವ ಧರಿಸಿಕೊಂಡಿಹುದೆಂಬುದೀಗ ವಾಯು ಹೊತ್ತಿತ್ತು, ಎಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿ ನಷ್ಟವಾದ ಶರಣನ ನಿಜಾಂತರಂಗದಲ್ಲಿರ್ದ ಜ್ಞಾನಾಗ್ನಿ ಪ್ರಕಾಶದಿಂದ ಚಿದಾತ್ಮನು ಸಮರಸ ಪಾಕವಾಯಿತ್ತೆಂಬುದೀಗ ಬೆಂಕಿಸತ್ತ ಹಾವಿನಲ್ಲಿ ಸುಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಭಿನ್ನಹಸ್ತವಳಿದು ಅಭಿನ್ನ ಹಸ್ತದಿಂ ಆತ್ಮಸಂಬಂಧವಾದ ತ್ರಿವಿಧ ಪದಾರ್ಥವ ತ್ರಿವಿಧ ಲಿಂಗ ಮುಖದಲ್ಲಿ ತ್ರಿವಿಧ ಭಕ್ತಿಯಿಂದರ್ಪಿಸಿ ಭಿನ್ನಾಪೇಕ್ಷೆ ಇಲ್ಲದ ಶಿವಾಪೇಕ್ಷೆಯಿಂದ ಆ ಲಿಂಗಸುಖಪ್ರಸನ್ನ ಪ್ರಸಾದ ಸ್ವೀಕರಿಸುತ್ತಿಹನೆಂಬುದೀಗ ಕೈ ಇಲ್ಲದ ಮೋಟ ಹಿಡಿ ಖಂಡವ ಕೊಯ್ದು ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತಾನೆಂದು ಪರಿಣಾಮವೆಂದೆರಡಿಟ್ಟು ತೋರದೆ ಆ ಸುಖ ಸ್ವರೂಪವೆ ತಾನಾಗಿರ್ದನೆಂಬುದೀಗ ಪರಿಣಾಮವಿಲ್ಲದೆ ಸಂತೋಷಿಯಾದನಯ್ಯಾ ಎಂಬ ಶಬ್ದಕ್ಕರ್ಥ. ಆ ಶರಣನ ಚರಿತ್ರವು ಎಲ್ಲ ಮಾನವರ ಹಾಗೆ ದೇಹಭಾವ ಸಂಬಂಧಿಯಾಗಿ ಸಂಸಾರ ಸ್ಥಿತಿಗತಿಯಲ್ಲಿರುತ್ತಿಹನೆಂಬುದೀಗ ಆತನಿರವು ಇಹದಲ್ಲಿ ಅಜ್ಞಾನಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವ್ಯಾಪ್ತಿಯಲ್ಲಿ ಕೂಡಿರ್ದ ಶರಣನು ಆ ಸಂಸಾರವ ಹೊದ್ದದೆ ತನ್ನ ನಿಜಾಂತರಂಗದಲ್ಲಿರ್ಪ ಮಹಾ ಘನ ಲಿಂಗದಲ್ಲಿ ತನ್ನರಿವು ಸಮರಸವಾಗಿಹುದೆಂಬುದೀಗ ಪರದಲ್ಲಿ ಸುಜ್ಞಾನಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಸಮರಸ ಭಾವವನೈಯ್ದಿದ ಶರಣಂಗೆ ಲಿಂಗಾಂಗವೆಂಬುಭಯವಳಿದೊಂದೇ ಪರಬ್ರಹ್ಮಸ್ವರೂಪ ವಾಗಿಹನೆಂಬುದೀಗ ಇಹಪರವೆಂಬ ಸಂದಳಿದಲ್ಲದೆ ಲಿಂಗವಂತನಲ್ಲ ಎಂಬ ಶಬ್ದಕ್ಕರ್ಥ. ಚಿತ್‌ಸ್ವರೂಪನಾದ ಶರಣನಾಚಾರಾಂಗದಲ್ಲಿರ್ದ ಇಷ್ಟಲಿಂಗದ ಚಿತ್ಕಳೆ ಅಂತರಂಗಕ್ಕೆ ವೇಧಿಸಿ ಚಿತ್‌ಪ್ರಾಣನಲ್ಲಿ ಪ್ರಾಣಲಿಂಗ ಸಂಬಂಧವಾದುದಕ್ಕೆ ದೃಷ್ಟವೆಂತೆಂದೊಡೆ, ಉರಿ ಕರ್ಪುರವ ಗ್ರಹಿಸಿ ಭಿನ್ನವಿಲ್ಲದಂತೆ ವಿಷ ಚರಣಾಂಗುಲದಲ್ಲಿ ಸೋಂಕಿ ಸರ್ವಾಂಗವೆಲ್ಲ ಪರವಶದಲ್ಲಿ ನಿಷ್ಪತ್ತಿಯಾದಂತೆ, ರತ್ನಕ್ಕು ಪ್ರಕಾಶಕ್ಕು ಹರುಕಿಲ್ಲದಂತೆ ಬಂಟನ ಪ್ರತಾಪವು ದಿಗ್ದೇಶಗಳಲ್ಲಿ ತೋರುವಂತೆ, ಚಿದ್ರೂಪನಾದ ಶರಣನ ತನು ಮನ ಪ್ರಾಣೇಂದ್ರಿಯಂಗಳ ಒಳಹೊರಗೆ ಸರ್ವಾಂಗದಲ್ಲಿ ಮಹಾಘನ ಲಿಂಗವು ಅನನ್ಯ ಭಾವದಿಂದ ಇರುತ್ತಿಹುದೆಂಬುದೀಗ ಲಿಂಗಪ್ರಾಣದ ಮೇಲೆ ನಿಂದುದಕ್ಕೆ ಸಾಕ್ಷಿ, ಉರಿಕೊಂಡ ಕರ್ಪುರದಂತೆ, ವಿಷಕೊಂಡ ಘಟದಂತೆ, ಪಟಕೊಂಡ ಸೂತ್ರದಂತೆ, ಸೂರ್ಯಕೊಂಡ ಪ್ರಕಾಶದಂತೆ ಹಾಗಿರಬೇಕು, ಮನ ಲಿಂಗಕೊಂಡ ಮನಕ್ಕೆ ಇದೇ ದೃಷ್ಟ ನಿಃಕಳಂಕಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಗೆ ಎಂಬ ಶಬ್ದಕ್ಕರ್ಥ.

೭೬೧

ಆ ಕಂಡವ ಕೊಯ್ದು ಉಂಡವ ಭಕ್ತ, ಕೊಂಡವ ಮಾಹೇಶ್ವರ. ಕೊಂಡವನ ಕೊಂದು ಕಂಡವ ಕೊಯಿದವ ಪ್ರಸಾದಿ. ಅದರ ಸಂದ ಮುರಿದು

ಆನಂದಿಸಿದವ ಪ್ರಾಣಲಿಂಗಿ. ಆನಂದಿಸಿದವನ ಕೊಂದು ಹಿಂಡೆಯ ಕೂಳನುಂಡವ ಶರಣ ಐಕ್ಯ. ಇದರಂದದ ಐಕ್ಯವ ಹೇಳಾ ನಿಃಕಳಂಕಮಲ್ಲಿಕಾರ್ಜುನಾ ॥೧೦೮॥

**ಟೀಕೆ:—** ಆಚಾರಾಂಗ ಸಂಬಂಧವಾದ ಗಂಧಪದಾರ್ಥವನ್ನು ಆಚಾರ ಲಿಂಗಕ್ಕೆ ಶ್ರದ್ಧಾ ಭಕ್ತಿಯಿಂದ ಅರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಿಹನು ಭಕ್ತನೆಂಬುದೀಗ ಆ ಕಂಡವ ಕೊಯ್ದು ಉಂಡವ ಭಕ್ತನೆಂಬ ಶಬ್ದಕ್ಕರ್ಥ. ಆ ಶ್ರದ್ಧೆಯು ನೈಷ್ಠಿಕೆಯು ಲೊಳಕೊಂಡು ಗುರುಲಿಂಗಕ್ಕೆ ರಸ ಪದಾರ್ಥವನ್ನು ನೈಷ್ಠಿಕಾಭಕ್ತಿಯಿಂದರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಿಹನು ಮಾಹೇಶ್ವರನೆಂಬುದೀಗ ಕೊಂಡವ ಮಾಹೇಶ್ವರನೆಂಬ ಶಬ್ದಕ್ಕರ್ಥ. ಆ ನೈಷ್ಠಿಕೆಯುನ್ನು ಸಾವಧಾನದಲ್ಲೊಳಗೊಂಡು ರೂಪು ಪದಾರ್ಥವನ್ನು ಸಾವಧಾನ ಭಕ್ತಿಯಿಂದ ಲಿಂಗಕ್ಕರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಿಹನು ಪ್ರಸಾದಿ ಎಂಬುದೀಗ ಕೊಂಡವನ ಕೊಂದು ಕಂಡವ ಕೊಯಿದವ ಪ್ರಸಾದಿ ಎಂಬ ಶಬ್ದಕ್ಕರ್ಥ. ಆ ಸಾವಧಾನವನ್ನು ಅನುಭಾವದಲೊಳಕೊಂಡು ನೀನಾನೆಂಬ ದ್ವೈತ ವಳಿದು ಸ್ಪರ್ಶನ ಪದಾರ್ಥವನ್ನು ಚೈತನ್ಯ ಸ್ವರೂಪವಾದ ಜಂಗಮ ಲಿಂಗಕ್ಕೆ ಅನುಭಾವ ಭಕ್ತಿಯಿಂದರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಹನು ಪ್ರಾಣಲಿಂಗಿ ಎಂಬುದೀಗ ಆದರ ಸಂದ ಮುರಿದು ಆನಂದಿಸಿದವ ಪ್ರಾಣಲಿಂಗಿ ಎಂಬ ಶಬ್ದಕ್ಕರ್ಥ. ಆ ಅನುಭಾವ ಭಕ್ತಿಯನ್ನು ಆನಂದ ಭಕ್ತಿಯಲೊಳಕೊಂಡ ಶಬ್ದ ಪದಾರ್ಥವನ್ನು ಆನಂದ ಭಕ್ತಿಯಿಂದ ಪ್ರಸಾದ ಲಿಂಗಕ್ಕರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಿಹನು ಶರಣನೆಂಬುದೀಗ ಆನಂದಿಸಿದವನ ಕೊಂದು ಹಿಂಡೆಯ ಕೂಳನುಂಡವ ಶರಣನೆಂಬ ಶಬ್ದಕ್ಕರ್ಥ. ಆ ಅನಂದ ಭಕ್ತಿಯನ್ನು ಸಮರಸ ಭಕ್ತಿಯಲೊಳಕೊಂಡಿದ್ದ ಮಹಾಘನಲಿಂಗೈಕ್ಯನು ಪರಿಣಾಮ ಪದಾರ್ಥವಸಮರಸ ಭಕ್ತಿಯಿಂ ಮಹಾಘನ ಲಿಂಗಕ್ಕರ್ಪಿಸಿ ಆ ಪ್ರಸಾದವ ಸ್ವೀಕರಿಸುತ್ತಿಹನು ಐಕ್ಯನೆಂಬ ಶಬ್ದಕ್ಕರ್ಥ. ಇಂತಪ್ಪ ಷಟ್ಸ್ಥಲ ಮಾರ್ಗವಿಡಿದು ಆಚರಿಸಿ ಮಹಾಘನ ಲಿಂಗದಲ್ಲಿ ಸಮರಸ ಐಕ್ಯವನೈದುವ ಲಿಂಗೈಕ್ಯವ ಕೃಪೆಮಾಡೆಂದು ಬಿನ್ನೈಸುತ್ತಿರ್ದ ಶಿಷ್ಯನೆಂಬುದೀಗ ಇದರಂದದ ಐಕ್ಯವ ಹೇಳಾ ನಿಃಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೨

ಇರುವೆ ಆನೆಯ ನುಂಗಿತ್ತು, ಹೊಟ್ಟೆಗೈಯ್ದದೆ ಮಿಕ್ಕವರ ನುಂಗಿತ್ತು. ಮತ್ತೊಂದು ಗಜ ಒತ್ತಿಬರಲಾಗಿ ಕಚ್ಚಿತ್ತು. ಕಚ್ಚಿದ ವಿಷ ತಾಗಿ ಮತ್ತನಾಗಿ ಬಿದ್ದಿತ್ತು. ನಾಗಾಲಡಿಯಾಗಿ ಆನೆಯದೆ. ತಾನುಳಿದಪರಿಯ ನೋಡಾ, ಈ ವಸ್ತುವನಿನ್ನೇನೆಂಬೆ ನಿಃಕಳಂಕಮಲ್ಲಿಕಾರ್ಜುನಾ ॥ ೧೦೯ ॥

**ಟೀಕೆ:—** ಚಿತ್ ಸ್ವರೂಪನಾದ ಶರಣನ ನಿಜಾಂತರಂಗದಲ್ಲಿ ಉದಯವಾದ ಪರಿಪೂರ್ಣ ಜ್ಞಾನಪ್ರಕಾಶ ನಾನೆಂಬ ಅಹಂಕಾರವನ್ನು ಅವಗ್ರಹಿಸಿತ್ತೆಂಬುದೀಗ

ಇರುವೆ ಆನೆಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನವು ತನ್ನ ಚಿದ್ಗರ್ಭಕ್ಕೈದದೆ ಸಕಲಕರಣಂಗಳನವಗ್ರಹಿಸಿತ್ತೆಂಬುದೀಗ ಹೊಟ್ಟೆಗೈಯ್ದದೆ ಮಿಕ್ಕವರ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವೆಂಬ ಗಜವು ತನ್ನನವಗ್ರಹಿಸಬೇಕೆಂಬ ತುರೀಯಾವಸ್ಥೆಯಿಂದ ಬರುತ್ತಿರಲು ಆ ಪರಿಪೂರ್ಣ ಜ್ಞಾನವನ್ನು ಅವಗ್ರಹಿಸಿತ್ತೆಂಬುದೀಗ ಮತ್ತೊಂದು ಗಜವು ಒತ್ತಿ ಬರಲಾಗಿ ಕಚ್ಚಿತ್ತು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನವು ಚಿದಹಂಕಾರ ಸ್ವರೂಪವಾದ ಶರಣನ ಅವಗ್ರಹಿಸಲು ಅಜ್ಞಾನಾಮೃತ ರಸವು ಶರಣನ ಸರ್ವಾಂಗದಲ್ಲಿ ದಷ್ಟವಾಗಲು ಮಹಾಘನಲಿಂಗದಲ್ಲಿ ಪರಮಕಾಷ್ಠೆಯನೈದಿದನೆಂಬುದೀಗ ಕಚ್ಚಿದ ವಿಷತಾಗಿ ಮತ್ತನಾಗಿ ಬಿದ್ದಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪನಾದ ಶರಣನ ಚತುರ್ವಿಧ ಭಕ್ತಿಗಳು ಪರಶಿವಲಿಂಗದಲ್ಲಿ ನಿಷ್ಪತ್ತಿಯನೈದಿದವೆಂಬುದೀಗ ನಾಗಾಲಡಿಯಾಗಿ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಭಕ್ತಿಯನೊಳಕೊಂಡು ಮಹಾಘನಲಿಂಗ ಒಂದೇ ಪ್ರಕಾಶಿಸುತ್ತಿಹುದೆಂಬುದೀಗ ಆನೆಯುದೆ, ತಾನುಳಿದ ಪರಿಯ ನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಪರಬ್ರಹ್ಮವ ಸಾಕಾರ ನಿರಾಕಾರವೆಂದು ಶ್ರುತಜ್ಞಾನಕ್ಕೆ ತಂದು ಹೇಳಲಿಲ್ಲವೆಂಬುದೀಗ ಈ ವಸ್ತುವನಿನ್ನೇನೆಂಬೆ ನಿಃಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೩

ಈರೇಳುಭುವನವಳೆಯ ಮಧ್ಯದಲ್ಲಿ ಹುಟ್ಟಿತ್ತೊಂದು ಚಿತ್ರ. ಅದನೇನ ಹೇಳುವೆ! ಕಣ್ಣಿಂಗೆ ರೂಪಿಲ್ಲ. ಕೈಗೆ ಹಿಡಿ ಇಲ್ಲ. ನೆನವುದಕ್ಕಗೋಚರವಾಗಿ ನಿಂದುದು[೧] ಸುಳಿ ಇತ್ತು ನೋಡಾ. ಆ ಸುಳುವಿನ ಮರೆಯಲ್ಲಿ ಬಂದು ಹಿಡಿಯಲಾಗಿ ಕೂಸು ಸತ್ತು, ಅತ್ತ ನೀರಿನಲ್ಲಿ ಮುಕ್ತಿ ಎಂಬವಳು ಹುಟ್ಟಿದಳು. ಮುಕ್ತಿಯ ಬಸುರಲ್ಲಿ ಸತ್ತವರೆಲ್ಲ ಐದಾರೆ. ಹೊತ್ತು ಹೋಗಿ ಕರೆಯಲಾಗಿ ನಿಶ್ಚಟದ ಅಲಗ ಹಿಡಿದು ಕುತ್ತಿದರಯ್ಯಾ ಹೊಟ್ಟೆ ಹರಿಯ. ಕುತ್ತಿದ ಬಾಯಲ್ಲಿ ಕೂಳುಸುರಿದು ಸತ್ತವರೆಲ್ಲಾ ಉಂಟಾದರು. ಅವರಿಗಿನ್ನೆತ್ತಣ ಮುಕ್ತಿ ನಿಃಕಳಂಕಮಲ್ಲಿಕಾರ್ಜುನಾ ॥ ೧೧೦ ॥

ಟೀಕೆ:— ಚತುರ್ದಶ ಭುವನಂಗಳ ಮಧ್ಯದಲ್ಲಿ ಅಖಂಡ ಗೋಳಕಾಕಾರ ತೇಜೋಮೂರ್ತಿಯಾದ ಮಹಾ ಘನಲಿಂಗವು ಉದಯವಾಯಿತ್ತೆಂಬುದೀಗ ಈರೇಳು ಭುವನವಳೆಯ ಮಧ್ಯದಲ್ಲಿ ಹುಟ್ಟಿತ್ತೊಂದು ಚಿತ್ರ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಘನ ಲಿಂಗದ ನಿಜಸ್ವರೂಪವ ವಂಚಿಸಿ ನುಡಿಯಬಾರದೆಂಬುದೀಗ

---

೧. ನಿಂದು (ಬ)

ಅದನೇನ ಹೇಳುವೆ ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮವು ಸಾಕಾರ ದೃಷ್ಟಿಗೆ ಕಾಣಿಸದೆಂಬುದೀಗ ಕಣ್ಣಿಗೆ ರೂಪಿಲ್ಲ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಸಂಕಲ್ಪ ಹಸ್ತಕ್ಕೆ ಅಸಾಧ್ಯವೆಂಬುದೀಗ ಕೈಗೆ ಹಿಡಿ ಇಲ್ಲ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಶರಣನ ಉನ್ಮನಿ ನೆನಹಿನಲ್ಲಿ ಚಿತ್ಪ್ರಕಾಶಮಯವಾಗಿ ತೋರುತ್ತಿಹುದೆಂಬುದೀಗ ನೆನವುದಕ್ಕೆ ಅಗೋಚರವಾಗಿ ನಿಂದುದು ಸುಳಿ ಇತ್ತು ನೋಡಾ ಎಂಬ ಶಬ್ದಕ್ಕರ್ಥ. ಅಂತು ಅಭಿನ್ನ ಕ್ರಿಯಾಚಾರದ ಸಮರಸದಲ್ಲಿ ಬಂದು ಆ ಪರಬ್ರಹ್ಮವು ಉನ್ಮನೀತತ್ವ ಸ್ವರೂಪವಾದ ಮದವನವಗ್ರಹಿಸಿತ್ತೆಂಬುದೀಗ ಆ ಸುಳುವಿನ ಮರೆಯಲ್ಲಿ ಬಂದು ಹಿಡಿಯಲಾಗಿ ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ರೂಪವಾದ ಪರಬ್ರಹ್ಮವೇ ಆಯಿತ್ತೆಂಬುದೀಗ ಕೂಸು ಸತ್ತು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಸಮರಸವಾದ ಮನಸ್ಸು ಶಿವೋಹಂ ಭಾವದಿಂದ ಪರಮಾನಂದ ಜಲ ಉದಯವಾಯಿತ್ತೆಂಬುದೀಗ ಅತ್ತ ನೀರಿನಲ್ಲಿ ಎಂಬ ಶಬ್ದಕ್ಕರ್ಥ, ಆ ಪರಮಾನಂದ ಸ್ವರೂಪವಾದ ಸದ್ವಿವೇಕ ಜಲದಲ್ಲಿ ಮುಕ್ತಿ ಸ್ವರೂಪವಾದ ಭಕ್ತ್ಯಾಂಗನೆ ಉದಯವಾದಳೆಂಬುದೀಗ ಅತ್ತ ನೀರಿನಲ್ಲಿ ಮುಕ್ತಿ ಎಂಬುವಳು ಹುಟ್ಟಿದಳು ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತ್ಯಾಂಗನೆಯು ಚಿದ್ಗರ್ಭದಲ್ಲಿದ್ದ ಚಿದ್ಘನ ಲಿಂಗದಲ್ಲಿ ಸಮರಸವಾದ ಶರಣರೆಲ್ಲರು ನಿತ್ಯಸ್ವರೂಪರಾದರೆಂಬುದೀಗ ಮುಕ್ತಿಯ ಬಸುರಲ್ಲಿ ಸತ್ತವರೆಲ್ಲ ಐದಾರೆ ಎಂಬ ಶಬ್ದಕ್ಕರ್ಥ. ಇಂತು ಸರ್ವಾಂಗದಲ್ಲಿ ಮಹಾ ಘನಲಿಂಗವ ಧರಿಸಿ ಅಭಿನ್ನಕ್ರಿಯಾಚಾರವಿಡಿದು ಆಚರಿಸುತ್ತಿಪ್ಪ ಶರಣರು ಶಿವೋಹಂ ಎಂದೆನುತ್ತಿದ್ದರೆಂಬುದೀಗ ಹೊತ್ತು ಹೋಗಿ ಕರೆಯಲಾಗಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಸುಜ್ಞಾನಪ್ರಕಾಶವೆಂಬ ಅಲಗಕೃತ ನಿಶ್ಚಯವೆಂಬ ಹಸ್ತದಲ್ಲಿ ದೃಢವಿಡಿದನೆಂಬುದೀಗ ನಿಶ್ಚಟದ ಅಲಗ ಹಿಡಿನು ಎಂಬ ಶಬ್ದಕ್ಕರ್ಥ. ಆ ಸುಜ್ಞಾನಶಸ್ತ್ರದಿಂದ ಶರಣನು ಸಕಲ ಶರಣಂಗಳ ವರ್ತನೆಯ ಸಂಹರಿಸಿದನೆಂಬುದೀಗ ಕುತ್ತಿದರಯ್ಯಾ ಹೊಟ್ಟೆ ಹರಿಯ ಎಂಬ ಶಬ್ದಕ್ಕರ್ಥ. ಆ ಶಿವಜ್ಞಾನದ ಪ್ರಕಾಶದ ಶಿವಾಪೇಕ್ಷೆಯಲ್ಲಿ ಉಳುಹೆಯ ಸ್ವರೂಪವಾದ ಪರಶಿವತತ್ವ ಪ್ರಸಾದವು ಪ್ರತ್ಯಕ್ಷವಾಗಲು ಅಮರಗಣತ್ವವನೈದಿದ ಸಕಲ ಕರಣಂಗಳೆಲ್ಲವು ಆ ಪ್ರಸಾದ ಸೇವನೆಯಿಂದ ಲಿಂಗಸುಖಿಗಳಾಗಿರುತ್ತಿಹರೆಂಬುದೀಗ ಕುತ್ತಿದ ಬಾಯಲ್ಲಿ ಕೂಳು ಸುರಿದು ಸತ್ತವರೆಲ್ಲ ಉಂಟಾದರು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳನ್ನೆಲ್ಲ ಚಿದ್ಘನಲಿಂಗದಲ್ಲಿ ಏಕಾರ್ಥವ ಮಾಡಿ ನಿತ್ಯಸ್ವರೂಪವಾಗಿದ್ದ ಶರಣಂಗೆ ಭಿನ್ನಮುಕ್ತಿಯ ಬಯಕೆ ಇಲ್ಲವೆಂಬುದೀಗ ಅವರಿಗಿನ್ನೆತ್ತಣ ಮುಕ್ತಿ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೪

ಈರೇಳು ಲೋಕವ ಕೋಡಗ ನುಂಗಿತ್ತ ಕಂಡೆ. ನುಂಗಿದ ಕೋಡಗವ ಗುಂಗುರು ನುಂಗಿತ್ತು. ಗುಂಗುರು ಬಂದು ಕಣ್ಣ ಕಡಿಯಲಾಗಿ ಕಣ್ಣಿನ ಕಾಡಿಗೆ

ಅಳಿಯಲಾಗಿ ಕಣ್ಣಿನ ಬಣ್ಣ ಕೆಟ್ಟಿತ್ತು. ಕಣ್ಣಿನ ಒಡೆಯ ನೋಡಿ ಆ ಗುಂಗು ರಿವನೊರಸಲಾಗಿ ಆ ಗುಂಗುರಿ ಸತ್ತು ಕೋಡಗ ಉಳಿಯಿತ್ತು. ಆ ಕೋಡಗ ವನಾಡಿಸಿಕೊಂಡುಂಬ ಜೋಗಿಗಳಗೇಕೆ ಆರೂಢನ ಸುದ್ದಿ ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೧ ॥

ಟೀಕೆ:— ಪ್ರಪಂಚರೂಪವಾದ ಮನಸ್ಸು ಚತುರ್ದಶ ಭುವನಂಗಳಲ್ಲಿ ವ್ಯಾಪ್ತಿ ಯೆನ್ನೈದಿರುತ್ತಿಹುದೆಂಬುದೀಗ ಈರೇಳು ಲೋಕವ ಕೋಡಗ ನುಂಗಿತ್ತ ಕಂಡೆನೆಂಬ ಶಬ್ದಕ್ಕರ್ಥ. ಆ ಪ್ರಪಂಚವು ಬ್ರಹ್ಮಾಂಡವನೊಳಕೊಂಡಿಪ್ಪ ಮನಸ್ಸನ್ನು ಸೂಕ್ಷ್ಮ ವಾದ ಮಾಯೆಯು ಅವಗ್ರಹಿಸಿತ್ತೆಂಬುದೀಗ ನುಂಗಿದ ಕೋಡಗವ ಗುಂಗುರು ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮವಾದ ಮಾಯೆ ಅಜ್ಞಾನ ಸ್ವರೂಪ ವಾಗಿ ಬಂದು ಆತ್ಮನ ಸುಜ್ಞಾನ ದೃಷ್ಟಿಯನವಗ್ರಹಿಸಲು ಆ ಶಿವಜ್ಞಾನ ಪ್ರಕಾಶವು ನಷ್ಟವಾಗಿ ಮರವೆಯನ್ನೈದಿತ್ತೆಂಬುದೀಗ ಗುಂಗುರು ಬಂದು ಕಣ್ಣ ಕಡಿಯಲಾಗಿ ಕಣ್ಣಿನ ಕಾಡಿಗೆ ಅಳಿಯಲಾಗಿ ಕಣ್ಣಿನ ಬಣ್ಣ ಕೆಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾ ನಕ್ಕೆ ಕರ್ತೃವಾದ ಜ್ಞಾನ ಕಲಾತ್ಮನು ತನ್ನ ನಿಜವನೆಚ್ಚತ್ತು ನೋಡಲು ಆ ಮಾಯೆ ಅಳಿಯಿತ್ತೆಂಬುದೀಗ ಕಣ್ಣಿನ ಒಡೆಯ ನೋಡಿ ಆ ಗುಂಗುರ ಒರಸಲಾಗಿ ಆ ಗುಂಗುರು ಸತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಮನೋವರ್ತನೆಯ ನಿವೃತ್ತಿಯ ಮಾಡಲರಿಯದೆ, ಮನೋವರ್ತನೆಯನುಂಟುಮಾಡಿಕೊಂಡು ಜೀವರೆ ನಿಸಿ ಆಶಾಲಾಂಛನವ ತೊಟ್ಟು ದೇಹೇಂದ್ರಿಯ ವಿಷಯ ಸುಖವನ್ನು ಅನುಭವಿಸು ತ್ತಿಪ್ಪ ಖಂಡಿತ ಜ್ಞಾನಿಗಳೆಲ್ಲರು ಸರ್ವಾಂಗಲಿಂಗ ಸಂಬಂಧಿಯಾಗಿಪ್ಪ ವೀರ ಮಹೇ ಶ್ವರನ ಚಾರಿತ್ರವು ಅವರಿಗಸಾಧ್ಯವೆಂಬುದೀಗ ಕೋಡಗ ಉಳಿಯಿತ್ತು ಆ ಕೋಡ ಗವನಾಡಿಸಿ ಕೊಂಡುಂಬ ಜೋಗಿಗಳಿಗೇಕೆ ಆರೂಢನ ಸುದ್ದಿ ನಿಃಕಳಂಕ ಮಲ್ಲಿಕಾ ರ್ಜುನಾ ಎಂಬ ಶಬ್ದಕ್ಕರ್ಥ.

೭೬೫

ಉರಿಯ ಗಿರಿಯ ಮೇಲೆ ಬೆಣ್ಣೆಯ ಕೋಣ ಹುಟ್ಟಿ, ಕರ್ಪುರದ ಘಟ್ಟಿ ಸೋಪಾನ ಕಟ್ಟಿತ್ತು. ಅದು ಮಂಜಿನ ನೀರು. ಆ ನೀರು ತುಂಬುವದಕ್ಕೆ ಸುಳಿಲ ಮಡಿಕೆ. ತುಂಬಿ ಹಿಡಿಯುವದಕ್ಕೆ ಕೈ ಇಲ್ಲದೆ ನಡೆಯುವದಕ್ಕೆ ಕಾಲಿ ಲ್ಲದೆ ಮೀರಿ ಹೊರುವುದಕ್ಕೆ ತಲೆ ಇಲ್ಲದೆ ತುಂಬಿ ತರಬೇಕು. ತಂದು ಬಂದು ನಿಂದಲ್ಲಿ ಕಣ್ಣಿಲ್ಲದೆ ನೋಡಿ ಕೈ ಇಲ್ಲದೆ ಮುಟ್ಟಿ, ಬಾಯಿಲ್ಲದೆ ಉಂಟೆ ಅರಿವಿಲ್ಲದ ತೆರದಲ್ಲಿ ಸುಖಿಯಾದ ಐಕ್ಯಂಗೆ ಲಕ್ಷಿಸಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥೧೧೨॥

ಟೀಕೆ:— ಶಿವಜ್ಞಾನ ಸ್ವರೂಪವಾದ ಚಿದಹಂಕಾರದ ಅಗ್ರದಲ್ಲಿ ಎಂಬುದೀಗ ಉರಿಯ ಗಿರಿಯ ಮೇಲೆ ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಸ್ವರೂಪವಾದ

ಚಿದಹಂಕಾರದಗ್ರದಲ್ಲಿ ಶಿವಾನುಭವ ಸನ್ನಿಹಿತವಾದ ಹೃದಯಸರೋವರ ಒಪ್ಪುತ್ತಿಹುದೆಂಬುದೀಗ ಬೆಣ್ಣೆಯ ಕೋಣ ಹುಟ್ಟಿ ಎಂಬ ಶಬ್ದಕ್ಕರ್ಥ. ಅದಕ್ಕೆ ಸ್ವಾನುಭಾವ ಸದ್ವಾಸನ ಸ್ವರೂಪವಾದ ಷಡ್ವಿಧ ಭಕ್ತಿಗಳೇ ಸೋಪಾನವಾಗಿಹುದೆಂಬುದೀಗ ಕರ್ಪುರದ ಘಟ್ಟಿ ಸೋಪಾನ ಕಟ್ಟಿತ್ತು ಎಂಬ ಶಬ್ದಕ್ಕರ್ಥ. ಅಲ್ಲಿ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವೆಂಬುದೀಗ ಅದು ಮಂಜಿನ ನೀರೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲವನ್ನು ಚಿತ್ಸ್ವರೂಪನಾದ ಶರಣ ತನ್ನ ನಿರ್ಮಲವಾದ ಜ್ಞಾನಕಾಯವೆಂಬ ಚಿದ್ಭಾಂಡದಲ್ಲಿ ಅವಿರಳ ಸಂಬಂಧವ ಮಾಡಿದನೆಂಬುದೀಗ ಆ ನೀರು ತುಂಬುವದಕ್ಕೆ ಮಳಲ ಮಡಿಕೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲವ ಚಿದ್ಭಾಂಡದಲ್ಲಿ ಅವಿರಳ ಸಂಬಂಧವ ಮಾಡಿದ ಶರಣಂಗೆ ಭಿನ್ನಹಸ್ತ ನಾಸ್ತಿಯಾಯಿತ್ತೆಂಬುದೀಗ ತುಂಬಿ ಹಿಡಿವುದಕ್ಕೆ ಕೈ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣಂಗೆ ಭಿನ್ನಕ್ರಿಯಾಚಾರ ನಾಸ್ತಿಯಾಯಿತ್ತೆಂಬುದೀಗ ಮಿರಿ ಹೊರುವದಕ್ಕೆ ತಲೆ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡದಲ್ಲಿ ಅವಿರಳ ಸಂಬಂಧವಾಗಿರ್ದ ಪರಮಾನಂದ ಜಲಸ್ವರೂಪವಾದ ಮಹಾ ಘನ ಲಿಂಗವನ್ನು ಶ್ರೀಗುರು ಭಾವ ಮನ ದೃಕ್ಕಿಂಗೆ ತಂದು ಶಿಷ್ಯನ ತನುತ್ರಯದಲ್ಲಿ ಇಷ್ಟ ಪ್ರಾಣ ಭಾವಲಿಂಗವಾಗಿ ಸಂಬಂಧವ ಮಾಡಿದನೆಂಬುದೀಗ ತುಂಬಿ ತರಬೇಕು ತಂದು ಬಂದು ನಿಂದಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ತ್ರಿವಿಧ ಲಿಂಗಕ್ಕೆ ತ್ರಿವಿಧ ಭಕ್ತಿಯ ಮಾಡಿ ಭಿನ್ನಜ್ಞಾನ ದೃಷ್ಟಿ ಇಲ್ಲದೆ ಅಭಿನ್ನಜ್ಞಾನ ದೃಷ್ಟಿಯಿಂದ ನೋಡುತಿರ್ದನೆಂಬುದೀಗ ಕಣ್ಣಿಲ್ಲದೆ ನೋಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ಸ್ವರೂಪನಾದ ಶರಣನು ಭಿನ್ನಹಸ್ತವಿಲ್ಲದೆ ಅಭಿನ್ನಹಸ್ತದಿಂ ಗ್ರಹಿಸುತ್ತಿಹನೆಂಬುದೀಗ ಕೈ ಇಲ್ಲದೆ ಶಿವಾಪೇಕ್ಷೆಯಿಂದ ಶಿವಸುಖ ಪ್ರಸನ್ನ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ ಬಾಯಿಲ್ಲದೆ ಉಂಟೆ ಎಂಬ ಶಬ್ದಕ್ಕರ್ಥ. ಭಿನ್ನಜ್ಞಾನವಿಲ್ಲದ ಪರಿಪೂರ್ಣ ಜ್ಞಾನಿಯಾದ ಶರಣನು ಚಿದ್ಘನ ಲಿಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಅರಿವಿಲ್ಲದ ತೆರದಲ್ಲಿ ಸುಖಿಯಾದ ಐಕ್ಯಂಗೆ ಲಕ್ಷಿಸಲಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ಎಬ ಶಬ್ದಕ್ಕರ್ಥ.

೭೬೬

ಊರೆಲ್ಲರು ಬೇಟೆಗೆ ಹೋಗಿ ಕೊಂದರು ಕಾಡೆಮ್ಮೆಯ ಅದು ಸಂದಿಗೆ ಸಾವಿರ ರೂಪು. ಕೊಂಬಿಗೆ ಹಿಂಗದ ವೆಜ್ಜ. ಅದರಂಗದ ಕಂಗಳು ಕಪ್ಪು. ಅದ ಕೊಂದವರ ತಂದು ಕೂಡಿದೆ ನನ್ನಂಗಳದಲ್ಲಿ. ಆ ಅಂಗಳ ಅವರ ತಿಂದು ನುಂಗಿತ್ತು ಮೂರು ಭುವನವ. ನುಂಗಿದವರ ಕಂಡು ಹಿಂಗಲಾರೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೩ ॥

ಟೀಕೆ:— ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರೆಂಬ ಶರಣ ಸತಿಯರ ಆಚಾರಾದಿ ಮಹಾಲಿಂಗಗಳಲ್ಲಿ ಷಡ್ವಿಧ ಭಕ್ತಿವಿಡಿದಾಚರಿಸುತ್ತ ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ಸಾರಿಯ ಹೂಡಿ ಸುಜ್ಞಾನವೆಂಬ ಸರಳ ತೋಡಿ ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದು ಭವಾರಣ್ಯ ಪ್ರವೇಶಿಯಾಗಿಪ್ಪ ಮಾಯೆಯ ಸಂಹರಿಸಿದರೆಂಬುದೀಗ ಊರೆಲ್ಲರು ಬೇಟೆಗೆ ಹೋಗಿ ಕೊಂದರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಸಂಬಂಧವಾದ ತನುತ್ರಯದಲ್ಲಿ ಚರಿಸುತ್ತಿಪ್ಪ ಕರಣಂಗಳು ಬಹಳವಾದ ಕಾರಣವೆಂಬುದೀಗ ಅದು ಸಂದಿಗೆ ಸಾವಿರ ರೂಪು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಅಹಂಕಾರ ಮಮಕಾರಂಗಳ ಸಂಕಲ್ಪ ಮಾರ್ಗದಲ್ಲಿ ಅನೇಕ ಸೂಕ್ಷ್ಮನಾಳಂಗಳಿರುತ್ತಿಹವೆಂಬುದೀಗ ಕೊಂಬಿಗೆ ಹಿಂಗದ ವೆಜ್ಜವೆಂಬ ಶಬ್ದಕ್ಕರ್ಥ. ಇಂತು ಮಾಯೆ ಸಂಬಂಧವಾದ ದೇಹಭಾವವನುಂಟು ಮಾಡುತ್ತಿಹ ಭಿನ್ನಜ್ಞಾನವು ತಮೋಗುಣ ಸಂಬಂಧವಾಗಿಹುದೆಂಬುದೀಗ ಅದರಂಗದ ಕಂಗಳು ಕಪ್ಪು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಸುಜ್ಞಾನ ಶಸ್ತ್ರದಿಂದ ನಿವೃತ್ತಿ ಮಾಡಿದ ತ್ರಿವಿಧ ಲಿಂಗಾನುಭಾವಿಗಳ ಚಿದ್ರೂಪನಾದ ಶರಣನು ತನ್ನಾಚಾರಾಂಗದಲ್ಲಿ ಅವಗ್ರಹಿಸಿದನೆಂಬುದೀಗ ಆದ ಕೊಂದವರ ತಂದು ಕೂಡಿದೆ ನನ್ನಂಗಳದಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ಆಚಾರವು ತ್ರಿವಿಧ ಲಿಂಗಾನುಭವಿಗಳ ನೊಳಕೊಂಡು ತನುತ್ರಯಂಗಳನವಗ್ರಹಿಸುತ್ತೆಂಬುದೀಗ ಆ ಅಂಗಳ ಅವರ ತಿಂದು ನುಂಗಿತ್ತು ಮೂರು ಭುವನವ ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗದಲ್ಲಿ ಸಮರಸೈಕ್ಯವಾದ ಶಿವಾನುಭಾವಿಗಳ ಶಿವಾನುಭಾವಗೋಷ್ಠಿಯನು ಅಗಲಲಾರದೆ ತತ್ಪರನಾಗಿದ್ದ ಶರಣನೆಂಬುದೀಗ ನುಂಗಿದವರ ಕಂಡು ಹಿಂಗಲಾರೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೭

ಊರೊಳಗಣ ಉಡು ಕೇರಿಯ ನುಂಗಿತ್ತು. ಜಾಗಟೆಯೊಳಗಣ ಧ್ವನಿ ಆ ಜಾಗಟವ ನುಂಗಿತ್ತು. ಸಾರಬಂದ ಧೀರನ ಬಾರಿಕ ಕೊಂದ. ನಾಡು ಹಾಳಾಯಿತ್ತು. ಪಟ್ಟಣ ಸೂರೆಹೋಯಿತ್ತು. ಕಟ್ಟರಸು ಸಿಕ್ಕಿದ. ಪ್ರಧಾನ ತಪ್ಪಿದ. ಎಕ್ಕಟಿಗನ ಮಕ್ಕಳು ಕೆಟ್ಟೋಡಿದರು. ತಪ್ಪಿದ ಪ್ರಧಾನನ ಒಪ್ಪವಿಟ್ಟ ರಾಜ್ಯವ ಸಿಕ್ಕಿದರಸ ಬಿಡಿಸಿ ಎಕ್ಕಟಿಗನ ಮಕ್ಕಳ ಸಂತೈಸಿ ಹಿರಿಯರಸಿನ ಕೈಸೆರೆ ಬಿಡಿಸಿ ತಾ ಕೈಯೊಳಗಾಗಿ ಸಿಕ್ಕಿ ಕೆಟ್ಟ ಪ್ರಧಾನಿ. ಸಿಕ್ಕದೆ ಕೆಟ್ಟ ಅರಸು; ಇವರೆಲ್ಲರು ಕೆಟ್ಟ ಕೇಡ ನೋಡಿ ತಪ್ಪಿದೆನಯ್ಯಾ! ಈ ಮಾಟಕೂಟದ ಕೋಟಲೆಗಂಜಿ ಬಿರಿದ ಬಿಟ್ಟ ಮೇಲೆ ಅಲಗಿನ ಹಂಗೇಕೆ? ನಾಡ ಬಿಟ್ಟು ತೊಲಗಿದವಂಗೆ ಒಂದೂರ ಸುದ್ದಿಯಾಕೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೪ ॥

ಟೀಕೆ:— ಚಿದ್ರೂಪನಾದ ಶರಣನ ನಿಜಾಂತರಂಗದಲ್ಲಿ ಉದಯವಾದ ಸೂಕ್ಷ್ಮವಾದ ಸಮ್ಯಜ್ಞಾನ ಪ್ರಕಾಶವು ಅಷ್ಟತನುವೀಥಿಗಳನವಗ್ರಹಿಸುತ್ತೆಂಬುದೀಗ ಊರೊಳಗಣ ಉಡು ಕೇರಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಜ್ಞಾನ ಸಂಬಂಧವಾದ ದೇಹದ ಮಧ್ಯದಲ್ಲಿ ಹುಟ್ಟಿದ ಶಿವೋಹಂ ಎಂಬ ಪ್ರಣವ ನಾದವು ಆ ದೇಹವನವಗ್ರಹಿಸಿತ್ತೆಂಬುದೀಗ ಜಾಗಟೆದೊಳಗಣ ಧ್ವನಿ ಆ ಜಾಗಟವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಣವನಾದವೇ ಅಂಗವಾಗಿರ್ಪ ಶರಣನ ಮಹಾನುಭಾವಾಂತರಂಗದ ಜ್ಞಾನ ಗುರುವೇ ಕ್ರಿಯಾಘನಗುರುಸ್ವರೂಪವಾಗಿ ಬಂದು ತನು ಮನ ಧನವ ಗುರು ಲಿಂಗ ಜಂಗಮಕ್ಕೆ ಸಮರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿ ನಿಜದಲ್ಲಿ ಸಮರಸೈಕ್ಯವನೈದಿ ಎಂದು ಸುಜ್ಞಾನ ಬೋಧೆಯ ಬೋಧಿಸುತ್ತಿದ್ದನೆಂಬುದೀಗ ಸಾರಬಂದ ಧೀರನ ಎಂಬ ಶಬ್ದಕ್ಕರ್ಥ. ಇಂತು ದೇಹ ಸಂಬಂಧಿಯಾಗಿದ್ದ ಜೀವಂಗೆ ಶಿವ ಜ್ಞಾನವು ತಲೆದೋರೆ ಆ ಶ್ರೀಗುರು ತತ್ವವನವಗ್ರಹಿಸಿದನೆಂಬುದೀಗ ಸಾರಬಂದ ಧೀರನ ಬಾರಿಕ ಕೊಂದನೆಂಬ ಶಬ್ದಕ್ಕರ್ಥ. ಆ ಸಜ್ಜೀವನು ಗುರು ತತ್ವದಲ್ಲಿ ಸಮರಸವಾಗಲು ಸಕಲ ಕರಣಂಗಳ ಶಬ್ದ ಜಾಲಂಗಳಡಗಿ ನಿಶ್ಶಬ್ದವಾಗಲು ಕಾಯಪುರವೆಂಬ ಪಟ್ಟಣದ ಸಕಲ ತತ್ವಕರಣಂಗಳೆಲ್ಲವು ಅಮರಗಣತ್ವವನೆಯ್ದಿ ಚಿದ್ಘನ ಲಿಂಗದಲ್ಲಿ ಬೆರಸಿದ ಶರಣಂಗೆ ತತ್ವಭಾವವಡಗಿತ್ತೆಂಬುದೀಗ ನಾಡು ಹಾಳಾಯಿತ್ತು ಪಟ್ಟಣ ಸೂರೆ ಹೋಯಿತ್ತೆಂಬ ಶಬ್ದಕ್ಕರ್ಥ. ಕಟ್ಟರಸೆಂದೊಡೆ ಪರಮಾತ್ಮನು. ಅಂತಪ್ಪ ಪರಮಾತ್ಮನು ಭಾವಲಿಂಗದಲ್ಲಿ ಏಕಾರ್ಥವಾದನೆಂಬುದೀಗ ಕಟ್ಟರಸು ಸಿಕ್ಕಿದನೆಂಬ ಶಬ್ದಕ್ಕರ್ಥ. ಇಂತಪ್ಪ ಪರಮಾತ್ಮನು ಲಿಂಗದಲ್ಲೇಕಾರ್ಥವಾಗಲು ಸದ್ವಿವೇಕ ಸ್ವರೂಪವಾದ ಮನಸ್ಸು ಸಕಲ ಪ್ರಪಂಚಿಗೆ ವಿಲಕ್ಷಣವಾಯಿತ್ತೆಂಬುದೀಗ ಪ್ರಧಾನ ತಪ್ಪಿದನೆಂಬ ಶಬ್ದಕ್ಕರ್ಥ. ಜೀವಾತ್ಮನಿಂದುದಯಿಸಿದ ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯಗಳ ತ್ರಿವಿಧಾವಸ್ಥೆಯ ದುಶ್ಚಾರಿತ್ರವು ಕೆಟ್ಟಿತ್ತೆಂಬುದೀಗ ಎಕ್ಕಟಿಗನ ಮಕ್ಕಳು ಕೆಟ್ಟೋಡಿದರು ಎಂಬ ಶಬ್ದಕ್ಕರ್ಥ. ಸಕಲ ಪ್ರಪಂಚಿಗೆ ವಿಲಕ್ಷಣವಾದ ಮನಸ್ಸು ಸರ್ವಾಂಗವನ್ನು ಶಿವಭಾವದಿಂದ ಲಿಂಗದಲ್ಲಿ ಏಕಾರ್ಥವ ಮಾಡಿತ್ತೆಂಬುದೀಗ ತಪ್ಪಿದ ಪ್ರಧಾನನ ಒಪ್ಪವಿಟ್ಟ ರಾಜ್ಯವ ಎಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತಿನಲ್ಲಿ ಸಿಲ್ಕಿ ಕ್ರಿಯೆಪರವಾಗಿ ಆಚರಿಸುವ ಶರಣಂಗೆ ಆ ಮನಸ್ಸು ಸದ್ವಿವೇಕಮುಖದಿಂದ ಜ್ಞಾನವ ಪ್ರಭಾವಿಸಿ ಕೊಟ್ಟು ಮೀರಿದ ಕ್ರಿಯಾಚಾರದಲ್ಲಿ ನಿಲಿಸಿತ್ತೆಂಬುದೀಗ ಸಿಕ್ಕಿದರಸ ಬಿಡಿಸಿ ಎಂಬ ಶಬ್ದಕ್ಕರ್ಥ. ಆ ಶಿವಭಾವ ಘಟಿಸಿದ ಸಜ್ಜೀವನು ಸಕಲ ಕರಣಂಗಳ ಸುಜ್ಞಾನ ಮುಖದಿಂದ ಸಂತೈಸಿ ಚಿದ್ಘನ ಲಿಂಗದಲ್ಲಿ ಒಡಗೂಡಿತ್ತಿಹುದೆಂಬುದೀಗ ಎಕ್ಕಟಿಗನ ಮಕ್ಕಳು ಸಂತೈಸಿ ಎಂಬ ಶಬ್ದಕ್ಕರ್ಥ. ಸದ್ಭಾವಸನ್ನಿಹಿತವಾದ ಪರಮಾತ್ಮನು ಮಹಾ ಘನ ಲಿಂಗದಲ್ಲಿ ಸಮರಸೈಕ್ಯವಹ ಭೇದವನರುಹಿ ಕೊಟ್ಟಿತ್ತು ಮನಸ್ಸೆಂಬುದೀಗ ಹಿರಿಯರಸಿನ

ಕೈಸೆರೆಯು ಬಿಡಿಸಿ ಎಂಬ ಶಬ್ದಕ್ಕರ್ಥ. ಆ ಉನ್ಮನೀತತ್ವ ಸ್ವರೂಪವಾದ ಮನಸ್ಸು ಸದ್ಭಾವಲಿಂಗದಲ್ಲಿ ಸಮರಸವನೈದಿ ನಿಷ್ಪತ್ತಿಯಾಯಿತ್ತೆಂಬುದೀಗ ತಾ ಕೈಯೊಳಗಾಗಿ ಸಿಕ್ಕಿ ಕೆಟ್ಟ ಪ್ರಧಾನಿ ಎಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಸಮರಸವಾಗಿದ್ದ ಶರಣನು ಭಿನ್ನಕ್ರಿಯಾಚಾರ ಮೊದಲಾದ ಸಕಲ ಪ್ರಪಂಚಿಗೆ ಸಿಲುಕದೆ ಚಿದ್ಘನ ಲಿಂಗದಲ್ಲಿ ತದ್ಗತವಾದನೆಂಬುದೀಗ ಸಿಕ್ಕದೆ ಕೆಟ್ಟ ಅರಸು ಎಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತುವಿಡಿದಾಚರಿಸುತ್ತಿದ್ದ ಶರಣನ ಸಕಲ ತತ್ವಕರಣಂಗಳೆಲ್ಲವು ಲಿಂಗತತ್ವವಾಗಿ ಸಮರಸೈಕ್ಯವಾದ ಭೇದವ ಸುಜ್ಞಾನ ದೃಷ್ಟಿಯಿಂದ ಕಂಡು ಎರಡಿಟ್ಟು ಮಾಡುವ ತ್ರಿವಿಧ ಭಕ್ತಿಗಳಿಂದ ಫಲಪದಂಗಳುಂಟೆಂದರಿದು ಅವ ನಿವೃತ್ತಿ ಮಾಡಿದನೆಂಬುದೀಗ ಇವರೆಲ್ಲರು ಕೆಟ್ಟ ಕೇಡ ನೋಡಿ ತಪ್ಪಿದೆನಯ್ಯಾ ಎಂಬ ಶಬ್ದಕ್ಕರ್ಥ. ಬರಿದ ಬಿಟ್ಟ ಬಂಟಂಗೆ ಅಲಗ ಹಿಡಿದು ಕಾದಲಿಲ್ಲದ ಹಾಗೆ ನಾಡ ಬಿಟ್ಟವಂಗೆ ಒಂದೂರ ಸುದ್ದಿಯು ಕೇಳಲಿಲ್ಲನೆಂಬ ದೃಷ್ಟಾಂತದಂತೆ ಕ್ರಿಯಾಚಾರವಿಡಿದಾಚರಿಸಲಿಲ್ಲವೆಂಬುದೀಗ ಈ ಮಾಟದ ಕೂಟದ ಹೋರಾಟಕ್ಕಂಜಿ ಬರಿದ ಬಿಟ್ಟವೇಲೆ ಅಲಗಿನ ಹಂಗೇಕೆ ನಾಡಬಿಟ್ಟು ತೊಲಗಿದವಂಗೆ ಒಂದೂರ ಸುದ್ದಿಯಾಕೆ ? ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೮

ಏರಿ ನೀರು ಕುಡಿಯಿತ್ತು. ಬೇರು ಬೀಜವ ನುಂಗಿತ್ತು. ಆರೈಕೆಯ ಮಾಡುವ ತಾಯಿ ಧಾರುಣಿಯಲ್ಲಿ ಕೊರಳ ಕೊಯ್ದಳು. ಮಗುವು ಸತ್ತು ಆ ಕೊರಳು ಬಿಡದು ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೫ ॥

ಟೀಕೆ:– ಚಿತ್ಸ್ವರೂಪನಾದ ಶರಣನ ಆಚಾರಾಂಗದಲ್ಲಿ ಪರಮಾನಂದ ಜಲವು ತುಂಬಿತ್ತೆಂಬುದೀಗ ಏರಿ ನೀರು ಕುಡಿಯಿತ್ತೆಂಬ ಶಬ್ದಕ್ಕರ್ಥ. ಅಂತು ಪರಮಾನಂದ ಜಲವನೊಳಕೊಂಡ ಶರಣನ ಬೇರೆಂದಡೆ ಮೂಲ ಜ್ಞಾನ ಪ್ರಕಾಶ, ಬೀಜವೆಂದಡೆ ಸಕಲ ತತ್ವಂಗಳಿಗೆ ಕಾರಣವಾದ ಮಹಾ ಘನಲಿಂಗ, ಅಂತಪ್ಪ ಮಹಾ ಘನಲಿಂಗವ ಆ ಮೂಲ ಜ್ಞಾನಪ್ರಕಾಶವು ಅವಗ್ರಹಿಸಿತ್ತೆಂಬುದೀಗ ಬೇರು ಬೀಜವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಮೂಲ ಪ್ರಕಾಶವ ಅವಗ್ರಹಿಸಲು ಸಕಲ ಪ್ರಪಂಚವ ನಿವೃತ್ತಿ ಮಾಡಿ ಲಿಂಗಾಂಗ ಸಂಬಂಧದ ಭಕ್ತಿಯೋಗವ ತೋರಿ ರಕ್ಷಿಸುತ್ತಿದ್ದ ಚಿದ್ರೂಪನಾದ ಶ್ರೀಗುರು, ದೇಹ ಸಂಬಂಧಿಯಾಗಿದ್ದ ಆತ್ಮನ ಅದೃಢ ಕಂಠವ ಛೇದಿಸಿ ದೃಢಭಾವವ ನೆಲೆಗೊಳಿಸಿದನೆಂಬುದೀಗ ಆರೈಕೆ ಮಾಡುವ ತಾಯಿ ಧಾರುಣಿಯಲ್ಲಿ ಕೊರಳ ಕೊಯ್ದಳು ಎಂಬ ಶಬ್ದಕ್ಕರ್ಥ. ಇಂತು ಶರಣನ ಮನೋವೃತ್ತಿಗೆ ಎಳೆದು ಉನ್ಮನೀ ತತ್ವಸ್ವರೂಪವನೈದಿ ಶಿವೋಽಹಂ ಎನ್ನುತ್ತಿಹುದೆಂಬುದೀಗ ಮಗು ಸತ್ತು ಕೊರಳು ಬಿಡದು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೬೯

ಒಪ್ಪದ ಕಪ್ಪೆ ಸರ್ಪನ ನುಂಗಿತ್ತ ಕಂಡೆ. ತುಪ್ಪುಳು ಬಾರದ ಮರಿ ಹೆತ್ತ ತಾಯ ನುಂಗಿತ್ತ ಕಂಡೆ. ಕೊಂಬಿನ ಮೇಲಣ ಕೋಡಗವ ಕೊಂಬು ನುಂಗಿತ್ತು ನೋಡಾ. ಬೀಸಿದ ಬಲೆಯ ಮತ್ಸ್ಯಗ್ರಾಸವ ಕೊಂಡಿತ್ತು ನೋಡಾ. ಅರಿದಿಹೆನೆಂಬ ಅರಿವ ಮರೆದಿಹೆನೆಂಬ ಮರವೆಯ ಕಳೆದುಳಿವ ಪರಿ ಇನ್ನೆಂತೋ? ಅರಿವುದೆ ಮರವೆ, ಮರೆವುದೆ ಅರಿವು. ಅರಿವು ಮರವೆಯುಳ್ಳನ್ನಕ್ಕ ಕುರಿತು ಮಾಡುವದೇನೋ ? ಕುರುಹಿಂಗೆ ನಷ್ಟ. ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೇ ಭ್ರಮೆ. ಆರೆಂಬುದ ತಿಳಿದಲ್ಲಿ ಕೂಡಿದ ಕೂಟಕ್ಕೆ ಒಳಗಲ್ಲ ಹೊರಗಲ್ಲ ನಿಃಕಳಂಕ ಮಲ್ಲಿಕಾರ್ಜುನಾ ‖ ೧೧೬ ‖

ಟೀಕೆ:— ಸಹಸ್ರದಳ ಕಮಲ ಕರ್ಣಿಕಾ ಮಧ್ಯದಲ್ಲಿ ಮಹದೈಶ್ವರ್ಯದಿಂದೊಪ್ಪುತ್ತಿರ್ದ ಚಿದ್ಬಿಂದುವೆಂಬುದೀಗ ಒಪ್ಪದ ಕಪ್ಪೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮ ಶಾಂತಿಯ ಚಿದ್ಬಿಂದುವೆ ಶ್ರೀಗುರು ಮುಖದಿಂದಿಷ್ಟಲಿಂಗ ಸ್ವರೂಪವಾಗಿ ಬಂದು ಶಂಕಾವಿಷಸಂಬಂಧಿಯಾದ ಜೀವನವಗ್ರಹಿಸಿತ್ತೆಂಬುದೀಗ ಸರ್ಪನ ನುಂಗಿತ್ತ ಕಂಡೆನೆಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚು ತೋರದ ಚಿದಂಶಿಕನಾದ ಜ್ಞಾನಕಲಾತ್ಮನು ತನಗೆ ಮಾತೃಸ್ಥಾನವಾದ ಚಿಚ್ಛಕ್ತಿಯುನವಗ್ರಹಿಸಿತ್ತೆಂಬುದೀಗ ತುಪ್ಪಳು ಬಾರದ ಮರಿ ಹೆತ್ತ ತಾಯ ನುಂಗಿತ್ತ ಕಂಡೆನೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಶಿವಭಾವದಲ್ಲಿರ್ಪ ಮನಸ್ಸನ್ನು ಆ ಶಿವಭಾವವೆ ಅವಗ್ರಹಿಸಿತ್ತೆಂಬುದೀಗ ಕೊಂಬಿನ ಮೇಲಣ ಕೋಡಗವ ಕೊಂಬು ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಭಕ್ತಿ ಪಾಶದಲ್ಲಿ ವಶೀಕೃತವಾಗಿರ್ದ ಪರಮಾತ್ಮನು ಸಕಲ ಪದಾರ್ಥವನ್ನು ಮಹಾ ಘನ ಲಿಂಗ ಮುಖದಲ್ಲರ್ಪಿಸಿ ಲಿಂಗ ಭೋಗೋಪ ಭೋಗಿಯಾಗಿರ್ದನೆಂಬುದೀಗ ಬೀಸಿದ ಬಲೆಯ ಮತ್ಸ್ಯಗ್ರಾಸವ ಕೊಂಡಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವಾದ್ವೈತ ಭಕ್ತಿ ಮಾರ್ಗವನರಿಯದೆ ಲಿಂಗವ ಭಿನ್ನವಿಟ್ಟರಿಯಬೇಕೆಂಬರಿವನು ಆ ಅರಿವಿನಿಂದ ಮರೆದಿಹೆನೆಂಬ ಮರವೆಯುನು ಈ ಅರಿವು ಮರವೆಯನುಳ್ಳ ಜ್ಞಾನದಲ್ಲಿ ಕೂಡಿರ್ದು ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಅರಿದಿಹೆನೆಂದೊಡೆ ಅಲ್ಲಿ ಪ್ರಯೋಜನವಿಲ್ಲವೆಂಬುದೀಗ ಅರಿದಿಹೆನೆಂಬ ಅರಿವ ಮರೆದಿಹೆನೆಂಬ ಮರವೆಯ ಕಳೆದುಳಿವ ಪರಿ ಇನ್ನೇಕೋ ? ಅರಿವುದೆ ಮರವೆ, ಮರೆವುದೆ ಅರಿವು, ಅರಿವು ಮರವೆಯುಳ್ಳನ್ನಕ್ಕ ಕುರಿತು ಮಾಡುವದೇನೋ ಎಂಬ ಶಬ್ದಕ್ಕರ್ಥ. ತನ್ನ ನಿಜ ಸ್ವರೂಪವನರಿತೆನೆಂಬುದೀಗ ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೇ ಭ್ರಮೆ ಎಂಬ ಶಬ್ದಕ್ಕರ್ಥ. ತಾನಾರೆಂಬ ವಿವೇಕ ತನ್ನಲ್ಲಿ ತಲೆದೋರಿ ಲಿಂಗಾಂಗ ಸಂಬಂಧ ಘಟಿಸಿದ ಶರಣನು ಭಿನ್ನಕ್ರಿಯೆಯುನಾಚರಿಸಿ ಫಲಪದಂಗಳಿಗೊಳಗಾಗದೆ,

ಮಹಾ ಘನಲಿಂಗ ಪದದಲ್ಲಿ ಭಿನ್ನವಿಲ್ಲದೆ ಅವಿರಳ ಸಂಬಂಧಿಯಾಗಿರುತ್ತಿಹನೆಂಬುದೀಗ ಆರೆಂಬುದ ತಿಳಿದಲ್ಲಿ ಕೂಡಿದ ಕೂಟಕ್ಕೆ ಒಳಗಲ್ಲ ಹೊರಗಲ್ಲ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೦

ಒಳಲೆಯಲಟ್ಟಿದ ಹಾಲ ಆ ಮಗುವಿನ ತಳದ ಏಣರೆ ಕುಡಿಯಿತ್ತು. ಬೆಟ್ಟನಲ್ಲಿಕ್ಕಿದ ತುಪ್ಪವ ಆ ಮಗುವಿನ ಪಿಟ್ಟವೆ ತಿಂದಿತ್ತು. ಮಥನದ ಮಂಥನವ ಬೆಣ್ಣೆ ನುಂಗಿತ್ತು. ಬೆಣ್ಣೆಯ ಮಡಕೆಯ ನೊಣ ನುಂಗಿತ್ತು. ನುಂಗಿದ ನೊಣವ ಹಿಂದೆ ಹಿಡಿಯಲಾಗಿ ಉಗಳದು ಬೆಣ್ಣೆಯು, ಕೊಡದು ಮಡಕೆಯು. ಇದರಗಡುತನವ ನೋಡಾ ಅದ ಹಿಡಿದು ಕೊಡಾ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೭ ॥

ಟೀಕೆ:— ಸುಜ್ಞಾನೋದಯವಾಗಿ ಬಂದು ಗುರೂಪಾವಸ್ಥೆಯ ಮಾಡಲು ಆ ಶ್ರೀಗುರು ಶೃತಜ್ಞಾನವ ಶಿಷ್ಯನ ಕರ್ಣದ್ವಾರದಲ್ಲಿ ಬೋಧಿಸಿದನೆಂಬುದೀಗ ಒಳಲೆಯಲಟ್ಟಿದ ಹಾಲ ಎಂಬ ಶಬ್ದಕ್ಕರ್ಥ. ಮಗುವೆಂದೊಡೆ ಜೀವನು. ತಳವೆಂದೊಡೆ ದೇಹ. ಏಣರೆ ಎಂದಡೆ ಸಕಲ ಕರಣಂಗಳು. ಆ ಕರಣಂಗಳ ಮಧ್ಯದಲ್ಲಿ ಆ ಶೃತಜ್ಞಾನಾಮೃತವಡಗಿ ಹೋಯಿತ್ತೆಂಬುದೀಗ ಆ ಮಗುವಿನ ತಳದ ಏಣರೆ ಕುಡಿಯಿತ್ತು ಎಂಬ ಶಬ್ದಕ್ಕರ್ಥ. ಸಂಕಲ್ಪ ಹಸ್ತದಿಂದ ಭಿನ್ನಜ್ಞಾನವಾಸನೆಯ ಸ್ವೀಕರಿಸಿದ ಜೀವನು ಅಧಃಸೃಷ್ಟಿಗೊಳಗಾದನೆಂಬುದೀಗ ಬೆಟ್ಟನಲ್ಲಿಕ್ಕಿದ ತುಪ್ಪವ ಆ ಮಗುವಿನ ಪಿಟ್ಟವೆ ತಿಂದಿತ್ತು ಎಂಬ ಶಬ್ದಕ್ಕರ್ಥ. ಇಂತು ಜೀವನು ಪ್ರಕೃತಿ ಭಾವವನೈಯ್ದಲು ಆ ಶಿವಾನುಭಾವಸನ್ನಹಿತವಾದ ತನುವೆಂಬ ಖಾಂಡವನ್ನು ಸೂಕ್ಷ್ಮವಾದ ಮಾಯೆಯು ಅವಗ್ರಹಿಸಿತ್ತೆಂಬುದೀಗ ಬೆಣ್ಣೆಯ ಮಡಕೆಯ ನೊಣ ನುಂಗಿತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಅವಗ್ರಹಿಸಿದ ಮಾಯೆಯ ನಿವೃತ್ತಿ ಮಾಡಿಹೆನೆಂದು ವಿವೇಕಿಸುತ್ತಿರಲು ಶಿವಾನುಭಾವಸನ್ನಹಿತವಾದ ಚಿದ್ಖಾಂಡವನು ಪ್ರಕೃತಿ ಮಾರ್ಗದಿಂದೊಳಕೊಂಡಿಹುದಲ್ಲದೆ ನಿವೃತ್ತಿ ಮುಖವನೆಯ್ದರೆಂಬುದೀಗ ನುಂಗಿದ ನೊಣವ ಹಿಂದೆ ಹಿಡಿಯಲಾಗಿ ಉಗಳದು ಬೆಣ್ಣೆಯು, ಕೊಡದು ಮಡಕೆಯು ಎಂಬ ಶಬ್ದಕ್ಕರ್ಥ. ಇಂತಪ್ಪ ಮಾಯೆಯು ಅಹಂ ಮಮತೆಯ ಶರಣ ಕಂಡು ಗುರೂಪಾವಸ್ಥೆಯ ಮಾಡಿ ಶ್ರೀಗುರು ಕಾರುಣ್ಯವಂ ಪಡೆದು ಸರ್ವಾಂಗ ಲಿಂಗ ಸಂಬಂಧವಾದಲ್ಲಿ ಮಾಯೆಯಳಿದು ಭಕ್ತ್ಯಾಂಗನೆಯಾಯಿತ್ತೆಂಬುದೀಗ ಇದರಗಡುತನವ ನೋಡಾ ಅದ ಹಿಡಿದು ಕೊಡಾ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೧

ಒಂದು ಬೀಜವ ಬಿತ್ತಿದಡೆ ಮೂರು ಫಲವಾಯಿತ್ತು. ಆ ಫಲ ಬಲಿದು ಬೆಳೆದ ಮತ್ತೆ ಒಂದ ಉದಯದಲ್ಲಿ ಕೊಯಿದೆ. ಒಂದ ಮಧ್ಯಾಹ್ನದಲ್ಲಿ ಕೊಯಿದೆ. ಒಂದ ಹೊತ್ತು ಸಂದ ಮತ್ತೆ ಕೊಯಿದೆ. ಈ ಮೂರರೆಯ ಒಂದು ಮಾಡಿ ಮೆಟ್ಟಿಸಿದೆ- ಭಕ್ತಿ ಜ್ಞಾನ ವೈರಾಗ್ಯವೆಂಬ ಎತ್ತಿನ ಕೈಯಲ್ಲಿ ತುಳಿಸಿ ತೂರಿದೆ ಕೊಂಗವನೆತ್ತಿ. ಅಂಗವೆಂಬ ಹೊಳ್ಳು ಹಾರಿತ್ತು. ಸಂಸಾರ ವೆಂಬ ಜಳ್ಳು ನಿತ್ಯಾನಿತ್ಯ ವಿವೇಕವೆಂಬ ಕೊಳಗವ ಹಿಡಿದೆಳೆಯಲಾಗಿ ನೂರೊಂದು ಕೊಳಗವಾಯಿತ್ತು. ಹೆಡಗೆಗೆ ಅಳವಡಿಸುವಾಗ ಐವತ್ತೊಂದು ಕೊಳಗವಾಯಿತ್ತು. ನಡುಮನೆಯಲ್ಲಿ ಸುರಿವಾಗ ಇಪ್ಪತ್ತೈದು ಕೊಳಗ ವಾಯಿತ್ತು. ಪಡುವಣ ಕೋಣೆಯಲ್ಲಿ ಮಡಗಿರಿಸುವಾಗ ಪಡಿಯ ನೋಡ ಲಾಗಿ ಐಗಳವಾಗಿತ್ತು. ಅದು ಬಿಡುಬಿಸಿಲಿನಲ್ಲಿ ಒಣಗೆ ಪಡಿ ಪುಚ್ಚಕ್ಕೆ ಮೂಗಳ ವಾಯಿತ್ತು. ಆ ಮೂಗಳವ ನಡುವೊರಪಲ್ಲಿ ಸುರಿಯೆ ಪಡಿಗಣಿಸುವಾಗ ಒಕ್ಕುಳವಾಯಿತ್ತು. ಆ ಒಕ್ಕುಳವ ಕುಟ್ಟಿ ಮಿಕ್ಕುದ ಕೇರಿ ಮತ್ತೆ ಅದು ಒಬ್ಬುಳವಾಯಿತ್ತು. ಆ ಒಬ್ಬುಳವ ಕುಡಿಕೆಯಲ್ಲಿ ಹೊಯ್ದು ನಿರುತದಿಂದ ನೋಡೆ ಮೂರು ಮೂನವ ನುಂಗಿ ಒಮ್ಮಾನವಾಯಿತ್ತು. ಒಮ್ಮಾನವನಟ್ಟು ಕುಡಿಕೆಯಲ್ಲಿ ಕುಸುರೆ ಕೂಳೊಡೆದು ಬಾಲಂಗೋಗರವಾಯಿತ್ತು. ಉಂಡವರತ್ತ ನಾನಿತ್ತ ನಿಃಕಳಂಕ ಮಲ್ಲಿಕಾರ್ಜುನಾ ॥ ೧೧೮ ॥

**ಟೀಕೆ:—** ಅನೇಕ ಬ್ರಹ್ಮಾಂಡಗಳಿಗೆ ಕಾರಣವಾದ ನಿರ್ವೀಜ ಸ್ವರೂಪವಾದ ಮಹಾಘನಲಿಂಗವನ್ನು ಶ್ರೀಗುರು ಶಿವಜ್ಞಾನೋದಯವಾದ ಶಿಷ್ಯನ ಆಚಾರಾಂಗ ದಲ್ಲಿ ಸಂಬಂಧವ ಮಾದಿದನೆಂಬುದೀಗ ಒಂದು ಬೀಜವ ಬಿತ್ತಿದಡೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನಲಿಂಗವು ಚಿತ್‌ಸ್ವರೂಪವಾದ ಶರಣನ ತ್ಯಾಗಾಂಗ, ಭೋಗಾಂಗ ಯೋಗಾಂಗದಲ್ಲಿ ಇಷ್ಟ, ಪ್ರಾಣ, ಭಾವಲಿಂಗವಾಗಿ ಪ್ರಭಾವಿಸಿತ್ತೆಂಬುದೀಗ ಮೂರು ಫಲವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ತನುತ್ರಯದಲ್ಲಿ ಸಂಬಂಧವಾದ ತ್ರಿವಿಧ ಲಿಂಗವು ಶರಣನ ತ್ರಿವಿಧ ಭಕ್ತಿಗಳನೊಳಕೊಂಡು ಪ್ರಭಾವಿಸುತ್ತಿಹುದೆಂಬು ದೀಗ ಆ ಫಲ ಬಲಿದು ಬೆಳೆದ ಮತ್ತೆ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟ ಲಿಂಗವನ್ನು ಶರಣನು ತನ್ನ ಅಭಿನ್ನ ಕ್ರಿಯಾಚಾರದಲ್ಲಿ ಅವಗ್ರಹಿಸಿದನೆಂಬುದೀಗ ಒಂದ ಉದಯದಲ್ಲಿ ಕೊಯಿದೆ ಎಂಬ ಶಬ್ದಕ್ಕರ್ಥ. ಆ ಚಿದ್ರೂಪವಾದ ಪ್ರಾಣ ಲಿಂಗವನ್ನು ಚಿತ್‌ಸ್ವರೂಪನಾದ ಶರಣನು ತನ್ನ ಅಭಿನ್ನ ಜ್ಞಾನದಿಂದ ಅವಗ್ರಹಿಸಿದ ನೆಂಬುದೀಗ ಒಂದ ಮಧ್ಯಾಹ್ನದಲ್ಲಿ ಕೊಯಿದೆನೆಂಬ ಶಬ್ದಕ್ಕರ್ಥ. ಆನಂದ ಸ್ವರೂಪ

ವಾದ ತೃಪ್ತಿಲಿಂಗವನ್ನು ಸುಜ್ಞಾನ ಸ್ವರೂಪನಾದ ಶರಣನು ಸಕಲಕರಣಂಗಳು ನಿಷ್ಪತ್ತಿಯಾದ ಅಭಿನ್ನಭಾವದಲ್ಲಿ ಅವಗ್ರಹಿಸಿದನೆಂಬುದೀಗ ಒಂದ ಹೊತ್ತು ಸಂದ ಮುತ್ತೆ ಕೊಯಿದೆನೆಂಬ ಶಬ್ದಕ್ಕರ್ಥ. ಇಂತಪ್ಪ ಇಷ್ಟ, ಪ್ರಾಣ, ಭಾವವೆಂಬ ತ್ರಿವಿಧ ಲಿಂಗಗಳನ್ನು ಶರಣನು ತನ್ನಾಚಾರಂಗದಲ್ಲಿ ಏಕವಮಾಡಿ ಜೀವಾತ್ಮನ ಭಕ್ತಿಯಿಂದ, ಅಂತರಾತ್ಮನ ಜ್ಞಾನದಿಂದ, ಪರಮಾತ್ಮನ ವೈರಾಗ್ಯದಿಂದ ಸತ್ಪಥವಿಡಿದಾಚರಿಸುತ್ತಿಹ ನೆಂಬುದೀಗ ಈ ಮೂರರೆಯು ಒಂದುಮಾಡಿ ಮುಟ್ಟಿಸಿದೆ, ಭಕ್ತಿ, ಜ್ಞಾನ, ವೈರಾಗ್ಯ ವೆಂಬ ಎತ್ತಿನ ಕೈಯಲ್ಲಿ ಎಂಬ ಶಬ್ದಕ್ಕರ್ಥ. ಇಂತು ಸದ್ಭಾವವಿಡಿದು ಆಚರಿಸುತ್ತಿ ರಲು ದೇಹದ ಅನಿತ್ಯಭಾವವು ತೊಲಗಿ ಸಂಸಾರ ವಿಷಯ ಪ್ರಪಂಚೆಂಬ ಜಳ್ಳು ನಿವೃತ್ತಿಯಾಗಿ ಎರಡೂ ನಷ್ಟವಾದವೆಂಬುದೀಗ ತುಳಿಸಿ ತೂರಿದೆ ಕೊಂಗವನೆತ್ತಿ ಅಂಗ ವೆಂಬ ಹೊಳ್ಳು ಹಾರಿತ್ತು (ಸಂಸಾರವೆಂಬ ಜಳ್ಳು) ಎಂಬ ಶಬ್ದಕ್ಕರ್ಥ. ಅಂತಪ್ಪ ಅನಿತ್ಯವಾದ ಸಂಸಾರ ಮಾಯಾ ಪ್ರಪಂಚನ ನಿವೃತ್ತಿ ಮಾಡಿ ನಿತ್ಯವಾದ ಪದ ಬ್ರಹ್ಮ ವನ್ನು ಅವಗ್ರಹಿಸಲ್ಪಟ್ಟ ಸದ್ವಿವೇಕವೆಂಬ ಕೊಳಗವ ಹಿಡಿದು ಭಾವಿಸುತ್ತಿರಲು ಆ ಒಂದೇ ಮಹಾಘನಲಿಂಗವು ಅಂಗಸ್ಥಲ ೪೪ ಲಿಂಗಸ್ಥಲ ೫೭ ಉಭಯ ನೂರೊಂದು ಸ್ಥಲರೂಪವನ್ನೈದಿತ್ತೆಂಬುದೀಗ ನಿತ್ಯಾನಿತ್ಯ ವಿವೇಕವೆಂಬ ಕೊಳಗವ ಹಿಡಿದು ಅಳೆಯಲಾಗಿ ನೂರೊಂದು ಕೊಳಗವಾಯಿತ್ತೆಂಬ ಶಬ್ದಕ್ಕರ್ಥ. ಆ ನಿಷ್ಕಲ ಪರಬ್ರಹ್ಮವನ್ನು ಶರಣನು ತನ್ನಾಚಾರಂಗದಲ್ಲಿ ಸಂಬಂಧ ಮಾಡಲು ಅಂತರಂಗವ ನೊಳಕೊಂಡು ಐವತ್ತೊಂದಕ್ಷರಂಗಳಲ್ಲಿ ಪ್ರಣಮಮಂತ್ರ ಸ್ವರೂಪವಾಗಿ ಪ್ರಭಾವಿಸಿ ತ್ತೆಂಬುದೀಗ ಹೆಡಗೆಗೆ ಅಳವಡಿಸುವಾಗ ೫೧ ಕೊಳಗವಾಯಿತ್ತೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಸೂಕ್ಷ್ಮಾಂತರಂಗದಲ್ಲಿ ಪ್ರಾಣಲಿಂಗ ಸ್ವರೂಪವಾಗಿ ನೆಲೆ ಗೊಂಡು ೨೫ ಲಿಂಗಸ್ವರೂಪವಾಗಿ ಪ್ರಭಾವಿಸಿತ್ತೆಂಬುದೀಗ ನಡುಮನೆಯಲ್ಲಿ ಸುರಿ ವಾಗ ೨೫ ಕೊಳಗವಾಯಿತ್ತೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ಕಾರಣ ದೇಹದ ಆತ್ಮಾಂಗದಲ್ಲಿ ಭಾವಲಿಂಗ ಸ್ವರೂಪವಾಗಿ ನೆಲಿಸಿ ಪಂಚಾಚಾರ ಸ್ವರೂಪವಾಗಿ ಪ್ರಭಾ ವಿಸಿ ತೋರಿತ್ತೆಂಬುದೀಗ ಪಡುವಣ ಕೋಣೆಯಲ್ಲಿ ಮಡಗಿರಿಸುವಾಗ ಪಡಿಯ ನೋಡ ಲಾಗಿ ಐಗಳವಾಯಿತ್ತೆಂಬ ಶಬ್ದಕ್ಕರ್ಥ. ಆ ಪಂಚಾಚಾರ ಸಂಬಂಧವಾದ ಶರಣನು ನಿತ್ಯವಾದ ನಿಜ ಮೋಕ್ಷದಲ್ಲಿ ನಿಂದು ಅನಿತ್ಯವಾದ ಭಿನ್ನ ಪದಂಗಳ ನೇತಿಮಾಡಿ ಸಂಸಾರ ವಿಷಯರಸವ ಪರಿಪೂರ್ಣ ಜ್ಞಾನ ಪ್ರಕಾಶದಿಂದ ಆಚರಿಸಿದನೆಂಬುದೀಗ ಅದು ಬಿಡು ಬಿಸಿಲಿನಲ್ಲಿ ಒಣಗೆ ಎಂಬ ಶಬ್ದಕ್ಕರ್ಥ. ಆ ಶರಣನ ಪಂಚಾಚಾರವ ನೊಳಕೊಂಡು ತೋರುವ ಪರಬ್ರಹ್ಮವು ವಿಭಜಿಸಿ ಇಷ್ಟ ಪ್ರಾಣಭಾವಲಿಂಗ ಸ್ವರೂಪ ವಾಯಿತ್ತೆಂಬುದೀಗ ಅದು ಪಡಿ ಪುಚ್ಛಕ್ಕೆ ಮೂಗಳವಾಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧ ಲಿಂಗವನ್ನು ಶರಣನು ತನ್ನ ಸರ್ವಾಚಾರ ಸಂಪತ್ತಿನಲ್ಲಿ ಗೋಳಕ, ಗೋಮುಖ, ವೃತ್ತಾಕಾರ ಸ್ವರೂಪನಿಂದ ಸಂಬಂಧವ ಮಾಡಲು ಅದು ಏಕಮೇವಾ ದ್ವಿತೀಯವಾದ ಒಂದೇ ಪರಬ್ರಹ್ಮ ಸ್ವರೂಪವಾಯಿತ್ತೆಂಬುದೀಗ ಆ ಮೂಗಳವ

ನಡುಮೊರದಲ್ಲಿ ಸುರಿಯೆ ಪಡಿಗಣಿಸುವಾಗ ಒಕ್ಕುಳವಾಯಿತ್ತು ಎಂಬ ಶಬ್ದಕ್ಕರ್ಥ. ಆ ಮಹಾಘನ ಲಿಂಗದಲ್ಲಿ ಸತ್ಕ್ರಿಯಾ ಜ್ಞಾನದಿಂದ ಮಥನಿಸುತ್ತಿರಲಾಗಿ ಖಂಡಿತ ಫಲಪದಂಗಳೆಲ್ಲ ನಾಸ್ತಿಯಾಗಿ ಶರಣನ ಶಿವಾದ್ವೈತ ಭಕ್ತಿಯನೊಳಕೊಂಡು ಒಂದೇ ವಸ್ತುವಾಯಿತ್ತೆಂಬುದೀಗ ಒಕ್ಕುಳವ ಕುಟ್ಟಿ ಮಿಕ್ಕುದ ಕೇರೆ ಮತ್ತೆ ಅದು ಒಬ್ಬುಳ ವಾಯಿತ್ತು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ಸೂಕ್ಷ್ಮವಾದ ಅಖಂಡ ಜ್ಞಾನ ಚಿತ್ತಿನಲ್ಲಿ ಅವಿರಳ ಸಂಬಂಧವ ಮಾಡಿ ಆ ಪರಬ್ರಹ್ಮವೇ ತನ್ನ ಪ್ರಾಣ ಸ್ವರೂಪವೆಂದು ನಿಶ್ಚಯ ಭಾವದಿಂದ ನಿರೀಕ್ಷಿಸುತ್ತಿರಲು ಮನತ್ರಯಂಗಳನೊಳಕೊಂಡು ಉನ್ಮನೀ ತತ್ತ್ವ ಸ್ವರೂಪವಾಯಿತೆಂಬುದೀಗ ಆ ಒಬ್ಬುಳು ಕುಡಿಕೆಯಲ್ಲಿ ಹೊಯಿದು ನಿರುತದಿಂದ ನೋಡೆ ಮೂರು ಮಾನವ ನುಂಗಿ ಒಮ್ಮನವಾಯಿತ್ತೆಂಬ ಶಬ್ದಕ್ಕರ್ಥ. ಆ ಮನಸ್ಸು ಜ್ಞಾನಾಗ್ನಿಯಲ್ಲಿ ಸಮರಸಪಾಕವ ಮಾಡಲು ಅಲ್ಲಿ ಆತ್ಮದ್ರವ್ಯವು ಭಕ್ತಿಯಿಂದ ಪರಿಪಕ್ವವಾಗಲು ಆ ಭಕ್ತಿ ಪದಾರ್ಥವನ್ನು ಚಿದ್ಭಾಜನದಲ್ಲಿ ಗಡಣಿಸಿ ಮಹಾಘನ ಲಿಂಗ ಮುಖಕ್ಕೆ ಸಮರ್ಪಣೆಯ ಮಾಡಲು ಆ ಲಿಂಗಮುಖ ಪ್ರಸನ್ನ ಪ್ರಸಾದವನು ಅಮರಗಣ ತತ್ತ್ವವನ್ನೈದಿದ ಸಕಲಕರಣಂಗಳೆಲ್ಲ ಸುಜ್ಞಾನ ಮುಖದಿಂದ ಸ್ವೀಕರಿಸಿ ಚೈತನ್ಯ ಸ್ವರೂಪವಾದ ಪ್ರಾಣಲಿಂಗದಲ್ಲಿ ಸಮರಸೈಕ್ಯವಾಗಲು ಚಿತ್ ಸ್ವರೂಪನಾದ ಶರಣನ ಸರ್ವಾಂಗವು ಸಾಕಾರವಾದ ಇಷ್ಟಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ ಒಮ್ಮಾನವ ನಟ್ಟು ಕುಡಿಕೆಯಲ್ಲಿ ಕುಸುರೆ ಕೊಳೊಡೆದು ಬಾಲರೆಗೋಗರವಾಯಿತ್ತು ಉಂಡವರತ್ತ ನಾನಿತ್ತ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೨

ಒಂದು ಪಕ್ಷಿಗೆ ಅಯ್ದು ತಲೆ ನೋಡಾ. ಶಿರ ಒಂದರಲ್ಲಿಯೆ ಮೂಡಿತ್ತು ಒಡಲೊಂದಾಯಿತ್ತು. ಬಣ್ಣ ಹದಿನಾರಾಯಿತ್ತು. ಅದರ ಚಂದ ಇಪ್ಪತ್ತೈದಾಯಿತ್ತು. ಹುಟ್ಟಿದ ಗರಿ ನೂರೊಂದಾಯಿತ್ತು. ಆ ಹಕ್ಕಿಯ ಜೀವವಿದ್ದಂತೆ ಕೊಂದು ಸುಡದ ಬೆಂಕಿಯಲ್ಲಿ ಸುಟ್ಟು ತಲೆ ಇಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಿಗೆಯಲ್ಲಿ ಸವಿದು ಸವಿಯುವುದಕ್ಕೆ ಮೊದಲೆ ರುಚಿಯನರ್ಪಿತವ ಮಾಡಿದ ಜ್ಞಾನ ಜಂಗಮವ ನೋಡಾ. ಆತನಿರವು ತುರುಬೋ ಜಡೆಯೋ ಬೋಳೋ ಅರಿಯಬಾರದಣ್ಣಾ! ಎಣ್ಣೆಕೊಂಡ ಮಣ್ಣಿನಂತೆ, ಅನಲಕೊಂಡ ದ್ರವ್ಯದಂತೆ, ಕುಸುಮಕೊಂಡ ಗಂಧದಂತೆ, ರಸ ಕೊಂಡ ಫಾಷಾಣದಂತೆ ಹೆಸರಿಡಬಾರದಯ್ಯಾ ಆ ಜಂಗಮದಿರವ. ಆ ಜಂಗಮ ಬಂದು ಎನ್ನ ಹುಳ್ಳಿಯಂ ಬಿಡಿಸಿ ತಳ್ಳಿಯಂ ಹರಿದು ನಿಃಕಳಂಕ ಮಲ್ಲಿಕಾರ್ಜುನ ನಲ್ಲಿ ತಲ್ಲೀಯವಾದ ॥ ೧೧೯ ॥

ಟೀಕೆ:— ದೇಹ ಸಂಬಂಧಿಯಾಗಿರ್ದ ಜೀವಂಗೆ ಪಂಚೇಂದ್ರಿಯಂಗಳೇ ಶಿರಸ್ಸಾಗಿಹವೆಂಬುದೀಗ ಒಂದು ಪಕ್ಷಿಗೆ ಅಯ್ದು ತಲೆ ನೋಡಾ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯಂಗಳು ವ್ಯಕ್ತಿ ಜ್ಞಾನದಿಂ ತೋರಿದವೆಂಬುದೀಗ ಶಿರ ಒಂದರಲ್ಲಿಯೇ ಮೂಡಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಪಂಚಭೂತಾಶ್ರಯವಾದ ದೇಹ ಒಂದೇಯಾಗಿ ತೋರುತ್ತಿಹುದೆಂಬುದೀಗ ಒಡಲು ಒಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ ಜೀವನ ಅಂತರಂಗದ ಅಷ್ಟಮದ, ಬಹಿರಂಗದ ಅಷ್ಟಮದಂಗಳು ಷಡ್ವರ್ಣಯುತವಾಗಿರುತ್ತಿಹವೆಂಬುದೀಗ ಬಣ್ಣ ಹದಿನಾರಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಇಪ್ಪತ್ತೈದು ತತ್ವಂಗಳೆ ಅಲಂಕಾರವಾಗೊಪ್ಪುತ್ತಿಹವೆಂಬುದೀ ಗಅದರ ಚಂದ ಇಪ್ಪತ್ತೈದಾಯಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಅಂತಃಕರಣ ಮುಖ್ಯವಾದ ಕರಣಂಗಳು ಹಲವಾಗಿಹವೆಂಬುದೀಗ ಹುಟ್ಟಿದ ಗರಿ ನೂರೊಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ದೇಹಸಂಬಂಧಿಯಾಗಿರ್ದಲ್ಲಿ ಸುಜ್ಞಾನೋದಯವಾಗಿ ಒಂದು ಗುರೂಪಾವಸ್ಥೆಯ ಮಾಡಲು ಆ ಶ್ರೀಗುರು ದೀಕ್ಷಾತ್ರಯಂಗಳಿಂ ಜೀವಭಾವವ ಸಂಹರಿಸಿ ಸಜ್ಜೀವ ಸ್ವರೂಪವ ಮಾಡಿ ಲಿಂಗಸಾಹಿತ್ಯವ ಮಾಡಿದ್ದನೆಂಬುದೀಗ ಆ ಹಕ್ಕಿಯ ಜೀವವಿದ್ದಂತೆ ಕೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನ ತಾಪತ್ರಯಾಗ್ನಿ ಹೊದ್ದದ ಚಿದಗ್ನಿಯಿಂ ಸಮರಸಪಾಕವ ಮಾಡಿ ಭಿನ್ನ ಜ್ಞಾನವನಳಿದು ಅಭಿನ್ನ ಜ್ಞಾನ ದೃಷ್ಟಿಯಿಂದ ಪರೀಕ್ಷಿಸಿ ಆತ್ಮದ್ರವ್ಯವನ್ನು ಸದ್ಭಕ್ತಿಯಿಂದ ಇಷ್ಟ ಲಿಂಗಕ್ಕರ್ಪಿಸಿ ಆ ಪ್ರಸನ್ನ ಪ್ರಸಾದವನ್ನು ಭಿನ್ನಾಪೇಕ್ಷೆ ಇಲ್ಲದ ಶಿವಾಪೇಕ್ಷೆಯಿಂ ಸ್ವೀಕರಿಸುತ್ತಿಹನೆಂಬುದೀಗ ಸುಡದ ಬೆಂಕಿಯಲ್ಲಿ ಸುಟ್ಟು ತಲೆ ಇಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಿಗೆಯಲ್ಲಿ ಸವಿದು ಎಂಬ ಶಬ್ದಕ್ಕರ್ಥ. ಆ ಲಿಂಗ ಮುಖದಿಂದೊದಗಿದ ಪರಮಪ್ರಸಾದ ಸ್ವೀಕರಿಸಿದಾಕ್ಷಣದಿ ರೂಪಿನೊಳಗಣ ರುಚಿ ಪದಾರ್ಥವನು ಸದ್ಭಾವಹಸ್ತದಿಂ ಪಿಡಿದು ಪ್ರಾಣಲಿಂಗಾರ್ಪಿತವಮಾಡಿ ಆ ಪ್ರಸಾದವ ಸ್ವೀಕರಿಸಿ ಪರಮಾನಂದ ಸುಖದಲ್ಲಿಪ್ಪಾತನೆ ಸುಜ್ಞಾನ ಸನ್ನಿಹಿತವಾದ ಶರಣನೆಂಬುದೀಗ ಸವಿವುದಕ್ಕೆ ಮೊದಲೆ ರುಚಿಯನರ್ಪಿತ ಮಾಡಿದ ಜ್ಞಾನ ಜಂಗಮವ ನೋಡಾ ಎಂಬ ಶಬ್ದಕ್ಕರ್ಥ. ಆ ಪರ ತತ್ತ್ವಪ್ರಸಾದದಲ್ಲಿ ಬೆರಸಿದ ಸುಜ್ಞಾನಿ ಶರಣನ ಚರಿತ್ರವು ತುರುಬು, ಜಡೆ, ಬೋಳೆಂಬ ತ್ರಿವಿಧ ಲಾಂಛನಕ್ಕೆ ಸಿಕ್ಕಿ ಕುರುಹಿಂಗೆ ಬಾರದೆಂಬುದೀಗ ಆತನಿರವು ತುರುಬೋ, ಜಡೆಯೋ, ಬೋಳೋ ಅರಿಯಬಾರದಣ್ಣಾ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಜಂಗಮ ಚರಿತ್ರವು ಎಣ್ಣೆ ಮಣ್ಣೊಳಕೊಂಡಂತೆ, ಅಗ್ನಿ ಹವ್ಯಕವ್ಯಾದಿಗಳನೊಳಕೊಂಡಂತೆ, ಕುಸುಮ ಗಂಧವನೊಳಕೊಂಡಂತೆ, ಉದಕವನೊಳಕೊಂಡ ಚಂದ್ರಕಾಂತದಂತೆ, ಸುಜ್ಞಾನ ಸ್ವರೂಪವಾದ ಜಂಗಮವ ಕುರುಹಿಂಗೆ ತರಲಿಲ್ಲ. ಅಂತಪ್ಪ ಸುಜ್ಞಾನ ಜಂಗಮ ಬಂದು ತನುವಿನ ಅನಿತ್ಯಭಾವವ ಕೆಡಿಸಿ ನಿತ್ಯವಾದ ಆಚಾರ ಸಂಬಂಧವ ತೋರಿ ಭಿನ್ನಭಾವ ಮೊದಲಾದ ಸಕಲ ಪ್ರಪಂಚ ನಿವೃತ್ತಿ ಮಾಡಿ ನಿಜದಲ್ಲಿ ನಿರ್ವಯಲಾದನೆಂಬುದೀಗ ಎಣ್ಣೆ

ಕೊಂಡ ಮಣ್ಣಿನಂತೆ, ಅನಲಕೊಂಡ ದ್ರವ್ಯವಂತೆ, ಕುಸುಮುಕೊಂಡ ಗಂಧದಂತೆ, ರಸಕೊಂಡ ಪಾಷಾಣದಂತೆ ಹೆಸರಿಡಬಾರದಯ್ಯಾ, ಆ ಜಂಗಮದಿರವ, ಆ ಜಂಗಮ ಬಂದು ಎನ್ನ ಕುಳ್ಳಿಯಂ ಬಿಡಿಸಿ ತಳ್ಳಿಯಂ ಹರಿದು ನಿಃಕಳಂಕ ಮಲ್ಲಿಕಾರ್ಜುನನಲ್ಲಿ ತಲ್ಲೀಯವಾದನೆಂಬ ಶಬ್ದಕ್ಕರ್ಥ.

೭೭೩

ಕತ್ತಲೆಯ ಉದಕದಲ್ಲಿ ಮತ್ಸ್ಯ ಹುಟ್ಟಿದುದ ಕಂಡೆ. ಮತ್ಸ್ಯಕ್ಕೆ ಮೂರು ಗರಿ, ಮರಿಗೆ ಆರು ಗರಿ, ಮರಿ ಮತ್ಸ್ಯವ ನುಂಗಿತ್ತು. ಅದು ತಾಯ ಒಸುರಲ್ಲಿ ಬಸುರ ಕಿತ್ತು ಕೆರೆಯೊಡೆದು ಇಹುದಕ್ಕೆ ತಾವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೦ ॥

ಟೀಕೆ:— ಅಜ್ಞಾನ ಸ್ವರೂಪವಾದ ಸಂಸಾರ ವಿಷಯ ಜಲದಲ್ಲಿ ಜೀವಾತ್ಮನುದಯವಾದುದನ್ನು ಶರಣನು ಸುಜ್ಞಾನ ದೃಷ್ಟಿಯಿಂದ ಕಂಡನೆಂಬುದೀಗ ಕತ್ತಲೆಯ ಉದಕದಲ್ಲಿ ಮತ್ಸ್ಯ ಹುಟ್ಟಿದುದು ಕಂಡೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ತ್ರಿವಿಧಾವಸ್ಥೆಗಳೇ ಗರಿಯಾಗಿಹವೆಂಬುದೀಗ ಮತ್ಸ್ಯಕ್ಕೆ ಮೂರು ಗರಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನಿಂದುದಯವಾದ ಮನಸ್ಸೇ ಅದರ ಮರಿ. ಆ ಮನಕ್ಕೆ ಷಡಿಂದ್ರಿಯಗಳು ಷಡ್ವಿಧ ವಿಷಯಕ್ಕೆ ಹರಿಯುತ್ತಿಹುದೇ ಮತ್ಸ್ಯಕ್ಕೆ ಮೂರು ಗರಿ, ಮರಿಗೆ ಆರು ಗರಿ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಲು ಆಜೀವ ಭಾವ ಭ್ರಾಂತು ನಷ್ಟವಾಯಿತ್ತೆಂಬುದೀಗ ಮರಿ ಮತ್ಸ್ಯನ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಭಾವವಳಿದು ಶಿವಭಾವ ಘಟಿಸಿದ ಜ್ಞಾನ ಕಲಾತ್ಮನು ಚಿಚ್ಛಕ್ತಿಯ ಚಿದ್ಗರ್ಭದ ಮಧ್ಯದಲ್ಲಿ ಅಡಗಿ ಸಕಲ ಕರಣಂಗಳ ಜ್ಞಾನ ಕರಣಂಗಳ ಮಾಡಿ ಶ್ರೀಗುರು ಕಾರುಣ್ಯದಿಂದ ಇಷ್ಟ, ಪ್ರಾಣ, ಭಾವಲಿಂಗವನು ತನುತ್ರಯಂಗಳಲ್ಲಿ ಧರಿಸಿ ಆಚರಿಸುತ್ತಿದ್ದ ಶರಣನ ಪ್ರಾರಬ್ಧ ಭೋಗವು, ನಷ್ಟವಾಗಿ ಲಿಂಗಭೋಗೋಪಭೋಗಿಯಾದ ಶರಣಂಗೆ ಸಂಸಾರ ಜಲವರತು ಹೋಯಿತ್ತೆಂಬುದೀಗ ಅದು ತಾಯ ಬಸುರಲ್ಲಿ ಬಸುರ ಕಿತ್ತು ಕೆರೆಯೊಡದು ಎಂಬ ಶಬ್ದಕ್ಕರ್ಥ. ಅಂತು ನಿವೃತ್ತಿ ಮಾರ್ಗವನೈದಿದ ಚಿದಾತ್ಮಂಗೆ ದೇಹಾಶ್ರಯವಿಲ್ಲವೆಂಬುದೀಗ ಇಹುದಕ್ಕೆ ತಾವಿಲ್ಲನಿಃ ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೪

ಕಪ್ಪೆ ಸತ್ತು ಸರ್ಪನ ನುಂಗಿತ್ತು ನೋಡಾ, ಮೊಲ ಸತ್ತು ಬಲೆಯ ಮೀರಿತ್ತು ನೋಡಾ, ಮುತ್ತೊಡದು ಜಲವ ನುಂಗಿತ್ತು ನೋಡಾ, ಜೀವ ಸತ್ತು ಕಾಯ ನಿಂದಿತ್ತು ನೋಡಾ, ಉದಕ ಒಡೆದು ಏರಿ ತುಂಬಿತ್ತು ನೋಡಾ,

ರಟ್ಟೆ ಮುರಿದು ಪಕ್ಷಿ ಹಾರಿತ್ತು, ಹಾರುವ ಪಕ್ಷಿಯ ಮೀರಿ ನುಂಗಿತ್ತು ಬಯಲು. ನುಂಗಿದ ಬಯಲುವ ಹಿಂಗಿದ ಪಕ್ಷಿಯು ಕಂಗಳು ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೧ ॥

ಟೀಕೆ:— ಬ್ರಹ್ಮರಂಧ್ರದಲ್ಲಿರ್ಪ ಪರಮಶಾಂತಿಯ ಚಿದ್ಬಿಂದು ಶ್ರೀಗುರುವಿನ ಭಾವ ಮನ ದೃಕ್ಕಿನಿಂದ ಉದಯಿಸಿ ಚಿದ್ರೂಪನಾದ ಶರಣನ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬರಲು ಆ ಲಿಂಗದಲ್ಲಿ ಸತ್ಕ್ರಿಯೆಯಿಂದಾಚರಿಸುತ್ತಿರಲಾಗಿ ಆ ಇಷ್ಟ ಲಿಂಗದ ಚಿತ್ಕಲೆ ಅಂತರಂಗಕ್ಕೆ ವೇಧಿಸಿ ತೈಜಸನಲ್ಲಿ ಪ್ರಾಣಲಿಂಗ ಸಂಬಂಧವಾಯಿ ತ್ತೆಂಬುದೀಗ ಕಪ್ಪೆ ಸತ್ತು ಸರ್ಪನ ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಮೊಲನೆಂದೊಡೆ ಪ್ರಾಜ್ಞನು. ಅಂತಪ್ಪ ಪ್ರಾಜ್ಞನು ಭಾವಲಿಂಗವನವಗ್ರಹಿಸಿ ಸದ್ರೂಪವಾದ ಬ್ರಹ್ಮವಾದಲ್ಲಿ ಮಾಯಾಪಾಶ ನಿವೃತ್ತಿಯಾಯಿತ್ತೆಂಬುದೀಗ ಮೊಲ ಸತ್ತು ಬಲೆಯ ಮೀರಿತ್ತು ನೋಡಾ ಎಂಬ ಶಬ್ದಕ್ಕರ್ಥ. ಮುಕ್ತಿ ಸ್ವರೂಪವಾದ ನಿಷ್ಕಲ ಬ್ರಹ್ಮವು ಲಿಂಗಾಂಗವೆಂದೆರಡಾಗಿ ಶರಣನ ಕರಸ್ಥಲದಲ್ಲಿ ನೆಲೆಗೊಂಡು ಉನ್ಮನೀ ಸ್ವರೂಪವಾದ ಮನವನವಗ್ರಹಿಸಿತ್ತೆಂಬುದೀಗ ಮುತ್ತೊಡೆದು ಜಲವ ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನು ಸದ್ರೂಪವಾದ ಬ್ರಹ್ಮವಾದಲ್ಲಿ ಅನಿತ್ಯ ಕಾಯವಳಿದು ನಿತ್ಯವಾದ ಲಿಂಗ ಕಾಯವಾಗಿತ್ತೆಂಬುದೀಗ ಜೀವ ಸತ್ತು ಕಾಯ ನಿಂದಿತ್ತು ನೋಡಾ ಎಂಬ ಶಬ್ದಕ್ಕರ್ಥ. ಸರ್ವಾಂಗದಲ್ಲಿದ್ದ ಸಂಸಾರ ವಿಷಯ ಜಲವರತು ಹೋಗಿ ಶರಣನ ತನುತ್ರಯಂಗಳೆಲ್ಲ ಪರಮಾನಂದ ಜಲವೇ ತುಂಬಿರುತ್ತಿಹುದೆಂಬುದೀಗ ಉದಕ ಒಡೆದು ಏರಿ ತುಂಬಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜ್ಞಾನಕ್ರೀಗಳು ನಿಷ್ಪತ್ತಿಯಾಗಿ ಚಿದ್ಘನ ಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ ರಟ್ಟೆ ಮುರಿದು ಪಕ್ಷಿ ಹಾರಿತ್ತು ಎಂಬ ಶಬ್ದಕ್ಕರ್ಥ. ತುರೀಯಾವಸ್ಥೆಯ ಮುಂದುಗೊಂಡು ಸತ್ಪಥ ಮಾರ್ಗವಿಡಿಯುವ ಪರಮಾತ್ಮ ಸ್ವರೂಪವಾದ ಶರಣನ ನಿರಾಕಾರವಾದ ಪರಬ್ರಹ್ಮಘನವನಗ್ರಹಿಸಿತ್ತೆಂಬುದೀಗ ಹಾರುವ ಪಕ್ಷಿಯ ಮೀರಿ ನುಂಗಿತ್ತು ಬಯಲು ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಘನಲಿಂಗವನು ಸಕಲ ಪ್ರಪಂಚಿಗೆ ವಿಲಕ್ಷಣನಾದ ಶರಣನ ಪರಿಪೂರ್ಣ ಜ್ಞಾನ ದೃಷ್ಟಿಯನವಗ್ರಹಿಸಿತ್ತೆಂಬುದೀಗ ನುಂಗಿದ ಬಯಲುವ ಹಿಂಗಿದ ಪಕ್ಷಿಯ ಕಂಗಳು ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೫

ಕವಡೆ ಕಟಕವ ನುಂಗಿತ್ತು. ಕುಡಿಕೆ ಹಿರಿದಪ್ಪ ಮಡಕೆಯ ನುಂಗಿತ್ತು ಅಡಕೆ ಮರನ ನುಂಗಿದ ಮತ್ತೆ ಫಲ ಉಂಟೇ? ಅರ್ಚನೆ ಭಕ್ತಿಯಲ್ಲಡಗಿ ಭಕ್ತಿ ಮುಕ್ತಿಯಲ್ಲಡಗಿ ಮುಕ್ತಿ ಜ್ಞಾನದಲ್ಲಡಗಿ ಜ್ಞಾನ ನಾನೀನೆಂಬಲ್ಲಿ ಅಡ ಗಿದ ಮತ್ತೆ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೨ ॥

ಟೀಕೆ:— ಸುಜ್ಞಾನೋದಯವಾದ ಶರಣನ ನಿಜಾಂತರಂಗದಲ್ಲಿದ್ದ ಸೂಕ್ಷ್ಮವಾದ ಚಿತ್ಕಲೆಯೇ ಭಕ್ತಿ ಕಾರಣವಾಗಿ ಶ್ರೀಗುರು ಕಾರುಣ್ಯದಿಂದ ಇಷ್ಟಲಿಂಗ ಸ್ವರೂಪವಾಗಿ ಬಂದು ಶರಣನ ಸರ್ವಾಂಗದನವಗ್ರಹಿಸಿತ್ತೆಂಬುದೀಗ ಕವಡೆ ಕಟಕವನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಇಷ್ಟ ಲಿಂಗದಲ್ಲಿ ಸೂಕ್ಷ್ಮವಾಗಿದ್ದ ಪರಮ ಚಿತ್ಕಲೆಯು ಅನಿಮಿಷ ದೃಷ್ಟಿ ಮೂಲ ಸೂತ್ರವಿಡಿದು ಹೃದಯಕ್ಕೆ ವೇಧಿಸಿ ಶರಣನ ಚಿದ್ಬ್ರಹ್ಮಾಂಡವನವಗ್ರಹಿಸಿ ಪ್ರಾಣಲಿಂಗ ಸ್ವರೂಪಿನಿಂದ ಸಂಬಂಧವಾಯಿತ್ತೆಂಬುದೀಗ ಕುಡಿಕೆ ಹಿರಿದಪ್ಪ ಮಡಕೆಯು ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಇಷ್ಟ ಪ್ರಾಣ ಏಕಾದ್ವೈತವಾದ ಭಾವಲಿಂಗವು ಸದ್ವಿವೇಕ ವೃಕ್ಷವನವಗ್ರಹಿಸಿ ಶರಣನಾತ್ಮಾಂಗದಲ್ಲಿ ಸಂಬಂಧವಾಗಲು ಚತುರ್ವಿಧ ಫಲಂಗಳ ವಾಂಛೆಯಳಿದು ಹೋಯಿತ್ತೆಂಬುದೀಗ ಅಡಕೆ ಮರನ ನುಂಗಿದ ಮತ್ತೆ ಫಲ ಉಂಟೇ ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳು ಪ್ರಾಣಲಿಂಗದ ಶಿವಾದ್ವೈತ ಭಕ್ತಿಯಲ್ಲಿ ಏಕಾರ್ಥವಾಯಿತ್ತೆಂಬುದೀಗ ಅರ್ಚನೆ ಭಕ್ತಿಯಲ್ಲಡಗಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗಕ್ಕೆ ಮಾಡುವ ಶಿವಾದ್ವೈತ ಭಕ್ತಿಯು ಮುಕ್ತಿ ಸ್ವರೂಪವಾದ ಭಾವಲಿಂಗದ ಪೂಜೆಯಲ್ಲಿ ಏಕಾರ್ಥವಾಯಿತ್ತೆಂಬುದೀಗ ಭಕ್ತಿ ಮುಕ್ತಿಯಲ್ಲಡಗಿ ಎಂಬ ಶಬ್ದಕ್ಕರ್ಥ. ಆ ಕ್ರಿಯಾ ಜ್ಞಾನಂಗಳನೊಳಕೊಂಡು ತೋರುವ ಮುಕ್ತಿ ಸ್ವರೂಪವಾದ ಭಾವಲಿಂಗವು ಶರಣನ ಮಹಾನುಭಾವದಲ್ಲಿ ಅಡಗಿತ್ತೆಂಬುದೀಗ ಮುಕ್ತಿ ಜ್ಞಾನದಲ್ಲಡಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾನುಭಾವದ ಅರಿವು ಶರಣಲಿಂಗವೆಂಬುಭಯವನಳಿದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಜ್ಞಾನ ನಾಸೀನೆಂಬಲ್ಲಿ ಅಡಗಿದ ಮತ್ತೆ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೬

ಕಾಳೆಮ್ಮೆಯ ಕರೆಯಲಾಗಿ ಹಾಲು ರೋಹಿತವಾಗಿ ಬಿದ್ದಿತ್ತು. ರೋಹಿತವಾದುದ ಕಂಡು ಕರೆವ ಬಾಲೆ ಹಾಲಲ್ಲವೆಂದಡೆ ಮೇಲಿದ್ದಾತ ನೋಡಿ ಕಾಲವನಳಿದು ಒಪ್ಪಬಿಡೆಂದ. ಶ್ರೋಣಿತವಳಿದು ಹೋಗಲಾಗಿ ಹಾಲು ಹೆಪ್ಪಾಯಿತ್ತು. ಅದ ಶೂಲಪಾಣಿಯು ಮರದ ಮಂಥನದಲ್ಲಿ ಏನು ಇಲ್ಲದ ನೇಣ ಹೂಡಿ ಕಡಿಯೆ ಮಡಕೆಯ ಬಾಯೊಳಗೆ ಕರಗಿತ್ತು ಬೆಣ್ಣೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೩ ॥

ಟೀಕೆ:— ಅಜ್ಞಾನ ರೂಪಿಣಿಯಾದ ಮಾಯೆ ಎಂಬುದೀಗ ಕಾಳೆಮ್ಮೆ ಎಂಬ ಶಬ್ದಕ್ಕರ್ಥ. ಆ ಮಾಯೆಯಿಂದಲಾದ ವೃತ್ತಿಜ್ಞಾನಾವೃತವನು ದೇಹ ಸಂಬಂಧಿಯಾದ ಜೀವನು ಭಿನ್ನವಿಟ್ಟು ಅರಿಯುತ್ತಿಹನೆಂಬುದೀಗ ಕರೆಯಲಾಗಿ ಎಂಬ

ಶಬ್ದಕ್ಕರ್ಥ. ಆ ವೃತ್ತಿ ಜ್ಞಾನಾಮೃತವು ಸಂಸಾರ ವಿಷಯ ರಸದೊಳಗಾಯಿತ್ತೆಂಬುದೀಗ ಹಾಲು ರೋಹಿತವಾಗಿ ಬಿದ್ದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನು ಸಂಸಾರ ವಿಷಯ ರಸದಲ್ಲಿ ಮುಳುಗಿಪ್ಪ ಭೇದವ ಚಿಚ್ಛಕ್ತಿಯು ಕಂಡಳೆಂಬುದೀಗ ರೋಹಿತವಾದುದ ಕಂಡು ಎಂಬ ಶಬ್ದಕರ್ಥ. ಅಂತಪ್ಪ ಸಂಸಾರ ವಿಷಯ ರಸವ ನಿವೃತ್ತಿಮಾಡಿ ಸುಜ್ಞಾನಾಮೃತ ರಸವ ಪ್ರಭಾವಿಸಿಕೊಂಡು ನಿಷ್ಕಲ ಚಿಚ್ಛಕ್ತಿಯು ಆ ವೃತ್ತಿ ಜ್ಞಾನವೆಂಬುದು ಸುಜ್ಞಾನ ರಸವಲ್ಲವೆಂದು ಅರುಹಿಕೊಂಡಿರುತ್ತಿದ್ದಳೆಂಬುದೀಗ ಕರೆವ ಬಾಲೆ ಹಾಲಲ್ಲವೆಂದಡೆ ಎಂಬ ಶಬ್ದಕ್ಕರ್ಥ. ಸಹಸ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಚಿತ್ಪ್ರಕಾಶವಾಗಿ ತೊಳಗಿ ಬೆಳಗುವ ನಿಷ್ಕಲ ಗುರು ತತ್ತ್ವವೇ ಸಾಕಾರವಾಗಿ ಬಂದು ಚಿದ್ರೂಪನಾದ ಶಿಷ್ಯನ ಕೃಪಾವಲೋಕನದಿಂದ ನಿರೀಕ್ಷಿಸಿ ದೀಕ್ಷಾತ್ರಯಂಗಳ ಕರುಣಿಸಿ ತನುತ್ರಯಂಗಳಲ್ಲಿ ಇಷ್ಟ ಪ್ರಾಣ ಭಾವ ಲಿಂಗ ಸಂಬಂಧವ ಮಾಡಿ ದಿನ ಕಾಲ ಕಲ್ಪಿತವ ನಷ್ಟಮಾಡಿ ಲಿಂಗಾಂಗ ಸಂಬಂಧದ ಭಕ್ತಿಯೋಗವ ಬಿಡದಿರೆಂದು ಸುಜ್ಞಾನಬೋಧೆಯ ಬೋಧಿಸಿದನೆಂಬುದೀಗ ಮೇಲಿದ್ದಾತ ನೋಡಿ ಕಾಲವನಳಿದು ಒಪ್ಪಬಿಡೆಂದ ಎಂಬ ಶಬ್ದಕ್ಕರ್ಥ. ಆ ಚಿದ್ಘನಲಿಂಗದಲ್ಲಿ ಸಮರಸವಾದ ಶರಣಂಗೆ ವೃತ್ತಿ ಜ್ಞಾನ ಸಂಬಂಧವಾದ ಸಂಸಾರ ವಿಷಯರಸವರತು ಹೋಗಿ ಶಿವಾದ್ವೈತ ಭಕ್ತಿಯೋಗದಿಂದ ಲಿಂಗಾಂಗವೆರಡು ಏಕವಾಯಿತ್ತೆಂಬುದೀಗ ಶ್ರೋಣಿತವಳಿದು ಹೋಗಲಾಗಿ ಹೆಪ್ಪಾಯಿತ್ತೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ತಾನು ಲಿಂಗವೆಂಬುಭಯವಳಿದು ಏಕೋಭಾವ ಹಸ್ತದಲ್ಲಿ ಸ್ವಾನುಭಾವ ಸೂತ್ರವ ಸಂಬಂಧಿಸಿ ಗುರುಮಾರ್ಗಾಚಾರವಿಡಿದು ಮಥಣಿಸುತ್ತಿದ್ದನೆಂಬುದೀಗ ಆದ ಶೂಲಪಾಣಿಯು ಮರದ ಮಂತನದಲ್ಲಿ ಏನೂ ಇಲ್ಲದ ನೇಣ ಹೂಡಿ ಕಡಿಯೆ ಎಂಬ ಶಬ್ದಕ್ಕರ್ಥ. ಮಡಕೆ ಎಂದಡೆ ಶರಣನ ಸ್ಥೂಲಾಂಗ, ಬಾಯಿ ಎಂದಡೆ ಷಡಿಂದ್ರಿಯಗಳು. ಅಂತಪ್ಪ ಇಂದ್ರಿಯಂಗಳಲ್ಲಿ ಶಿವಾನುಭಾವ ಸನ್ನಿಹಿತನಾದ ಪ್ರಾಣಲಿಂಗ ಒಂದೇ ಷಟ್ಪ್ರಕಾರವಾಗಿ ವೇಧಿಸಿತ್ತೆಂಬುದೀಗ ಮಡಕೆಯು ಬಾಯೊಳಗೆ ಕರಗಿತ್ತು ಬೆಣ್ಣೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೭

ಕಂಡೆನೊಂದು ನೆಟ್ಟ ಶೂಲವ. ಮೊದಲೊಂದು ತುದಿ ಮೂರು. ಆ ಮೂರರ ತುದಿಯಲ್ಲಿ ಆರು ಸೂನಿಗೆ. ಆರು ಸೂನಿಗೆಯ ಮೇಲೆ ಇಪ್ಪತ್ತೈದು ಹೆಣ ತೆಗೆಯಿತ್ತು. ಹೆಣಸೂದಿ ರುಧಿರ ಸುರಿಯಲಾಗಿ ಅದರ ಭಾರ ತಾಗಿ ಸೂನಿಗೆ ಮುರಿಯಿತ್ತು ಸೂನಿಗೆ ಕಾಣಬಾರದು. ಹೆಣಬಯಲಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೪ ॥

ಟೀಕೆ:— ಶಿವಾಂಶಿಕನಾದ ಆತ್ಮನು ದೇಹ ಸಂಬಂಧವಾದಲ್ಲಿ ಮೂಲಾಹಂಕಾರ ಯುಕ್ತನಾಗಿದ್ದನೆಂಬುದೀಗ ಕಂಡೆನೊಂದು ನೆಟ್ಟ ಶೂಲವ ಎಂಬ ಶಬ್ದಕ್ಕರ್ಥ. ಅಂತಪ್ಪ ಮೂಲಾಹಂಕಾರ ಒಂದೇ ಸಾತ್ವಿಕ ರಾಜಸ ತಾಮಸಾಹಂಕಾರವೆಂದು ಮೂರು ತೆರನಾಗಿದ್ದಿತೆಂಬುದೀಗ ಮೊದಲೊಂದು ತುದಿ ಮೂರು ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರತ್ರಯಂಗಳ ಮಧ್ಯದಲ್ಲಿ ಷಡ್ವಿಧ ಅಧಿದೇವತೆಗಳು ತೋರುತ್ತಿಹ ರೆಂಬುದೀಗ ಆ ಮೂರರ ತುದಿಯಲ್ಲಿ ಆರು ಸೂನಿಗೆ ಎಂಬ ಶಬ್ದಕ್ಕರ್ಥ. ಆ ಷಡ್ವಿಧ ಅಧಿದೇವತೆಗಳ ಮಧ್ಯದಲಿ ಇಪ್ಪತ್ತೈದು ತತ್ವಂಗಳು ಜೀವನ್ಮೃತವಾಗಿಹುದೆಂಬು ದೀಗ ಆರು ಸೂನಿಗೆಯ ಮೇಲೆ ಇಪ್ಪತ್ತೈದು ಹೆಣ ತೆಗೆಯಿತ್ತು ಎಂಬಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಜ್ಞಾನೋದಯವಾಗಿ ಸಕಲಪ್ರಪಂಚವ ನಿವೃತ್ತಿ ಮಾಡಿ ಪರಶಿವ ತತ್ವದಲ್ಲಿ ಬೆರಸಬೇಕೆಂಬ ಪರಮಹರುಷದಿಂದುಬ್ಬಿ ಶ್ರೀಗುರೂಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ದೀಕ್ಷಾತ್ರಯಂಗಳಿಂದ ತನುತ್ರಯಂಗಳ ನಿವೃತ್ತಿ ಮಾಡಿ ಮಂತ್ರಸ್ವರೂಪವಾದ ಆಚಾರಲಿಂಗವ ಶಿಷ್ಯನ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಸಾಹಿತ್ಯವ ಮಾಡಿದನೆಂಬುದೀಗ ಹೆಣನೂದಿ ರುಧಿರಸುರಿಯಲಾಗಿ ಎಂಬ ಶಬ್ದಕ್ಕರ್ಥ. ಆ ಚಿದ್ಪ್ರಸನ್ನನಾದ ಶರಣನ ಅಂಗದಮೇಲೆ ಪಂಚಾಚಾರಸಂಬಂಧವಾಗಲು ಷಡ್ವಿಧ ಅಧಿದೇವತೆಗಳು ನಷ್ಟವಾದವೆಂಬುದೀಗ ಆದರ ಭಾರ ತಾಗಿ ಸೂನಿಗೆ ಮುರಿಯಿತ್ತು ಸೂನಿಗೆ ಕಾಣಬಾರದು ಎಂಬ ಶಬ್ದಕ್ಕರ್ಥ. ಅಂತು ಇಪ್ಪತ್ತೈದು ತತ್ವಂಗಳೆಲ್ಲ ಚಿದ್ಘನಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ ಹೆಣ ಬಯಲಾಯಿತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೮

ಕೋಡಗದಣಲಿನಲ್ಲಿ ಮೂರಗುಳ ಕಂಡೆ. ಒಂದಗುಳು ಚಪ್ಪೆಗಲ್ಲಿನಂದ, ಒಂದಗುಳು ಅಡ್ಡಗಲ್ಲಿನಂದ, ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದಾಗಿ. ಆ ಕಲ್ಲಿನ ತುದಿಯಲ್ಲಿ ನಿಂದು ಕೋಡಗವ ಕೊಂದೆ ಚಪ್ಪಗಲ್ಲನಪ್ಪಳಿಸಿದೆ, ಅಡ್ಡ ಗಲ್ಲನಡ್ಡಿಗೆಯನಿಕ್ಕಿ ಒಡೆದೆ, ನಿಂದಕಲ್ಲ ಸಂದೇಹವಿಲ್ಲದೆ ತಳ್ಳಿದೆ. ಇದರಿಂದ ವ ತಿಳಿ ಲಿಂಗೈಕ್ಯನಾದಡೆ ಹೊಂದವ ಬಟ್ಟೆ ಎಂದೆ ನಿಃಕಳಂಕ ಮಲ್ಲಿಕಾ ರ್ಜುನಾ ॥ ೧೨೫ ॥

ಟೀಕೆ:— ಮನವೆಂಬ ಕರ್ಮವನ್ನು ಸಂಕಲ್ಪವೆಂಬ ದಾಡಿಯಲ್ಲಿ ಸಂಚಿತ ಪ್ರಾ ಬ್ಧ ಆಗಾಮಿ ಎಂಬ ಕರ್ಮತ್ರಯಂಗಳನವಗ್ರಹಿಸಿಕೊಂಡಿರುತ್ತಿಹುದೆಂಬುದೀಗ ಕೋಡಗದಣಲಿನಲ್ಲಿ ಮೂರಗುಳ ಕಂಡೆನೆಂಬ ಶಬ್ದಕ್ಕರ್ಥ. ಸಂಚಿತಕರ್ಮವು ರಜೋ ಗುಣಸಂಬಂಧವಾದ ಸ್ಥೂಲತನುಸ್ವರೂಪವಾಗಿಹುದೆಂಬುದೀಗ ಒಂದಗುಳು ಚಪ್ಪೆ ಗಲ್ಲಿನಂದ ಎಂಬ ಶಬ್ದಕ್ಕರ್ಥ. ಪ್ರಾರಬ್ಧಯೋಗವು ಸಾತ್ವಿಕ ಗುಣಸಂಬಂಧವಾದ

ಸೂಕ್ಷ್ಮತನುಸ್ವರೂಪವಾಗಿಹುದೆಂಬುದೀಗ ಒಂದಗುಳು ಆಡ್ಡಗಲ್ಲಿನಂದವೆಂಬ ಶಬ್ದಕ್ಕರ್ಥ. ಆಗಾಮಿಕರ್ಮವೆಂಬುದು ತಮೋಗುಣಸಂಬಂಧವಾದ ಕಾರಣ ದೇಹಸ್ವರೂಪವಾಗಿಹುದೆಂಬುದೀಗ ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದು ಎಂಬ ಶಬ್ದಕ್ಕರ್ಥ. ಅಂತಪ್ಪ ತನುತ್ರಯ ಸಂಬಂಧಿಯಾಗಿರ್ದ ಆತ್ಮಂಗೆ ಶಿವಜ್ಞಾನ ಪ್ರಕಾಶಿಸಲು ಅಹಂಕಾರವಳಿದು ಶಿವಹುಂಕಾರಗ್ರಂಥಿಯಲ್ಲಿ ಸುಸ್ಥಿರವಾಗಿ ನಿಂತು ಆ ಮನೋವರ್ತನೆಯ ನಿವೃತ್ತಿಮಾಡಿ ಉನ್ಮನಿತತ್ವಸ್ವರೂಪವಮಾಡಿದೆನೆಂಬುದೀಗ ಆ ಕಲ್ಲಿನತುದಿಯಲ್ಲಿ ನಿಂತು ಕೋಡಗವ ಕೊಂದೆ ಎಂಬ ಶಬ್ದಕ್ಕರ್ಥ. ಅಂತು ಮನೋವರ್ತನೆಯಳಿದು ಗುರೂಪಾವಸ್ಥೆಯ ಮಾಡುವ ಶಿಷ್ಯಂಗೆ ಶ್ರೀಗುರು ಪ್ರಸನ್ನನಾಗಿ ಶಿಷ್ಯಂಗೆ ಕ್ರಿಯಾ ದೀಕ್ಷೆಯಿಂದ ಸ್ಥೂಲತನುವ ನಷ್ಟವಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ ಚಪ್ಪಗಲ್ಲನಪ್ಪಳಿಸಿದನೆಂಬ ಶಬ್ದಕ್ಕರ್ಥ. ಆ ಶ್ರೀಗುರು ಮಂತ್ರದೀಕ್ಷೆಯಿಂದ ಸೂಕ್ಷ್ಮತನುವ ನಷ್ಟವಮಾಡಿ ಚೈತನ್ಯ ಸ್ವರೂಪವಾದ ಪ್ರಾಣಲಿಂಗವ ಸಾಹಿತ್ಯವ ಮಾಡಿದನೆಂಬುದೀಗ ಅಡ್ಡಗಲ್ಲನದ್ದಿ ಗೆಯ್ಯನಿಕ್ಕಿ ಒಡೆದೆನೆಂಬ ಶಬ್ದಕ್ಕರ್ಥ. ಆ ಶ್ರೀಗುರು ವೇಧಾ ದೀಕ್ಷೆಯಿಂದ ತಮೋಗುಣ ಸಂಬಂಧವಾದ ಕಾರಣ ದೇಹವ ನಷ್ಟವಮಾಡಿ ಅಖಂಡ ಪರಿಪೂರ್ಣವಾದ ಭಾವಲಿಂಗದ ಸಂಬಂಧವ ಮಾಡಿದೆನೆಂಬುದೀಗ ನಿಂದಕಲ್ಲ ಸಂದೇಹವಿಲ್ಲದೆ ತಳ್ಳಿದೆನೆಂಬ ಶಬ್ದಕ್ಕರ್ಥ. ಅಂತು ಶ್ರೀಗುರುವಿನ ಸದ್ಭಾವದಿಂದೊದಗಿದ ಕಾರಣ ಸಂಚಿತಕರ್ಮ ಕೆಟ್ಟಿತ್ತು. ಲಿಂಗಭೋಗೋಪಭೋಗಿಯಾದ ಕಾರಣ ಪ್ರಾರಬ್ಧಭೋಗ ಕೆಟ್ಟಿತ್ತು. ಮಹಾಘನ ಲಿಂಗದಲ್ಲಿ ಸಮರಸೈಕ್ಯವಾದ ಕಾರಣ ಆಗಾಮಿಕರ್ಮ ಕೆಟ್ಟಿತ್ತು. ಇಂತೀ ತ್ರಿವಿಧವಳಿದು ನಿತ್ಯಸ್ವರೂಪನಾದ ಶರಣಂಗೆ ಅನಿತ್ಯವಾದ ಮರಣ ಭಯವಿಲ್ಲದೆ ಹೋಯಿತೆಂಬುದೀಗ ಇದರಂದವ ತಿಳಿ ಲಿಂಗೈಕ್ಯನಾದಡೆ ಹೊಂದದ ಬಟ್ಟೆ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೭೯

ಗೂಳಿಯ ಕೋಡಿನಲ್ಲಿ ನಾಡೆಲ್ಲ ಸಿಕ್ಕಿತ್ತು. ಗೂಳಿಯ ಕೊಲ್ಲಬಾರದು ನಾಡು ಕಾಡ ಕೂಡಿತ್ತು. ಈ ರೂಢಿಯೊಳಗಣ ಹೊಲನ ಮೇದು, ಆಡ ಬಂದಿಯೋ ? ಕಾಡಿನ ನಾಡ ಬಿಟ್ಟು ರೂಢಿಯ ಮೋಹ ಬಿಡಬೇಡ. ನಿನ್ನ ಬೇಡಿಕೊಂಬೆ ನಿಃಕಳಂಕ ಮಲ್ಲಿಕಾರ್ಜುನಾ. ॥ ೧೨೬ ॥

ಟೀಕೆ:— ದೇಹಸಂಬಂಧವಾಗಿದ್ದ ಆತ್ಮನೆಂಬುದೀಗ ಗೂಳಿ ಎಂಬ ಶಬ್ದಕ್ಕರ್ಥ ಅಂತಪ್ಪ ಆತ್ಮಂಗೆ ಅಹಂಕಾರ ಮಮಕಾರಗಳೆಂಬ ಎರಡು ಕೋಡುಗಳು ಉತ್ಪನ್ನವಾಗಿಹವೆಂಬುದೀಗ ಕೋಡಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನ ತನುತ್ರಯ ಮುಖ್ಯವಾದ ಸಕಲ ಕರಣಂಗಳೆಲ್ಲವು ಅಹಂಕಾರದಲ್ಲಿ ಸಿಕ್ಕಿದವೆಂಬು

ದೀಗ ನಾಡೆಲ್ಲ ಸಿಕ್ಕಿತ್ತು ಎಂಬ ಶಬ್ದಕ್ಕರ್ಥ. ಆ ಜೀವಾತ್ಮನ ಜೀವಭಾವವನ್ನು ಅರಿಗೆಯು ಛೇದಿಸಬಾರದೆಂಬುದೀಗ ಗೂಳಿಯ ಕೊಲಬಾರದು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳೆಲ್ಲವು ಭವಾರಣ್ಯ ಪ್ರವೇಶಿಗಳಾಗಿಹನೆಂಬುದೀಗ ನಾಡು ಕಾಡ ಕೂಡಿತ್ತು ಎಂಬ ಶಬ್ದಕ್ಕರ್ಥ ಆ ಸಜ್ಜೀವನು ದೇಹವೆಂಬ ಕ್ಷೇತ್ರದಲ್ಲಿ ಬೆಳೆದ ಶಬ್ದಾದಿ ವಿಷಯಂಗಳನ್ನು ಪ್ರಕೃತಿ ಭಾವದಿಂದ ಭಕ್ಷಿಸುತ್ತಿಹನೆಂಬುದೀಗ ಈ ರೂಢಿಯೊಳಗಣ ಹೊಲನ ಮೇದು ಎಂಬ ಶಬ್ದಕ್ಕರ್ಥ ಅಂತಪ್ಪ ಅತ್ಮನು ಸಕಲ ಪ್ರಪಂಚಿನಲ್ಲಿ ವರ್ತಿಸುತ್ತಿಹನೆಂಬುದೀಗ ಆಡಬಂದಿಯೋ ಎಂಬ ಶಬ್ದಕ್ಕರ್ಥ. ಅಂತಪ್ಪ ಅತ್ಮಂಗೆ ಸುಜ್ಞಾನೋದಯವಾಗಲು ಅಹಂಕಾರ ಮುಖ್ಯವಾದ ಸಕಲ ಕರಣಂಗಳ ನಿವೃತ್ತಿಮಾಡಿ ಶ್ರೀಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾಗಿ ಭಕ್ತಿಕ್ಷೇತ್ರದಲ್ಲಿ ಬೆಳೆದ ರೂಪು ರುಚಿ ತೃಪ್ತಿ ಮೊದಲಾದ ಸಕಲ ಪದಾರ್ಥವನ್ನು ಭಕ್ತಿಯಿಂದ ಆಯಾ ಲಿಂಗಮುಖದಲ್ಲಿ ಅರ್ಪಿಸಿ ಆ ಪರತತ್ವ ಪ್ರಸಾದವ ಸ್ವೀಕರಿಸುವ ಲಿಂಗಭೋಗೋಪಭೋಗವನ್ನು ಬಿಡಬೇಡ ಎಂದು ಶ್ರೀಗುರು ಶಿಷ್ಯಂಗೆ ಅತ್ಯಂತ ಪ್ರೀತಿಯಿಂದ ಬೋಧಿಸಿದನೆಂಬುದೀಗ ಕಾಡಿನ ನಾಡ ಬಿಟ್ಟು ರೂಢಿಯ ಮೋಹ ಬಿಡಬೇಡ ನಿನ್ನ ಬೇಡಿಕೊಂಬೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೦

ಗ್ರಾಮಮಧ್ಯದೊಳಗೆ ದೇಗುಲ, ದೇಗುಲದೊಳಗೆ ಮೂವರ ಕಂಡೆ. ಒಬ್ಬ ನಡೆಯಾಡುತ್ತಿದ್ದ. ಒಬ್ಬ ನುಡಿವುತ್ತಿದ್ದ. ಒಬ್ಬ ಅಳುತ್ತಿದ್ದ. ಬಂದು ನೋಡಲಾಗಿ, ನಡೆವವನ ಕಾಲನಡಗಿಸಿ, ನುಡಿವವನ ಬಾಯಮುಚ್ಚಿ, ಅಳುವವನ ಕಣ್ಣಿನಲ್ಲಿ ಬಣ್ಣ ಬಚ್ಚಣೆಯ ಮಣ್ಣ ತುಂಬಿ ,ಈ ಮೂರ ಎಡೆಯಾಟದಲ್ಲಿ ನೋಯಲಾರದೆ, ಅಂಜಿ ಅಳಸಿ ಹಿಂಗಿದ್ದೆ ನಿಃಕಳಂಕ ಮಲ್ಲಿಕಾರ್ಜುನಾ || ೧೨೭ ||

ಟೀಕೆ:— ಪಂಚಭೂತಾಶ್ರಯವಾದ ದೇಹದ ಮಧ್ಯದಲ್ಲಿ ಸೂಕ್ಷ್ಮಾಂತರಂಗವೆಂಬ ನಿಳಯವು ಒಪ್ಪುತ್ತಿಹುದೆಂಬುದೀಗ ಗ್ರಾಮ ಮಧ್ಯದೊಳಗೆ ದೇಗುಲವೆಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮಾಂತರಂಗದಲ್ಲಿ ಜೀವತ್ರಯಂಗಳು ಅಜ್ಞಾನ ಸ್ವರೂಪಿಗಳಾದಿರುತ್ತಿಹುದೆಂಬುದೀಗ ದೇಗುಲದೊಳಗೆ ಮೂವರು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರಯಂಗಳಿಪ್ಪ ಭೇದವ ಶರಣನು ಸುಜ್ಞಾನ ದೃಷ್ಟಿಯಿಂದ ಕಂಡನೆಂಬುದೀಗ ಕಂಡೆ ಎಂಬ ಶಬ್ದಕ್ಕರ್ಥ. ಸ್ಥೂಲ ತನುವಿನಲ್ಲಿಪ್ಪ ವಿಶ್ವನು ಜಾಗ್ರಾವಸ್ಥೆಯ ವ್ಯಾಪಾರದಲ್ಲಿ ಚರಿಸುತ್ತಿಹನೆಂಬುದೀಗ ಒಬ್ಬ ನಡೆಯಾಡುತ್ತಿದ್ದನೆಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನಲ್ಲಿಪ್ಪ ತೈಜಸನು ಇಂದ್ರಿಯಂಗಳ ಶಬ್ದ ಜಾಲದೊಳಗೆ

ಸಿಲುಕಿದನೆಂಬುದೀಗ ಒಬ್ಬನು ನುಡಿವುತ್ತಿದ್ದ ಎಂಬ ಶಬ್ದಕ್ಕರ್ಥ. ಕಾರಣ ತನು ವಿನಲ್ಲಿದ್ದ ಪ್ರಾಜ್ಞನು ಸಂಸಾರ ಪ್ರಪಂಚದಲ್ಲಿ ಸಿಲುಕಿ ದುಃಖಜೀವಿಯಾಗಿದ್ದನೆಂಬುದೀಗ ಒಬ್ಬನು ಅಳುತ್ತಿದ್ದನೆಂಬ ಶಬ್ದಕ್ಕರ್ಥ ಇಂತಪ್ಪ ಜೀವತ್ರಯಂಗಳ ಮಧ್ಯದಲ್ಲಿ ಸುಜ್ಞಾನೋದಯವಾಗಲು ಸಕಲ ಪ್ರಪಂಚವ ನಿವೃತ್ತಿ ಮಾಡಿ ಶ್ರೀಗುರುಕಾರುಣ್ಯವ ಸ್ಥಿಯ ಮಾಡಲು ಆ ಶ್ರೀಗುರುವು ಕೃಪಾದೃಷ್ಟಿಯಿಂದ ನೋಡಿ ಕ್ರಿಯಾದೀಕ್ಷೆಯಿಂದ ಜೀವನ ಜೀವಭಾವನ ನೇಧಿಸಿ ಸತ್ಕ್ರಿಯಾಂಗದಲ್ಲಿ ಇಷ್ಟಲಿಂಗದ ಸಂಬಂಧವ ಮಾಡಿದನೆಂಬುದೀಗ ಬಂದುನೋಡಲಾಗಿ ನಡೆವವನ ಕಾಲನಡಗಿಸಿ ಎಂಬ ಶಬ್ದಕ್ಕರ್ಥ. ಶಬ್ದಜಾಲಂಗಳಿಂದ ಉಲಿವುತ್ತಿದ್ದ ತೈಜಸನ ಮಂತ್ರದೀಕ್ಷೆಯಿಂದ ಭಿನ್ನಾಪೇಕ್ಷೆಯ ನಿವೃತ್ತಿ ಮಾಡಿ ಚೈತನ್ಯಸ್ವರೂಪವಾದ ಪ್ರಾಣಲಿಂಗ ಸಂಬಂಧವ ಮಾಡಿದನೆಂಬುದೀಗ ನುಡಿವವನ ಬಾಯಮುಚ್ಚಿ ಎಂಬ ಶಬ್ದಕ್ಕರ್ಥ. ಆ ದುಃಖಜೀವಿಯಾಗಿದ್ದ ಪ್ರಾಜ್ಞನ ವೇಧಾದೀಕ್ಷೆಯಿಂದ ಭಿನ್ನಜ್ಞಾನವ ನಿವೃತ್ತಿ ಮಾಡಿ ಪರಿಪೂರ್ಣಜ್ಞಾನ ಚಿತ್ತ ಪ್ರಭಾವಿಸಿಕೊಟ್ಟು ಅಲ್ಲಿ ಭಾವಲಿಂಗ ಸಾಹಿತ್ಯವ ಮಾಡಿದನೆಂಬುದೀಗ ಅಳುವವನ ಕಣ್ಣಿನಲ್ಲಿ ಬಣ್ಣ ಬಚ್ಚಣೆಯ ಮಣ್ಣ ತುಂಬಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳ ವರ್ತನೆಯಲ್ಲಿ ದುಃಖವಂ ಬಡಲಾರದೆ ದೇಹೋಹಂ ಭಾವಕ್ಕಂಜಿ ಸಂಸಾರ ಪ್ರಪಂಚವ ನಿವೃತ್ತಿ ಮಾಡಿ ಸರ್ವಾಂಗಲಿಂಗಸಂಬಂಧಿಯಾಗಿರ್ದ ಶರಣನೆಂಬುದೀಗ ಈ ಮೂವರ ಎಡೆಯಾಟದಲ್ಲಿ ನೋಡಲಾರದೆ ಅಂಜಿ ಅಲಸಿ ಹಿಂಗಿದ್ದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೧

ಗೇಣಗಲದ ಹಳ್ಳ, ಕುಡಿಯಿತ್ತು ಸಪ್ತಸಮುದ್ರದುದಕವ. ಗಾವುದ ಹಾದಿಯ ಊರು ಹದಿನಾಲ್ಕು ಲೋಕವ ನುಂಗಿತ್ತು. ಮನೆಯೊಳಗಣ ಒರಳು ಜಂಬುದ್ವೀಪ ನವಖಂಡ ಪೃಥ್ವಿಯ ನುಂಗಿತ್ತು. ನುಂಗಿದ ಮುಚ್ಚಳಿಗೆ ತೆರಹಿಲ್ಲದೆ ಮತ್ತೆ ಆ ಮನೆಯ ನುಂಗಿತ್ತು. ಇಂತಿವು ಒಳಗಾದವನೆಲ್ಲವ ಪತಂಗ ನುಂಗಿತ್ತು. ನುಂಗಿದ ಪತಂಗ ಹಿಂಗಿಯಾಡುತ್ತಿದ್ದಿತ್ತು. ಕಂಡಿತ್ತು ಬೆಂಕಿಯ ಬೆಳಗ. ಬಂದು ಸುಖಿಸಿಹೆನೆಂದು ಹೊಂದಿಹೋಯಿತ್ತು. ಇದರಂದವ ತಿಳಿ ಲಿಂಗೈಕ್ಯನಾದಡೆ ನಿಃಕಳಂಕ ಮಲ್ಲಿಕಾರ್ಜುನಾ. ॥ ೧೨೮ ॥

**ಟೀಕೆ:—** ಅತ್ಯಂತ ಸೂಕ್ಷ್ಮವಾದ ಜೀವನು ಆಶಾತೃಷೆಯಿಂದ ಸಪ್ತವ್ಯಸನಂಗಳಲ್ಲಿ ತುಂಬಿದ್ದ ಸಂಸಾರ ವಿಷಯ ಜಲವ ಸ್ವೀಕರಿಸುತ್ತಿದ್ದನೆಂಬುದೀಗ ಗೇಣಗಲದ ಹಳ್ಳ ಕುಡಿಯಿತ್ತು ಸಪ್ತಸಮುದ್ರದುದಕವ ಎಂಬ ಶಬ್ದಕ್ಕರ್ಥ, ಜಾಗರಾವಸ್ಥೆಯ ವ್ಯಾಪಾರವನೊಳಕೊಂಡಿಹ ದೇಹವು ಚತುರ್ದಶೇಂದ್ರಿಯಂಗಳನೊಳಕೊಂಡು ತೋರುತ್ತಿಹುದೆಂಬುದೀಗ ಗಾವುದ ಹಾದಿಯ ಊರು ಹದಿನಾಲ್ಕು ಲೋ

ಕವ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತರ್ದೇಹದಲ್ಲಿ ಚಲಿಸುತ್ತಿಪ್ಪ ಸೂಕ್ಷ್ಮವಾದ ಮನಸ್ಸು ಅಂತರ್ಬ್ರಹ್ಮಾಂಡಗಳಲ್ಲಿ ಪರಿಪೂರ್ಣವಾಗಿ ವ್ಯಾಪ್ತಿಯನ್ಯೆದಿ ಇರುತ್ತಿಹುದೆಂಬುದೀಗ ಮನೆಯೊಳಗಣ ಒರಳು ಜಂಬುದ್ವೀಪ ನವಖಂಡ ಪೃಥ್ವಿಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಬ್ರಂಹ್ಮಾಂಡಗಳಲ್ಲಿ ಪ್ರಕೃತಿ ಭಾವದಿಂದ ಚರಿಸುತ್ತಿರ್ದ ಮನಕ್ಕೆ ಖಂಡಿತವಿಲ್ಲದೆ ಸರ್ವಾಂಗವನ್ನು ಸಂಕಲ್ಪಭಾವದಿಂದ ಅವಗ್ರಹಿಸಿತ್ತೆಂಬುದೀಗ ನುಂಗಿದ ಮುಚ್ಚಳಿಗೆ ತೆರಹಿಲ್ಲದೆ ಮತ್ತೆ ಆ ಮನೆಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಸಕಲ ತತ್ವಂಗಳೆಲ್ಲವನ್ನು ಚಿತ್‌ಸೂರ್ಯನುದಯವಾಗಿ ಆ ಸಮೂಹವನವಗ್ರಹಿಸಿತ್ತೆಂಬ ದೀಗ ಇಂತಿವುಒಳಗಾದವನೆಲ್ಲವ ಪತಂಗ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಪ್ರಕಾಶವನೊಳಕೊಂಡಿಪ್ಪ ಶರಣನು ಸಕಲ ಪ್ರಪಂಚವ ಬೇರ್ಪಡಿಸಿ ಶಿವಾಪೇಕ್ಷೆಯ ಮುಂದುಗೊಂಡು ಚಿದ್ವಿಲಾಸದಿಂದ ಸಂಚರಿಸುತ್ತಿಹನೆಂಬುದೀಗ ನುಂಗಿದ ಪತಂಗ ಹಿಂಗಿಯಾಡುತ್ತಿದ್ದಿತ್ತು ಎಂಬ ಶಬ್ದಕ್ಕರ್ಥ. ಆ ಶಿವಾಪೇಕ್ಷೆಯ ಮುಂದುಗೊಂಡಿರ್ದ ಶರಣನ ಸುಜ್ಞಾನ ದೃಷ್ಟಿಯ ಮುಂದೆ ತೋರಿದ ಚಿದಗ್ನಿಸ್ವರೂಪವಾದ ಪರಬ್ರಹ್ಮವ ಶ್ರೀಗುರು ಕಾರುಣ್ಯದಿ ಪ್ರತ್ಯಕ್ಷವಮಾಡಿಕೊಂಡು ಸರ್ವಾಂಗಲಿಂಗಸಂಬಂಧಿಯಾಗಿ ಸಕಲ ಪದಾರ್ಥಂಗಳ ಸದ್ಭಕ್ತಿಯಿಂದ ಲಿಂಗಕ್ಕರ್ಪಿಸಿ ಆ ಪರಮ ಪ್ರಸಾದವ ಸ್ವೀಕರಿಸಿ ನಿಜದಲ್ಲಿ ನಿಃಪತ್ತಿಯಾದನೆಂಬುದೀಗ ಕಂಡಿತ್ತು ಬೆಂಕಿಯ ಬೆಳಗ ಬಂದು ಸುಖಿಸಿಹೆನೆಂದು ಹೊಂದಿಹೋಯಿತ್ತು ಇದರಂದವ ತಿಳಿ ಲಿಂಗೈಕ್ಯನಾದಡೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೨

ಗಾರುಡವ ತಿಳಿದಡೆ ಹಾವಿನ ಸಂಗವೆ ಲೇಸು. ಆಪ್ಯಾಯನವರತಡೆ ಹಸಿವಿನ ಸಂಗವೆ ಲೇಸು. ವಿಕಾರ ವರತಡೆ ಕಾಲವ್ಯಾಘ್ರನ ಸಂಭಾಷಣೆಯೆ ಲೇಸು. ನನ್ನನರಿತು ನಿಮ್ಮ ಬೆರದಡೆ ನಿನಗೆ ಲೇಸು ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೬ ॥

ಟೀಕೆ:— ಶಿವಮಂತ್ರ ಸ್ಮರಣೆಯಿಂದ ಮನಸ್ಸಿನ ಶಂಕಾವಿಷವ ತೊಲಗಿಸಿ ಉನ್ಮನೀತತ್ವಸ್ವರೂಪವನ್ಯೆದಿಸಬಲ್ಲಡೆ ಆ ಮನಸ್ಸೇ ಸತ್ಪಥಕ್ಕೆ ಕಾರಣವಾಗಿಹುದೆಂಬುದೀಗ ಗಾರುಡವ ತಿಳಿವಡೆ ಹಾವಿನ ಸಂಗವೆ ಲೇಸು ಎಂಬ ಶಬ್ದಕ್ಕರ್ಥ. ಆ ಜೀವನ ಆಶಾತೃಷ್ಣೆಯನ್ನು ಶಿವಾಪೇಕ್ಷೆಯಿಂದ ನಿವೃತ್ತಿಮಾಡಿ ಸಜ್ಜೀವ ಸ್ವರೂಪನಾದೊಡೆ ಆ ಜೀವನ ಸಂಗವೇ ಸದ್ಗತಿಗೆ ಕಾರಣವೆಂಬುದೀಗ ಆಪ್ಯಾಯನ ವರತಡೆ ಹಸಿವಿನ ಸಂಗವೆ ಲೇಸು ಎಂಬ ಶಬ್ದಕ್ಕರ್ಥ. ಸರ್ವಾಂಗಕಾಮವಿಕಾರವರತು ನಿರ್ವಿಕಾರ ಸ್ವರೂಪವಾದೊಡೆ ಕಾಲವ್ಯಾಘ್ರನ ಕೂಡಿದ್ದಡೂ ಭಯವಿಲ್ಲವೆಂಬುದೀಗ ವಿಕಾರ ವರತಡೆ ಕಾಲವ್ಯಾಘ್ರನ ಸಂಭಾಷಣೆಯೇ ಲೇಸು ಎಂಬ ಶಬ್ದಕ್ಕರ್ಥ. ಆ

ಚಿದ್ರೂಪನಾದ ಶರಣನು ಚಿದ್ಘನ ಲಿಂಗಕ್ಕೆ ಚಿತ್ಪ್ರಭಾಂಗಸ್ವರೂಪನೆಂದರಿದು ಆ ಚಿದ್ಘನ ಲಿಂಗದಲ್ಲಿ ಬೆರಸಿ ಆ ಲಿಂಗಕ್ಕಧಿಷ್ಠಾಯಕನಾಗಿದ್ದನೆಂಬುದೀಗ ನಸ್ನನ ರಿತು ನಿಮ್ಮ ಬೆರೆದಡೆ ನಿನಗೆ ಲೇಸು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೩

ತಲೆ ಇಲ್ಲದ ಹಾವು ಕಚ್ಚಿ ವಿಷ ಹತ್ತುವದಕ್ಕೆ ಮೊದಲೆ ಜೀವ ಸತ್ತಿತ್ತು. ಜೀವ ಬಿದ್ದು ಘಟದ ಬಂಧುಗಳೆಲ್ಲರು ಕೂಡಿ ಶೋಕವ ಮಾಡುತ್ತಿದ್ದರು. ಅವರೊಳಗೊಬ್ಬ ನಗುತ್ತಿದ್ದಹನು. ನಗುವವ ಕಂಡು ಒಬ್ಬನೆದ್ದು ಹೆಣವ ಬಾಯ ಹೊಯಿದನು ಐವರ ಮೂಗ ಕೊಯ್ದು ಐವತ್ತಿಬ್ಬರ[1] ನಾಲಿಗೆಯ ಕಿತ್ತು ಕೇಳುವದ ಕಂಡಂಜಿ, ಹದಿನಾರು ಮಂದಿ ಹಳುಹಾಯ್ದರು. ಎಂಟು ಬಂಟರು ಕಂಟಕನಾಶವಾದರು.[2] ಇಪ್ಪತ್ತೈದು ಮಂದಿ ಸೊಪ್ಪಡಗಿದರು. ಇವರೆಲ್ಲರ ಕಳುವನ್ನಕ್ಕ ಕತ್ತಲೆ ಹರಿದು ಬೆಳಗಾಯಿತ್ತು. ಅಂಗೈಯೊಳಗಡಗಿದ ಬರೆಯ ಕಂಗಳಿಗೆ ತಂದೆ, ಕರಿಗಳು ನುಂಗಿ ಹಿಂಗದಿದ್ದೆ. ನೀ ಸತ್ತೆ ನಾ ಸಾಯೆ. ಸಾವರ ಕಂಡು ಸಾವಧಾನಿಯಾಗಿರ್ದೆನಯ್ಯಾ- ಆದ ಮತ್ತೆ ಆಡಿಹೆ ಆಗೆನೆಂಬುದಿಲ್ಲ, ನಿಃಕಳಂಕ ಮಲ್ಲಿಕಾರ್ಜುನನ ಏನೆಂದು ಎನಲಿಲ್ಲವಾಗಿ. ॥ ೧೨೭ ॥

**ಟೀಕೆ:—** ತಲೆ ಎಂದಡೆ ಸುಜ್ಞಾನ ಪ್ರಕಾಶ ಅಂತಪ್ಪ ಸುಜ್ಞಾನವಿಲ್ಲದ ಅಜ್ಞಾನಸ್ವರೂಪ ಶಂಕಾವಿಷ ಸಂಬಂಧವಾದ ಮನಸ್ಸು ಜೀವನನವಗ್ರಹಿಸಲೊಡನೆ ಆ ಜೀವನ ಸುಜ್ಞಾನ ನಷ್ಟವಾಗಿ ಜೀವನ್ಮೃತನಾಗಿದ್ದನೆಂಬುದೀಗ ಕಚ್ಚಿ ವಿಷ ಹತ್ತುವದಕ್ಕೆ ಮೊದಲೇ ಜೀವ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಶಿವಜ್ಞಾನವು ನಷ್ಟವಾಗಿ ಅಜ್ಞಾನಿಯಾಗಿಪ್ಪಲ್ಲಿ ಆ ದೇಹ ಸಂಬಂಧವಾದ ಸಕಲ ಕರಣಂಗಳೆಲ್ಲವು ದುಃಖಜೀವಿಗಳಾಗಿದ್ದವೆಂಬುದೀಗ ಜೀವ ಬಿದ್ದು ಘಟದ ಬಂಧುಗಳೆಲ್ಲರು ಕೂಡಿ ಶೋಕವ ಮಾಡುತ್ತಿದ್ದರು ಎಂಬ ಶಬ್ದಕ್ಕರ್ಥ ಇಂತು ದುಃಖಜೀವಿಗಳಾಗಿಪ್ಪಲ್ಲಿ ಅಂತರಾತ್ಮನು ಸದ್ವಿವೇಕ ಮುಖದಿಂದ ಜೀವನ ವರ್ತನೆಯ ಪರಮಹರುಷದಿಂದ ಹಾಸ್ಯವ ಮಾಡುತ್ತಿದ್ದನೆಂಬುದೀಗ ಅವರೊಳಗೊಬ್ಬ ನಗುತ್ತಿದ್ದಹನು ಎಂಬ ಶಬ್ದಕ್ಕರ್ಥ. ಅಂತರಾತ್ಮನ ವಿವೇಕದಿಂದ ಪರಮಾತ್ಮನೆಚ್ಚತ್ತು ನೋಡಿ ಆ ಜೀವನ್ಮೃತ ಪಿಂಡವ ಭಿನ್ನಾಪೇಕ್ಷೆಯ ನಿವೃತ್ತಿ ಮಾಡಿದನೆಂಬುದೀಗ ನಗುವದ ಕಂಡು ಒಬ್ಬನೆದ್ದು ಹೆಣದ ಬಾಯ ಹೊಯಿದನೆಂಬ ಶಬ್ದಕ್ಕರ್ಥ. ಪಂಚಭೂತಂಗಳ ದೇಹಾಭಿ

---

೧ (ಡ) ಅಳುತ್ತಿಪ್ಪವರ
(ಡ) ಅವರಿಬ್ಬರ
೨ (ಡ) ಕಂಠ ನಷ್ಟವಾದರು

ಮಾನವನ್ನು ಸುಜ್ಞಾನ ಮುಖದಿಂದ ಛೇದಿಸಿದನೆಂಬುದೀಗ ಐವರ ಮೂಗ ಕೊಯ್ದು ಎಂಬ ಶಬ್ದಕ್ಕರ್ಥ. ಷಡಾಧಾರ ಚಕ್ರಂಗಳಲ್ಲಿಪ್ಪ ಐವತ್ತೆರಡು ಜೀವನಾಕ್ಷರಂಗಳ ಭಿನ್ನಾಪೇಕ್ಷೆಯ ಶಿವಜ್ಞಾನ ಪ್ರಕಾಶದಿಂದ ನಿವೃತ್ತಿ ಮಾಡಿದನೆಂಬುದೀಗ ಐವತ್ತಿಬ್ಬರ ನಾಲಿಗೆಯ ಕಿತ್ತು ಎಂಬ ಶಬ್ದಕ್ಕರ್ಥ. ಆ ಜೀವನಾಕ್ಷರಂಗಳು ನಿವೃತ್ತಿಯಾಗಲು ಶಿವಜ್ಞಾನ ಪ್ರಕಾಶದಿಂದ ಅಂತರಂಗದ ಅಷ್ಟಮದ, ಬಹಿರಂಗದ ಅಷ್ಟಮದಂಗಳು ಸಕಲ ಪ್ರಪಂಚಿನೊಡನೆ ನಷ್ಟವಾಗಿ ಹೋದನೆಂಬುದೀಗ ಕೀಳುವದ ಕಂಡಂಜಿ ಹದಿನಾರು ಮಂದಿ ಹಳುಹಾಯ್ದರು ಎಂಬ ಶಬ್ದಕ್ಕರ್ಥ. ಇಂತು ನಷ್ಟವಾಗಲು ಉತ್ಪತ್ತಿಗೆ ಕಾರಣವಾದ ಅಷ್ಟತನುಗಳ ಕಂಟಕಾದಿಗಳೆಲ್ಲ ನಾಸ್ತಿಯಾದವೆಂಬುದೀಗ ಎಂಟು ಬಂಟರು ಕಂಟಕನಾಶವಾದರು ಎಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟತನು ನಷ್ಟವಾಗಲು ಆತ್ಮನಿಗೆ ಅಂಗವಾಗಿಪ್ಪ ಇಪ್ಪತ್ತೈದು ತತ್ವಂಗಳು ನಷ್ಟವಾದವೆಂಬುದೀಗ ಇಪ್ಪತ್ತೈದು ಮಂದಿ ಸೊಪ್ಪಡಗಿದರು ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ತತ್ವಂಗಳೆಲ್ಲವು ನಿವೃತ್ತಿಯಾಗಲು ಅಜ್ಞಾನ ತಮಸ್ಸು ಹರಿದು ಶಿವಜ್ಞಾನ ಪ್ರಕಾಶವಾಯಿತೆಂಬುದೀಗ ಇವರೆಲ್ಲರ ಕಳುವನ್ನಕ್ಕ ಕತ್ತಲೆ ಹರಿದು ಬೆಳಗಾಯಿತೆಂಬ ಶಬ್ದಕ್ಕರ್ಥ. ಇಂತು ಶಿವಜ್ಞಾನ ಪ್ರಕಾಶವಾಗಲು ಷಡಕ್ಷರಿ ಮಂತ್ರಸ್ವರೂಪವಾದ ಪರಮ ಚಿತ್ಕಲೆಯನ್ನು ಶ್ರೀಗುರು ಭಾವಮನದೃಕ್ಕಿಂದ ಬಹಿಷ್ಕರಿಸಿ ಇಷ್ಟಲಿಂಗ ಸ್ವರೂಪ ಮಾಡಿ ಇದೇ ನಿನ್ನ ನಿಜವಪ್ಪ ಪರಬ್ರಹ್ಮವೆಂದು ಕರಸ್ಥಲದಲ್ಲಿ ಕೊಟ್ಟನೆಂಬುದೀಗ ಅಂಗೈಯೊಳಗಡಗಿದ ಬರೆ ಎಂಬ ಶಬ್ದಕ್ಕರ್ಥ. ಇಂತಪ್ಪ ಇಷ್ಟಲಿಂಗದಲ್ಲಿ ಸತ್ಕ್ರಿಯಾಜ್ಞಾನ ವಿಡಿದಾಚರಿಸಿದ ಶರಣನು ಇಷ್ಟಲಿಂಗದ ಚಿತ್ಕಳೆಯ ತನ್ನ ಸುಜ್ಞಾನ ದೃಷ್ಟಿಯಲ್ಲಿ ಅವಗ್ರಹಿಸಿ ನಿಜಾಂತರಂಗದಲ್ಲಿ ಪ್ರಾಣಲಿಂಗ ಸಾಹಿತ್ಯವ ಮಾಡಿ ಭಿನ್ನವಿಲ್ಲದೆ ಇದ್ದನೆಂಬುದೀಗ ಕಂಗಳಿಗೆ ತಂದೆ ಕಂಗಳು ನುಂಗಿ ಹಿಂಗದಿದ್ದ ಎಂಬ ಶಬ್ದಕ್ಕರ್ಥ ಆ ಚಿದ್ರೂಪನಾದ ಶರಣನ ಕರ ಮನ ಭಾವಂಗಳಲ್ಲಿ ಸಂಬಂಧವ [illegible] ಹ್ಮ ಸದ್ರೂಪವಾಗಿಹುದು. ಆ ಲಿಂಗದಲ್ಲಿ ಸಮರಸವಾದ ಶರಣನು ಜನನ ಮರಣಂಗಳ ಜಯಿಸಿ ನಿತ್ಯನಾಗಿದ್ದನೆಂಬುದೀಗ ನೀ ಸತ್ತೆ ನಾ ಸಾಯೆ ಎಂಬ ಶಬ್ದಕ್ಕರ್ಥ. ಇಂತಪ್ಪ ಪರಮ ಶಿವಲಿಂಗದಲ್ಲಿ ಸಮರಸೈಕ್ಯವನರಿಯದೆ ಮರಣಬಾಧೆಗೊಳಗಾದ ದ್ವೈತಿಗಳ ಕಂಡು ಷಟ್ಸ್ಥಲಜ್ಞಾನಿಯು ಚೋದ್ಯಂಬಡುತ್ತಿದ್ದನೆಂಬುದೀಗ ಸಾವರ ಕಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ದ್ವೈತಭಾವವ ಹೊದ್ದದೆ ಚಿದ್ಘನಲಿಂಗದಲ್ಲಿ ಸಾವಧಾನಿಯಾಗಿದ್ದನೆಂಬುದೀಗ ಸಾವಧಾನಿಯಾಗಿರ್ದೆನಯ್ಯಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧವು ಘಟಿಸಿ ಭಕ್ತಿಜ್ಞಾನದಿಂದ ಆಚರಿಸಿ ಮಹಾಘನಲಿಂಗದಲ್ಲಿ ಎಚ್ಚತ್ತಿಹ ಶರಣನು ಇನ್ನು ಲಿಂಗದಲ್ಲಿ ಕೂಡಬೇಕು ಅಗಲಬೇಕು ಎಂಬುಭಯ ಭಾವವಿಲ್ಲದೆ ಹೋಯಿತ್ತೆಂಬುದೀಗ ಆದ ಮತ್ತೆ ಆದಿಹೆ ಅಗೆನೆಂಬುದಿಲ್ಲ ನಿಃಕಳಂಕ ಮಲ್ಲಿಕಾರ್ಜುನನ ಏನೆಂದೆನಲಿಲ್ಲವಾಗಿ ಎಂಬ ಶಬ್ದಕ್ಕರ್ಥ.

೭೮೧

ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು. ಭವಕಾಲನ ಸಂಕೋಲೆಯ ನಿಕ್ಕಿತ್ತು. ಕುರುಹು ಅರಿವವರ ಕೈಯಲ್ಲಿ ನೆರೆ ನಂಬಿ ಎಂದು ತೆರಪ ಹೇಳಿತ್ತು. ಈ ಅರಿಕೆ ಇನ್ನಾವುದೋ, ನುಡಿವಡೆ ಮಾತಿಂಗಗೋಚರ, ನಡೆವವರಂಗಕ್ಕಗೋಚರ. ಇಂತಿವರೊಳಗೆ ಭಂಗಿತರಾಗಿ ನಾವವರಿಗೇಕೆ ಲಿಂಗಾಂಗಸಂಯೋಗ ನಿಃಕಳಂಕ ಮಲ್ಲಿಕಾರ್ಜುನಾ. ॥ ೧೨೮ ॥

ಟೀಕೆ:—ಸಕಲಪ್ರಪಂಚವಾಸಪದಂಗಳನ್ನು ತೃಣೀಕರಿಸಿಪ್ಪ ಶಿವಾದ್ವೈತ ಭಕ್ತಿ. ಅಂತಪ್ಪ ಸದ್ಭಕ್ತಿಯು ಅಖಂಡಪರಿಪೂರ್ಣವಾದ ಪರಶಿವ ತತ್ವವನವಗ್ರಹಿಸಿತ್ತೆಂಬುದೀಗ ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು ಎಂಬ ಶಬ್ದಕ್ಕರ್ಥ. ಆ ಸದ್ಭಕ್ತಿಯಿಂ ದಿಷ್ಟಲಿಂಗವನೊಳಕೊಂಡಿರ್ಪ ಶರಣನ ನಿರ್ಮಲವಾದ ಶಿವಭಾವವು ಕಾಲನ ಮರಣ ಬಾಧೆಯ ನಿವೃತ್ತಿ ಮಾಡಿತ್ತೆಂಬುದೀಗ ಭವ ಕಾಲನ ಸಂಕೋಲೆಯನಿಕ್ಕಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಇಷ್ಟಬ್ರಹ್ಮವು ತನ್ನ ಪೂಜಕರಾದ ಭಕ್ತಜನಂಗಳಿಗೆ ಪ್ರಾಣಲಿಂಗದ ನಿಜಸ್ವರೂಪವನ್ನು ಚೆನ್ನಾಗಿ ಅರಿ ಎಂದು ಸುಜ್ಞಾನವ ನಿಶ್ಚಯಿಸಿಕೊಡುತ್ತಿಹುದೆಂಬುದೀಗ ಕುರುಹು ಅರಿವವರ ಕೈಯಲ್ಲಿ ನೆರೆ ನಂಬಿ ಎಂದು ತೆರಪ ಹೇಳಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗಸಮರಸಾನಂದ ಸುಖವನರಿವ ಶರಣನ ಸುಜ್ಞಾನ ಪ್ರಕಾಶವು ಎರಡಿಟ್ಟರಿವ ಖಂಡಿತ ಜ್ಞಾನದೊಳಗಲ್ಲವೆಂಬುದೀಗ ಈ ಅರಿಕೆ ಇನ್ನಾವುದು ಎಂಬ ಶಬ್ದಕ್ಕರ್ಥ. ವಾಗದ್ವೈತದರಿವಿಗೂ ದ್ವೈತ ಕ್ರೀಗೂ ಆ ಶರಣನ ನಿಜಾನುಭಾವದರಿವು ಅಸಾಧ್ಯವಾಗಿಹುದೆಂಬುದೀಗ ನುಡಿವಡೆ ಮಾತಿಂಗಗೋಚರ ನಡೆವವರಂಗಕ್ಕಗೋಚರವೆಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತಾದ್ವೈತಿಗಳು ಭಿನ್ನಜ್ಞಾನ ಭಿನ್ನಕ್ರೀಯಿಂದೆ ಫಲಪದಂಗಳ ಪಡೆದು ಭೋಗಿಸಿ ಕಾಮ ಕಾಲಾದಿಗಳಿಂದ ಬಡಿಸಿಕೊಂಡು ಲಯವಾಗಿ ಹೋಗುವವರಿಗೆ ತ್ರಿವಿಧ ಲಿಂಗಾಂಗ ಸಂಬಂಧದ ಭಕ್ತಿಯೋಗ ಘಟಿಸದೆಂಬುದೀಗ ಇಂತಿವರೊಳಗೆ ಭಂಗಿತರಾಗಿ ನಾವವರಿಗೇಕೆ ಲಿಂಗಾಂಗ ಸಂಯೋಗ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೪

ತ್ರಿಭುವನದಗ್ರವಲ್ಲಿ ಮೂವತ್ತಾರು ಲೋಕ. ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ. ಹದಿನಾರು ವರ್ತನದ ಕೊಂಡಿ. ಗುರುಲಘುವೆಂಬ ತೋರ ಗದ. ಅದಕ್ಕೆ ಅಗುಳಿ ದಿವರಾತ್ರಿ ಎಂಬವೆರಡು. ಅಗುಳಿಯ ಸನ್ನದ್ಧವಾಗಿ ಬಲಿದವನ ನೋಡಾ. ಅವನ ನಖದ ಕೊನೆಯಲ್ಲಿ ಲಕ್ಷ ಅಲಕ್ಷವೆಂಬ, ಭೇದ ಅಭೇದವೆಂಬ, ಜರ ನಿರ್ಜರವೆಂಬ, ಅಹುದಲ್ಲವೆಂಬ, ಆಗುಬೇಗೆಂಬ, ಚಿಂತೆ ಸಂತೋಷವೆಂಬ, ಕಾಂಕ್ಷೆ ನಿಃಕಾಂಕ್ಷೆ ಎಂಬ, ಜೀವ ಪರಮರೆಂಬ,

ಇಂತೀ ದ್ವಂದ್ವಂಗಳೆಲ್ಲವು ದ್ವಾರ ಸಂಚಾರಕ್ಕೆ ಅವಧಿಯಾದವು. ಇವಕ್ಕಿಂದ ಮುನ್ನವೆ ಭುವನ ಕೆಟ್ಟಿತ್ತು. ಕೋಟೆ ಕೋಳು ಹೋಯಿತ್ತು. ಹಿರಿಯರಸು ಸಿಕ್ಕಿದ. ಪ್ರಧಾನನ ತಲೆ ಹೋಯಿತ್ತು. ತಳವಾರನ ಕಣ್ಣು ಕಳೆಯಿತ್ತು. ಎಕ್ಕಟಿಗನ ಮಕ್ಕಳೆಲ್ಲರು ನಷ್ಟ ಸಂತಾನವಾದರು. ಸೃಷ್ಟಿಯೊಳಗೆಲ್ಲ ರಣ ಮಯವಾಯಿತ್ತು. ರಣ ಮಧ್ಯದಲೊಂದು ವೃಕ್ಷವ ಕಂಡೆ. ಸತ್ತವನಿದ್ದ ಇದ್ದವ ಸತ್ತ. ಇವರಿಬ್ಬರ ಮಧ್ಯದಲ್ಲಿ ಒಂದು ವೃಕ್ಷವ ಕಂಡೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨೯ ॥

೭೮೬

ಟೀಕೆ:— ತನುತ್ರಯ ಯುಕ್ತವಾದ ಅಹಂಕಾರಾಗ್ರದಲ್ಲಿ ಷಡಾಧಾರಚಕ್ರ. ಆ ಚಕ್ರದಲ್ಲಿ ಸೂಕ್ಷ್ಮರೂಪವಾದ ಮೂವತ್ತಾರು ತತ್ವಂಗಳು ತೋರುತ್ತಿಹವೆಂಬುದೀಗ ತ್ರಿಭುವನದಗ್ರದಲ್ಲಿ ಮೂವತ್ತಾರು ಲೋಕ ಎಂಬ ಶಬ್ದಕ್ಕರ್ಥ. ಆ ಸೂಕ್ಷ್ಮ ತತ ಗಳನೊಳಕೊಂಡ ಇಪ್ಪತ್ತೈದು ತತ್ವವು ಅಹಂಕಾರ ಯುಕ್ತವಾಗಿಹ ಕಾರಣ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಂತರಂಗ ಬಹಿರಂಗದ ಅಷ್ಟಮದಂಗಳಲ್ಲಿ ಜೀವಾತ್ಮನು ವರ್ತಿಸುತ್ತಿಹನಾಗಿ ಹದಿನಾರು ವರ್ತನದ ಕೊಂಡಿ ಎಂಬ ಶಬ್ದಕ್ಕರ್ಥ. ಈಡಾಪಿಂಗಳದ್ವಾರವೆಂಬ ಬಾಗಿಲಿಗೆ ಜ್ಞಾನಾಜ್ಞಾನವೆಂಬ ಎರಡು ಕದವಾಗಿಹವೆಂಬುದೀಗ ಗುರುಲಘುವೆಂಬ ತೋರಗದ ಅದಕ್ಕೆ ಅಗುಳಿ ದಿವರಾತ್ರಿ ಎಂಬವೆರಡು, ಅಗುಳಿಯು ಸನ್ನದ್ಧವಾಗಿ ಬಲಿದವನ ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನು ಅರುವಿನಗ್ರದಲ್ಲಿ ಲಕ್ಷನಿಟ್ಟು ತೋರುವ ಪರಬ್ರಹ್ಮವನರಿಯದೆ, ಅದು ಲಕ್ಷ ನಿರ್ಲಕ್ಷವೆಂದು, ಕ್ರಿಯಾಜ್ಞಾನ ಸ್ವರೂಪವೆಂದು, ಶಿವಸ್ವರೂಪ ಅಹುದಲ್ಲವೆಂದು, ನಷ್ಟತುಷ್ಟಿ ಎಂದು, ಚಿಂತೆ ಸಂತೋಷವೆಂದು, ಬಯಕೆ ಅಬಯಕೆ ಎಂದು, ಜೀವ ಪರಮರೆಂದು ಇಂತಪ್ಪ ದ್ವಂದ್ವಂಗಳೆಲ್ಲವು ಉತ್ಪತ್ತಿಗೆ ಕಾರಣವಾಗಿಹವೆಂಬುದೀಗ ಅವನ ನಖದ ಕೊನೆಯಲ್ಲಿ ಲಕ್ಷ ಅಲಕ್ಷವೆಂಬ, ಭೇದ ಅಭೇದವೆಂಬ, ಜರ ನಿರ್ಜರವೆಂಬ, ಅಹುದಲ್ಲವೆಂಬ ಆಗುಬೇಗೆಂಬ, ಚಿಂತೆ ಸಂತೋಷವೆಂಬ, ಕಾಂಕ್ಷೆ ನಿಃಕಾಂಕ್ಷೆ ಎಂಬ, ಜೀವ ಪರಮರೆಂಬ ಇಂತೀ ದ್ವಂದ್ವಂಗಳೆಲ್ಲವು ದ್ವಾರಸಂಚಾರಕ್ಕವಧಿಯಾದವು ಎಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಶಿವಜ್ಞಾನೋದಯವಾದಾಕ್ಷಣವೇ ಶ್ರೀಗುರುಕಾರುಣ್ಯದಿಂದ ಜ್ಞಾನಕಲಾತನ ಸರ್ವಾಂಗವೆಲ್ಲ ಲಿಂಗಮಯವಾಗಿ ಸಕಲ ಕರಣಂಗಳೆಲ್ಲ ಲಿಂಗತತ್ವ ವಾಯಿತ್ತೆಂಬುದೀಗ ಇವಕ್ಕಿಂತ ಮುನ್ನವೆ ಭುವನ ಕೆಟ್ಟಿತ್ತು ಎಂಬ ಶಬ್ದಕ್ಕರ್ಥ. ಇಂತು ಲಿಂಗತತ್ವವಾದ ಶರಣನ ಸಕಲ ಕರಣಂಗಳೆಲ್ಲವು ಅಮರಗಣತ್ವವನೈದಿ ನಿತ್ಯ ಕರಣಂಗಳಾದವೆಂಬುದೀಗ ಕೋಟೆ ಕೋಳು ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಸರ್ವಾಚಾರ ಸಂಪನ್ನನಾದ ಶರಣನು ಚಿದ್ಘನಲಿಂಗದಲ್ಲಿ ಸಮರಸೈಕ್ಯನಾದನೆಂಬು

ದೀಗ ಹಿರಿಯುರಸು ಸಿಕ್ಕಿದ ಎಂಬ ಶಬ್ದಕ್ಕರ್ಥ. ಇಂತು ಚಿತ್‌ಸ್ವರೂಪನಾದ ಶರಣನು ಚಿದ್ಘನ ಲಿಂಗದಲ್ಲಿ ಸಮರಸೈಕ್ಯನಾಗಲು ಮನಸ್ಸಿನ ವೃತ್ತಿಜ್ಞಾನವಳಿದು ಹೋಗಿ ಸುಜ್ಞಾನಪ್ರಕಾಶವಾಯಿತ್ತೆಂಬುದೀಗ ಪ್ರಧಾನನ ತಲೆ ಹೋಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಪ್ರಕಾಶದಿಂದ ದಟ್ಟೈಸ್ತಾದ ಅಜ್ಞಾನ ನಷ್ಟವಾಯಿತ್ತೆಂಬುದೀಗ ತಳವಾರನ ಕಣ್ಣು ಕಳೆಯಿತ್ತು ಎಂಬ ಶಬ್ದಕ್ಕರ್ಥ. ಇಂತು ಅಜ್ಞಾನ ನಷ್ಟವಾದಲ್ಲಿ ಜೀವಾತ್ಮನೊಡನೆ ಜನಿಸಿದ ಸಕಲ ಕರಣಂಗಳೆಲ್ಲ ಲಯವಾದವೆಂಬುದೀಗ ಎಕ್ಕಟಿಗನ ಮಕ್ಕಳೆಲ್ಲರು ನಷ್ಟಸಂತಾನವಾದರು ಎಂಬ ಶಬ್ದಕ್ಕರ್ಥ. ಆ ತನುಮಧ್ಯದಲ್ಲಿ ನಿಂದು ನೋಡಲಾಗಿ ಸಕಲ ಕರಣಂಗಳೆಲ್ಲ ಮೃತವಾಗಿ ಸುಜ್ಞಾನಕರಣಂಗಳಾದವೆಂಬುದೀಗ ಸೃಷ್ಟಿಯೊಳಗೆಲ್ಲ ರಣಮಯವಾಯಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಮಧ್ಯದಲ್ಲಿ ಅವಿರಳ ಜ್ಞಾನದೃಕ್ಕಿಂದ ನೋಡಲಾಗಿ ಪರಬ್ರಹ್ಮವೆಂಬ ಸದ್ವಿವೇಕವು ತೋರುತ್ತಿಹುದೆಂಬುದೀಗ ರಣಮಧ್ಯದಲೊಂದು ವೃಕ್ಷವ ಕಂಡೆ ಎಂಬ ಶಬ್ದಕ್ಕರ್ಥ. ಸದ್ರೂಪವಾದ ಗುರುತತ್ವವೇ ಚಿದ್ರೂಪನಾದ ಶಿಷ್ಯನ ಅವಗ್ರಹಿಸಿ ಚಿದ್ರೂಪನಾದ ಶಿಷ್ಯನೇ ಸದ್ರೂಪವಾದ ಗುರುತತ್ವವನವಗ್ರಹಿಸಿ ಗುರುಶಿಷ್ಯರೆಂಬ ಉಭಯವು ಪರಶಿವತತ್ವದಲ್ಲಿ ಬೆರಸಿ ಒಂದೇಯಾಯಿತ್ತೆಂಬುದೀಗ ಸತ್ತವನಿದ್ದ ಇದ್ದವ ಸತ್ತ ಎಂಬ ಶಬ್ದಕ್ಕರ್ಥ. ಆ ಗುರುಶಿಷ್ಯರ ಸಮರಸದ ಮಧ್ಯದಲ್ಲಿ ಪರಬ್ರಹ್ಮವೃಕ್ಷವು ತೋರುತ್ತಿಹುದು, ಚಿದ್ರೂಪನಾದ ಶರಣ ಆನಂದಜ್ಞಾನದೃಕ್ಕಿಂದ ಕಂಡನೆಂಬುದೀಗ ಇವರಿಬ್ಬರ ಮಧ್ಯದಲ್ಲಿ ಒಂದು ವೃಕ್ಷವ ಕಂಡೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೭

ತಮಂಧವೆಂಬ ಕೊಪ್ಪರಿಗೆಯಲ್ಲಿ ತಾರಾಮಂಡಲದ ಉದಕವ ತುಂಬಿ ಮಹಾಂಧಕಾರದಿಂದ ಉರುಹಲಾಗಿ ದಾವಾನಳವೆದ್ದಿತ್ತು. ವಿಶ್ವಾಸಭಕ್ತಿ ಎಂಬ ಅಟ್ಟಕಳೆಯನಿಕ್ಕಿ ಚಿತ್ತಶುದ್ಧದ ಕೈಯಲ್ಲಿ ಒರಸಲಾಗಿ, ರುದ್ರನ ಜಡೆಯ ಮಣ್ಣು ಬಿಟ್ಟಿತ್ತು. ಮಂದಿರಕ್ಕೊಳಗಾಯಿತ್ತು. ಮಣ್ಣು ಬಿಟ್ಟ ಮಂಡೆ ಚನ್ನಾಯಿತ್ತು. ಮಂಡೆಯ ಹತ್ತಿ ನೋಡಲಾಗಿ ಮೂರು ಮಂಡಲ ಕಾಣಲಾಯಿತ್ತು. ಒಂದು ಮಂಡಲ ಉಪದೇಶವ ಹೇಳುವ ಗುರುವಿನ ಬಾಯು ನುಂಗಿತ್ತು. ಮಧ್ಯದ ಮಂಡಲ ಸುಬದ್ಧವೆಂದು ಕೊಟ್ಟ ಲಿಂಗವ ಗರ್ಭೀಕರಿಸಿತ್ತು. ಬಟ್ಟಬಯಲ ಕಟ್ಟಕಡೆಯ ಮಂಡಲ ಸುತ್ತಿತ್ತು ಜಂಗಮವ ನಿಷ್ಠೆಯಿಂದ. ಪೂಜಿಸುವ ಭಕ್ತರ ಬಟ್ಟೆಯ ಹಳುಹತ್ತಿತ್ತು. ಆ ಬಟ್ಟೆಯಲ್ಲಿ ಹೊಲಬುದಪ್ಪಿ ಸುತ್ತಾಡುತ್ತಿಹ ಸದ್ಭಕ್ತರಿಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿಕಾರ್ಜುನಾ., ॥ ೧೩೦ ॥

**ಟೀಕೆ:** — ಅಜ್ಞಾನ ಸ್ವರೂಪವಾದ ದೇಹದಲ್ಲಿದ್ದ ಆತ್ಮಂಗೆ ಶಿವಜ್ಞಾನೋದಯವಾಗಲು ಚಿದಾಕಾಶದಲ್ಲಿದ್ದ ಪರಮಾನಂದ ಜಲವು ಆ ದೇಹದಲ್ಲಿ ಪರಿಪೂರ್ಣವಾಗಿ ವೇಧಿಸಿತ್ತೆಂಬುದೀಗ ತಮಂಧವೆಂಬ ಕೊಪ್ಪರಿಗೆಯಲ್ಲಿ ತಾರಾಮಂಡಲದ ಉದಕವ ತುಂಬಿ ಎಂಬ ಶಬ್ದಕ್ಕರ್ಥ. ಅಂತು ತನ್ನ ಸರ್ವಾಂಗದಲ್ಲಿ ಪರಮಾನಂದ ಜಲವನೊಳಕೊಂಡಿಪ್ಪ ಶರಣನ ಪರಿಪೂರ್ಣಜ್ಞಾನದ ಪರುಷದಿಂದ ತನ್ನ ನಿಜಸ್ವರೂಪವನರಿಯುತ್ತಿರಲಾಗಿ ಜ್ಞಾನಾಗ್ನಿಸ್ವರೂಪನಾದ ಮಹಾಘನಲಿಂಗವು ಪ್ರಭಾವಿಸಿತ್ತೆಂಬುದೀಗ ಮಹಾಂಧಕಾರದಿಂದ ಉರುಹಲಾಗಿ ದಾವಾನಳವೆದ್ದಿತ್ತೆಂಬ ಶಬ್ದಕ್ಕರ್ಥ. ಆ ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮವೇ ಗುರು ಲಿಂಗ ಜಂಗಮ ಸ್ವರೂಪವಾಯಿತ್ತೆಂಬುದೀಗ ವಿನ್ಯಾಸ. ತನು, ಮನ, ಧನವ ತ್ರಿವಿಧ ಮುಖದಲ್ಲಿ ಅರ್ಪಿಸುವದೇ ಭಕ್ತಿ. ಇಂತಪ್ಪ ಭಕ್ತಿ ವಿಶ್ವಾಸವಿಡಿದಾಚರಿಸುತ್ತಿದ್ದ ಶರಣನೆಂಬುದೀಗ ವಿಶ್ವಾಸಭಕ್ತಿ ಎಂಬ ಅಟ್ಟೆ ಕಳೆಯುಣಿಕ್ಕಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿವಿಡಿದಾಚರಿಸುತ್ತಿದ್ದ ಶರಣನು ಕುಚಿತ್ತವಳಿದು ಸುಚಿತ್ತವೆಂಬ ಹಸ್ತದಿ ಒರಸಲಾಗಿ, ರುದ್ರನೆಂಬಡೆ ತಮೋಗುಣ ಸಂಬಂಧವಾದ ಜೀವನು, ಅಂತಪ್ಪ ಜೀವನ ದೇಹಭಾವದ ಅಜ್ಞಾನವು ನಷ್ಟವಾಯಿತ್ತು ಮರ್ದಿಸಿದಲ್ಲೆಂಬುದೀಗ ಚಿತ್ತಶುದ್ಧದ ಕೈಯಲ್ಲಿ ಒರಸಲಾಗಿ ರುದ್ರನ ಜಡೆಯು ಮಣ್ಣು ಬಿಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವವಳಿದ ಜ್ಞಾನಕಲಾತ್ಮನು ಮಹಾನುಭಾವಾಂತರಂಗದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ವಿಶ್ರಾಂತಿಯನೈದಿತ್ತೆಂಬುದೀಗ ಮಂದಿರಕ್ಕೊಳಗಾಯಿತ್ತೆಂಬ ಶಬ್ದಕ್ಕರ್ಥ. ಅಂತು ಅಜ್ಞಾನ ನಿವೃತ್ತಿಯಾಗಿ ನಿರ್ಮಲವಾದ ಸುಜ್ಞಾನವೇ ಪ್ರಭಾವಿಸುತ್ತಿಹುದೆಂಬುದೀಗ ಮಣ್ಣು ಬಿಟ್ಟು ಮಂಡೆ ಚನ್ನಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣ ಜ್ಞಾನಾರೂಢನಾದ ಶರಣನು ಸುಜ್ಞಾನದೃಷ್ಟಿಯಿಂದ ನೋಡುತ್ತಿರಲು ತ್ಯಾಗಾಂಗ ಭೋಗಾಂಗ ಯೋಗಾಂಗವೆಂಬ ತ್ರಯಾಂಗದಲ್ಲಿ ಸಂಬಂಧವಾದ ಇಷ್ಟಪ್ರಾಣ ಭಾವಲಿಂಗದ ಸುಜ್ಞಾನದೃಕ್ಕಿಂದ ನಿರೀಕ್ಷಿಸುತ್ತಿದ್ದನೆಂಬುದೀಗ ಮಂಡೆಯುಗತ್ತಿ ನೋಡಲಾಗಿ ಮೂರು ಮಂಡಲ ಕಾಣಲಾಯಿತ್ತು ಎಂಬ ಶಬ್ದಕ್ಕರ್ಥ. ತ್ಯಾಗಾಂಗವು ಸುಜ್ಞಾನ ಬೋಧೆಯ ಬೋಧಿಸುವ ಜ್ಞಾನ ಗುರುವಿನ ಶಿವಾಪೇಕ್ಷೆಯನನುಗ್ರಹಿಸಿಕೊಂಡು ತೋರುತ್ತಿಹುದೆಂಬುದೀಗ ಒಂದು ಮಂಡಲ ಉಪದೇಶ ಹೇಳುವ ಗುರುವಿನ ಬಾಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಭೋಗಾಂಗವು ಶ್ರೀಗುರು ನಿರ್ಮಲವೆಂದು ಕೊಟ್ಟ ಮಹಾಘನ ಲಿಂಗವನೊಳಕೊಂಡು ತೋರುತ್ತಿಹುದೆಂಬುದೀಗ ಮಧ್ಯದ ಮಂಡಲ ಶುದ್ಧವೆಂದು ಕೊಟ್ಟ ಲಿಂಗವ ಗರ್ಭೀಕರಿಸಿತ್ತು ಎಂಬ ಶಬ್ದಕ್ಕರ್ಥ. ನಿರಾಕಾರವಾದ ಕಟ್ಟಕಡೆಯ ಯೋಗಾಂಗಸ್ಥಲವು ಚೈತನ್ಯಸ್ವರೂಪವಾದ ಸುಜ್ಞಾನಜಂಗಮಲಿಂಗವನನುಗ್ರಹಿಸಿತ್ತೆಂಬುದೀಗ ಬಟ್ಟಬಯಲ ಕಟ್ಟಕಡೆಯ ಮಂಡಲ ಸುತ್ತಿತ್ತು ಜಂಗಮದ ನಿಷ್ಠೆಯಿಂದ ಎಂಬ ಶಬ್ದಕ್ಕರ್ಥ. ಇಂತಪ್ಪ ಗುರು ಲಿಂಗ ಜಂಗಮದಲ್ಲಿಯು ನಿಷ್ಠಾಭಕ್ತಿಯಿಂದಾಚರಿಸಲರಿಯದೆ ಗುರು

ಲಿಂಗಜಂಗಮದ ಭಿನ್ನವಿಟ್ಟು ಅರ್ಚನೆ ಪೂಜನೆ ದಾಸೋಹವ ಮಾಡಿ ಖಂಡಿತ ಫಲಪದಂಗಳ ಪಡೆದ ಭಿನ್ನಭಕ್ತರೆಲ್ಲರು ಸಂಸಾರ ಪ್ರಪಂಚೆಂಬ ಹುಳುಹಿನಲ್ಲಿ ಸಿಲುಕಿ ಸತ್ಪಥ ಮಾರ್ಗಕ್ಕೆ ತಪ್ಪಿ ಭವರಾಟಾಳದಲ್ಲಿ ತಿರುಗಾಡುತ್ತಿಹ ದ್ವೈತಿಗಳಿಗೆ ನಿಜಮೋಕ್ಷ ವಿಲ್ಲವೆಂಬುದೀಗ ಪೂಜಿಸುವ ಭಕ್ತರ ಬಟ್ಟೆಯು ಹಳುಹತ್ತಿತ್ತು, ಆ ಬಟ್ಟೆಯು ಹೊಲ ಬುದಪ್ಪಿ ಸುತ್ತಾಡುತ್ತಿಹ ಸದ್ಭಕ್ತರಿಗಿನ್ನೆತ್ತಣ ಮುಕ್ತಿಯೋ ನಿಃಕಳಂಕ ಮಲ್ಲಿ ಕಾರ್ಜುನಾ ಎಂಬ ಶಬ್ದಕ್ಕರ್ಥ.

೭೮೮

ಧರೆಯ ಮೇಲಣ ಮರದಲ್ಲಿ ಹಿರಿದಿಹ ಕೊಂಬಿನ ತುದಿಯಲ್ಲಿ ಅರಿಬಿರಿದಿನ ಪಕ್ಷಿಬಂದಿತ್ತು ನೋಡಾ. ಆ ಪಕ್ಷಿಯು ವರ್ಣ ಹಾರುವ ರಟ್ಟೆ ಕೆಂಪು, ತೋರುವ ರಟ್ಟೆ ಕಪ್ಪು, ಮೀರಿ ಇಹ ರಟ್ಟೆಯ ತುತ್ತತುದಿಯಲ್ಲಿ ನಾನಾವರ್ಣ ದಬಣ್ಣ, ಆ ಹಕ್ಕಿಯು ಗಳದಲ್ಲಿ ಹೇಮವರ್ಣ, ಆ ಹಕ್ಕಿಯ ಕೊಕ್ಕಿನ ತುದಿ ಯಲ್ಲಿ ಧವಳವರ್ಣ. ಆ ಹಕ್ಕಿಯ ಹಾರುವ ರಟ್ಟೆಯ ಕಳೆದು, ತೋರಿಹ ರಟ್ಟೆಯ ಮುರಿದು, ಮೀರಿಹ ರಟ್ಟೆಯ ಬೆಂದು, ಕೊರಳಿನ ಹಳದಿ ಹಾರಿ, ಕೊಕ್ಕಿನ ಬೆಳ್ಪು ನಿಷ್ಪತ್ತಿಯಾಗಿ ನಿಃಕಳಂಕ ಮಲ್ಲಿಕಾರ್ಜುನ ಸತ್ತನು ॥೧೩೧॥

ಟೀಕೆ:— ಚಿತ್‌ಸ್ವರೂಪವಾದ ಶರಣನಾಚಾರಾಂಗದ ಚಿತ್‌ಪ್ರಕಾಶದ ಮಧ್ಯ ದಲ್ಲಿ ಸದ್ವಿವೇಕವೃಕ್ಷವು ಹುಟ್ಟಿತ್ತೆಂಬುದೀಗ ಧರೆಯ ಮೇಲಣ ಮರದಲ್ಲಿ ಎಂಬ ಶಬ್ದಕ್ಕರ್ಥ. ಅತ್ಯಂತವಾದ ಅಹಂಕಾರಾಗ್ರದಲ್ಲಿ ಎಂಬುದೀಗ ಹಿರಿದಿಹಕೊಂಬಿನ ತುದಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರಾಗ್ರದಲ್ಲಿ ಉತ್ಪತ್ತಿಹುದೆಂಬು ದೀಗ ಅರಿಬಿರಿದಿನ ಪಕ್ಷಿಬಂದಿತ್ತು ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮಾತ್ಮ ಸ್ವರೂಪನಾದ ಶರಣನು ಇಷ್ಟಲಿಂಗದಲ್ಲಾಚರಿಸುವ ಅಭಿನ್ನಕ್ರಿಯಾಚಾರವೆಂಬುದೀಗ ಆ ಪಕ್ಷಿಯುವರ್ಣ ಹಾರುವ ರಟ್ಟೆ ಕೆಂಪು ಎಂಬ ಶಬ್ದಕ್ಕರ್ಥ. ಚೈತನ್ಯಸ್ವರೂಪವಾದ ಪ್ರಾಣಲಿಂಗವಿಡಿದಾಚರಿಸುವ ಅಭಿನ್ನಜ್ಞಾನವೆಂಬುದೀಗ ತೋರುವ ರಟ್ಟೆ ಕಪ್ಪು ಎಂಬ ಶಬ್ದಕ್ಕರ್ಥ. ಅಖಂಡ ಪರಿಪೂರ್ಣ ತೃಪ್ತಿಲಿಂಗಸಂಬಂಧವಾದ ಭಾವಾಚರ ಣೆಯು ನಾನಾಸ್ಥಲ ಕುಳಂಗಳನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ ಮೀರಿಹ ರಟ್ಟೆಯ ತುತ್ತ ತುದಿಯಲ್ಲಿ ನಾನಾವರ್ಣದ ಬಣ್ಣ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮಾತ್ಮನ ದೃಢ ಕಂಠ ಚಿತ್ಪ್ರಕಾಶವಾಗಿಹುದೆಂಬುದೀಗ ಆ ಹಕ್ಕಿಯ ಗಳದಲ್ಲಿ ಹೇಮವರ್ಣವೆಂಬ ಶಬ್ದಕ್ಕರ್ಥ. ಆ ಪರಮಾತ್ಮನ ಶಿವಭಾವವು ಮಲತ್ರಯಂಗಳ ಹೊದ್ದದೆ ನಿರ್ಮಲಸ್ವರೂಪವಾಗಿಹುದೆಂಬುದೀಗ ಆ ಹಕ್ಕಿಯ ಕೊಕ್ಕಿನ ತುದಿಯಲ್ಲಿ ಧವಳವರ್ಣವೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಅಭಿನ್ನಕ್ರಿಯಾಚಾರವು ಇಷ್ಟ ಲಿಂಗದಲ್ಲಿ ಏಕಾರ್ಥವಾಗಿ ಅರುವಿನಾಚರಣೆಯು ಪ್ರಾಣಲಿಂಗದಲ್ಲಿ ಸಮರಸವಾಗಿ

ಭಾವಾಚರಣೆಯು ಕೃಪ್ತಿಲಿಂಗದಲ್ಲಿ ನಿಷ್ಪತ್ತಿಯಾಗಿ ಆ ದೃಢ ಕಂಠದಲ್ಲಿ ಸಂಬಂಧವಾದ ಚಿತ್ಪ್ರಕಾಶವು ಪರವಸ್ತುವಿನಲ್ಲಿ ಸಮರಸೈಕ್ಯವಾಗಲು ಆ ಶಿವಭಾವವು ಚಿಪ್ಪನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ ಆ ಪಕ್ಕಿಯು ಹಾರುವ ರಟ್ಟೆಯು ಕಳೆದು ತೋರಿಹ ರಟ್ಟೆಯು ಮುರಿದು ಮಿಾರಿಹ ರಟ್ಟೆಯು ಬೆಂದು ಕೊರಳಿನ ಹಳದಿಕೊಕ್ಕಿನ ಬೆಳುಪು ನಿಷ್ಪತ್ತಿಯಾಗಿ ನಿಃಕಳಂಕ ಮಲ್ಲಿಕಾರ್ಜುನ ಸತ್ತನು ಎಂಬ ಶಬ್ದಕ್ಕರ್ಥ.

೭೮೯

ನಾ ಬಾಹಾಗ ಎನ್ನ ಗುರುವು ಮೂರು ರತ್ನವ ಕೊಟ್ಟ. ಅವ ನಾನೊಲ್ಲದೆ ಒಂದ ಬ್ರಹ್ಮಂಗೆ ಕೊಟ್ಟೆ. ಒಂದ ವಿಷ್ಣುವಿಂಗೆ ಕೊಟ್ಟೆ. ಒಂದ ರುದ್ರಂಗೆ ಕೊಟ್ಟೆ. ಆ ಕೊಟ್ಟುದನು ಬ್ರಹ್ಮ ಬೆಗಡವನಿಕ್ಕಿ ಪವಣಿಸಿ ಕಟ್ಟಿದ. ಅದ ವಿಷ್ಣು ಕುಂದಣದಲ್ಲಿ ಕೀಲಿಸಿ ಮುಂಗೈಯ್ಯಲ್ಲಿಕ್ಕಿದ ಮತ್ತೊಂದುವನಾರುದ್ರ ನೊಡೆದು ಬೆಳಗ ಬಯಲು ಮಾಡಿದ ಇಂತೀ ಮೂವರು ರತ್ನದ ಹಂಗಿಗರಾದರು ಅವರ ಹಂಗನೊಲ್ಲದೆ ಸಂದೇಹ ಬಡಲಾರದೆ ಬಂದ ಬಂದ ಯೋನಿಯಲ್ಲಿ ಸಂದಿಲ್ಲದೆ ತಿರುಗಲಾರದೆ ನೋದೆನಯ್ಯಾ ಬ್ರಹ್ಮನ ಬಲೆಯಲ್ಲಿ ಸಿಲುಕಿ, ವಿಷ್ಣುವಿನ ಬಂಧದಲ್ಲಿ ಕಟ್ಟು ಒಡೆದು, ರುದ್ರನ ಹಣೆಗಿಚ್ಚಿನಲ್ಲಿ ಉರಿಯಲಾರದೆ ಸಾರಿದೆನಯ್ಯಾ ಕೇಡಿಲ್ಲದ ಪದವ. ಗುರುವಿನ ಹಂಗ ಬಿಟ್ಟೆ, ಅಡಿಗಡಿಗೇಳಲಾರದೆ ಲಿಂಗದ ಹಂಗ ಬಿಟ್ಟೆ. ಮಜ್ಜನಕ್ಕೆರದ ಹಾವಸೆಗಾರದೆ ಜಂಗಮದ ಹಂಗ ಬಿಟ್ಟೆ. ಸಂದೇಹದಲ್ಲಿ ಸಾಯಲಾರದೆ ಇವರಿಂದ ಒಂದೂ ಚಂದವಿಲ್ಲ ಅಭಂಗ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಂಗೆ ‖ ೧೩೨ ‖

ಟೀಕೆ.— ಸುಜ್ಞಾನವೆಂಬುದುದಯವಾಗಿ ಸಕಲ ಪ್ರಪಂಚವ ನಿವೃತ್ತಿ ಮಾಡಿ ಶ್ರೀಗುರುವಿನ ಕರಕಮಲದಿಂದುದ್ಭವಿಸಿ ಬರುವಲ್ಲಿ ಆ ಶ್ರೀಗುರು ಇಷ್ಟಪ್ರಾಣಭಾವವೆಂಬ ತ್ರಿವಿಧಜ್ಞಾನ ರತ್ನವ ಚಿದ್ರೂಪನಾದ ಶಿಷ್ಯನ ಆಚಾರಾಂಗದಲ್ಲಿ ಸಂಬಂಧವ ಮಾಡಿದನೆಂಬುದೀಗ ನಾ ಬಾಹಾಗ ಎನ್ನ ಗುರು ಮೂರು ರತ್ನವ ಕೊಟ್ಟನೆಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧ ಲಿಂಗದಲ್ಲಿ ಸುಜ್ಞಾನ ಕ್ರೀವಿಡಿದಾಚರಿಸುತ್ತಿದ್ದ ಶರಣನು ಭಿನ್ನಕ್ರೀವಿಡಿದಾಚರಿಸುವವನಲ್ಲ ಎಂಬುದೀಗ ಅವನಾನೊಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನು ರಜೋಗುಣ ಸಂಬಂಧವಾದ ಸ್ಥೂಲಾಂಗದಲ್ಲಿ ಇಷ್ಟಲಿಂಗದ ಸಂಬಂಧವ ಮಾಡಿದನೆಂಬುದೀಗ ಒಂದ ಬ್ರಹ್ಮಂಗೆ ಕೊಟ್ಟೆನೆಂಬ ಶಬ್ದಕ್ಕರ್ಥ. ಸಾತ್ವಿಕ ಗುಣಸಂಬಂಧವಾದ ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗ ಸಂಬಂಧವ ಮಾಡಿದನೆಂಬುದೀಗ ಒಂದ ವಿಷ್ಣುವಿಂಗೆ ಕೊಟ್ಟನೆಂಬ ಶಬ್ದಕ್ಕರ್ಥ. ತಮೋಗುಣ

ಸಂಬಂಧವಾದ ಕಾರಣಾಂಗದಲ್ಲಿ ಭಾವಲಿಂಗ ಸಂಬಂಧವ ಮಾಡಿದನೆಂಬುದೀಗ ಒಂದ ರುದ್ರಂಗೆ ಕೊಟ್ಟೆನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗಸಂಬಂಧದ ಸಮರಸೈಕ್ಯವ ನರಿಯದೆ ಬ್ರಹ್ಮ ವಿಷ್ಣು ರುದ್ರರೆಂಬ ತ್ರಿ ತತ್ವಪ್ರ ಲಿಂಗವನಿದಿರಿಟ್ಟು ಅರ್ಚನೆ ಪೂಜ ನೆಯ ಮಾಡಿ ಖಂಡಿತ ಫಲಪದಂಗಳ ಪಡೆದು ಫಲಭೋಗಿಗಳಾದರಲ್ಲದೆ ಸಮರ ಸೈಕ್ಯವನರಿದುದಿಲ್ಲವೆಂಬುದೀಗ ಬ್ರಹ್ಮ ಬೆಗಡನಸಿಕ್ಕಿ ಪವಣಿಸಿ ಕಟ್ಟಿದ, ವಿಷ್ಣುವು ಕುಂದಣದಲ್ಲಿ ಕೀಲಿಸಿ ಮುಂಗೈಯಲ್ಲಿಕ್ಕಿದ. ರುದ್ರ ಅವನೊಡೆದು ಬೇಗ ಬಯಲು ಮಾಡಿದ, ಇಂತೀ ಮೂವರು ರತ್ನದ ಹಂಗಿಗರಾದರು ಎಂಬ ಶಬ್ದಕ್ಕರ್ಥ. ಇಂತಪ್ಪ ಚಿದ್ರೂಪನಾದ ಶರಣ ಅಖಂಡಿತ ಫಲಪದವ ಮುಟ್ಟಿದಡೆ ಆ ಫಲದಿಂದ ಸಂಸಾರ ಬಂಧನ, ಆ ಬಂಧನದಿಂದ ಜೀವಭಾವ ಭ್ರಾಂತು. ಆ ಭ್ರಾಂತಿಯಿಂದ ಲಕ್ಷ ಯೋನಿಯಲ್ಲಿ ಹುಟ್ಟಿ ಬ್ರಹ್ಮನ ಉತ್ಪತ್ತಿ, ವಿಷ್ಣುವಿನ ಸ್ಥಿತಿ, ರುದ್ರನ ಲಯವೆಂಬ ತಾಪತ್ರಯಾಗ್ನಿಯಲ್ಲಿ ಬೇಯಲಾರದೆ ಇವನ್ನೆಲ್ಲವ ಬಿಟ್ಟು ನಿತ್ಯನಾದ ಮಹಾಘನಪದ ದಲ್ಲಿ ತತ್ಪರನಾಗಿರ್ದ ಶರಣನೆಂಬುದೀಗ ಅವರ ಹಂಗನೊಲ್ಲದೆ ಸಂದೇಹ ಬಡಲಾರದೆ ಬಂದ ಬಂದ ಯೋನಿಯಲ್ಲಿ ಸಂದಿಲ್ಲದೆ ತಿರುಗಲಾರದೆ ನೊಂದೆನಯ್ಯಾ, ಬ್ರಹ್ಮನ ಬಲೆಯಲ್ಲಿ ಶಿಲುಕಿ ವಿಷ್ಣುವಿನ ಬಂಧದಲ್ಲ ಕಟ್ಟು ಒಡೆದು ರುದ್ರನ ಹಣೆಗಿಚ್ಚಿನಲ್ಲಿ ಉರಿ ಯಲಾರದೆ ಸಾರಿದೆನಯ್ಯಾ ಕೇಡಿಲ್ಲದ ಪದವ ಎಂಬ ಶಬ್ದಕ್ಕರ್ಥ. ಗುರುಲಿಂಗ ಜಂಗಮವನಿದಿರಿಟ್ಟು ತ್ರಿವಿಧ ಪದಾರ್ಥವನ್ನು ತ್ರಿವಿಧ ಭಕ್ತಿಯಿಂದರ್ಪಿಸಿದಲ್ಲಿ ಖಂಡಿತ ಫಲಪದ. ಆ ಖಂಡಿತ ಫಲಪದಂಗಳ ಭೋಗಿಸಿದ ಆತ್ಮರುಗಳಿಗೆ ಅಜ್ಞಾನ ವೆಂಬ ಹಾವಸೆ ಅವಗ್ರಹಿಸಿಕೊಂಡಲ್ಲಿ ಜೀವಭಾವ ಭ್ರಾಂತಿಯ ಸಂದೇಹದಲ್ಲಿ ಸಾಹು ತ್ತಿಹರೆಂಬುದೀಗ ಗುರುವಿನ ಹಂಗಬಿಟ್ಟು, ಅಡಿಗಡಿಗೇಳಲಾರದೆ ಲಿಂಗದ ಹಂಗ ಬಿಟ್ಟು, ಮಜ್ಜನಕ್ಕೆರೆದ ಹಾವಸೆಗಾರದೆ ಜಂಗಮದ ಹಂಗ ಬಿಟ್ಟು ಸಂದೇಹದಲ್ಲಿ ಸಾಯ ಲಾರದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಅನಿತ್ಯಪದಂಗಳ ನಿವೃತ್ತಿಮಾಡಿ ನಿಷ್ಕಲ ಮಹಾಘನಲಿಂಗ ಪದಸ್ಥನಾಗಿದ್ದ ಶರಣನೆಂಬುದೀಗ ಇವರಿಂದ ಒಂದೂ ಚಂದವಿಲ್ಲ ಅಭಂಗ ನಿರ್ಲೇಪ ನಿಃಕಳಂಕ ಮಲ್ಲಿಕಾರ್ಜುನಂಗೆ ಎಂಬ ಶಬ್ದಕ್ಕರ್ಥ.

೭೯೦

ನೀರ ನೆಳಲಲ್ಲೊಂದು ಬೇರವೆ ಹುಟ್ಟಿತ್ತು, ಅದು ಬೇರಿಲ್ಲದೆ, ಆ ಬೇರ ಮೀರುವ ಮರನಿಲ್ಲದೆ, ಆ ಮರನ ಮೀರುವ ಕೊಂಬಿಲ್ಲದೆ, ಕೊಂಬೆ ಮೀರುವ ಎಲೆ ಇಲ್ಲದೆ, ಎಲೆಯ ಮೀರುವ ಹೂವಿಲ್ಲದೆ, ಹೂವ ಮೀರುವ ಕಾಯಿ ಲ್ಲದೆ, ಕಾಯಿ ಮೀರುವ ಹಣ್ಣಿಲ್ಲದೆ, ಹಣ್ಣ ಮೀರುವ ರುಚಿ ಇಲ್ಲದೆ. ಇದ ಚನ್ನಾಗಿ ತಿಳಿದು ನೋಡಿ. ಆ ನೀರು ಬೇರ ನುಂಗಿತ್ತು. ಆ ಬೇರು ವೃಕ್ಷವ ನುಂಗಿತ್ತು. ವೃಕ್ಷ ಶಾಖೆಯ ನುಂಗಿತ್ತು. ಶಾಖೆ ಪರ್ಣವ ನುಂಗಿ, ಪರ್ಣ ಕುಸುಮವ ನುಂಗಿಕೊಂಡು, ಕುಸುಮ ಕಾಯ ಕೊಂಡು, ಕಾಯಿ ಹಣ್ಣ

ಮೆದ್ದಲ್ಲಿ ಭಾವವಳಿಯಿತ್ತು. ಇದನಾರು ಬಲ್ಲರು ನಿಃಕಳಂಕ ಮಲ್ಲಿಕಾ ರ್ಜುನಸಾ ನೀನೇ ಬಲ್ಲೆ ॥ ೧೩೩ ॥

ಟೀಕೆ:— ಸುಜ್ಞಾನೋದಯವಾದ ಶರಣನು ಮನವಳಿದು ಉನ್ಮನೀ ತತ್ವ ಸ್ವರೂಪವನೈಯ್ದಲು ಉನ್ಮನೀತತ್ವದ ಸದ್ಭಾವ ಛಾಯೆಯು ಒಳಗೆ ಸದ್ವಿವೇಕ ವೃಕ್ಷ ಉದಯವಾಯಿತ್ತೆಂಬುದೀಗ, ನೀರನೆಳಲಿಲ್ಲದೊಂದು ಆರವೆ ಹುಟ್ಟಿತ್ತೆಂಬ ಶಬ್ದ ಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷಕ್ಕೆ ಮೂಲಾಹಂಕಾರವಿಲ್ಲವೆಂಬುದೀಗ ಅದು ಬೇರಿಲ್ಲದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಅನನ್ಯಭಾವದಿಂದ ಮೂಲಜ್ಞಾನವನೊಳಕೊಂಡು ತೋರುತ್ತಿಹುದೆಂಬುದೀಗ ಆ ಬೇರ ಮಿಗಿಲಾರುವ ಎಂಬ ಶಬ್ದಕ್ಕರ್ಥ ಆ ಸದ್ವಿವೇಕ ವೃಕ್ಷವು ದೇಹಭಾವವ ನಿವೃತ್ತಿಮಾಡಿ ಅನನ್ಯ ಭಾವದಿಂ ಪರಬ್ರಹ್ಮವನೊಳಕೊಂಡು ತೋರುತ್ತಿಹುದೆಂಬುದೀಗ ಮರನಿಲ್ಲದೆ, ಆ ಮರನ ಮಿಗಿಲಾರುವ ಎಂಬ ಶಬ್ದಕ್ಕರ್ಥ ಅಂತಪ್ಪ ಸದ್ವಿವೇಕ ವೃಕ್ಷವು ಇಂದ್ರಿಯಂ ಗಳ ವರ್ತನೆಯು ಸಕಲ ಪ್ರಪಂಚನೆಂಬ ಪರ್ಣವ ಹೊದ್ದದೆ ಚಿದಹಂಕಾರ ಸ್ವರೂಪ ವಾದ ಭಕ್ತಿಗಳನೊಳಕೊಂಡು ತೋರುತ್ತಿಹುದೆಂಬುದೀಗ ಕೊಂಬಿಲ್ಲದೆ ಕೊಂಬೆ ಮಿಗಿಲಾರುವ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಸಕಲ ಪ್ರಪಂಚೆಂಬ ಪರ್ಣವ ಹೊದ್ದದೆ ಸದಾಚಾರವನೊಳಕೊಂಡು ತೋರುತ್ತಿಹುದೆಂಬುದೀಗ ಎಲೆ ಇಲ್ಲದೆ ಎಲೆಯು ಮಿಗಿಲಾರುವ ಎಂಬ ಶಬ್ದಕ್ಕರ್ಥ ಆ ಸದ್ವಿವೇಕ ವೃಕ್ಷವು ಪಂಚವಿಷ ಯಂಗಳ ಹೊದ್ದದೆ, ಸ್ವಾನುಭಾವ ಸದ್ವಾಸನೆಯುನೊಳಕೊಂಡು, ಪರಿಪೂರ್ಣವಾಗಿ ತೋರುತ್ತಿಹುದೆಂಬುದೀಗ ಹೂವಿಲ್ಲದೆ ಹೂವ ಮಿಗಿಲಾರುವ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷವು ಕರ್ಮೇಂದ್ರಿಯಂಗಳ ವ್ಯವಹಾರವ ಹೊದ್ದದೆ, ನಿತ್ಯವಾದ ಮೋಕ್ಷಫಲವನೊಳಕೊಂಡು ತೋರುತ್ತಿಹುದೆಂಬುದೀಗ ಕಾಯಿಲ್ಲದೆ ಕಾಯು ಮಿಗಿ ಲುವ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಫಲಪದಂಗಳ ಹೊದ್ದದೆ, ಚಿದಮೃತ ರಸವನೊಳಕೊಂಡಿರ್ಪ ಚಿದ್ಘನ ಲಿಂಗವನೊಳಕೊಂಡು ತೋರುತ್ತಿಹು ದೆಂಬುದೀಗ ಹಣ್ಣಿಲ್ಲದೆ ಹಣ್ಣು ಮಿಗಿಲಾರುವ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಮೃತವ ಸ್ವೀಕರಿಸಿದೆನೆಂಬ ಪರಿಣಾಮದ ಪರಮಸುಖವು ಇದಿರಿಟ್ಟು ತೋರದೆ, ತನ್ನ ನಿಜಸ್ವ ರೂಪವನ್ನು ಸುಜ್ಞಾನ ದೃಷ್ಟಿಯಿಂ ವಿವೇಕಿಸಿ ನೋಡಲು ಎಂಬುದೀಗ ರುಚಿ ಇಲ್ಲದೆ ಇದ್ದ ಚೆನ್ನಾಗಿ ತಿಳಿದು ನೋಡಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಉನ್ಮನೀ ತತ್ವಸ್ವರೂಪವಾದ ಮನಸ್ಸು ಮೂಲಜ್ಞಾನವನವಗ್ರಹಿಸಿತ್ತೆಂಬುದೀಗ ಆ ನೀರು ಬೇರನುಂಗಿತ್ತೆಂಬ ಶಬ್ದಕ್ಕರ್ಥ. ಆ ಮೂಲಜ್ಞಾನ ಪ್ರಕಾಶವು ಸದ್ವಿವೇಕ ವೃಕ್ಷ ವನವಗ್ರಹಿಸಿತ್ತೆಂಬುದೀಗ ಆ ಬೇರು ವೃಕ್ಷವನುಂಗಿತ್ತೆಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷವು ಷಡ್ವಿಧಭಕ್ತಿಗಳನವಗ್ರಹಿಸಿತ್ತೆಂಬುದೀಗ ವೃಕ್ಷಶಾಖೆಯು ನುಂಗಿ ಎಂಬ ಶಬ್ದಕ್ಕರ್ಥ. ಆ ಷಡ್ವಿಧ ಭಕ್ತಿಗಳು ಸದಾಚಾರ ಸಂಪತ್ತನವಗ್ರಹಿ ಸಿದವೆಂಬುದೀಗ ಶಾಖೆ ಪರ್ಣವ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದಾಚಾರ

ಸಂಪತ್ತು ಸ್ವಾನುಭಾವ ಸದ್ವಾಸನೆಯುನವಗ್ರಹಿಸಿತ್ತೆಂಬುದೀಗ ಪರ್ಣ ಕುಸುಮವ ನುಂಗಿಕೊಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ಸ್ವಾನುಭಾವ ಸದ್ವಾಸನೆಯು ನಿತ್ಯವಾದ ಮೋಕ್ಷಫಲವನವಗ್ರಹಿಸಿತ್ತೆಂಬುದೀಗ ಕುಸುಮ ಕಾಯ ಕೊಂಡು ಎಂಬ ಶಬ್ದಕ್ಕರ್ಥ. ಆ ಮೋಕ್ಷಫಲವನೊಳಕೊಂಡಿರ್ಪ ಚಿತ್ ಸ್ವರೂಪನಾದ ಶರಣನು ಚಿದಮೃತ ರಸಮಯದಿಂದೊಪ್ಪುತ್ತಿರ್ದ ಚಿದ್ಘನ ಲಿಂಗವ ಶ್ರೀಗುರು ಮುಖದಿಂದ ಪ್ರತ್ಯಕ್ಷವ ಮಾಡಿಕೊಂಡು, ಆ ಚಿದ್ಘನ ಲಿಂಗವ ತನುತ್ರಯಂಗಳಲ್ಲಿ ಇಷ್ಟಪ್ರಾಣ ಭಾವಲಿಂಗ ಸ್ವರೂಪವಾಗಿ, ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗ ಸ್ವರೂಪವಾಗಿ ಧರಿಸಿ, ರೂಪು ರುಚಿ ತೃಪ್ತಿ ಮೊದಲಾದ ಸಕಲ ವಿಷಯ ಪದಾರ್ಥಂಗಳ ಭಕ್ತಿಯಿಂ ಲಿಂಗಾರ್ಪಿತವ ಮಾಡಿ, ಲಿಂಗಸುಖಪ್ರಸನ್ನ ಪ್ರಸಾದವ ಸ್ವೀಕರಿಸಿದ ಶರಣಂಗೆ, ತಾನೆಂಬ ಭಾವವಳಿಯಿತ್ತೆಂಬುದೀಗ ಕಾಯಿ ಹಣ್ಣಾದಲ್ಲಿ ಭಾವವಳಿಯಿತ್ತು, ಇದನಾರು ಬಲ್ಲರು ನಿಃಕಳಂಕ ಮಲ್ಲಿಕಾರ್ಜುನಾ ನೀನೆ ಬಲ್ಲೆ ಎಂಬ ಶಬ್ದಕ್ಕರ್ಥ

೭೯೧

ನೀರು ನೇಣು ಬಾವಿಯ ತಡಿ ಕುಂಭ ಮುಂತಾಗಿ ಬಂದಲ್ಲದೆ ಪಾತಾಳದ ಜಲವೈದದು ಧರೆಗೆ. ಭಕ್ತಿ ಜ್ಞಾನ ವೈರಾಗ್ಯಗಳೆಂಬವು ಒತ್ತಿ ಬೆಳೆದ ಶರೀರದ ಪೃಥ್ವಿಯ ಸಂಜ್ಞೆಯಲ್ಲಿ ಹೊಯ್ದ ಉದಕ ಸಾರಾಯವಾಯಿತ್ತು. ಸಸಿ ಬೆಳೆದು ಕೊಯ್ದು ಒಕ್ಕಿ ನೈದ ಮತ್ತೆ ಬಾವಿ ಬಿದ್ದಿತ್ತು, ನೇಣು ಹರಿಯಿತ್ತು, ಕುಂಭ ಒಡೆಯಿತ್ತು, ಭೂಮಿ ಹಾಳಾಯಿತ್ತು, ಅಳಿವವ ಸತ್ತ, ಆ ಭತ್ತ ಸಿಕ್ಕಿತ್ತು. ಅರಮನೆಯಲ್ಲಿ ಸಿಕ್ಕಿದ ಭತ್ತವನುಂಡು, ಮತ್ತರಾದರು ಮರ್ತ್ಯದವರೆಲ್ಲರು. ತುತ್ತ ನುಂಗಿದರೂ ಇತ್ತಲಿರ್ದು ಬದುಕಿದೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೪ ॥

ಟೀಕೆ:— ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವೀಗ ನೀರು ಎಂಬ ಶಬ್ದಕ್ಕರ್ಥ. ಸ್ವಾನುಭಾವ ಸೂತ್ರವೆಂಬುದೀಗ ನೇಣು ಎಂಬ ಶಬ್ದಕ್ಕರ್ಥ. ಚಿತ್ಕೂಪವೆಂಬುದೀಗ ಬಾವಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ಕೂಪದ ತಡಿಯಲ್ಲಿ ನಿಂದು ಎಂಬುದೀಗ ತಡಿ ಎಂಬ ಶಬ್ದಕ್ಕರ್ಥ. ಚಿದ್ಭಾಂಡವೆಂಬುದೀಗ ಕುಂಭವೆಂಬ ಶಬ್ದಕ್ಕರ್ಥ. ಅಂತಪ್ಪ ಚಿದ್ಭಾಂಡವನ್ನು ಚಿದಂಗವ ಮಾಡಿಕೊಂಡು ಶ್ರೀಗುರೂಪಾಸ್ತಿಯ ಮಾಡಲು ಆ ಶ್ರೀಗುರು ಕರುಣಿಸಿ, ಪಾತಾಳವೆಂದಡೆ ಹೃದಯ ಕಮಲ, ಅಂತಪ್ಪ ಹೃದಯ ಕಮಲ ಕರ್ಣಿಕಾ ಮಧ್ಯದ ಚಿದ್ಭಾಂಡದಲ್ಲಿ ತುಂಬಿದ್ದ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವನ್ನು ಭಾವ, ಮನ, ದೃಕ್ಕಿಂದ ಬಹಿಷ್ಕರಿಸಿ ಶರಣನ ಆಚಾರಾಂಗದಲ್ಲಿ ಇಷ್ಟಲಿಂಗ ಸ್ವರೂಪವಾಗಿ ಸಾಹಿತ್ಯವ ಮಾಡಿದಲ್ಲಾಗದೆಂಬುದೀಗ ಕುಂಭ ಮುಂತಾಗಿ ಬಂದಲ್ಲದೆ, ಪಾತಾಳದ ಜಲವೈದದು ಧರೆಗೆ ಎಂಬ ಶಬ್ದಕ್ಕರ್ಥ. ತ್ರಿವಿಧ ಪದಾರ್ಥವನ್ನು ತ್ರಿವಿಧ ಮುಖದಲ್ಲರ್ಪಿಸುವದೆ ಭಕ್ತಿ. ತ್ರಿವಿಧ

ಒಂದೇ ಪರಬ್ರಹ್ಮವೆಂದರಿವು ಜ್ಞಾನ ಚತುರ್ವಿಧ ಫಲಪದಂಗಳ ಧ್ವಂಸವ ಮಾಡಿ ನಿತ್ಯಪದದಲ್ಲಿ ಸ್ವಸ್ಥಿರವಾದುದೇ ವೈರಾಗ್ಯ. ಇಂತಪ್ಪ ಭಕ್ತಿ ಜ್ಞಾನ ವೈರಾಗ್ಯವೆಂಬ ತ್ರಿವಿಧವು ಸಕಲ ಪ್ರಪಂಚಕ್ಕೆಲ್ಲಕ್ಕೊತ್ತರಿಸಿ ಶರಣನ ಚಿದಂಗದಲ್ಲಿ ಪ್ರಭಾವಿಸುತ್ತಿಹುದೆಂಬುದೀಗ ಭಕ್ತಿ ಜ್ಞಾನ ವೈರಾಗ್ಯಗಳೆಂಬ ಒತ್ತಿ ಬೆಳೆವ ಶರೀರದ ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿ ಜ್ಞಾನ ವೈರಾಗ್ಯವನೊಳಕೊಂಡ ಶರಣನ ತನುವಿನಲ್ಲಿ ಹೃದಯಾದಿ ಷಡಿಂದ್ರಿಯಂಗಳಿರುತ್ತಿಹವೆಂಬುದೀಗ ಪೃಥ್ವಿಯು ಪಜ್ಜೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣನು ಹೃದಯ ಕಮಲ ಕರ್ಣಿಕಾ ಮಧ್ಯದಲ್ಲಿ ತುಂಬಿದ್ದ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವು ಆ ಹೃದಯಾದಿ ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗ ಸ್ವರೂಪವಾಗಿ ಅವಗ್ರಹಿಸಿತ್ತೆಂಬುದೀಗ ಪಜ್ಜೆಯಲ್ಲಿ ಹೊಯಿದ ಉದಕ ಸಾರಾಯವಾಯಿತ್ತೆಂಬ ಶಬ್ದಕ್ಕರ್ಥ. ಜ್ಞಾನ ಚಂದ್ರನೆಂಬುದೀಗ ಸಸಿ ಎಂಬ ಶಬ್ದಕ್ಕರ್ಥ. ಷೋಡಶಕಳಾ ಸಂಪೂರ್ಣ ಮಯವಾದ ಪ್ರಾಣಲಿಂಗವು ಇಷ್ಟ ಪ್ರಾಣ ಭಾವಲಿಂಗ ಸ್ವರೂಪವಾಯಿತ್ತೆಂಬುದೀಗ ಸಸಿ ಬೆಳೆದು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗಸಂಬಂಧವಾದ ಶರಣನು ಷಡ್ವರ್ಣ ಸ್ವರೂಪವಾದ ಮಾಯಾಪ್ರಪಂಚವ ಸುಜ್ಞಾನಶಸ್ತ್ರದಿಂದ ತುಂಡಿಸಿದನೆಂಬುದೀಗ ಕೊಯ್ದು ಎಂಬ ಶಬ್ದಕ್ಕರ್ಥ. ಆ ಪ್ರಪಂಚವ ನಿವೃತ್ತಿಮಾಡಿ ಜ್ಞಾನ ಕ್ರಿಯಾಚಾರವಿಡಿದಾಚರಿಸಿದ ಶರಣಂಗೆ ಆ ಚಿದ್ರೂಪವು ಚಿದ್ಘನಲಿಂಗದಲ್ಲಿ ಅಡಗಿತ್ತೆಂಬುದೀಗ ಒಕ್ಕಿ ವೈದ ಮುಕ್ತೆ, ಬಾಪಿ ಬಿದ್ದಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ರೂಪವು ಚಿದ್ಘನ ಲಿಂಗದಲ್ಲಿ ಏಕಾರ್ಥವಾದ ಶರಣನ ಮೂಲ ಜ್ಞಾನ ಪ್ರಕಾಶವು ಆಚಾರ ಸ್ವರೂಪವಾದ ಚಿದಂಗವು ಎರಡೂ ಚಿದ್ಘನ ಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ನೇಣುಹರಿಯಿತ್ತು, ಕುಂಭ ಒಡೆಯಿತ್ತು ಎಂಬ ಶಬ್ದಕ್ಕರ್ಥ. ಆ ಜ್ಞಾನಕ್ರಿಯೆಗಳು ಮಹಾಘನ ಲಿಂಗದಲ್ಲಿ ನಿಷ್ಪತ್ತಿಯಾದ ಶರಣನ ಶಿವೋಹಂ ಭಾವದರಿವು ಸುಜ್ಞಾನ ಲಿಂಗದಲ್ಲಿ ಏಕಾರ್ಥವಾಗಲು ಸದ್ರೂಪವಾದ ಬ್ರಹ್ಮವೇ ಆದನೆಂಬುದೀಗ ಭೂಮಿ ಹಾಳಾಯಿತ್ತು ಅಳೆವವ ಸತ್ತನೆಂಬ ಶಬ್ದಕ್ಕರ್ಥ. ಆ ಸತ್ತೆಂಬ ತಂಡಿಲು ಚಿದ್ರೂಪನಾದ ಶರಣನ ಮಹಾನುಭಾವಾಂತರಂಗದಲ್ಲಿ ಮೂರ್ತಿಗೊಂಡಿತ್ತೆಂಬುದೀಗ ಆ ಭತ್ತ ಸಿಕ್ಕಿತ್ತು ಅರಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಹೃದಯಕಮಲ ಕರ್ಣಿಕಾ ಮಧ್ಯದಲ್ಲಿ ಮೂರ್ತಿಗೊಂಡ ಚೈತನ್ಯ ಸ್ವರೂಪವಾದ ಪ್ರಾಣಲಿಂಗದ ಸಮರಸಾನಂದದ ಸುಖವನು ಚಿತ್‌ಸ್ವರೂಪನಾದ ಶರಣನು ಚಿದ್ವಾರದಿಂದ ಸ್ವೀಕರಿಸಿ ಚಿದ್ಘನ ಲಿಂಗದಲ್ಲಿ ಪರಮಕಾಪ್ತಿಯಾದನೆಂಬುದೀಗ ಸಿಕ್ಕಿದ ಭತ್ತವನುಂಡು ಮತ್ತರಾದರು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸಾನಂದ ಸುಖವ ಅರಿಯದ ಕರ್ಮಕಾಂಡಿಗಳುಮುಖ್ಯವಾದ ಭಿನ್ನಜ್ಞಾನಿಗಳೆಲ್ಲರು ಲಿಂಗದಲ್ಲಿ ಭಿನ್ನಕ್ರಿಯೆವಿಡಿದಾಚರಿಸಿ, ಭಿನ್ನಫಲಪದಂಗಳ ಪಡೆದು ಭೋಗಿಸಿ ಮೋಕ್ಷವ ನಷ್ಟಮಾಡಿ ಭವದತ್ತ ಎಡೆಯಾಡುತ್ತಿಹರೆಂಬುದೀಗ ಮರ್ತ್ಯದವರೆಲ್ಲರು ತುತ್ತ ನುಂಗಿದರು ಎಂಬ ಶಬ್ದಕ್ಕರ್ಥ. ಆ ಷಟ್‌ಸ್ಥಲ ಲಿಂಗಾಂಗ ಸಂಬಂ

ಧಿಯಾಗಿದ್ದ ಶರಣನು ಆ ಖಂಡಿತ ಫಲಪದಂಗಳ ಮೀರಿ ನಿತ್ಯವಾದ ನಿಜಪದದಲ್ಲಿ ಸ್ವಸ್ಥಿರವಾಗಿದ್ದನೆಂಬುದೀಗ ಇತ್ತಲಿದ್ದು ಬದುಕಿದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೨

ನೀರ ಹೊಳೆಯಲ್ಲಿ ಹೋಗುತ್ತಿರಲಾಗಿ ಅಲ್ಲಿ ಒಬ್ಬ ಸತ್ತು ಬೇವುತ್ತಿರ್ದ. ತಲೆ ಕಾಲು ಬೇಯದು. ಕೈ ಮುರಟದು ಕಪಾಲ ಸಿಡಿಯದು. ಕೂದಲು ಳಿಯಿತ್ತು. ಆ ಕೂದಲ ಮೊನೆಯಲ್ಲಿ ಮೂರು ಲೋಕವೆಡೆಯಾಡುತ್ತಿದೆ ನಿಃಕಳಂಕ ಮಲ್ಲಿಕಾರ್ಜುನಾ. ॥ ೧೩೫ ॥

ಟೀಕೆ:— ನೀರೆಂದೆಡೆ ಮನಸ್ಸು. ತಾಪತ್ರಯಾಗ್ನಿಯಿಂ ಬೇವುತ್ತಿರ್ದನೆಂಬುದೀಗ ಹೊಳೆಯಲ್ಲಿ ಹೋಗುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋಧರ್ಮ ಮಾರ್ಗದಲ್ಲಿ ಚರಿಸಿ ಬರುತ್ತಿರಲಾಗಿ ದೇಹ ಸಂಬಂಧಿಯಾದ ಆತ್ಮನು ತನ್ನ ನಿಜದರಿವ ನಷ್ಟವಮಾಡಿ ಜೀವನ್ಮೃತನಾಗಿಹನೆಂಬುದೀಗಅಲ್ಲಿ ಒಬ್ಬ ಸತ್ತು ಬೇವುತ್ತಿರ್ದನೆಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿಯಿಂ ಬೇವುತ್ತಿರ್ಪಾತ್ಮನ ಸ್ವತ್ತಿಜ್ಞಾನವೆಂಬ ಶಿರಸ್ಸು, ದುಶ್ಚರಿತ್ರವೆಂಬ ಚರಣವು ಎರಡು ದಗ್ಧವಾದುದಿಲ್ಲವೆಂಬುದೀಗ ತಲೆ ಕಾಲು ಬೇಯದು ಎಂಬ ಶಬ್ದಕ್ಕರ್ಥ. ಅಂತಪ್ಪ ತಾಪತ್ರಯಾಗ್ನಿಯಿಂ ಜೀವನಚಿತ್ತುವೆಂಬ ಹಸ್ತವು ನಷ್ಟವಾಗದೆಂಬುದೀಗ ಕೈ ಮುರುಟದು ಎಂಬ ಶಬ್ದಕ್ಕರ್ಥ. ಅಂತು ಜೀವನ ಭಿನ್ನ ಜ್ಞಾನವು ನಷ್ಟವಾಗದೆ ಇರುವದೆಂಬುದೀಗ ಕಪಾಲ ಸಿಡಿಯದು ಎಂಬ ಶಬ್ದಕ್ಕರ್ಥ. ಆ ಜೀವನ ಅಜ್ಞಾನ ಕೆಡದೆ ಇರುತ್ತಿಹುದೆಂಬುದೀಗ ಕೂದಲುಳಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನದಗ್ರದಲ್ಲಿ ಸ್ವರ್ಗ ಮೃತ್ಯು ಪಾತಾಳದಲುಳ್ಳ ದೇವದಾನವ ಮಾನವರು ಗೇಹವೆಂಬ ಚೋಹವ ತೊಟ್ಟು ಉತ್ಪತ್ತಿ ಸ್ಥಿತಿ ಲಯಂಗಳಿಂದೆ ತಿರುಗಾಡುತ್ತಿರ್ದರೆಂಬುದೀಗ ಆ ಕೂದಲ ಮೊನೆಯಲ್ಲಿ ಮೂರು ಲೋಕವೆಡೆಯಾಡುತ್ತಿದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೩

ಬಧಿರನೊಂದಾಗಿ ಮದವಳಿಗ ಕೂಡಿದ. ಮದವಳಿಗನ ಹಿಂದುಗಡೆ ಕಳಸಗನ್ನಡಿ. ಮದವಳಿಗನ ಮುಂದೆ ಸಾಯುವರೆ ಮೂದೇವರು ಮುಂದೆ ಅಳುತ್ತಿಪ್ಪುದ ಕಂಡೆ. ಶಕುನ ಹೊಲ್ಲಹವೆಂದು ಮದವಣಿಗತಿರುಗಿದ. ಮದುವೆ ಉಳಿಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೬ ॥

ಟೀಕೆ.— ಶ್ರೀಗುರುವಿನ ಸುಜ್ಞಾನ ಬೋಧನೆಯನ್ನು ಅನಾಹತ ಕರಣದ್ವಾರದಿಂದ ಕೇಳದೆ ಇದ್ದ ಮನೋವರ್ತನೆಯಲ್ಲಿ ಶಿವಾಂಶಿಕನಾದ ಆತ್ಮನು ವರ್ತಿಸುತ್ತಿಹನೆಂಬುದೀಗ ಬಧಿರನೊಂದಾಗಿ ಮದವಳಿಗ ಕೂಡಿದನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನ ಪ್ರಕೃತಿಯಿಂದ ಕಳಸವೆಂದೆಡೆ ಸುಜ್ಞಾನ ಪ್ರಕಾಶ, ಕನ್ನಡಿ ಎಂದಡೆ

ಕ್ರಿಯಾಚಾರ ಸ್ವರೂಪವಾದ ಇಷ್ಟಲಿಂಗ ಅಂತಪ್ಪ ಜ್ಞಾನ ಕ್ರಿಯಾಚಾರವು ಜೀವಂಗೆ ಇಲ್ಲದೆ ಹೋಯಿತ್ತೆಂಬುದೀಗ ಮದವಳಿಗನ ಹಿಂದುಗಡೆ ಕಳಸಗನ್ನಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ದೇಹಸಂಬಂಧದಿಂದ ಜೀವನ್ಮೃತನಾಗಿ ಸೋಹಂ ಎಂಬ ವಾಗ್ಜಾಲದಿಂದ ಉಲಿಯುತ್ತಿಹನೆಂಬುದೀಗ ಮದವಳಿಗನ ಮುಂದೆ ಸಾಯುವರೆ ಎಂಬ ಶಬ್ದಕ್ಕರ್ಥ. ಅಂತು ತತ್ವತ್ರಯ ಸಂಬಂಧವಾದ ಜೀವತ್ರಯಂಗಳು ಸಕಲ ಪ್ರಪಂಚಿನಲ್ಲಿ ಸಿಲುಕಿ ಮೋಹಿ ಜೀವಿಗಳಾಗಿದ್ದರೆಂಬುದೀಗ ಮಹಾದೇವರು ಮುಂದೆ ಆಳುತ್ತಿಪ್ಪುದ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಶಿವಜ್ಞಾನವು ತಲೆದೋರಿ ತನ್ನ ನಿಜವನರಿದು ಸಂಸಾರಸುಖವನನುಭಾವಿಸಿದೊಡೆ ಮೋಕ್ಷವಿಲ್ಲವೆಂದು ತಿಳಿದು, ಪ್ರಪಂಚವ ನಿವೃತ್ತಿ ಮಾಡಿ ಶಿವತತ್ವದತ್ತಲು ಅಭಿಮುಖವಾಗಿದ್ದನೆಂಬುದೀಗ ಶಕುನಹೊಲ್ಲಹವೆಂದು ಮದವಳಿಗ ತಿರುಗಿದನೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಶ್ರೀಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾಗಿ ಭಕ್ತಿ ಜ್ಞಾನ ಪಿಡಿದಾಚರಿಸಿ ಶರಣಸತಿ ಲಿಂಗಪತಿಯಾಗಿ ಆಚರಿಸಿಹೆನೆಂಬ ಉಭಯ ಭಾವವಳಿದು ನಿವೃತ್ತಿಯಾಯಿತ್ತೆಂಬುದೀಗ ಮದುವೆ ಉಳಿಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೪

ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು. ಆ ಚೀಲದ ಮುದ್ದ ನುಂಗಿದವನ ಕಂಡವನೊಡೆದು ದಿಂಡುಗೆಡಹಿತ್ತು ತನುವ. ಆ ಕಂಡವ ಕೊಂಡು ಹೋಗಿ ಉಂಡವ ಸತ್ತ ನಿಃಕಳಂಕ ಮಲ್ಲಿಕಾರ್ಜುನಾ ॥ ೧೩೭ ॥

ಟೀಕೆ:— ಸರ್ವಾಚಾರ ಸಂಪತ್ತನೊಳಕೊಂಡಿಪ್ಪ ಶರಣನ ಅಖಂಡಜ್ಞಾನ ಚಿತ್ತೆಂಬುದೀಗ ಬಂಡವ ತುಂಬಿದ ಹಸುಬೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸರ್ವಾಚಾರ ಸಂಪತ್ತು ಗುರುಕರುಣದಿಂದ ಸರ್ವಾಂಗದಲ್ಲಿ ಸಾಹಿತ್ಯವ ಮಾಡಿಕೊಂಡು ಆಚರಿಸುತ್ತಿಪ್ಪ ಚಿತ್‌ಸ್ವರೂಪನಾದ ಶರಣನ ಆ ಮಹಾಜ್ಞಾನ ಚಿತ್ತವು ಅವಗ್ರಹಿಸಿತ್ತೆಂಬುದೀಗ ಕೊಂಡವನ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಚಿತ್ತುವಿನಲ್ಲಿ ಸಂಬಂಧವಾದ ಮಹಾಘನಲಿಂಗವು ಆ ಸರ್ವಾಚಾರ ಸಂಪತ್ತು ಅಂಗವಾಗಿಪ್ಪ ಶರಣನ ಕರಸ್ಥಲಕ್ಕೆ ಗುರುಮುಖದಿಂದ ಇಷ್ಟಲಿಂಗಸ್ವರೂಪವಾಗಿ ಬಂದು ಸರ್ವಾಂಗವನವಗ್ರಹಿಸಿತ್ತೆಂಬುದೀಗ ಆ ಚೀಲದ ಮುದ್ದ ನುಂಗಿದವನ ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗಲಿಂಗ ಸಂಬಂಧವಾಗಿಪ್ಪ ಶರಣನ ಸಕಲ ಕರಣಂಗಳು ಮಹಾಘನ ಲಿಂಗವನವಗ್ರಹಿಸಿ ನಿವೃತ್ತಿ ಮಾಡಿತ್ತೆಂಬುದೀಗ ಕಂಡವನೊಡೆದು ಎಂಬ ಶಬ್ದಕ್ಕರ್ಥ. ಆ ಕರಣಂಗಳೆಲ್ಲ ಅಮರಗಣತ್ವವನೈದಲು ಅಹಂಕಾರ ಯುಕ್ತವಾದ ದೇಹಭಾವವಳಿದು ಚಿತ್ಪ್ರಭಾಂಗಸ್ವರೂಪವಾಯಿತ್ತೆಂಬುದೀಗ ದಿಂಡುಗೆಡಹಿತ್ತು ತನುವ ಎಂಬ ಶಬ್ದಕ್ಕರ್ಥ. ಆ ಜ್ಞಾನ ಕಾಯದಲ್ಲಿ ಸಂಬಂಧವಾದ ರೂಪು ರುಚಿ ತೃಪ್ತಿ ಮೊದಲಾದ ಸಕಲ ಕರಣ ದ್ರವ್ಯಂಗಳ ಆಯಾ ಮುಖದ ಲಿಂಗಗಳಿಗೆ

ಭಕ್ತಿಯಿಂದರ್ಪಿಸಿ, ಆ ಪರಮ ಪ್ರಸಾದವನ್ನು ಸ್ವೀಕರಿಸಿದ ಶರಣನು ಚಿದ್ಘನ ಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ ಆ ಕಂಡವಕೊಂಡುಹೋಗಿ ಉಂಡವ ಸತ್ತ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೫

ಬೆಟ್ಟದ ಮೇಲಣ ಗುಂಡು, ಬೆಟ್ಟವ ನುಂಗಿತ್ತು. ಸೃಷ್ಟಿಯ ಮೇಲಣ ಜಗ ಪೃಥ್ವಿಯ ನುಂಗಿತ್ತು. ಹಸುವಿನ ಬಸಿರಶಿಸು ಹಸುವ ನುಂಗಿತ್ತು. ಹೆಸರಿಡುವದಿನ್ನೇನೋ? ಕಣ್ಣೊಳಗಣ ಎರಳೆ ಬಣ್ಣವ ನುಂಗಿದ ಮತ್ತೆ ಬಣ್ಣಿಸಿ ಪೂಜಿಸಿಕೊಂಬುದಿನ್ನೇನೋ? ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ ಅಣ್ಣಗಳೆಲ್ಲರು. ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ ಊರಹೊಕ್ಕು ಆರೈದಿರಯ್ಯಾ ನೀವಾರಾಧಿಸುವ ಲಿಂಗವ. ಆ ಲಿಂಗದಲ್ಲಿ ಲೀಯವಾದವರೆಲ್ಲರು ಸಂಗಕ್ಕೊಳಗಾದರು. ನಮ್ಮ ನಿಸ್ಸಂಗಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟೆನಯ್ಯಾ ॥ ೧೩೫ ॥

ಟೀಕೆ:— ಚಿದಹಂಕಾರಾಗ್ರದಲ್ಲಿ ಉತ್ಪತ್ತಿಯಾದ ಚಿದ್ಘನಲಿಂಗವು ಸುಜ್ಞಾನೋದಯವಾದ ಶರಣನ ಅಹಂಕಾರವನವಗ್ರಹಿಸಿತ್ತೆಂಬುದೀಗ ಬೆಟ್ಟದ ಮೇಲಣ ಗುಂಡು ಬೆಟ್ಟವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಆಚಾರಾಂಗದಲ್ಲಿರ್ದ ಸಕಲ ಕರಣಂಗಳೆಲ್ಲವು ಅನುರಾಗಣತ್ವವನೈಯ್ದು ಜ್ಞಾನಕಾಯದಲ್ಲಿ ಸಂಬಂಧವಾಗಿರ್ದ ಇಷ್ಟಲಿಂಗವನವಗ್ರಹಿಸಿದವೆಂಬುದೀಗ ಸೃಷ್ಟಿಯ ಮೇಲಣ ಜಗ, ಪೃಥ್ವಿಯ ನುಂಗಿತ್ತೆಂಬ ಶಬ್ದಕ್ಕರ್ಥ ಅಂತು ಜೀವಂಗೆ ಸುಜ್ಞಾನೋದಯವಾದ ಚಿದ್ಗರ್ಭ ತಲೆದೋರಲು ಸುಜ್ಞಾನಸ್ವರೂಪವಾದ ಮಹಾಘನ ಲಿಂಗ ಉದಯಿಸಿ ಜೀವನ ಪಶುಭಾವವ ನಷ್ಟವ ಮಾಡಿತ್ತೆಂಬುದೀಗ ಹಸುವಿನ ಬಸಿರ ಶಿಸು ಹಸುವನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಭಾವವಳಿದು ಶಿವಭಾವ ಘಟಿಸಿ ಸರ್ವಾಂಗಲಿಂಗಸಂಬಂಧಿಯಾಗಿರ್ಪ ಶರಣನ ಕುರುಹಿಂಗೆ ತಂದು ಹೇಳಬಾರದೆಂಬುದೀಗ ಹೆಸರಿಡುವದಿನ್ನೇನೋ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ಸುಜ್ಞಾನದೃಷ್ಟಿಯ ಮುಂದೆ ತೋರುವ ಮಹಾಜ್ಞಾನ ಚಿತ್ತು, ಷಡ್ಗುಣೋಪೇತವಾದ ಮಾಯಾಪ್ರಪಂಚವನವಗ್ರಹಿಸಿತ್ತೆಂಬುದೀಗ ಕಣ್ಣೊಳಗಣ ಎರಳೆ ಬಣ್ಣವ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಸತ್ಪಥಮಾರ್ಗವನ್ನರಿಯದೆ ಲಿಂಗಾಂಗಕ್ಕೆ ಭಿನ್ನವಿಟ್ಟು ಅರ್ಚನೆ ಪೂಜನೆಯ ಮಾಡಿ ಫಲಪದಂಗಳ ಪಡೆದು ಭೋಗಿಸಿ, ಭವ ಹೇತುವಪ್ಪ ಜನ್ಮಾಂತರಕ್ಕೆ ಬಂದು ಅಜ್ಞಾನ ಸಂಬಂಧವಾದ ಭವಾಂಬುಧಿಯಲ್ಲಿ ಮುಳುಗಿ, ಉತ್ಪತ್ತಿ ಸ್ಥಿತಿ ಲಯಂಗಳಲ್ಲಿ ಸಿಲ್ಕಿ ತಮ್ಮ ನಿಜವಂ ಮರೆದು ದೇಹಭಾವಕ್ಕೊಳಗಾಗಿ ಕೆಟ್ಟರೆಂಬುದೀಗ ಮತ್ತೆ ಬಣ್ಣಿಸಿ ಪೂಜಿಸಿಕೊಂಬುದಿನ್ನೇನೋ ಕಣ್ಣಾವಗಾಲದ ಹೊಳೆಯಲ್ಲಿ

ಮುಳುಗಿ ಚೆನ್ನುಗೆಟ್ಟರಯ್ಯಾ ಅಣ್ಣಗಳೆಲ್ಲರು, ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ ಊರಹೊಕ್ಕು ಅರೈಯದ್ದರಯ್ಯಾ ನೀವಾರಾಧಿಸುವ ಲಿಂಗವ ಆ ಲಿಂಗದಲ್ಲಿ ಲೀಯವಾದವರೆಲ್ಲರು ಸಂಗಕ್ಕೊಳಗಾದರು ಎಂಬ ಶಬ್ದಕ್ಕರ್ಥ. ಮಹಾಘನ ಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ತಾನೆಂಬ ಭಾವವಳಿದು ಚಿದ್ಘನಲಿಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ನಮ್ಮ ನಿಸ್ಸಂಗ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟೆನಯ್ಯಾ ಎಂಬ ಶಬ್ದಕ್ಕರ್ಥ.

೭೯೬

ಬೇಡ ಬಿಲ್ಲವಿಡಿದು ರೂಢಿಯಲ್ಲಿ ತಿರುಗಾಡುತ್ತಿರಲಾಗಿ, ಬೇಡನ ಬಿಲ್ಲ ಬೇಡಿ ಕಾಡಿಹರೆಲ್ಲರು. ಆ ಬಿಲ್ಲು ರೂಢಿಯದಲ್ಲ. ಇನ್ನಾರು ಕೊಟ್ಟರೋ? ಕೊಟ್ಟವರ ಕೊಂಡು ಕೊಡದವರ ಹಿಂಗಿ ಬಟ್ಟೆಯ ಹಂಗಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ. ॥ ೧೩೬ ॥

ಟೀಕೆ:— ಸುಜ್ಞಾನೋದಯವಾಗಿ ಸಕಲ ಪ್ರಪಂಚವ ನಿವೃತ್ತಿಮಾಡಿ ಶ್ರೀಗುರು ಕಾರುಣ್ಯದಿಂದ ತನುತ್ರಯಂಗಳಲ್ಲಿ ಇಷ್ಟ ಪ್ರಾಣ ಭಾವಲಿಂಗ ಸಂಬಂಧವಾಗಿ ಅಭಿನ್ನ ಜ್ಞಾನಕ್ರಿಯಿಂದಾಚರಿಸುತ್ತಿದ್ದ ಶರಣನು ಖಂಡಿತ ಫಲಪದಂಗಳ ಬಯಸನೆಂಬುದೀಗ ಬೇಡನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಅಂಬ ತೊಡಚಿ ಗುರುಮಾರ್ಗಾಚಾರವಿಡಿದು ಸತ್ಪಥದಲ್ಲಿ ಆಚರಿಸುತ್ತಿರಲಾಗಿ ಎಂಬುದೀಗ ಬಿಲ್ಲವಿಡಿದು ರೂಢಿಯಲ್ಲಿ ತಿರುಗಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅದ್ವೈತ ಜ್ಞಾನಿಗಳೆಲ್ಲರು ಪರಿಪೂರ್ಣಜ್ಞಾನಿಯಾದ ಶರಣನ ಶಿವಭಾವವ ಸಿಕ್ಕಯಿಸುತ್ತಿಹರೆಂಬುದೀಗ ಬೇಡನ ಬಿಲ್ಲಬೇಡಿ ಕಾಡಿಹರೆಲ್ಲರು ಎಂಬ ಶಬ್ದಕ್ಕರ್ಥ. ಆ ನಿಜಮೋಕ್ಷಕ್ಕೆ ಕಾರಣವಾದ ಶಿವಭಾವವು ದೇಹಾದಿ ಪ್ರಪಂಚವ ಹೊದ್ದದೆಂಬದೀಗ ಆ ಬಿಲ್ಲು ರೂಢಿಯದಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಾವವ ಸಂಬಂಧವ ಮಾಡಿಕೊಟ್ಟ ಶ್ರೀ ಗುರುತತ್ವವನ್ನು ಶರಣನು ತನ್ನ ಪ್ರಸಾದಕಾಯದಲ್ಲಿ ಸಾಹಿತ್ಯವ ಮಾಡಿದನೆಂಬುದೀಗ ಇನ್ನಾರು ಕೊಟ್ಟರೋ ಕೊಟ್ಟವರ ಕೊಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾಭಾವ ಸನ್ನಿಹಿತರಲ್ಲದ ಅದ್ವೈತ ಜ್ಞಾನಿಗಳು ತನ್ನಾಚಾರಕ್ಕೆ ಸಲ್ಲದೆಂದು ಶರಣನು ಬೇರ್ಪಡಿಸಿದನೆಂಬುದೀಗ, ಕೊಡದವರ ಹಿಂಗಿ ಎಂಬ ಶಬ್ದಕ್ಕರ್ಥ. ಸರ್ವಾಂಗ ಲಿಂಗಸಂಬಂಧಿಯಾದ ಶರಣನ ಕ್ರಿಯಾಜ್ಞಾನಗಳು ಲಿಂಗದಲ್ಲಿ ನಿಷ್ಪತ್ತಿ ಯಾಗಲು ಇನ್ನು ಕ್ರಿಯಾಚಾರವಿಡಿದಾಚರಿಸಲಿಲ್ಲವೆಂಬುದೀಗ ಬಟ್ಟೆಯ ಹಂಗಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೭

ಬಾವಿಯ ಓರೆಯ ಮೆಟ್ಟಿ ಜಾರಿ ಬಿದ್ದವರಾರೋ ? ಮೀರಿತ್ತು ಬಾವಿಯ ನೀರು ತೋರಲಿಲ್ಲದಂತೆ. ಮುಸುಕೆ ಮುಳುಗಿ ಹೋಹಾಗ ಮೂರಡಿಯ

ಕಪ್ಪೆಯನು ಮರಿಬಂದು ತೋರಲಿಲ್ಲದಂತೆ ನುಂಗಿತ್ತು. ಬಾವಿಯು ಒರೆಯು ಜಾರಿ ಬಿದ್ದಾತನ ಇನ್ನಾರಿಗೆ ಉಸುರುವೆ ಮೀರಿದ ಘನವ? ನಿಃಕಳಂಕ ಮಲ್ಲಿಕಾರ್ಜುನಾ. ॥ ೧೩೭ ॥

**ಟೀಕೆ:**— ಬಾವಿ ಎಂದೊಡೆ ಚಿದ್ರೂಪ. ಅಂತಪ್ಪ ಚಿದ್ರೂಪವನೊಳಗೊಂಡು ಅಭಿನ್ನಕ್ರಿಯಾಚಾರ ಒಪ್ಪುತ್ತಿಹುದೆಂಬುದೀಗ ಬಾವಿಯು ಒರೆಯು ಮೆಟ್ಟಿ ಎಂಬ ಶಬ್ದಕ್ಕರ್ಥ. ಅಂತು ಅಭಿನ್ನ ಕ್ರಿಯಾಚಾರವಿಡಿದಾಚರಿಸುತ್ತಿರ್ದ ಕಾಮ್ಯಾರ್ಥ ಭಕ್ತಿಯ ಮಾಡಿದೊಡೆ ಅಭಿನ್ನಕ್ರಿಯಾಚಾರಕ್ಕೆ ಭಿನ್ನವಾಗಿ ಹೋದರೆಂಬುದೀಗ ಜಾರಿ ಬಿದ್ದವರಾರೋ ಎಂಬ ಶಬ್ದಕ್ಕರ್ಥ. ಆ ಚಿದ್ರೂಪದಲ್ಲಿದ್ದ ಪರಮಾನಂದ ಜಲವು ಅಭಿನ್ನ ಜ್ಞಾನಿಗಳಿಗೆ ಕಾಣಬಾರದೆ ಹೋಯಿತ್ತೆಂಬುದೀಗ ಮೀರಿತ್ತು ಬಾವಿಯ ನೀರು ತೋರಲಿಲ್ಲದಂತೆ ಎಂಬ ಶಬ್ದಕ್ಕರ್ಥ ಆ ಪರಮಾನಂದ ಜಲ ಭಿನ್ನವಾಗಲು ತನು ತ್ರಯಂಗಳಲ್ಲಿ ಸಿಲ್ಕಿ ಸಂಸಾರ ವಿಷಯ ಜಲಪ್ರವಾಹದಲ್ಲಿ ಮುಳುಗಿ ಹೋಗುತ್ತಿರಲು ಅಲ್ಲಿ ಶಿವಸಂಸ್ಕಾರ ಒದಗಿ ಸುಜ್ಞಾನೋದಯವಾಗಲು ಪರಶಿವ ತತ್ವದಲ್ಲಿ ಕೂಡ ಬೇಕೆಂಬ ಕ್ರಿಯಾ ಜ್ಞಾನ ಭಾವ ಮುಂದುಗೊಂಡಿಪ್ಪ ಪರಮ ಶಾಂತಿಸ್ವರೂಪನಾದ ಶರಣನ ಗುರುಮುಖದಿಂದ ಮಹಾಘನಲಿಂಗವು ಪ್ರತ್ಯಕ್ಷವಾಗಿ ಇಷ್ಟಲಿಂಗ ಸ್ವರೂಪವಾಗಿ ಬಂದು ಸರ್ವಾಂಗವನವಗ್ರಹಿಸಿತ್ತೆಂಬುದೀಗ ಮುಸುಕಿ ಮುಳುಗಿ ಹೋಹಾಗ ಮೂರಡಿ ಕಪ್ಪೆಯನ್ನು ಮರಿಬಂದು ತೋರಲಿಲ್ಲದಂತೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ಸರ್ವಾಂಗಲಿಂಗ ಸಂಬಂಧಿಯಾದಲ್ಲಿ ಭಿನ್ನ ಕ್ರಿಯಾಚಾರವ ನೇತಿಮಾಡಿ ಅಭಿನ್ನಕ್ರಿಯಾಚಾರದಲ್ಲಿ ಸ್ವಸ್ಥಿರಭಾವಿಯಾಗಿ ನಿಂದು ಮಹಾ ಘನ ಲಿಂಗದಲ್ಲಿ ಸಮರಸೈಕ್ಯನಾದ ಶರಣನ ಚಾರಿತ್ರವನ್ನು ಉಪಮೆಗೆ ತರಲಿಲ್ಲವೆಂಬುದೀಗ ಬಾವಿಯ ಒರೆಯುಜಾರಿ ಬಿದ್ದಾತನ ಇನ್ನಾರಿಗೆ ಉಸುರುವೆ ಮೀರಿದ ಘನವ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೮

ಬೀಜ ಹುಟ್ಟಿದಲ್ಲಿ ಒಂದೇ ಗುಣ ನಿಂದಲ್ಲಿ ನಾನಾಪ್ರಕಾರಂಗಳಿಂದ ಭೂಮಿಯಲ್ಲಿ ಪ್ರವೇಶಿಸಿಕೊಂಡಿಪ್ಪ ತೆರನಂತೆ ಆ ಮೂಲ ಮೇಲಂಕುರಿಸಿದ ಮತ್ತೆ ಐದು ಗುಣದಲ್ಲ ಶಾಖೆ ಒಡೆಯಿತ್ತು, ಮೂರುಗುಣದಲ್ಲಿ ಎಲೆಯುಂಕುರಿಸಿತ್ತು, ಎಂಟು ಗುಣದಲ್ಲಿ ಕುಸುಮ ಬಲಿಯಿತ್ತು, ಅಮೃತ ಉದುರಿ ಹರಳು ನಿಂದಿತ್ತು, ನವಗುಣದಲ್ಲಿ ಆ ರಸ ಬಲಿಯಿತ್ತು, ಷೋಡಶದಲ್ಲಿ ತೊಟ್ಟು ಬಿಟ್ಟಿತ್ತು. ಪಂಚ ವಿಂಶತಿಯಲ್ಲಿ ಸವಿದ ರುಚಿ ನಿಂದಿತ್ತು, ಶತಕದಲ್ಲಿ ಮರನಾಯಿತ್ತು, ವೃಕ್ಷದ ಬೇರು ಕಡಿಯಿತ್ತು, ಮರ ಬಿದ್ದಿತ್ತು, ಕೊಂಬು ಹಂಗ ಬಿಟ್ಟಿತ್ತು, ಕೊಂಬಿನೊಳಗಣ ಕೋಡಗ ಬಂಧುಗಳನೊಡಗೂಡಿ ಸಂದೇಹವಿಲ್ಲವಾಗಿ ಶೃತದೃಷ್ಟ

ಅನುಮಾನದಲ್ಲಿ ತಿಳಿಯಿರಣ್ಣಾ! ಬ್ರಹ್ಮನ ಉತ್ಪತ್ತಿ, ವಿಷ್ಣುವಿನ ಸ್ಥಿತಿ, ರುದ್ರನ ಲಯ ಇಂತೀ ಮೂವರ ಹಂಗಿನಿಂದ ಬಂದ ದೇಹಕ್ಕೆ ತಟ್ಟುವ ಇಷ್ಟದ ದೃಷ್ಟವ ನೋಡಾ! ಒಮ್ಮೆಗೆ ಕಾರುಕನಲ್ಲಿ, ಇಮ್ಮೆಗೆ ಹರದಿಗನಲ್ಲಿ, ತ್ರಿವಿಧಕ್ಕೆ ಮುಮ್ಮೊರಿನಲ್ಲಿ ಆದಿಯ ಹೆಣ್ಣಿನ ತೆರನಂತೆ ಅವರ ಕಂಡು ಆಹಾ ಅದಲ್ಲವೆಂದೆ! ನಿಃಕಳಂಕ ಮಲ್ಲಿಕಾರ್ಜುನಾ. ॥ ೧೩೮ ॥

೭೯೯

ಟೀಕೆ:— ಮಾಪಿನ ಬೀಜವ ಬಿತ್ತಿದಲ್ಲಿ ಭೂಮಿಯಲ್ಲಿ ನಿಂದು ಮೊಳೆದೋರಿ ಆ ಮೊಳೆಯಿಂದ ಅಂಕುರ, ಅಂಕುರದಿಂದ ಶಾಖೆ, ಶಾಖೆಯಿಂದ ಪರ್ಣ, ಪರ್ಣದಿಂದ ಕುಸುಮ, ಕುಸುಮದಿಂದ ಕಾಯಿ, ಕಾಯಿಂದ ಹಣ್ಣು ಇಂತಿವೆಲ್ಲಕ್ಕೂ ಮೂಲ ಬುಡ ಒಂದೇ ಭೂಮಿ ಅಲ್ಲಿಗಿಡ ನಿಂದು ಪ್ರವೇಶ್ಚಿಸಿಕೊಂಡಿರ್ಪಂತೆ ಅನೇಕ ಕೋಟಿ ಬ್ರಹ್ಮಾಂಡಗಳಿಗೆ ಕಾರಣವಾದ ಮಹಾಘನಲಿಂಗವು ತಾನೊಂದಾಗಿದ್ದು ತನ್ನ ಸ್ವಲೀಲೆಯಿಂದ ತಾನೇ ಅಖಂಡ ಚಿತ್ತಿನ ಮಧ್ಯದಲ್ಲಿ ಸ್ವಸ್ಥಿರವಾಗಿ ನಿಂದು ಸರ್ವಾಚಾರ ಸಂಪತ್ತು ಮೊದಲಾದ ಅನೇಕಸ್ಥಲ ಕುಲಂಗಳನ್ನೊಳಕೊಂಡು ತೋರುತ್ತಿಹುದೆಂಬುದೀಗ ಬೀಜ ಹುಟ್ಟಿದಲ್ಲಿ ಒಂದೇ ಗುಣ, ನಿಂದಲ್ಲಿ ನಾನಾಪ್ರಕಾರಂಗಳಿಂದ ಭೂಮಿಯಲ್ಲಿ ಪ್ರವೇಶಿಸಿಕೊಂಡಿಪ್ಪ ತೆರದಂತೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ತತ್ವಂಗಳಿಗೆ ಕಾರಣವಾದ ನಾದಬ್ರಹ್ಮಸ್ವರೂಪವಾದ ಮಹಾಘನಲಿಂಗವು ಚಿತ್‌ಸ್ವರೂಪನಾದ ಶರಣನ ಶಿವಜ್ಞಾನದಲ್ಲಿ ಪ್ರಭಾವಿಸಿತ್ತೆಂಬುದೀಗ ಆ ಮೂಲ ಮೋಲಂಕುರಿಸಿದ ಮತ್ತೆ ಎಂಬ ಶಬ್ದಕ್ಕರ್ಥ. ಪಂಚೇಂದ್ರಿಯಂಗಳ ವರ್ತನೆಯಳಿದು ಚಿದ್ರೂಪನಾದ ಶರಣನ ಪಂಚಾಚಾರವನೊಳಕೊಂಡು ತೋರುತ್ತಿಹುದು ಪರಬ್ರಹ್ಮವೆಂಬುದೀಗ ಐದು ಗುಣದಲ್ಲಿ ಶಾಖೆ ಒಡೆಯಿತ್ತೆಂಬ ಶಬ್ದಕ್ಕರ್ಥ ಅಂತಪ್ಪ ಪಂಚಾಚಾರ ಸಂಬಂಧವಾದ ಚಿತ್ ಸ್ವರೂಪವಾದ ಶರಣನ ತನುತ್ರಯಂಗಳಳಿದು ಇಷ್ಟ ಪ್ರಾಣ ಭಾವಲಿಂಗ ಸಂಬಂಧವಾಗಿ ತ್ರಿವಿಧಭಕ್ತಿ ವಿಡಿದಾಚರಿಸುತ್ತಿಹವೆಂಬುದೀಗ ಮೂರು ಗುಣದಲ್ಲಿ ಎಲೆಯಂಕುರಿಸಿತ್ತೆಂಬ ಶಬ್ದಕ್ಕರ್ಥ. ಅಂತು ತ್ರಿವಿಧಲಿಂಗದಲ್ಲಿ ತ್ರಿವಿಧಭಕ್ತಿ ವಿಡಿದಾಚರಿಸುತ್ತಿದ್ದ ಶರಣನ ಅಷ್ಟತನುವಳಿದು ಅಷ್ಟವಿಧ ಭಕ್ತಿಸ್ವರೂಪವಾದಲ್ಲಿ ಸ್ವಾನುಭಾವ ಸದ್ವಾಸನೆಯೋ ತುಂಬಿತ್ತೆಂಬುದೀಗ ಎಂಟು ಗುಣದಲ್ಲಿ ಕುಸುಮ ಬಲಿಯಿತ್ತೆಂಬ ಶಬ್ದಕ್ಕರ್ಥ. ಅಂತು ಅಷ್ಟವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಫಲಪದಂಗಳ ನಾಸ್ತಿಯಾಗಿ ಮುಕ್ತಿಫಲ ಗಟ್ಟಿಗೊಂಡಿತ್ತೆಂಬುದೀಗ ಆದು ಉದುರಿ ಹರಳು ನಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಮುಕ್ತಿಫಲ ಸ್ವರೂಪವನೈದಿದ ಶರಣನ ನವದ್ವಾರಂಗಳಳಿದು ನವವಿಧ ಭಕ್ತಿಯಲ್ಲಿ ಆ ಚಿದಾಮೃತರಸವೇ ಗಟ್ಟಿಗೊಂಡಿತ್ತೆಂಬುದೀಗ ನವಗುಣದಲ್ಲಿ ಆ ರಸ ಬಲಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ನವವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಅಂತರಂಗದ ಅಷ್ಟಮದಂಗಳು, ಬಹಿರಂಗದ ಅಷ್ಟಮದಂಗ

ಅಳಿದು ಶರಣ ಷೋಡಶಭಕ್ತಿಯಲ್ಲಿ ತಾನೆಂಬ ಚಿದಹಂಕಾರವಡಗಿತ್ತೆಂಬುದೀಗ ಷೋಡಶದಲ್ಲಿ ತೊಟ್ಟು ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ಷೋಡಶಭಕ್ತಿಯಲ್ಲಿ ನಿರ್ಧಾರವಾಗಿ ನಿಂದು ತಾನೆಂಬ ಚಿದಹಂಕಾರವಡಗಿದ ಶರಣನ ಅಂಗ ತತ್ವವು ಇಪ್ಪತ್ತೈದಳಿದು ಲಿಂಗತತ್ವ ಸ್ವರೂಪವಾದ ಶರಣನ ಇಪ್ಪತ್ತೈದು ಭಕ್ತಿಗಳಲ್ಲಿ ಇಪ್ಪತ್ತೈದು ಲಿಂಗಸ್ವರೂಪವಾಗಿ ನಿಂದು ಸಕಲ ಪದಾರ್ಥವಂ ಶರಣ ಮುಖಲಿಂಗ ವಾಗಿ ಕೈಕೊಂಡು ಪರಮಪ್ರಸಾದವ ಕರುಣಿಸಲು ಆ ಪ್ರಸಾದ ಸೇವನೆಯಿಂದ ತೃಪ್ತಿಯನೈದಿಹ ಶರಣನೆಂಬುದೀಗ ಪಂಚವಿಂಶತಿಯಲ್ಲಿ ಸವಿದ ರುಚಿ ನಿಂದಿತ್ತೆಂಬ ಶಬ್ದಕ್ಕರ್ಥ. ಆ ಲಿಂಗಭೋಗೋಪಭೋಗದಿಂದ ತೃಪ್ತಿಯನೈದಿದ ಶರಣನು ಅಂಗಸ್ಥಲ ೪೪, ಲಿಂಗಸ್ಥಲ ೫೭, ಉಭಯಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದುಸ್ಥಲ ಕುಲಗಳಲ್ಲಿ ಜ್ಞಾನ ಕ್ರಿಯಿಡಿದಾಚರಿಸಿ ಪರಬ್ರಹ್ಮದಲ್ಲಿ ಏಕಾರ್ಥ ವಾಗಿಹನೆಂಬುದೀಗ ಶತ ಏಕದಲ್ಲಿ ಮರನಾಯಿತ್ತೆಂಬ ಶಬ್ದಕ್ಕರ್ಥ. ಅಂತು ನೂರೊಂದುಸ್ಥಲವಿಡಿದು ಆಚರಿಸಿ ಮಹಾಘನ ಲಿಂಗದಲ್ಲಿ ಏಕಾರ್ಥವಾದ ಶರಣಂಗೆ ಮೂಲಹಂಕಾರವಿಲ್ಲದೆ ಹೋಯಿತ್ತೆಂಬುದೀಗ ವೃಕ್ಷದ ಬೇರು ಕಡಿಯಿತ್ತೆಂಬ ಶಬ್ದ ಕ್ಕರ್ಥ. ಅಂತು ಮೂಲಾಹಂಕಾರ ನಷ್ಟವಾದ ಶರಣನ ಆಚಾರಾಂಗವು ಚಿದ್ಘನ ಲಿಂಗದಲ್ಲಿ ಲೀಯವಾಯಿತ್ತೇಬುದೀಗ ಮರಬಿದ್ದಿತ್ತೆಂಬ ಶಬ್ದಕ್ಕರ್ಥ. ದೇಹಭಾವ ನಷ್ಟವಾಗಿ ಶಿವಭಾವ ಸನ್ನಿಹಿತವಾದ ಸದ್ಭಕ್ತಿಗೆ ಭಿನ್ನಫಲ ಪದಂಗಳ ಬಯಕೆ ಇಲ್ಲದೆ ಹೋಯಿತ್ತೆಂಬುದೀಗ ಕೊಂಬು ಹಂಗ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಆ ಶಿವಾದ್ವೈತ ಭಕ್ತಿಯಲ್ಲಿ ಸನ್ನಿಹಿತನಾದ ಶರಣನ ಮನಸ್ಸು ಅಮರಗಣತ್ವವನೈದಿರ್ಪ ಸಕಲ ಕರಣಂ ಗಳನು ಸುಜ್ಞಾನ ಮುಖದಿಂದ ಪರಬ್ರಹ್ಮದಲ್ಲಿ ಏಕಾರ್ಥವ ಮಾಡಿ ತಾನೆಂಬ ಸಂಕ ಲ್ಪವಳಿಯಿತ್ತೆಂಬುದೀಗ ಕೊಂಬಿನೊಳಗಣ ಕೋಡಗ ಬಂಧುಗಳನ್ನೊಡಗೂಡಿ ಸಂದೇಹವಿಲ್ಲವಾಗಿ ಎಂಬ ಶಬ್ದಕ್ಕರ್ಥ. ಅಂತು ಸಂಕಲ್ಪವಳಿಯಿತ್ತಾಗಿ ಆದ್ಯರ ವಚನ ಪ್ರಮಾಣದಿಂದಲರಿದು ಗುರುಕರುಣದಿಂ ತಿಳಿದು, ಲಿಂಗಾಂಗ ಸಂಬಂಧದಿಂ ವಿವೇಚಿಸಿ ಆಚರಿಸಬೇಕು ವೀರಶೈವ ಷಟ್ಸ್ಥಲ ಜ್ಞಾನಿಗಳಾದ ಶರಣರೆಂಬುದೀಗ ಶೃತ ದೃಷ್ಟಾನುಮಾನದಲ್ಲಿ ತಿಳಿಯಿರಣ್ಣಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಭಕ್ತಿಯೋಗವನರಿಯದ ಭಿನ್ನಜ್ಞಾನಿಗಳು, ಉತ್ಪತ್ತಿ ಸ್ಥಿತಿ ಲಯಂಗ ಳಲ್ಲಿ ಸಿಲುಕಿ ದೇಹಿಗಳಾಗಿರ್ಪ ಜೀವರು ಅಂಗಕ್ಕೆ ಲಿಂಗಸಂಬಂಧವ ಮಾಡಿಕೊಳ್ಳಬೇ ಕೆಂದು ಗುರುಕರುಣದಿಂದುಪದೇಶವ ಪಡೆದರೆಂಬುದೀಗ ಬ್ರಹ್ಮನ ಉತ್ಪತ್ತಿ, ವಿಷ್ಣು ವಿನ ಸ್ಥಿತಿ, ರುದ್ರನ ಲಯ ಇಂತೀ ಮೂವರ ಹಂಗಿನಿಂದ ಬಂದ ದೇಹಕ್ಕೆ ಕಟ್ಟುವ ದೃಷ್ಟವ ನೋಡಾ ಒಮ್ಮೆಗೆ ಕಾರುಕನಲ್ಲಿ ಎಂಬ ಶಬ್ದಕ್ಕರ್ಥ. ಆ ಗುರುಕರುಣದಿಂ ಸಂಬಂಧವಾದ ಇಷ್ಟಲಿಂಗವೇ ಭಿನ್ನವಿಟ್ಟು ಅಷ್ಟವಿಧಾರ್ಚನೆ ಷೋಡಶೋಪಚಾರಂ ಗಳ ಮಾಡಿ ಫಲಪದಂಗಳ ಪಡೆಯುತ್ತಿಹರೆಂಬುದೀಗ ಇಮ್ಮೆಗೆ ಹರದಿಗನಲ್ಲಿ ಎಂಬ ಶಬ್ದಕ್ಕರ್ಥ. ಜಂಗಮಕ್ಕೆ ಭಿನ್ನಭಕ್ತಿಯ ಮಾಡಿ ತಾವು ಭಿನ್ನವಾಗಿ ಹೋದರೆಂಬು

ದೀಗ ತ್ರಿವಿಧಕ್ಕೆ ಮುಮ್ಮೂರಿನಲ್ಲಿ ಎಂಬ ಶಬ್ದಕ್ಕರ್ಥ ಬತ್ತೆಯು ಹೆಣ್ಣಿನ ದೃಷ್ಟಾಂತದಂತೆ ಗುರು ಲಿಂಗ ಜಂಗಮವ ಭಿನ್ನವಿಟ್ಟು ಭಕ್ತಿಯ ಮಾಡಿ ಫಲಪದಂಗಳ ಪಡೆಯುತ್ತಿಹ ಅದ್ವೈತಿಗಳು ಅದು ಷಟ್ಸ್ಥಲ ಮಾರ್ಗವಲ್ಲವೆಂದು ಶರಣನು ನಿವೃತ್ತಿ ಮಾಡಿದನೆಂಬುದೀಗ ಅಧಿಯು ಹೆಣ್ಣಿನ ತೆರದಂತೆ ಅವರ ಕಂಡು ಆಹಾ ಅಲ್ಲವೆಂದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭೯೯

ಭೂಮಿಯ ಹಿಡಿದು ಉಳುತ್ತಿದ್ದೆನಯ್ಯಾ ಕಡೆ ನಡು ಮೊದಲಿಲ್ಲದೆ. ಎನ್ನ ಸ್ವಾಮಿಯ ಬರವಿಂಗೆ ಇದಿರಾದವು ಮೂರೆತ್ತು. ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುರಿಯಿತ್ತು, ನೊಗ ಸೀಳಿತ್ತು, ಎತ್ತು ಸತ್ತವು. ಎನಗಿನ್ನಾವುದು ದಿಕ್ಕು ನಿಃಕಳಂಕ ಮಲ್ಲಿಕಾರ್ಜುನಾ ‖ ೧೩೯ ‖

**ಟೀಕೆ:—** ಮೂಲ ಜ್ಞಾನೋದಯುವಾದ ಶರಣನು ಸಕಲಪ್ರಪಂಚ ನಿವೃತ್ತಿ ಮಾಡಿ ಶ್ರೀಗುರುಕಾರುಣ್ಯದಿಂದಂಗದ ಮೇಲೆ ಲಿಂಗ ಸಂಬಂಧವಾಗಿ ಆ ಚಿದ್ಘನ ಲಿಂಗದಲ್ಲಿ ಸತ್ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದನೆಂಬುದೀಗ ಭೂಮಿಯ ಹಿಡಿದು ಉಳುತ್ತಿದ್ದೆನಯ್ಯಾ ಎಂಬ ಶಬ್ದಕ್ಕರ್ಥ ಅಂತು ಆಚರಿಸುತ್ತಿರ್ದ ಶರಣನ ತನುತ್ರಯಂಗಳು ಲಿಂಗತ್ರಯದಲ್ಲಿ ಸಮರಸವಾಗಲು ಉತ್ಪತ್ತಿ ಸ್ಥಿತಿ ಲಯವೆಂಬ ತ್ರಿವಿಧ ಬಟ್ಟೆ ನಷ್ಟವಾಯಿತ್ತೆಂಬುದೀಗ ಕಡೆ ನಡು ಮೊದಲಿಲ್ಲದೆ ಎಂಬ ಶಬ್ದಕ್ಕರ್ಥ. ಅಂತು ಉತ್ಪತ್ತಿ ಸ್ಥಿತಿ ಲಯ ನಷ್ಟವಾದ ಶರಣನು ಅಖಂಡ ಪರಿಪೂರ್ಣವಾದ ಪರಬ್ರಹ್ಮದಲ್ಲಿ ಸಮರಸೈಕ್ಯವನೆಯ್ದಬೇಕೆಂಬ ತೂರ್ಯಾವಸ್ಥೆಯ ತನಕದಲ್ಲಿರ್ದನೆಂಬುದೀಗ ಎನ್ನ ಸ್ವಾಮಿಯ ಬರವಿಂಗೆ ಎಂಬ ಶಬ್ದಕ್ಕರ್ಥ. ಅಂತು ತೂರ್ಯಾವಸ್ಥೆಯ ಮುಂದುಗೊಂಡು ಭಕ್ತಿಯಿಂದಾಚರಿಸುತ್ತಿರ್ದ ಶರಣನ ವಿಶ್ವತೈಜಸ ಪ್ರಾಜ್ಞರೆಂಬ ಜೀವತ್ರಯಂಗಳು ಲಿಂಗತ್ರಯದಲ್ಲಿ ಸಮರಸವನೈದಿದವೆಂಬುದೀಗ ಇದಿರಾದವು ಮೂರೆತ್ತು ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯದಲ್ಲಿ ಜೀವತ್ರಯಂಗಳು ಸಮರಸವನೈದಲು ಕಡೆಯ ಹೊಲನೆಂದೊಡೆ ಕಾರಣದೇಹ, ಅಂತಪ್ಪ ಕಾರಣದೇಹದಲ್ಲಿ ತೆವರೆಂದೊಡೆ ಶಿವಭಾವಾವಸ್ಥೆ, ಆ ಶಿವಭಾವವು ಸದ್ವಿವೇಕವೃಕ್ಷವನವಗ್ರಹಿಸಿದಲ್ಲಿ ಬಹಿರಂಗದ ಸತ್ಕ್ರಿಯಾಚಾರ ನಿಷ್ಪತ್ತಿಯಾಯಿತ್ತೆಂಬುದೀಗ ಕಡೆಯ ಹೊಲದ ತೆವರಿನಲ್ಲಿ ಮರತಾಗಿ ನೇಗಿಲು ಮುರಿಯಿತ್ತು ಎಂಬ ಶಬ್ದಕ್ಕರ್ಥ. ಅಂತು ಸತ್ಕ್ರಿಯಾಚಾರ ನಿಷ್ಪತ್ತಿಯಾದಲ್ಲಿ ಶರಣನ ಶಿವಜ್ಞಾನ ಪ್ರಕಾಶವು ಚಿದ್ಘನಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ ನೊಗ ಸೀಳಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನಿಷ್ಪತ್ತಿಯಾದಲ್ಲಿ ಸಚ್ಚಿದಾನಂದ ಸ್ವರೂಪವಾದ ಪರಶಿವತತ್ವದಲ್ಲಿ ಜೀವತ್ರಯಂಗಳು ಸಮರಸವಾದವೆಂಬುದೀಗ ಎತ್ತು ಸತ್ತವು ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳು

ಸದ್ರೂಪವಾದಲ್ಲಿ ಆ ಶರಣನು ಮಹಾಘನಲಿಂಗನಲ್ಲಿ ಅವಿರಳ ಸಂಬಂಧಿಯಾಗಿರ್ದ ನೆಂಬುದೀಗ ಎನಗಿನ್ನಾವುದು ದಿಕ್ಕು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ

೮೮೦

ಮಗುವು ಸತ್ತು ಕೊರಳು ಕುಗ್ಗದು, ಅಂಗುಳಾರದು, ಬಾಯ ಬರೆ ಹಿಂಗದು. ಇನ್ನಾವ ನೇಣ ಹಾಕುವೆ ಕೊರಳಿಗೆ? ಒಂದು ನೇಣಿನಲ್ಲಿ ಸಂದೇಹ ಬಿಡದು. ಎರಡು ನೇಣಿನಲ್ಲಿ ಹಿಂಗಿ ಹೋಗದು. ಮೂರು ನೇಣಿನಲ್ಲಿ ಮುಕ್ತಾಯವಾಗದು. ಹಲವು ನೇಣಿನಲ್ಲಿ ಕಟ್ಟುವಡೆಯದು ಕೂಸು. ಅದಕ್ಕೆ ಒಲವರವೇಕೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೦ ॥

ಟೀಕೆ:— ಸುಜ್ಞಾನೋದಯವಾಗಿ ಶ್ರೀಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾದ ಶರಣನ ಮನವಳಿದು ಉನ್ಮನೀತತ್ವಸ್ವರೂಪವನ್ನೈದಲು ಅಂತಪ್ಪ ಉನ್ಮನೀತತ್ವಸ್ವರೂಪವಾದ ಮನಸ್ಸು ನಿಜದಲ್ಲಿ ನಿಂದಿತ್ತೆಂಬುದೀಗ ಮಗು ಸತ್ತು ಎಂಬ ಶಬ್ದಕ್ಕರ್ಥ. ಅಂತು ನಿಜದಲ್ಲಿ ನಿಂದ ಮನಸ್ಸಿನ ಶಿವೋಹಂ ಎಂಬ ದೃಢಕಂಠ ನಿರ್ಧಾರವಾಯಿತ್ತೆಂಬುದೀಗ ಕೊರಳು ಕುಗ್ಗದು ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪನಾದ ಶರಣನ ಪರಶಿವತತ್ವದಲ್ಲಿ ಸಮರಸೈಕ್ಯವನೈದಬೇಕೆಂಬ ಶಿವಾಪೇಕ್ಷೆಯು ಮುಂದುಗೊಂಡಿಹುದೆಂಬುದೀಗ ಅಂಗುಳಾರದು ಎಂಬ ಶಬ್ದಕ್ಕರ್ಥ. ಇಂತು ಶಿವಾಪೇಕ್ಷೆಯು ಮುಂದುಗೊಂಡಿರ್ದ ಶರಣನ ಜಿಹ್ವಾಗ್ರದಲ್ಲಿ ಉಚ್ಚರಿಸುತ್ತಿಹ ಶಿವ ಮಂತ್ರಸ್ಮರಣೆಯು ಉನ್ಮನೀ ನೆನಹು ಹರುಷಾನಂದದಲ್ಲಿ ಇದ್ದಿತ್ತೆಂಬುದೀಗ ಬಾಯ ಬರೆ ಹಿಂಗದು ಎಂಬ ಶಬ್ದಕ್ಕರ್ಥ. ಆ ಹರುಷಾನಂದದಲ್ಲಿದ್ದ ಸದ್ವಿವೇಕಸ್ವರೂಪವಾದ ಮನಸ್ಸಿನ ದೃಢಕಂಠದಲ್ಲಿ ಶಿವಾದ್ವೈತಭಕ್ತಿಯು ಸಂಬಂಧವ ಮಾಡಿದ ಶರಣನೆಂಬುದೀಗ ಇನ್ನಾವ ನೇಣ ಹಾಕುವೆ ಕೊರಳಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾದ್ವೈತ ಭಕ್ತಿಯಲ್ಲಿ ಸಂಬಂಧವಾದ ಮನಸ್ಸಿನಲ್ಲಿ ತಾನೇ ಶಿವನೆಂಬ ಸಂಕಲ್ಪ ತೋರುತ್ತಿಹುದೆಂಬುದೀಗ ಒಂದು ನೇಣಿನಲ್ಲಿ ಸಂದೇಹ ಬಿಡದು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಇಷ್ಟಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನ ವಿಡಿದಾಚರಿಸುತ್ತಿಹುದಲ್ಲದೆ ನಿಷ್ಪತ್ತಿಯಾಗಬಹುದೆಂಬುದೀಗ ಎರಡು ನೇಣಿನಲ್ಲಿ ಹಿಂಗಿ ಹೋಗದು ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಸ್ವರೂಪವಾದ ಮನಸ್ಸು ತ್ರಿವಿಧಲಿಂಗದಲ್ಲಿ ಕ್ರಿಯಾಜ್ಞಾನವಿಡಿದಾಚರಿಸುತ್ತಿಹುದಲ್ಲದೆ ಅವು ನಿಷ್ಪತ್ತಿಯಾಗಲಿಲ್ಲವೆಂಬುದೀಗ ಮೂರು ನೇಣಿನಲ್ಲಿ ಮುಕ್ತಾಯವಾಗದು ಎಂಬ ಶಬ್ದಕ್ಕರ್ಥ. ಅಂತಪ್ಪ ಉನ್ಮನೀತತ್ವಸ್ವರೂಪವಾದ ಮನಸ್ಸು ಅಂಗಸ್ಥಲ ೪೪ ಲಿಂಗಸ್ಥಲ ೫೭ ಅಂತು ಪಿಂಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲ ಕುಲಂಗಳಲ್ಲಿ ಆಚರಿಸುತ್ತಿಹುದು, ಅದಕ್ಕೆ ಫಲಪದಂಗಳು ನಾಸ್ತಿಯಾಗಿ ಮಹಾಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ ಹಲವು ನೇಣಿನಲ್ಲಿ ಕಟ್ಟು

ಪಡೆದ ಕೂಸು, ಅದಕ್ಕೆ ಒಲವರವೇಕೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ

೮೦೧

ಮಡಕೆ ಕಾವುದಕ್ಕೆ ಮುನ್ನವೆ ಜಲಕಾದುಕ್ಕಿತ್ತು. ಜಲ ಉಕ್ಕುವದಕ್ಕೆ ಮುನ್ನವೆ ಅಕ್ಕಿ ಬೆಂದಿತ್ತು. ಉಂಬುದಕ್ಕೆ ಮುನ್ನವೆ ಓಗರ ಮಿಕ್ಕಿತ್ತು. ಮಿಕ್ಕೋಗರವನಾರೋಗಿಸಿದವರು ಹೊಲಬುಗೆಟ್ಟರು. ಎನಗಿನ್ನು ಹೊಲಬಾವುದೋ ಎನಗಾರಕರಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೧ ॥

ಟೀಕೆ:— ಪರಿಪೂರ್ಣಜ್ಞಾನಾಗ್ನಿಯಿಂದ ಚಿದ್ರೂಪನಾದ ಶರಣನ ಸರ್ವಾಂಗವು ದಗ್ಧವಾದಾಕ್ಷಣವೆಂಬುದೀಗ ಮಡಕೆ ಕಾವುದಕ್ಕೆ ಮುನ್ನವೇ ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವು ಜ್ಞಾನಾಗ್ನಿಯಲ್ಲಿ ದಗ್ಧವಾದ ಶರಣನ ಮನಸ್ಸು ಸುಜ್ಞಾನಪ್ರಕಾಶದಲ್ಲಿ ಸಮರಸವಾಗಲೊಡನೆ ಆ ಸತ್ತೆಂಬ ತಂಡಿಲು ಸುಜ್ಞಾನಾಗ್ನಿಯಲ್ಲಿ ಸಮರಸವಾಯಿತ್ತೆಂಬುದೀಗ ಜಲಕಾದುಕ್ಕಿತ್ತು, ಜಲ ಉಕ್ಕುವದಕ್ಕೆ ಮುನ್ನವೆ ಅಕ್ಕಿಬೆಂದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ರೂಪವಾದ ಪರಬ್ರಹ್ಮದಿಂದುದಯವಾದ ಪರಮಾಮೃತಸ್ವರೂಪವಾದ ಪರತತ್ವಪ್ರಸಾದವನ್ನು ಶರಣನು ಸ್ವೀಕರಿಸಿದಾಕ್ಷಣವೇ ಶರಣಸತಿ ಲಿಂಗ ಪತಿ ಎಂಬುಭಯವಳಿದು ಒಂದೇ ಪರಬ್ರಹ್ಮವಾಗಿ ತೋರುತ್ತಿಹುದೆಂಬುದೀಗ ಉಂಬುವದಕ್ಕೆ ಮುನ್ನವೆ ಓಗರ ಮಿಕ್ಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಉಳುಮೆಯ ಸ್ವರೂಪವಾದ ಪರತತ್ವಪ್ರಸಾದವನ್ನು ಶಿವಭಾವ ಘಟಿಸಿದ ಸಕಲ ಕರಣಂಗಳು ಸದ್ವಿವೇಕದಿಂದ ಸ್ವೀಕರಿಸಲು ಅಲ್ಲಿ ಖಂಡಿತ ಹೊಲಬು ನಾಸ್ತಿಯಾಗಿ ಮೋಕ್ಷಾಪೇಕ್ಷನಾಗಿರ್ದನೆಂಬುದೀಗ ಮಿಕ್ಕೋಗರವನಾರೋಗಿಸಿದವರು ಹೊಲಬುಗೆಟ್ಟರು, ಎನಗಿನ್ನು ಹೊಲಬಾವುದೋ ಎನಗಾರಕರಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೨

ಮಹಾಜಗವು ಪ್ರಳಯವಹಲ್ಲಿ ಮಣ್ಣಾವೊರಡಿ ಕದಡಿದುದಿಲ್ಲ. ಮಹಾಹೇತು ದಹನವಹಲ್ಲಿ ಹುಲ್ಲಮೆದೆ ಬೆಂದುದಿಲ್ಲ. ಬಲ್ಲಿದರೆಲ್ಲರು ಕಾದಿ ಮಡಿದಲ್ಲಿ ಹಂದೆ ಹುಯ್ಯಲಲ್ಲಿದ್ದು ಅಂಜಿದುದಿಲ್ಲ. ಲಿಂಗವ ಹಿಡಿದವರೆಲ್ಲರು ಒಂದ ಮೆಟ್ಟಿ ಒಂದನರಿದು ಸಂಗವ ಮಾಡುವಾಗ ಇದರಂದವನೇನೆಂದರಿಯೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೨ ॥

ಟೀಕೆ:— ಶಿವಜ್ಞಾನೋದಯವಾದ ಶರಣನು ಸಕಲ ಕರಣಂಗಳ ಸುಜ್ಞಾನಪ್ರಕಾಶದಿಂದ ಸಂಹರಿಸಿ ಶ್ರೀಗುರುಕಾರುಣ್ಯದಿಂದ ಸರ್ವಾಂಗಲಿಂಗಸಂಬಂಧವಾಗಿ ಸಕಲ ತತ್ವಂಗಳ ಚಿದ್ಘನಲಿಂಗದಲ್ಲಿ ಸಮರಸೈಕ್ಯವ ಮಾಡಿದನೆಂಬುದೀಗ, ಮಹಾಜಗವು ಪ್ರಳಯವಹಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಚಿತ್ಪ್ರಕಾಶವಾದ

ಚಿದಂಗದಲ್ಲಿ ತೋರುವ ಚಿದಹಂಕಾರವೆಂಬ ನೊರಡಿ ಭಿನ್ನವಾದುದಿಲ್ಲವೆಂಬುದೀಗ ವಣ್ಣವೊರಡಿ ಕದಡಿದುದಿಲ್ಲವೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಶರಣನ ಮಹಾಜ್ಞಾನಾಗ್ನಿಪ್ರಕಾಶದಿಂದ ಭವಾರಣ್ಯವು ದಗ್ಧವಾಹಲ್ಲಿ ಪಂಚವಿಷಯ ಸಂಬಂಧವಾದ ದೇಹವು ಭಕ್ತಿಯಿಂದ ದಗ್ಧವಾಗದೆಂಬುದೀಗ ಮಹಾಹೇತುದಹನವ ವಲ್ಲಿ ಹುಲ್ಲುವೆಂದೆ ಬೆಂದುದಿಲ್ಲವೆಂಬ ಶಬ್ದಕ್ಕರ್ಥ. ಅಂತು ನಾವು ಬಲ್ಲೆವು ಬಲ್ಲಿದರೆಂಬ ವಾಗದ್ವೈತಿಗಳೆಲ್ಲಾ ಅಹಂಬ್ರಹ್ಮವೆಂಬ ದ್ವೈತಜ್ಞಾನದಿಂದುಳಿದು ದೇಹಾದಿಪ್ರಪಂಚಿನಲ್ಲಿ ಲಯವನೈದುವಲ್ಲಿ ಸರ್ವಭಯ ಭೀತಿ ಭೃತ್ಯಾಚಾರದಿಂದೊಪ್ಪುತ್ತಿಪ್ಪ ಶರಣನು ಕಾಲಕಾಮಾದಿಗಳ ಜಯಿಸಿ ನಿತ್ಯಸ್ವರೂಪನಾಗಿದ್ದನೆಂಬುದೀಗ ಬಲ್ಲಿದರೆಲ್ಲರು ಕಾಡಿ ಮಡಿವಲ್ಲಿ ಹಂದೆ ಹುಯ್ಯಲಲ್ಲಿದ್ದು ಅಂಜಿದುದಿಲ್ಲವೆಂಬ ಶಬ್ದಕ್ಕರ್ಥ. ಕರಸ್ಥಲದಲ್ಲಿ ಲಿಂಗವ ಭಿನ್ನವಿಟ್ಟು ಧರಿಸಿದವರೆಲ್ಲರು ಹೃದಯಕಮಲ ಕರಣಿಕಾ ಮಧ್ಯದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ಬೆರಸಿಹನೆಂದು ಲಕ್ಷವಿಟ್ಟು ದಿಟ್ಟಿಸುತ್ತಿಹರು, ಅವರಿಗೆ ನಿರ್ಲಕ್ಷವಾಯಿತ್ತು ಪರಬ್ರಹ್ಮವೆಂಬುದೀಗ, ಲಿಂಗವಹಿಡಿದವರೆಲ್ಲರು ಒಂದ ಮುಟ್ಟಿ ಒಂದನರಿದು ಸಂಗವ ಮಾಡುವಾಗ ಎಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತವ ನಿವೃತ್ತಿಮಾಡಿ ಸರ್ವಾಂಗಲಿಂಗ ಸಂಬಂಧಿಯಾಗಿ ಮಹಾಘನ ಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ ಇದರಂದವನೇನೆಂದರಿಯೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೩

ಮಹಾಮಲೆಯಲ್ಲಿ ಕೊಲುವ ವ್ಯಾಘ್ರನ ನಾಲಿಗೆಯ ತುದಿಯಲ್ಲಿ ಒಂದು ಮೊಲ ಹುಟ್ಟಿತ್ತು. ಆ ಮೊಲಕ್ಕೆ ಮೂರು ಕಾಲು, ತಲೆಯಾರು, ಬಾಯಿ ಐದು. ಒಂದು ಬಾಯಿ ಎಲ್ಲಿ ಅಡಗಿತ್ತೆಂದರಿಯೆ. ಆರು ತಲೆಗೆ ಒಂದೇ ಕಣ್ಣು, ಆರು ನಾಲಿಗೆ, ಕಿವಿ ಹತ್ತಾಗಿ ಹರಿದಾಡುತ್ತಿದೇಕೋ? ಎಸೆವರ ಕಾಣೆ, ಬಲೆಗೊಳಗಾಗದದು. ಆ ಶಶಕವ ಹೊಸ ಕೋಳಿ ನುಂಗಿತ್ತು. ನುಂಗಿದ ಕೋಳಿಯ ಶರಣ ನುಂಗಿದ, ಆ ಶರಣ ಸನ್ಮತವಾಗಿ ಪ್ರಣವನುಂಗಿತ್ತು. ಆ ನುಂಗಿದ ಪ್ರಣವವ ಅದರಂಗವನರಿದಡೆ ಐಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೩ ॥

**ಟೀಕೆ:—** ಅತ್ಯಂತ ಭಯಂಕರವಾದ ಭವಾರಣ್ಯವೆಂಬುದೀಗ ಮಹಾಮಲೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯದ ಮಧ್ಯದಲ್ಲಿ ಸಮಸ್ತ ದೇವದಾನವ ಮಾನವರುಗಳ ಭವವನೈಯ್ದಿಸುವ ಕಾಲವ್ಯಾಘ್ರನಿರುತ್ತಿರುಹುದೆಂಬುದೀಗ ಕೊಲುವ ವ್ಯಾಘ್ರನ ಎಂಬ ಶಬ್ದಕ್ಕರ್ಥ. ಅಂತಪ್ಪ ಕಾಲವ್ಯಾಘ್ರನ ಆಶಾತೃಷ್ಣೆಯ ಜಿಹಾಗ್ರದಲ್ಲಿ ಜೀವಾತ್ಮನುದಯವಾದನೆಂಬುದೀಗ ನಾಲಿಗೆಯ ತುದಿಯಲ್ಲಿ ಒಂದು ಮೊಲ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ತ್ರಿವಿಧಾವಸ್ಥೆಗಳೇ ಚರಣವಾಗಿಹುದೆಂಬುದೀಗ ಆ ಮೊಲಕ್ಕೆ ಮೂರುಕಾಲು ಎಂಬ

ಶಬ್ದಕ್ಕರ್ಥ. ಅಂತು ತ್ರಿವಿಧಾವಸ್ಥೆಗಳೇ ಚರಣವಾಗುಳ್ಳ ಜೀವಾತ್ಮಂಗೆ ಅರಿಷಡ್ವರ್ಗಂಗಳೇ ಅಜ್ಞಾನಸ್ವರೂಪಿನಿಂದ ಶಿರಸ್ಸಾಗಿಹವೆಂಬುದೀಗ ತಲೆ ಆರು ಎಂಬ ಶಬ್ದಕ್ಕರ್ಥ. ಅಂತಪ್ಪರಿಷಡ್ವರ್ಗಂಗಳ ಶಿರಸ್ಸಾಗುಳ್ಳ ಜೀವಾತ್ಮಂಗೆ ಪಂಚೇಂದ್ರಿಯಂಗಳೆ ಬಾಯಾಗಿಹವೆಂಬುದೀಗ ಬಾಯಿ ಐದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಹೃದಯೇಂದ್ರಿಯವು ಗೋಪ್ಯವಾಗಿಹುದೆಂಬುದೀಗ ಒಂದು ಬಾಯಿ ಎಲ್ಲಿ ಅಡಗಿತ್ತೆಂದರಿಯೆನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅರಿಷಡ್ವರ್ಗಂಗಳು ಅಜ್ಞಾನದೃಕ್ಕಿನಲ್ಲಿ ಸಿಲ್ಕಿರುತ್ತಿಹವೆಂಬುದೀಗ ಆರು ತಲೆಗೆಒಂದೇ ಕಣ್ಣು ಎಂಬ ಶಬ್ದಕ್ಕರ್ಥ. ಆ ಜೀವನು ಪರರೊಡವೆಗೆ ಅಳುಪನೆಂಬುದೀಗ, ಆರೇ ನಾಲಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮಂಗೆ ದಶವಾಯುಗಳೇ ಅಶ್ರುತಕರ್ಣವಾಗಿಹುವೆಂಬುದೀಗ ಕಿವಿಹತ್ತಾಗಿ ಎಂಬ ಶಬ್ದಕ್ಕರ್ಥ. ಅಂತು ಜೀವನು ಈ ಪ್ರಕಾರದಲ್ಲಿ ಪ್ರಪಂಚಿನಲ್ಲಿ ವರ್ತಿಸುತ್ತಿದ್ದನೆಂಬುದೀಗ ಹರಿದಾಡುತ್ತಿದೇಕೋ ಎಂಬ ಶಬ್ದಕ್ಕರ್ಥ. ಸದ್ಭಾವವೆಂಬ ಬಿಲ್ಲಿಗೆ ಸುಮನವೆಂಬ ನಾರಿಯು ಹೂಡಿ ಸುಜ್ಞಾನವೆಂಬ ಬಾಣದಿಂದ ಜೀವರ ಸಂಹರಿಸುವರ ಪೂರ್ವವೆಂಬುದೀಗ ಎಸೆವರ ಕಾಣೆನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಭಕ್ತಿಪಾಶಕ್ಕೆ ಒಳಗಾದುದಿಲ್ಲವೆಂಬುದೀಗ ಬಲೆಗೊಳಗಾಗದದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಶರಣನ ನಿಜಾಂತರಂಗದಲುದಯವಾದ ಸತ್ಪ್ರಾಣವು ಜ್ಞಾನವವಗ್ರಹಿಸಿತ್ತೆಂಬುದೀಗ, ಆ ಶಶಕವ ಹೊಸ ಕೋಳಿ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸತ್ಪ್ರಾಣವನು ಚಿತ್ಸ್ವರೂಪನಾದ ಶರಣನವಗ್ರಹಿಸಿದನೆಂಬುದೀಗ ನುಂಗಿದ ಕೋಳಿಯ ಶರಣ ನುಂಗಿದನೆಂಬ ಶಬ್ದಕ್ಕರ್ಥ. ಆ ಪ್ರಾಣವು ಚೈತನ್ಯಲಿಂಗವು ಶರಣನವಗ್ರಹಿಸಲು ಆ ಚಿದ್ರೂಪನಾದ ಶರಣನ ಸರ್ವಾಂಗವು ಆ ಲಿಂಗವ ವಗ್ರಹಿಸಿ ಆ ಲಿಂಗಕ್ಕಂಗವಾದ ಮಹಾಜ್ಞಾನ ಚಿತ್ತಿನಲ್ಲಿ ಸಮರಸವಾದನೆಂಬುದೀಗ ಆ ಶರಣ ಸನ್ಮತವಾಗಿ ಪ್ರಾಣವು ನುಂಗಿ ಆ ಪ್ರಾಣವು ಅದರಂಗವನರಿದಡೆ ಐಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೪

ಮಂಜಿನ ಧರೆಯಲ್ಲಿ ಬಿಸಿಲ ಬೀಜಬಿದ್ದು ಮರೀಚಿಕದ ಮಳೆ ಹೊಯ್ದಿತ್ತು. ಬೇರು ಬಿಡದೆ ಮೊಳೆ ಒಡೆಯಿತ್ತು. ಎಲೆದೋರುವುದಕ್ಕೆ ಮುನ್ನವೆ ತಲೆ ಇಲ್ಲದ ಎರಳೆ ಬಂದು ಮೇಯುತ್ತಿರಲಾಗಿ ಅಂಜನಸಿದ್ಧ ಬಂದು ನಿಂದು ನೋಡುತ್ತಿದ್ದ. ಅದು ನಿರಂಗವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೇ ॥ ೧೪೪॥

ಟೀಕೆ — ಲಿಂಗದಲ್ಲಿ ತೋರಿ ಅಡಗಲ್ಪಟ್ಟ ಚಿದ್ಭೂಮಿಯಲ್ಲಿ ಪರಮಾನಂದ ಜಲವೇ ತುಂಬಿತ್ತಿಹುದೆಂಬುದೀಗ ಮಂಜಿನ ಧರೆಯಲ್ಲಿ ಎಂಬ ಶಬ್ದಕ್ಕರ್ಥ. ಚಿತ್ಪ್ರಕಾಶ ಮಯವಾದ ಚಿದ್ಘನ ಲಿಂಗವು ಗುರುಮುಖದಿಂದ ಬಂದು ಪ್ರತ್ಯಕ್ಷವಾಗಿ ಸಂಬಂಧವಾಯಿತ್ತೆಂಬುದೀಗ ಬಿಸಿಲಬೀಜ ಬಿದ್ದು ಎಂಬ ಶಬ್ದಕ್ಕರ್ಥ. ಮರೀಚಿಕ

ವೆಂದಡೆ ಮನಸ್ಸು. ಅಂತಪ್ಪ ಮನಸ್ಸಿನಿಂದ ತೋರಿದ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವೇ ಪ್ರಕಾಶವಾಯಿತ್ತೆಂಬುದೀಗ ಮರೀಚಿಕದ ಮಳೆ ಹೊಯ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣಂಗೆ ಮೂಲಾಹಂಕಾರವು ನಷ್ಟವಾಯಿತ್ತೆಂಬುದೀಗ ಬೇರು ಬಿಶನೆ ಎಂಬ ಶಬ್ದಕ್ಕರ್ಥ. ಅಲ್ಲಿ ಸುಜ್ಞಾನಾಂಕುರವೇ ಪ್ರಭಾವಿಸಿತ್ತೆಂಬುದೀಗ ಮೊಳೆ ಒಡೆಯಿತ್ತೆಂಬ ಶಬ್ದಕ್ಕರ್ಥ. ಅಲ್ಲಿ ಇಂದ್ರಿಯಂಗಳ ವರ್ತನೆಯು ತಲೆದೋರು ದಕ್ಕೆ ಮುನ್ನವೆ ವೃತ್ತಿ ಜ್ಞಾನವು ನಾಸ್ತಿಯಾಗಿರ್ಪ ಮಹಾಜ್ಞಾನಚಿಚ್ಛಕ್ತಿ ಸದ್ವಿವೇಕಸ್ವರೂಪವಾದ ಸುಜ್ಞಾನಾಂಕುರವನ್ನು ಸ್ವೀಕರಿಸುತ್ತಿಹುದೆಂಬುದೀಗ ಎಲೆದೋರುವದಕ್ಕೆ ಮೊದಲೆ ತಲೆ ಇಲ್ಲದ ಎರಳೆ ಬಂದು ಮೇಯುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಸ್ವರೂಪವಾದ ಶರಣನು ಲಿಂಗಭೋಗೋಪಭೋಗಿಯಾಗಿದ್ದ ಭೇದವನ್ನು ಪರಿಪೂರ್ಣಜ್ಞಾನಾಂಜನವುಳ್ಳ ಶ್ರೀಗುರು ಕಂಡು ನಿರೀಕ್ಷಿಸುತ್ತಿದ್ದನೆಂಬುದೀಗ ಅಂಜನಸಿದ್ಧ ಬಂದು ನಿಂದು ನೋಡುತ್ತಿದ್ದನೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಸರ್ವಾಂಗವೆಲ್ಲವು ಚಿದ್ಘನಲಿಂಗದಲ್ಲಿ ನಿರ್ವಯಲಾಗಿತ್ತೆಂಬುದೀಗ ಅದು ನಿರಂಗವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೇ ಎಂಬ ಶಬ್ದಕ್ಕರ್ಥ.

೮೦೫

ಮನೆಯ ಕೋಡಗ ಊರಮಂತವ ನುಂಗಿತ್ತು. ಮಂತದೊಳಗಣ ಮಂದಿ ಹೊಂದುದಿಲ್ಲ. ಅದರಂದದಿರವ ಇನ್ನಾರಿಗೆ ಹೇಳುವೆ? ಎಂಟುಕಾಲ ಮಂಟಿಯು ಟೆಂಟಣಿಸಿ ನಿಂದವೈದು ಕಂಭ. ಕಂಭದ ಮೇಲಣ ಬೋದಿಗೆ ಮೂರು ಸಂದು ಬಿಟ್ಟುದಿಲ್ಲ. ಹೀಗಿದ್ದ ಮಣಿಮಾಡದ ಮಂತವ ನುಂಗಿದ ಕೋಡಗವ ಕಂಗಳು ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೫ ॥

ಟೀಕೆ:— ಅಂತರ್ದೇಹದಲ್ಲಿ ಚರಿಸುತ್ತಿದ್ದ ಮನೋಮರ್ಕಟನೆಂಬುದೀಗ ಮನೆಯ ಕೋಡಗವೆಂಬ ಶಬ್ದಕ್ಕರ್ಥ. ಊರೆಂದೊಡೆ ಪಂಚಭೂತ ಗ್ರಾಮ. ಮಂತವೆಂದೊಡೆ ಸಕಲ ಕರಣಂಗಳು ಆ ಪಂಚಭೂತ ಮುಖ್ಯವಾದ ಸಕಲ ಕರಣಂಗಳನ್ನು ಆ ಮನ ಆವರ್ತಿಸಿತ್ತೆಂಬುದೀಗ ಮನೆಯ ಕೋಡಗ ಊರಮಂತವ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳು ಲಿಂಗದಲ್ಲಿ ಏಕಾರ್ಥವ ಘಟಿಸದೆ ಮನೋವರ್ತನೆಯಲ್ಲಿ ಕೂಡಿರುತ್ತಿಹವೆಂಬುದೀಗ ಮಂತದೊಳಗಣ ಮಂದಿ ಹೊಂದುದಿಲ್ಲ ಎಂಬ ಶಬ್ದಕ್ಕರ್ಥ. ಆ ಮನೋವರ್ತನೆಯಲ್ಲಿ ಕೂಡಿ ಸಕಲ ಕರಣಂಗಳು ವರ್ತಿಸುವದನು ಆ ಶಿವಜ್ಞಾನಿಯು ಕಂಡು ಚೋದ್ಯಬಟ್ಟನೆಂಬುದೀಗ, ಅದರಂದದ ಇರವ ಇನ್ನಾರಿಗೆ ಹೇಳುವೆ ಎಂಬ ಶಬ್ದಕ್ಕರ್ಥ. ಅಷ್ಟತನು ಯುಕ್ತವಾದ ದೇಹವೆಂಬುದೀಗ ಎಂಟುಕಾಲ ಮಂಟಿಯು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಕ್ಕೆ ಪಂಚಕರಣಂಗಳೇ ಆಧಾರವಾಗಿಹುವೆಂಬುದೀಗ

ಪೊಂಟಣಿಸಿ ನಿಂದವೈದು ಕಂಭ ಎಂಬ ಶಬ್ದಕ್ಕರ್ಥ. ಅಂತಪ್ಪ ಪಂಚಕಣಂಗಳನೊಳ
ಕೊಂಡು ತೋರುವ ಭಾವವು ತ್ರಿಪುಟಿಜ್ಞಾನದಲ್ಲಿ ಕೂಡಿರುತ್ತಿಹುದೆಂಬುದೀಗ,
ಕಂಭದ ಮೇಲಣ ಬೋದಿಗೆ ಮೂರು ಸಂದು ಬಿಟ್ಟುದಿಲ್ಲ ಎಂಬ ಶಬ್ದಕ್ಕರ್ಥ. ಅಂತಪ್ಪ
ಭಾವವು ತ್ರಿಪುಟಿ ಜ್ಞಾನದಲ್ಲಿ ಕೂಡಿರುತ್ತಿಹುದೆಂಬುದೀಗ ಹಿಂಗಿದ್ದ ಎಂಬ ಶಬ್ದ
ಕ್ಕರ್ಥ. ಷಡಾಧಾರಚಕ್ರಗಳಿಂದ ಒಪ್ಪುತ್ತಿಪ್ಪ ದೇಹವನ್ನು ಚತುಷ್ಕರಣಂಗಳು
ಮುಖ್ಯವಾದ ಸಕಲ ತತ್ವಂಗಳನವಗ್ರಹಿಸಿಕೊಂಡಿದ್ದ ಮನಸ್ಸನ್ನು ಶರಣನ ಪರಿ
ಪೂರ್ಣಜ್ಞಾನವವಗ್ರಹಿಸಿ ಬೇರ್ಪಡಿಸದಿಪ್ಪುದೆಂಬುದೀಗ ಮಣಿಮಾಡದ ಮಂತವ
ನುಂಗಿದ ಕೋಡಗವ ಕಂಗಳು ನುಂಗಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ
ಶಬ್ದಕ್ಕರ್ಥ.

೮೦೬

ಮಾತನಾಡುವ ಪಂಜರದ ವಿಹಂಗನನೊಂದು ಕೋಡಗ ನುಂಗಿತ್ತು.
ನುಂಗಿದ ಕೋಡಗವ ಮಂಜರಿ ತಿಂದಿತ್ತು. ತಿಂದ ಮಂಜರಿಯ ಅಂಧಕ ಕಂಡ.
ಆ ಅಂಧಕ ಪಂಗುಳಗೆ ಹೇಳಲಾಗಿ, ಪಂಗುಳ ಹರಿದು ಮಂಜರಿಯ ಕೊಂದ.
ಪಂಜರದ ವಿಹಂಗನ, ಮಂಜರಿಯ ಲಾಗವ, ಅಂಧಕನ ಧ್ಯಾನವ, ಪಂಗುಳನ
ಹರಿತವ ಈ ದ್ವಂದ್ವಗಳನೊಂದು ಮಾಡಿ, ಈ ಚತುರ್ವಿಧದಂಗವ ತಿಳಿದಲ್ಲಿ
ಪ್ರಾಣಲಿಂಗ ಸಂಬಂಧ. ಸಂಬಂಧವೆಂಬ ಸಮಯ ಹಿಂಗಿದಲ್ಲಿ ಐಕ್ಯಾನುಭಾವ
ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೬ ॥

ಟೀಕೆ:— ಪಂಚಭೂತಾಶ್ರಯುವಾದ ದೇಹದಲ್ಲಿರ್ಪ ಜೀವನು ನಾನಾಶಬ್ದ
ಜಾಲಂಗಳಿಂದ ಉರಿವುತ್ತಿಹನೆಂಬುದೀಗ ' ಮಾತನಾಡುವ ಪಂಜರದ ವಿಹಂಗನೆಂಬ
ಶಬ್ದಕ್ಕರ್ಥ ಅಂತಪ್ಪ ಜೀವನ ಮನೋಮರ್ಕಟನವಗ್ರಹಿಸಿತ್ತೆಂಬುದೀಗ ಒಂದು
ಕೋಡಗ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸನ್ನು ಮಾಯಾಮಾರ್ಜಾಲ
ಭಕ್ಷಿಸಿತ್ತೆಂಬುದೀಗ ನುಂಗಿದ ಕೋಡಗವ ಮಂಜರಿ ತಿಂದಿತ್ತೆಂಬ ಶಬ್ದಕ್ಕರ್ಥ.
ಅಂತಪ್ಪ ಮನಸ್ಸನ್ನು ಪ್ರಪಂಚುರೂಪವಾದ ಮಾಯಾಶಕ್ತಿ ಅವಗ್ರಹಿಸಿದ ಭೇದವನ್ನು
ಭಿನ್ನಜ್ಞಾನವಿಲ್ಲದೆ ಪರಿಪೂರ್ಣ ಜ್ಞಾನ ಗುರು ಕಂಡು, ಭಿನ್ನಕ್ರಿಯಾಚಾರವಿಲ್ಲದ
ಅಭಿನ್ನಕ್ರಿಯಾಚಾರವಿಡಿದಾಚರಿಸುವ ಶಿಷ್ಯಂಗೆ ಸುಜ್ಞಾನ ಬೋಧೆಯಿಂದರಿದಿ
ಹನೆಂಬುದೀಗ ತಿಂದ ಮಂಜರಿಯ ಅಂಧಕ ಕಂಡ, ಆ ಅಂಧಕ ಪಂಗುಳಗೆ
ಹೇಳಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀಗುರುವಿನ ಶಿವಾನುಭಾವ ಬೋಧೆ
ಯನನವಗ್ರಹಿಸಿದ ಶಿಷ್ಯನು ಆ ಗುರು ಮಾರ್ಗಾಚಾರವಿಡಿದಾಚರಿಸಿ ಆ ಮಾಯಾ
ಮಂಜರಿಯ ಸಂಹರಿಸಿದನೆಂಬುದೀಗ, ಪಂಗುಳ ಹರಿದು ಮಂಜರಿಯ ಕೊಂದನೆಂಬ
ಶಬ್ದಕ್ಕರ್ಥ. ಅಂತು ದೇಹಸಂಬಂಧಿಯಾಗಿರ್ದ ಜೀವನ ಜೀವಭಾವವಳಿದು
ಸಜೀವ ಸ್ವರೂಪವಾಗಿ ಮಾಯೆಯುಳಿದು ನಿವೃತ್ತಿಮುಖದಿಂ ಭಕ್ತ್ಯಾಂಗನೆಯಾಗಿ

ಸದ್ರೂಪವಾದ ಶ್ರೀಗುರು ಚಿದ್ರೂಪನಾದ ಶಿಷ್ಯನು ಸಮರಸಭಾವದಿಂದ ಕೂಡ ಪರಿಪೂರ್ಣವಾದ ಪರಬ್ರಹ್ಮದಲ್ಲಿ ಅಡಗಿರ್ಪುದೆ ಪ್ರಾಣಲಿಂಗ ಸಂಬಂಧದ ನಿಲವೆಂಬುದೀಗ ಪಂಜರದ ವಿಹಂಗನ, ಮಂಜರಿಯ ಲಾಗವ, ಅಂಧಕನ ಧ್ಯಾನವ, ಪಂಗುಳನ ಪರಿತವ ಈ ದ್ವಂದ್ವಗಳನೊಂದು ಮಾಡಿ ಈ ಚತುರ್ವಿಧದಂಗವ ತಿಳಿದಲ್ಲಿ ಪ್ರಾಣಲಿಂಗ ಸಂಬಂಧ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮದಲ್ಲಿ ತಾನಡಗಿ ಸಮರಸೈಕ್ಯವಾದ ನೆಂಬ ಮಹಾಜ್ಞಾನವು ಮಹಾಘನಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಸಂಬಂಧವೆಂಬ ಸಮಯ ಹಿಂಗಿದಲ್ಲಿ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೭

ಮೂಲದ್ವಾರದ ಮೂಲೆಯಲ್ಲಿ ಏಳುಮಂದಿ ಕಳ್ಳರಡಗಿ ಬಹಳ ಬಂಗಾರವ ಕದ್ದರು ನೋಡಾ. ಕದ್ದ ಕಳ್ಳರು ಒರಗದೆ ಮತ್ತೊಂದು ಬುದ್ಧಿಯ ನೆನೆದು ಹೊದ್ದಿ ಸೇರಿದರು. ಮನೆಯಾತ ಅವರಿರುವ ಹೆಜ್ಜೆಯನರಿದು ಎದ್ದು ಹಿಡಿದ. ಕೈಯೊಳಗಾದರು ಕಳ್ಳರು. ಬೆಳ್ಳರೆಂದು ಹೋದಡೆ ಇದಬಲ್ಲವರಾರೋ ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೭ ॥

ಟೀಕೆ:— ಅಹಂಕಾರ ಯುಕ್ತವಾದ ಸ್ಥೂಲದೇಹವೆಂಬುದೀಗ ಮೂಲದ್ವಾರ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಕಡೆಯದಾದ ಕಾರಣ ದೇಹದಲ್ಲಿ ಸಪ್ತವ್ಯಸನಂಗಳು ಪರಮಾರ್ಥ ವಂಚಕರಾಗಿ ಮರವೆಯನೈದಿರುತ್ತಿಹರೆಂಬುದೀಗ ಮೂಲೆಯಲ್ಲಿ ಏಳು ಮಂದಿ ಕಳ್ಳರಡಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಪ್ತವ್ಯಸನಂಗಳ ವರ್ತನೆಯಿಂದ ಜೀವಂಗೆ ಪಂಚಾಚಾರ ಮುಖ್ಯವಾದ ಸರ್ವಾಚಾರ ಸಂಪತ್ತು ನಷ್ಟವಾದವೆಂಬುದೀಗ ಬಹಳ ಭಂಗಾರವ ಕದ್ದರು ನೋಡಾ ಎಂಬ ಶಬ್ದಕ್ಕರ್ಥ. ಆ ಪಂಚಾಚಾರ ಮುಖ್ಯವಾದ ಸರ್ವಾಚಾರ ಸಂಪತ್ತು ಅವಕ್ಕೆ ವಶವಲ್ಲದಿರಲು ಎಂಬುದೀಗ ಕದ್ದ ಕಳ್ಳರು ಒರಗದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಕೃಪೆಯಿಂದ ಸುಜ್ಞಾನೋದಯವಾಗಲು ಕುಬುದ್ಧಿ ನಿವೃತ್ತಿ ಮಾಡಲು ಸುಬುದ್ಧಿಯಿಂದ ತನ್ನ ನಿಜವನರಿದು ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ದೀಕ್ಷಾತ್ರಯಂಗಳಿಂದ ತನುತ್ರಯಂಗಳ ಪೂರ್ವಾಶ್ರಯವಂ ಕಳೆದು ಲಿಂಗತ್ರಯವ ಸಂಬಂಧವ ಮಾಡಲು ಆ ತ್ರಿವಿಧ ಲಿಂಗದಲ್ಲಿ ಕ್ರಿಯಾಜ್ಞಾನ ಭಕ್ತಿವಿಡಿದಾಚರಿಸುವ ಶರಣನು ಆಚಾರಾಂಗದಲ್ಲಿ ಸಂಬಂಧವಾದ ಗುರುತತ್ವವನವಗ್ರಹಿಸಿದನೆಂಬುದೀಗ ಮತ್ತೊಂದು ಬುದ್ಧಿಯ ನೆನೆದು ಹೊದ್ದಿ ಸೇರಿದರು ಎಂಬ ಶಬ್ದಕ್ಕರ್ಥ. ಅವರಿರವೆಂದೊಡೆ ಸರ್ವಾಂಗ ಲಿಂಗಸಂಬಂಧ. ಹೆಜ್ಜೆ ಎಂದೊಡೆ ಗುರು ಮಾರ್ಗಾಚಾರ. ಅಂತಪ್ಪ ಸರ್ವಾಂಗಲಿಂಗ ಸಂಬಂಧದಿಂದ ಗುರುಮಾರ್ಗಾಚಾರವಿಡಿದು ಆಚರಿಸುತ್ತಿದ್ದ ಶರಣನ ಶಿವಭಾವದಲ್ಲಿ ಸಿಕ್ಕಿ ಸಪ್ತವ್ಯಸನಂಗಳು ನಿವೃತ್ತಿ ಮಾರ್ಗವನೈದಲು

ಈ ಭೇದವು ಶರಣಂಗಲ್ಲದೆ ದ್ವೈತಾದ್ವೈತಿಗಳಿಗಸಾಧ್ಯವೆಂಬುದೀಗ ಮನೆಯಾತ ಅವನಿರುವ ಹೆಜ್ಜೆಯನರಿದು ಎದ್ದು ಹಿಡಿದ, ಕೈಯೊಳಗಾದರು ಕಳ್ಳರು, ಬೆಳ್ಳರೆಂದು ಹೋದಡೆ ಇದ ಬಲ್ಲವರಾರೋ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೮

ಮೂರು ತಟ್ಟಿಯ ನಡುವೆ ಒಂದು ಕಂಭವ ನೆಟ್ಟು ಎಂಬತ್ತುನಾಲ್ಕು ಲಕ್ಷ ದಾರವಟ್ಟವ ಕಟ್ಟಿ ಅದರ ಮೇಲೆ ಸಿಂದಾಡುತ್ತಿರಲಾಗಿ ನಡುವಣ ಕಂಭ ಮುರಿದು ಬೀಳುತ್ತಿರಲಾಗಿ ಕಂಡೆ ಕೆಲದಲ್ಲಿ ಮೂರು ತಟ್ಟಿಯಲ್ಲಿ ಕಟ್ಟಿದ ನೇಣ. ಅದ ಹಿಡಿದು ಕೆಳಯಿಂಕೆ ದುಮುಕಲಮ್ಮದೆ ಮೇಲಕ್ಕೆ ಹತ್ತಲಮ್ಮದೆ ನಡುವೆ ಉಯ್ಯಾಲೆಯನಾಡುತ್ತಿದ್ದೆನಯ್ಯಾ. ಇದ್ದವನ ಕಂಡು ಹಿರಿದಹ ಆಕಾಶದಲ್ಲಿ ಅಡಗಿದ್ದ ಹದ್ದು ಬಂದು ಹೊಯ್ಯಲಾಗಿ ಕಪಾಲ ಸಿಡಿಯಿತ್ತು. ಮೂರು ತಟ್ಟಿ ಮುರಿಯಿತ್ತು. ಎಂಭತ್ತುನಾಲ್ಕು ಲಕ್ಷ ಕಣ್ಣಿ ಒಂದೂ ಇಲ್ಲದಂತೆ ಕಿತ್ತವು. ಅದಕ್ಕೆ ಬಂಧಮುಕ್ತವೇನೆಂಬೆ? ನಿಃಕಳಂಕ ಮಲ್ಲಿಕಾರ್ಜುನಾ ॥ ೧೪೮ ॥

ಟೀಕೆ. — ತನುತ್ರಯಂಗಳ ಮಧ್ಯದಲ್ಲಿ ಅಹಂಕಾರವೆಂಬ ಸ್ತಂಭ ಒಪ್ಪುತ್ತಿಹುದೆಂಬುದೀಗ ಮೂರು ತಟ್ಟಿಯ ನಡುವೆ ಒಂದು ಕಂಭವ ನೆಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರಯುಕ್ತವಾಗಿರ್ದಾತ್ಮನು ಎಂಬತ್ತುನಾಲ್ಕು ಲಕ್ಷ ಯೋನಿದ್ವಾರಗಳಲ್ಲಿ ಮಾಯಾಪಾಶವಿಡಿದು ಹುಟ್ಟುತ್ತಿಹನೆಂಬುದೀಗ ಎಂಭತ್ತುನಾಲ್ಕುಲಕ್ಷದಾರವಟ್ಟವ ಕಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಪಾಶದಲ್ಲಿ ಕಟ್ಟುವಡೆದಾತ್ಮನು ಸಂಸಾರಪ್ರಪಂಚಿನಲ್ಲಿ ವರ್ತಿಸುತ್ತಿರ್ದನೆಂಬುದೀಗ ಅದರಮೇಲೆ ಸಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪಾತ್ಮಂಗೆ ಸುಜ್ಞಾನೋದಯವಾಗಲು ಅಹಂಕಾರವೆಂಬ ಸ್ತಂಭ ಭಗ್ನವಾಯಿತ್ತೆಂಬುದೀಗ ನಡುವಣ ಕಂಭ ಮುರಿದು ಬೀಳುತ್ತಿರಲಾಗಿ ಎಂಬ ಶಬ್ದಕ್ಕರ್ಥ ಅಂತು ಶರಣ ತನ್ನ ಸುಜ್ಞಾನದೃಷ್ಟಿಯಿಂದ ತನುತ್ರಯಂಗಳಲ್ಲಿ ಸ್ವಾನುಭಾವ ಸೂತ್ರ ಸಂಬಂಧವಾಗಿರ್ದ ಭೇದವ ನಿರೀಕ್ಷಿಸುತ್ತಿರ್ದನೆಂಬುದೀಗ ಕಂಡೆ ಕೆಲದಲ್ಲಿ ಮೂರು ತಟ್ಟಿಯಲ್ಲಿ ಕಟ್ಟಿದ್ದನೇಣ ಎಂಬ ಶಬ್ದಕ್ಕರ್ಥ. ಆ ತನುತ್ರಯಂಗಳಲ್ಲಿ ವೇಧಿಸಿರ್ಪ ಸ್ವಾನುಭಾವ ಸೂತ್ರವ ತನ್ನ ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದ ಶರಣನು ದೇಹಾದಿ ಪ್ರಪಂಚಕ್ಕೆಳಸದೆ ಅತ್ತ ಜೀವನ ವರ್ತನೆಗೆ ಹೋಗದೆ ಅಂತರಾತ್ಮ ವಿವೇಕದಲ್ಲಿ ಸ್ವಾತ್ಮಜ್ಞಾನ ವಿಡಿದಾಚರಿಸುತ್ತಿಹನೆಂಬುದೀಗ ಅದ ಹಿಡಿದ ಕೆಳಯಿಂಕೆ ದುಮುಕಲಮ್ಮದೆ ಮೇಲಕ್ಕೆ ಹತ್ತಲಮ್ಮದೆ ನಡುವೆ ಉಯ್ಯಾಲೆಯನಾಡುತ್ತಿದ್ದೆನಯ್ಯಾ ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಸ್ವಾನುಭಾವ ವಿವೇಕಿಯಾಗಿರ್ದ ಶರಣಂಗೆ ಆ ಚಿದಾಕಾಶ ಮಂಡಲದಲ್ಲಿರ್ಪ ಪರಮಹಂಸನೆ ಗುರು

ಸ್ವರೂಪವಾಗಿ ಬಂದು ಪ್ರತ್ಯಕ್ಷವಾಗಿ ದೀಕ್ಷಾತ್ರಯಂಗಳಿಂ ಶಿಷ್ಯನ ತನುತ್ರಯಂಗಳ ಪೂರ್ವಾಶ್ರಯವ ಕಳೆದು ತ್ರಿವಿಧಲಿಂಗ ಸಂಬಂಧವ ಮಾಡಲು ಅಲ್ಲಿ ಭಿನ್ನಜ್ಞಾನ ನಷ್ಟವಾಗಿ ಹೋಯಿತ್ತೆಂಬುದೀಗ ಇದ್ದವನ ಕಂಡು ಹಿರಿದಹ ಆಕಾಶದಲ್ಲಿ ಅಡ ಗಿರ್ದ ಹದ್ದು ಬಂದು ಹೊಯ್ಯಲಾಗಿ ಕಪಾಲ ಸಿಡಿಯಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧಲಿಂಗದಲ್ಲಿ ತನುತ್ರಯಂಗಳು ಸಮರಸವಾದವೆಂಬುದೀಗ ಮೂರು ತಟ್ಟೆ ಮುರಿಯಿತ್ತು ಎಂಬ ಶಬ್ದಕ್ಕರ್ಥ. ಇಂತು ತನುತ್ರಯಂಗಳು ನಷ್ಟವಾಗಲು ಜನ್ಮಾಂತರದಲ್ಲಿ ಬರುತ್ತಿರ್ದ ಮಾಯಾಪಾಶವಳಿಯಿತ್ತೆಂಬುದೀಗ ಎಂಬತ್ತುನಾಲ್ಕು ಲಕ್ಷ ಕಣ್ಣು ಒಂದೂ ಇಲ್ಲದಂತೆ ಕಿತ್ತವು ಎಂಬ ಶಬ್ದಕ್ಕರ್ಥ ಆ ನಿವೃತ್ತಿಮಾರ್ಗವ ನೆಯ್ದಿದ ಚಿದಾತ್ಮಂಗೆ ಬಂಧಮುಕ್ತಿ ಎಂಬು ಭಯವು ಇಲ್ಲವೆಂಬುದೀಗ ಆದಕ್ಕೆ ಬಂಧ ಮುಕ್ತಿ ಏನೆಂಬೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೦೯

ಸತ್ತ ಹೆಣಕ್ಕೆ ಎಳವಿಗೆ ಬಂದವರ ಕಂಡೆ. ದೃಷ್ಟಿ ತೆಗೆಯಿತ್ತು ಹೆಣ. ದೃಷ್ಟಿಯು ತೆಗೆಯಲಾಗಿ ಬಾಯಿಗಿಕ್ಕಿದ ಅಕ್ಕಿ ಒಕ್ಕವು ಮುಂದಲಿಗೆಯಲ್ಲಿ. ಮುಂದಲಿಗೆ ಆನಲಾರದೆ ಹಿಂಗಿ ಒಕ್ಕವು ನೆಲಕ್ಕೆ. ನೆಲದೊಳಗೆ ಅಟ್ಟ ಹೆಣದ ಬಾಯಕ್ಕಿ ಓಗರವಿಲ್ಲದೆ ಉಂಡು ಸಲೆ ಜೀರ್ಣಿಸಿದ ಮತ್ತೆ ಕಾಯದ ಜೀವದ ಹೊಲಿಗೆಯನರಿವನಂಗಲ್ಲದೆ ಲಿಂಗೈಕ್ಯವಿಲ್ಲ ನಿಃಕಳಂಕ ಮಲ್ಲಿ ಕಾರ್ಜುನಾ ॥ ೧೪೯॥

ಟೀಕೆ:— ಶಿವಾಂಶಿಕನಾದ ಆತ್ಮನು ತನ್ನ ನಿಜವ ಮರೆದು ದೇಹಸಂಬಂಧಿಯಾ ದಲ್ಲಿ ಜೀವನ್ಮೃತನಾಗಿದ್ದನೆಂಬುದೀಗ ಸತ್ತಹೆಣ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ್ಮೃತಪಿಂಡದ ಮಧ್ಯದಲ್ಲಿ ಶಿವಜ್ಞಾನವು ತಲೆದೋರಲು ಸಕಲ ಕರಣಂಗಳೆಲ್ಲ ನಿವೃತ್ತಿಮುಖದಿಂದ ಆತ್ಮನು ಸಂಸಾರವಿಷಯ ಸುಖಕ್ಕೆ ಸಿಲುಕಿ ಕೆಟ್ಟೆನಲ್ಲಾ ಎಂದು ವಿವೇಚಿಸುತ್ತಿರುವಲ್ಲಿ ಆ ಆತ್ಮಾಂತರ್ಗತವಾದ ಮೂಲಜ್ಞಾನ ದೃಷ್ಟಿಯು ಪ್ರಭಾವಿ ಸಿತ್ತೆಂಬುದೀಗ ಸತ್ತಹೆಣಕ್ಕೆ ಎಳವಿಗೆ ಬಂದವರ ಕಂಡೆ, ದೃಷ್ಟಿತೆಗೆಯಿತ್ತು ಹೆಣ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನದೃಷ್ಟಿ ಪ್ರಭಾವಿಸಿ ತನ್ನನಿಜವ ತಿಳಿದು ನೋಡುತ್ತಿದ್ದ ಚಿದಾತ್ಮನು ಶಿವಾಪೇಕ್ಷೆಯಲ್ಲಿ ಸಂಬಂಧವಾದ ಸಚ್ಚಿದಾನಂದ ಸ್ವರೂಪ ವಾದ ತ್ರಿವಿಧಲಿಂಗಗಳು ಸುಜ್ಞಾನಸನ್ನಿಹಿತವಾದ ಶರಣನ ಸೂಕ್ಷ್ಮಾಂತರಂಗದಲ್ಲಿ ವಿಶ್ರಾಂತಿಯನೈದಿದವೆಂಬುದೀಗ ದೃಷ್ಟಿಯು ತೆಗೆಯಲಾಗಿ ಬಾಯಿಗಿಕ್ಕಿದ ಅಕ್ಕಿ ಒಕ್ಕವು ಮುಂದಲಿಗೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ನಿಜಾಂತರಂಗದಲ್ಲಿ ಸಂಬಂಧವಾದ ಸಚ್ಚಿದಾನಂದಂಗಳೆಂಬ ತಂಡುಲವನು ಶ್ರೀಗುರು. ದೀಕ್ಷಾತ್ರಯಂಗಳಿಂದ ಭಾವಮನದೃಕ್ಕಿಂಗೆ ತಂದು ಬಹಿಷ್ಕರಿಸಿ ಶರಣನಾಚಾರಾಂಗ ದಲ್ಲಿ ಇಷ್ಟಲಿಂಗ ಸಂಬಂಧವ ಮಾಡಲು ಆ ಲಿಂಗವು ಒಳಹೊರಗೆನ್ನದೆ ಸರ್ವಾಂಗವ

ನೊಳಕೊಂಡಿಹುದೆಂಬುದೀಗ ಮಂದಲಿಗೆ ಅನಲಾರದೆ ಹಿಂಗಿ ಒಕ್ಕವು ನೆಲಕ್ಕೆ ಎಂಬ ಶಬ್ದಕ್ಕರ್ಥ. ಅಂತಪ್ಪ ಒಂದೇ ಮಹಾಘನಲಿಂಗವು ತ್ರಿವಿಧ ಲಿಂಗಸ್ವರೂಪವ ನೈದಿದ ಶರಣನ ತ್ರಿವಿಧಾಂಗದಲ್ಲಿ ಸಂಬಂಧವಾಗಲು ಜ್ಞಾನಾಗ್ನಿಪ್ರಕಾಶದಿಂದ ಲಿಂಗಾಂಗವೆರಡು ಸಮರಸಪಾಕವಾದವೆಂಬುದೀಗ ನೆಲದೊಳಗೆ ಅಟ್ಟ ಹೆಣದ ಬಾಯುಕ್ಕಿ ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗ ಸಮರಸಾನಂದದ ಸುಖವ ಜೀವ ಭಾವವಿಲ್ಲದೆ ಶಿವಭಾವದಿಂದ ಸ್ವೀಕರಿಸಿದನೆಂಬುದೀಗ ಓಗರವಿಲ್ಲದೆ ಉಂಡು ಎಂಬ ಶಬ್ದಕ್ಕರ್ಥ ಅಂತು ಲಿಂಗಾಂಗವೆರಡು ಬೀಗಿ ಒಂದೇ ಪರಬ್ರಹ್ಮಸ್ವರೂಪವಾಗಿ ನಿಷ್ಪತ್ತಿಯಾಯಿತ್ತೆಂಬುದೀಗ ಸಲೆ ಜೀರ್ಣಿಸಿದ ಮತ್ತೆ ಎಂಬ ಶಬ್ದಕ್ಕರ್ಥ. ಅಂತು ದೇಹಪ್ರಾಣಂಗಳ ಭಿನ್ನಭಾವವ ತೊಲಗಿಸಿ ಕ್ರಿಯಾಜ್ಞಾನಂಗಳನಳವಡಿಸಿ ಇಷ್ಟ ಪ್ರಾಣಲಿಂಗದಲ್ಲಿ ಏಕಾರ್ಥವ ತಿಳಿದವಂಗಲ್ಲದೆ ಮಹಾಘನಲಿಂಗದಲ್ಲಿ ಸಮರಸೈಕ್ಯ ವಿಲ್ಲವೆಂಬುದೀಗ ಕಾಯದ ಜೀವದ ಹೊಲಿಗೆಯನರಿದವಂಗಲ್ಲದೆ ಲಿಂಗೈಕ್ಯವಿಲ್ಲ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೦

ಸಾಸವೆಯ ಮೊನೆಯೊಳಗಡಗಿದ ಗುಂಗುರು ಈ ದೀಪದ ವೇಷಧಾರಿಗ ಳೆಲ್ಲರ ನುಂಗಿ ಮತ್ತೆ ಆಶೆ ಹಿಂಗದೆ ಮೂರು ವೇಷವ ನುಂಗಿತ್ತು. ಈ ಪಾಶವ ಬಿಡಿಸಾ ಈಷಣತ್ರಯದೂರ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೦ ॥

ಟೀಕೆ:— ಅಲ್ಪ ಸಂಸಾರ ಸುಖದ ಅಹಂಕಾರಾಗ್ರದಲ್ಲಿ ಸೂಕ್ಷ್ಮವಾದ ಮಾಯೆ ಇರುತ್ತಿಹಳೆಂಬುದೀಗ ಸಾಸವೆಯ ಮೊನೆಯೊಳಗಡಗಿದ ಗುಂಗುರ ಎಂಬ ಶಬ್ದ ಕ್ಕರ್ಥ. ದೀಪವೆಂದೊಡೆ ತನುತ್ರಯಂಗಳು. ಅಂತಪ್ಪ ತನುತ್ರಯಂಗಳ ಸಂಬಂಧ ವಾದ ಖಂಡಿತ ಜ್ಞಾನಿಗಳೆಲ್ಲರ ಪ್ರಕೃತಿಭಾವದಿಂದವಗ್ರಹಿಸಿತ್ತೆಂಬುದೀಗ ಈ ದೀಪದ ವೇಷಧಾರಿಗಳೆಲ್ಲರ ನುಂಗಿ ಎಂಬ ಶಬ್ದಕ್ಕರ್ಥ. ಅಂತು ನುಂಗಿದ ಜ್ಞಾನ ಸ್ವರೂಪವಾಗಿ ಬಂದು ಆಶಾತೃಷ್ಣೆ ಹಿಂಗದೆ ತ್ರಿಭಾಂಡಗಳನವಗ್ರಹಿಸಿತ್ತೆಂಬುದೀಗ ಮತ್ತೆ ಆಶೆ ಹಿಂಗದೆ ಮೂರು ವೇಷವ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಲ್ಲಿ ಸುಜ್ಞಾ ನೋದಯವಾದ ಶರಣನು ಇಂತಪ್ಪ ಮಾಯಾಪಾಶವ ನಿವೃತ್ತಿಮಾಡಿ ಸರ್ವಾಂಗ ಲಿಂಗ ಸಂಬಂಧವ ಮಾಡೆಂದು ಮಲತ್ರಯ ರಹಿತವಾದ ಶ್ರೀಗುರುವಿಂಗೆ ಬಿನ್ನೈಸು ತ್ತಿರ್ದ ಶಿಷ್ಯನೆಂಬುದೀಗ ಈ ಪಾಶವ ಬಿಡಿಸಾ ಈಷಣತ್ರಯ ದೂರ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೧

ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಒಂದರಗಿನ ಮಣಿಮಾಡದ ಮನೆಯಲ್ಲಿ ಬೂರದ ಹಾಸು ಹಾಕಿ, ನೀರಿನ ಮಂಚದ ಮೇಲೆ ನಾರಿಯರೆಲ್ಲರು

ತಮ್ಮ ಕ್ರೀಡಾಭಾವಂಗಳಿಂದ ಮಲಗಿರಲಾಗಿ, ಅರಗಿನ ಮಾಡವೆದ್ದುರಿದು, ನೀರಮಂಚವ ಸುಟ್ಟು, ಬೂರದ ಹಾಸು ಹೊತ್ತಿ ನಾರಿಯರು ಉರಿದುಹೋಗಿ ಉರಿವ ನಾಲಿಗೆ ಹರಿವ ನೀರ ಕೆಡಿಸಿತ್ತು. ಆ ಹರವರಿಯ ಪರಿಹರಿಸಬಲ್ಲಡೆ ಐಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೧ ॥

ಟೀಕೆ:— ತಾಪತ್ರಯಾಗ್ನಿಯ ಅಗ್ರದಲ್ಲಿ ಎಂಬುದೀಗ ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತಾಪತ್ರಯಾಗ್ನಿಯ ಅಗ್ರದಲ್ಲಿ ಷಡಾಧಾರಚಕ್ರಂಗಳಿಂದೊಪ್ಪುವ ಪಂಚಭೂತಾಶ್ರಯುವಾದ ದೇಹವು ತೋರಿತ್ತೆಂಬುದೀಗ ಒಂದರಗಿನ ಮಣಿ ಮಾಡದ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಸುಜ್ಞಾನ ರಸವರತ ಸಕಲ ಕರಣಂಗಳ ಹಾಸಿಕೆಯ ಮಾಡಿಕೊಂಡಿಹನು ಜೀವಾತ್ಮನೆಂಬುದೀಗ ಬೂರದ ಹಾಸು ಹಾಕಿ ಎಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳ ಹಾಸಿಕೆ ಮಾಡಿ ನೀರೆಂದೊಡೆ ಮನಸ್ಸು, ಅಂತಪ್ಪ ಸಂಚಾಲ್ಯರೂಪವಾದ ಮನಸ್ಸನೆ ಮಂಚವ ಮಾಡಿದ ಆತ್ಮನೆಂಬುದೀಗ ನೀರಿನ ಮಂಚದ ಮೇಲೆ ಎಂಬ ಶಬ್ದಕ್ಕರ್ಥ. ಅಂತು ಸಂಚಾಲ್ಯರೂಪವಾದ ಮನಸ್ಸಿಗೆ ಮಂಚವ ಮಾಡಿ ಪಂಚಶಕ್ತಿಯರ ಪ್ರಪಂಚಿನ ಸುಖದಲ್ಲಿ ಜೀವಾತ್ಮನು ಲೋಲುಪ್ತನಾಗಿಹನೆಂಬುದೀಗ ನಾರಿಯರೆಲ್ಲರು ತಮ್ಮ ಕ್ರಿಡಾಭಾವಂಗಳಿಂದ ಮಲಗಿರಲಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವಾತ್ಮಂಗೆ ಶಿವಜ್ಞಾನೋದಯವಾಗಲು ಪಂಚಭೂತಾಶ್ರಯುವಾದ ದೇಹವು ಶಿವಜ್ಞಾನಾಗ್ನಿಯಿಂದ ದಹನವಾಯಿತ್ತೆಂಬುದೀಗ ಅರಗಿನ ಮಾಡವೆದ್ದುರಿದು ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನಾಗ್ನಿಯಿಂ ದೇಹಭಾವ ದಹನವಾದಲ್ಲಿ ಆ ಸಾಂಚಲ್ಯರೂಪವಾದ ಮನಸ್ಸ ಸುಜ್ಞಾನಾಗ್ನಿಯಿಂ ದಹಿಸಿದನೆಂಬುದೀಗ, ನೀರ ಮಂಚವ ಸುಟ್ಟು ಎಂಬ ಶಬ್ದಕ್ಕರ್ಥ. ಅಂತು ಸಾಂಚಲ್ಯರೂಪವಾದ ಮನಸ್ಸು ದಹಿಸಿದ ಶರಣನ ಸಕಲ ಕರಣಂಗಳೆಲ್ಲವು ಮಹಾಜ್ಞಾನಾಗ್ನಿಯಲ್ಲಿ ಸಮರಸವಾದವೆಂಬುದೀಗ ಬೂರದ ಹಾಸು ಹೊತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನಾಗ್ನಿಯಿಂದ ಪಂಚಶಕ್ತಿಯರ ಪ್ರಪಂಚು ದಹನವಾಯಿತ್ತೆಂಬುದೀಗ ನಾರಿಯರು ಉರಿದು ಹೋಗಿ ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನಾಗ್ನಿ ಸ್ವರೂಪಿಸಿಂ ಪ್ರಭಾವಿಸುತ್ತಿರ್ಪ ಪರಮಾಮೃತ ಸ್ವರೂಪವಾದ ಮಹಾಘನಲಿಂಗವು ಶ್ರೀಗುರು ಮುಖದಿಂ ಪ್ರತ್ಯೇಕವಾಗಿ ಕರಸ್ಥಲಕ್ಕೆ ಬಂದು ಸಾಂಚಲ್ಯರೂಪಾಗಿ ಚರಿಸುತ್ತಿರ್ದ ಮನವನವಗ್ರಹಿಸಿತ್ತೆಂಬುದೀಗ ಉರಿವ ನಾಲಿಗೆ ಹರಿವ ನೀರ ಕೆಡಿಸಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧಿಯಾದ ಶರಣನು ಜ್ಞಾನ ಕ್ರಿಯವಿಡಿದಾಚರಿಸಿ ಸಕಲ ಕರಣಂಗಳೆಲ್ಲವನು ಮಹಾಘನಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ ಆ ಹರವರಿಯ ಪರಿಹರಿಸಬಲ್ಲಡೆ ಐಕ್ಯಾನುಭಾವಿ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

ಹುಟ್ಟಿದ [೧] ಮುನ್ನವೇ ಸತ್ತಿತ್ತು ಆ ಶಿಶು. ಸಾವುದಕ್ಕೆ ಮುನ್ನವೇ ಹುಟ್ಟಿದ ಶಿಶುವ ನೋಡಯ್ಯಾ. ಉಭಯದ ಮಧ್ಯದಲ್ಲಿ ನಿಂದು ಸತ್ತು ಹುಟ್ಟಿದವರಾರೋ, ಹುಟ್ಟಿ ಸತ್ತವರಾರೋ? ಈ ಉಭಯವೇನೆಂಬುದನರಿಯದೆ ಭಾವ ಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪವರ ಕಂಡು ನಾಚಿಕೆಯಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೨ ॥

೮೧೩

ಟೀಕೆ:— ಚಿತ್ಕಲಾಂಶಿಕನಾದ ಆತ್ಮನು ದೇಹಸಂಬಂಧವಾಗಿರ್ದಲ್ಲಿ ಶಿವಾಜ್ಞೆಯಿಂದ ಶಿವಜ್ಞಾನ ಪ್ರಭಾವಿಸಿದಾಕ್ಷಣವೆ ಜೀವ ಭಾವ ನಷ್ಟವಾಯಿತ್ತೆಂಬುದೀಗ ಹುಟ್ಟಿದ ಮುನ್ನವೇ ಸತ್ತಿತ್ತು ಆ ಶಿಶುವೆಂಬ ಶಬ್ದಕ್ಕರ್ಥ. ಅಂತು ಜೀವ ಭಾವ ನಾಸ್ತಿಯಾದ ಕೂಡಲೆ ಶಿವಭಾವ ಘಟಿಸಿ ಗುರುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ಆತ್ಮಾಂತರ್ಗತವಾಗಿರ್ದ ಮಹಾಘನ ಲಿಂಗವ ಭಾವ ಮನದ್ವಕ್ಕಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ತಂದುಕೊಡಲು ಶರಣನ ಸರ್ವಾಂಗವು ಲಿಂಗಸ್ವರೂಪವಾಯಿತ್ತೆಂಬುದೀಗ ಸಾವುದಕ್ಕೆ ಮುನ್ನವೇ ಹುಟ್ಟಿದ ಶಿಶುವ ನೋಡಯ್ಯಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಭಕ್ತಿಯೋಗದಲ್ಲಿ ನಿರ್ಭರವಾಗಿ ನಿಂದನೆಂಬುದೀಗ ಉಭಯದ ಮಧ್ಯದಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಸದ್ರೂಪವಾದ ಪರಬ್ರಹ್ಮವೇ ಗುರುಮುಖದಿಂದುದ್ಭವಿಸಿ ಚಿದ್ರೂಪನಾದ ಶಿಷ್ಯನ ಸರ್ವಾಂಗವನವಗ್ರಹಿಸಲು ಆ ಗುರುಕರಜಾತನಾದ ಶಿಷ್ಯನು ಸದ್ರೂಪವಾದ ಪರಬ್ರಹ್ಮವೆಯಾದನೆಂಬುದೀಗ ಸತ್ತು ಹುಟ್ಟಿದವರಾರೋ ಹುಟ್ಟಿ ಸತ್ತವರಾರೋ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸದ ಭಕ್ತಿಯೋಗದನುವನರಿಯದೆ ಮನೋಭ್ರಾಂತಿನಲ್ಲಿ ತಾವು ಜೀವರಾಗಿ ಕೂಡಿರ್ದು ಇಲ್ಲದ ಪರಬ್ರಹ್ಮವ ಕಡೆನೆಂದು ವಾಗದ್ವೈತದಿಂದುಲಿವುತ್ತಿಹರು, ಅದ ಕಂಡು ಲಿಂಗಶರಣ ಹೇಸಿ ತೊಲಗಿದನೆಂಬುದೀಗ ಈ ಉಭಯವನೇನೆಂದರಿಯದೆ ಭಾವಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪವರ ಕಂಡು ನಾಚಿಕೆಯಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೪

ಹುಟ್ಟುಗುರುಡ ಕತ್ತೆಯನೇರಿ ಬಪ್ಪಾಗ ಮರ್ತ್ಯದ ಮಹಾಗಣಂಗಳು ಕಂಡು, ಕತ್ತೆಯನೇರಿದೆ ಎಂದಡೆ, ಕತ್ತೆಯನೇರಿದ ಕುರುಡ ಅದ ಹೊತ್ತುಕೊಂಡ. ಕತ್ತೆಯ ಕಾಲೇ ಕುರುಡಂಗೆ, ಕುರುಡನ ಕಾಲೇ ಕತ್ತೆಗೆ, ಈ ಗುಣ ಅಚ್ಚುಗವಾಯಿತ್ತು. ಭಕ್ತರೆಲ್ಲರಿಗೆ ಕತ್ತೆಯ ಕಣ್ಣಾಕಿತ್ತು ಕುರುಡನ

೧. ಹುಟ್ಟಿದ ( ಬ )

ಕಾಲ ಮುರಿದು ಭಕ್ತಿ ಮುಕ್ತಿ ಎಂಬುದು ಸತ್ತಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೩ ॥

**ಟೀಕೆ:—** ಶಿವಾಂಶಿಕನಾದ ಆತ್ಮನು ದೇಹಸಂಬಂಧವಾದಲ್ಲಿ ಶಿವಜ್ಞಾನ ನಷ್ಟವಾಗಿ ಅಜ್ಞಾನದಿಂದ ಜೀವನಾಗಿರ್ದನೆಂಬುದೀಗ ಹುಟ್ಟುಗುರುಡನೆಂಬ ಶಬ್ದಕ್ಕರ್ಥ. ಕತ್ತೆ ಎಂದೆಡೆ ಜಡರೂಪನಾದ ಮಾಯೆ. ಅಂತಪ್ಪ ಮಾಯಾಸಂಬಂಧಿಯಾದ ಜೀವನು ಭವಂಗಳಲ್ಲಿ ಬರುತ್ತಿಹನೆಂಬುದೀಗ ಕತ್ತೆಯನೇರಿ ಬಪ್ಪಾಗ ಎಂಬ ಶಬ್ದಕ್ಕರ್ಥ. ಆ ಜೀವನ ಪ್ರಪಂಚಿನ ವರ್ತನೆಯನ್ನು ಮರ್ತ್ಯಲೋಕದಲ್ಲಿದ್ದ ತ್ರಿವಿಧ ಲಿಂಗಾನುಭಾವಿಗಳು ಕಂಡು ತನ್ನ ನಿಜಸ್ವರೂಪವ ಮರೆದು ಈ ಪ್ರಪಂಚಿನಲ್ಲಿ ಲಯವಾಗಲೇಕೆಂದು ಹಾಸ್ಯವ ಮಾಡುತ್ತಿದ್ದರೆಂಬುದೀಗ ಮರ್ತ್ಯದ ಮಹಾಗಣಂಗಳು ಕಂಡು ಕತ್ತೆಯನೇರಿಪ ಎಂದಡೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಮಾಯಾಸಂಬಂಧವಾದ ದೇಹಭಾರವ ತಾಳಿದ್ದನೆಂಬುದೀಗ ಕತ್ತೆಯನೇರಿದ ಕುರುಡ ಅದ ಹೊತ್ತುಕೊಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯು ದುಶ್ಚಾರಿತ್ರ್ಯವೇ ಆ ಅಜ್ಞಾನಿ ಜೀವಂಗೆ ಚರಣವಾಗಿಹುದೆಂಬುದೀಗ ಕತ್ತೆಯ ಕಾಲೇ ಕುರುಡಂಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನಿ ಜೀವನ ದುಶ್ಚಾರಿತ್ರ್ಯವೇ ಆ ಮಾಯೆಗೆ ಚರಣವಾಗಿಹುದೆಂಬುದೀಗ ಕುರುಡನ ಕಾಲೇ ಕತ್ತೆಗೆ ಎಂಬ ಶಬ್ದಕ್ಕರ್ಥ. ಇಂತಪ್ಪ ದುಶ್ಚಾರಿತ್ರ್ಯವೇ ಸಹಜವಾಯಿತ್ತೆಂಬುದೀಗ ಈ ಗುಣ ಅಚ್ಚುಗವಾಯಿತ್ತೆಂಬ ಶಬ್ದಕ್ಕರ್ಥ. ದ್ವೈತಭಾವದಿಂದ ಭಿನ್ನಭಕ್ತಿಯನಾಚರಿಸುವ ಖಂಡಿತ ಜ್ಞಾನಿಗಳೆಲ್ಲರಿಗೆ ಆ ಗುಣ ಸುಖವಾಗಿಹುದೆಂಬುದೀಗ ಭಕ್ತರಿಗೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಆ ಜಡರೂಪವಾದ ಮಾಯೆಯ ಅಜ್ಞಾನ ದೃಷ್ಟಿಯ ಛೇದಿಸಿದನೆಂಬುದೀಗ ಕತ್ತೆಯ ಕಣ್ಣ ಕಿತ್ತು ಎಂಬ ಶಬ್ದಕ್ಕರ್ಥ. ಆ ಜೀವನ ದುಶ್ಚಾರಿತ್ರವೆಂಬ ಚರಣವನ್ನು ಸುಜ್ಞಾನ ಶಸ್ತ್ರದಿಂದ ತುಂಡರಿಸಿದನೆಂಬುದೀಗ ಕುರುಡನ ಕಾಲ ಮುರಿದು ಎಂಬ ಶಬ್ದಕ್ಕರ್ಥ. ಇಂತಪ್ಪ ಸಕಲ ಪ್ರಪಂಚು ನಷ್ಟವಾಗಿ ಶ್ರೀಗುರು ಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾದ ನಿಜಶರಣನು ಭಿನ್ನಭಕ್ತಿ ಭಿನ್ನಮೋಕ್ಷವೆರಡನೂ ನಷ್ಟಮಾಡಿ ಶಿವಾದ್ವೈತ ಭಕ್ತಿಯಿಂದ ನಿತ್ಯವಾದ ನಿಜಮೋಕ್ಷವನೈದಿದನೆಂಬುದೀಗ ಭಕ್ತಿ ಮುಕ್ತಿ ಎಂಬುದ ಸತ್ತಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೫

ಹುತ್ತದ ಬಾಯಲ್ಲಿ ಲೆಕ್ಕವಿಲ್ಲದ ಹುಳ ಹುಟ್ಟಿ ಹುತ್ತ ಕತ್ತಿತ್ತು ನೋಡಾ. ಸರ್ಪನ ವಿಷದ ಹೊಗೆಯಿಂದ ಹುತ್ತ ಉರಿದು ಹುಳ ಸಾಯದು ನೋಡಾ. ಇಂತೀ ಪುತ್ತಳಿಯ ಹೊತ್ತು ನಷ್ಟವ ಕಾಣೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೪ ॥

ಟೀಕೆ:— ಪಂಚಭೂತಾಶ್ರಯವಾದ ದೇಹದ ನವದ್ವಾರಂಗಳಲ್ಲಿ ಜೀವತ್ರಯಂಗಳು ಮುಖ್ಯವಾದ ಸಕಲ ಕರಣಂಗಳ ದುರ್ವರ್ತನೆ ಉದಯಿಸಿತ್ತೆಂಬುದೀಗ ಹುತ್ತದ ಬಾಯಲ್ಲಿ ಲೆಕ್ಕವಿಲ್ಲದ ಹುಳು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ತಾಪತ್ರಯಾಗ್ನಿಯಿಂ ಬೇವುತ್ತಿಹುದೆಂಬುದೀಗ ಹುತ್ತ ಕತ್ತಿತ್ತು ನೋಡಾ ಎಂಬ ಶಬ್ದಕ್ಕರ್ಥ ಸರ್ಪನೆಂದೊಡೆ ಶಂಕಾ ವಿಷರೂಪವಾದ ಮನಸ್ಸು. ಅಂತಪ್ಪ ಮನಸ್ಸಿನ ಆಶೆ ರೋಷ ಹರುಷವೊದಲಾದವರಿಂದ ದೇಹ ದಗ್ಧವಾಗುತ್ತಿಹುದೆಂಬುದೀಗ ಸರ್ಪನ ವಿಷದ ಹೊಗೆಯಿಂದ ಹುತ್ತ ಉರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಜೀವತ್ರಯಂಗಳ ವರ್ತನೆ ಕೆಡದೆ ಇಹುದೆಂಬುದೀಗ ಹುಳ ಸಾಯದು ನೋಡಾ ಎಂಬ ಶಬ್ದಕ್ಕರ್ಥ. ಅಂತು ಜೀವನು ದೇಹಸಂಬಂಧಿಯಾಗಿಹನಲ್ಲದೆ ನಿವೃತ್ತಿ ಮುಖವನ್ನೆಯ್ದಿ ನಿಜವನರಿದುದಿಲ್ಲವೆಂಬುದೀಗ ಇಂತೀ ಪುತ್ತಳಿಯ ಹೊತ್ತು ನಷ್ಟವಕಾಣೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೫

ಹುಲಿಯ ಹುಲ್ಲೆ ನುಂಗಿತ್ತು. ಹುಲ್ಲೆಯ ಹುಲಿಯ ಮೊಲ ನುಂಗಿತ್ತು. ಆ ಮೊಲನ ಕೊಂದು ಮುಂವಣ ಕಂಡವ ಕೊಯ್ದು ತಿಂದವ ಮುಕ್ತ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೫ ॥

ಟೀಕೆ:— ವಿಶ್ವವ ಮುರಿದು ನುಂಗುತ್ತಿಹ ಕಾಲವ್ಯಾಘ್ರನ ಮಾಯೆ ಎಂಬ ಹರಿಣಿಯು ಅವಗ್ರಹಿಸಿಕೊಂಡಿರುತ್ತಿಹಳೆಂಬುದೀಗ ಹುಲಿಯ ಹುಲ್ಲೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಹರಿಣಿಯನ್ನು ಆ ಕಾಲವ್ಯಾಘ್ರನನ್ನು ಜೀವನು ಅವಗ್ರಹಿಸಿಕೊಂಡಿರುತ್ತಿಹನೆಂಬುದೀಗ ಹುಲ್ಲೆಯ ಹುಲಿಯ ಮೊಲ ನುಂಗಿತ್ತೆಂಬ ಶಬ್ದಕ್ಕರ್ಥ. ಶಿವಕೃಪೆಯಿಂದ ಸುಜ್ಞಾನೋದಯವಾದ ಶರಣನು ಸಕಲ ಪ್ರಪಂಚವ ನಿವೃತ್ತಿ ಮಾಡಲು ಜೀವಭಾವವಳಿದು ಶಿವಭಾವ ಘಟಿಸಿ ಶ್ರೀಗುರು ಕಾರುಣ್ಯದಿಂದ ಸರ್ವಾಂಗ ಲಿಂಗಸಂಬಂಧವಾಗಲು ಆತ್ಮವೊದಲಾದ ರೂಪಾದಿ ಪದಾರ್ಥವ ಜ್ಞಾನಾಗ್ನಿಯಲ್ಲಿ ಸಮರಸ ಪಾಕವಂ ಮಾಡಿ ಮಹಾಘನ ಲಿಂಗಮುಖಕ್ಕೆ ಸದ್ಭಕ್ತಿಯಿಂದರ್ಪಿಸಿ ಆ ಲಿಂಗಸುಖ ಪ್ರಸನ್ನ ಪ್ರಸಾದವ ಸ್ವೀಕರಿಸಿದ ಶರಣನೇ ಸದ್ಯೋನ್ಮುಕ್ತನೆಂಬುದೀಗ ಆ ಮೊಲನ ಕೊಂದು ಮುಂದಣ ಕಂಡವ ಕೊಯ್ದು ತಿಂದವ ಮುಕ್ತ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೬

ಹೆಣದ ಚಪ್ಪರ ಮಣಿ ಮಾಡದ ಮೇಲೆ ಸುತ್ತಿದವಾರುಸೀರೆ ಹೆಣಕ್ಕೆ ಹೊದಿಸಿದವು ಮೂರು ಸೀರೆ. ಮಣಿ ಮಾಡದ ಕಂಭಕ್ಕೆ ಸುತ್ತಿದವೆಂಟು ನಾನಾ ಚಿತ್ರದ ಬಣ್ಣದ ಸೀರೆ. ಒಪ್ಪಿತ್ತು ತುದಿಯಲ್ಲಿ ಹೊಂಗಳಸ. ಆ ಹೊಂಗಳಸದ ತುತ್ತತುದಿಯ ಕೊನೆಯ ಮೊನೆಯ ಮೇಲೆ ಬಿಳಿಯ ಗಿಳಿ ಬಂದು ಕುಳಿ

ತಿದ್ದಿತ್ತು. ಕಳಸ ಮುರಿಯಿತ್ತು. ಕಂಭ, ಮಾಡದ ಹಂಗ ಬಿಟ್ಟಿತ್ತು. ಕಂಭದ ಸೀರೆ ಒಂದೂ ಇಲ್ಲ. ಮಾಡಕ್ಕೆ ಹಾಕಿದ ಮಂಚದ ಕೀಲು ಬಿಟ್ಟವು. ಮಾಡದ ಹೆಣ ಸಂಚರಿಸಿಕೊಂಡು ಮುಂಚಿತ್ತು. ಹೆಣದಾತ್ಮ ಗಿಣಿಯು ಕೊಕ್ಕಿನ ತುದಿಗೆ ಅಂಗವಾಗಿದ್ದು ಅಗಣಿತವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೬ ॥

೮೧೭

ಟೀಕೆ:— ಜೀವನ್ಮೃತನಾದ ಆತ್ಮನ ದೇಹವು ಇಪ್ಪತ್ತುನಾಲ್ಕು ತತ್ವಯುಕ್ತವಾಗಿಹುದೆಂಬುದೀಗ ಹೆಣದ ಚಪ್ಪರ ಮಣಿಮಾಡದ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಷಡ್ಭೂತ ಸಂಬಂಧವಾಗಿಹವೆಂಬುದೀಗ ಮೇಲೆ ಸುತ್ತಿದವಾರುಸೀರೆ ಎಂಬ ಶಬ್ದಕ್ಕರ್ಥ. ತನುತ್ರಯಂಗಳೆ ಆ ಜೀವಂಗೆ ಆವರಣವಾಗಿಹವೆಂಬುದೀಗ ಹೆಣಕ್ಕೆ ಹೊದಿಸಿದವು ಮೂರು ಸೀರೆ ಎಂಬ ಶಬ್ದಕ್ಕರ್ಥ. ಷಡಾಧಾರ ಚಕ್ರಂಗಳಿಂದೊಪ್ಪುತ್ತಿದ್ದ ದೇಹಕ್ಕೆ ಆಧಾರವಾದ ಭಾವಸ್ಥಂಭಕ್ಕೆ ಷಡ್ವರ್ಣೋಪೇತವಾದ ಅಷ್ಟತನುಗಳು ಸಂಬಂಧವಾಗಿರುತ್ತಿಹವೆಂಬುದೀಗ ಮಣಿಮಾಡದ ಕಂಭಕ್ಕೆ ಸುತ್ತಿದವೆಂಟು ನಾನಾ ಚಿತ್ರದ ಬಣ್ಣದ ಸೀರೆ ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಸಂಬಂಧವಿಡಿದು ತನ್ನ ನಿಜವ ಮರೆದಿದ್ದ ಆತ್ಮಂಗೆ ಶಿವಕೃಪೆಯಿಂದ ಸುಜ್ಞಾನ ಪ್ರಭಾವಿಸಿತ್ತೆಂಬುದೀಗ ಒಪ್ಪಿತ್ತು ತುದಿಯಲ್ಲಿ ಹೊಂಗಳಸ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಾಗ್ರದಲ್ಲಿ ಮಾಂಗಲ್ಯಸ್ವರೂಪವಾದ ಶುಭ್ರವರ್ಣವುಳ್ಳ ಪರಮಹಂಸನು ಮೂರ್ತಿಗೊಂಡಿಹುದೆಂಬುದೀಗ ಆ ಹೊಂಗಳಸದ ತುತ್ತತುದಿಯ ಕೊನೆಯ ಮೊನೆಯ ಮೇಲೆ ಬಿಳಿಯ ಗಿಳಿ ಬಂದು ಕುಳಿತಿದ್ದಿತ್ತು ಎಂಬ ಶಬ್ದಕ್ಕರ್ಥ. ಆ ಪರಮ ಹಂಸನು ಶ್ರೀಗುರು ಕಾರುಣ್ಯದಿಂದ ಶರಣನ ಕರಸ್ಥಲಕ್ಕೆ ಇಷ್ಟಲಿಂಗಸ್ವರೂಪವಾಗಿ ಬಂದು ಸರ್ವಾಂಗವನವಗ್ರಹಿಸಲು ಆ ಶಿವಜ್ಞಾನ ಪ್ರಕಾಶವು ಚಿದ್ಘನ ಲಿಂಗದಲ್ಲಿಡಗಿತ್ತೆಂಬುದೀಗ ಕಳಸ ಮುರಿಯಿತ್ತು ಎಂಬ ಶಬ್ದಕ್ಕರ್ಥ. ಆ ಭಾವಸ್ಥಂಭಕ್ಕೆ ದೇಹಾದಿ ಪ್ರಪಂಚವಿಲ್ಲದೆ ಹೋಯಿತ್ತೆಂಬುದೀಗ ಕಂಭ ಮಾಡದ ಹಂಗ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಆ ಭಾವಸ್ಥಂಭದಲ್ಲಿದ್ದ ಅಷ್ಟತನುಗಳೆಲ್ಲವು ನಷ್ಟವಾದವೆಂಬುದೀಗ ಕಂಭದ ಸೀರೆ ಒಂದೂ ಇಲ್ಲ ಎಂಬ ಶಬ್ದಕ್ಕರ್ಥ. ಮಾಡವೆಂದರೆ ತನು. ಮಂಚವೆಂದಡೆ ಚತುಷ್ಕರಣಂಗಳು. ಕೀಲೆಂದಡೆ ಗುಣತ್ರಯಂಗಳು. ಇಂತಪ್ಪ ಸಕಲ ತತ್ವಂಗಳೆಲ್ಲ ನಷ್ಟವಾದವೆಂಬುದೀಗ ಮಾಡಕ್ಕೆ ಹಾಕಿದ ಮಂಚದ ಕೀಲು ಬಿಟ್ಟವು ಎಂಬ ಶಬ್ದಕ್ಕರ್ಥ. ಆ ದೇಹದಲ್ಲಿದ್ದ ಆತ್ಮನು ನಿವೃತ್ತಿಮಾರ್ಗದಿಂದ ಸಜ್ಜೀವ ಸ್ವರೂಪವನೈದಿ ಚಿದ್ಘನ ಲಿಂಗದಲ್ಲಿ ಸಮರಸವಾಗಿ ಸಕಲಪ್ರಪಂಚ ಮೀರಿತ್ತೆಂಬುದೀಗ ಮಾಡದ ಹೆಣ ಸಂಚರಿಸಿಕೊಂಡು ಮುಂಚಿತ್ತು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳೆಲ್ಲ ನಿಷ್ಪತ್ತಿಯಾಗಿದ್ದ ಚಿದಾತ್ಮನು ಪರಮಹಂಸನ ಶಿವಭಾವಾಗ್ರದಲ್ಲಿ ತೋರುವ ನಿಷ್ಕಲ ಶಿವತತ್ವಕ್ಕೆ

ಚಿತ್ಪ್ರಭಾವಸ್ವರೂಪನಾಗಿದ್ದನೆಂಬುದೀಗ ಹೆಣದಾತ್ಮ ಗಿಣಿಯ ಕೊಕ್ಕಿನ ತುದಿಗೆ ಅಂಗವಾಗಿ ಇದ್ದು ಆಗಣಿತವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೯೭

ಹೊಲದವರೆಯ ನೆಟ್ಟು ಸೊಡಗೆಯು ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ. ಬಿತ್ತವಟ್ಟಕ್ಕೆ ಮೊದಲೆ ಕೊಳೆ ಹೋಯಿತ್ತು. ಹೊಲದವನಿಗೆ ಒಮ್ಮನವಾದುದಿಲ್ಲ. ಇಮ್ಮನದ ಸೊಡಗೆಯು ಮೆದ್ದು ಕರ್ಮಕ್ಕೀಡಾದವರ ನುಡಿಯೆಂದಡೆ ಎನ್ನ ಹಮ್ಮಿಗನೆಂಬರು. ಅವರಿಗೆ ಹಾಕಿದ ಗಾಣ ಸಾಕು ನಿಲ್ಲು ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೭ ॥

ಟೀಕೆ:— ದೇಹವೆಂಬ ಕ್ಷೇತ್ರವೀಗ ಹೊಲನೆಂಬ ಶಬ್ದಕ್ಕರ್ಥ. ಇಂದ್ರಿಯಂಗಳಲ್ಲಿ ತೋರುವ ವಿಷಯ ಪದಾರ್ಥವನ್ನು ಲಿಂಗಾರ್ಪಿತ ಮಾಡದೆ ಭೋಗಿಸುವುದು ಅಲ್ಲವೆಂಬುದೀಗ ಹೊಲದವರೆಯ ನೆಟ್ಟು ಸೊಡಗೆಯು ಸುಲಿದಲ್ಲಿ ಎಂಬ ಶಬ್ದಕ್ಕರ್ಥ. ಆ ವಿಷಯಂಗಳನ್ನು ಜೀವಭಾವದಿಂದ ಭೋಗಿಸಿದ ಕಾರಣ ಲಿಂಗಾರ್ಪಿತವಿಲ್ಲದೆ ಶಿವಪ್ರಸಾದ ಸಾಧ್ಯವಾಗದಾಗಿ ನಿಜಮೋಕ್ಷ ನಷ್ಟವಾಯಿತ್ತು ಆತ.ಂಗೆಂಬುದೀಗ ತಳಲು ಬಲಿದು ಒಡೆದುದಿಲ್ಲ ಎಂಬ ಶಬ್ದಕ್ಕರ್ಥ. ಅಂತಪ್ಪ ಮೋಕ್ಷವನ್ನೈದುವದಕ್ಕೆ ಮೊದಲೆ ಆತ್ಮನು ಅಜ್ಞಾನಕ್ಕೊಳಗಾದನೆಂಬುದೀಗ ಬಿತ್ತವಟ್ಟಕ್ಕೆ ಮೊದಲೆ ಕೊಳೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಹೊಲವೆಂದಡೆ ದೇಹ. ಅಂತಪ್ಪ ದೇಹ ಸಂಬಂಧಿಯಾದ ಜೀವನ ಮನಸ್ಸು ನೀ ನಾನೆಂಬ ಸಂಕಲ್ಪಭಾವದಿಂದ ಇರುತ್ತಿಹುದಲ್ಲದೆ ಉನ್ಮನೀತತ್ವಸ್ವರೂಪವನ್ನೈದುದಿಲ್ಲವೆಂಬುದೀಗ ಹೊಲದವನಿಗೆ ಒಮ್ಮನವಾದುದಿಲ್ಲ ಎಂಬ ಶಬ್ದಕ್ಕರ್ಥ. ಆ ಸಂಕಲ್ಪಭಾವದಿಂದ ಜೀವನು ಸಕಲವಿಷಯಂಗಳ ಭುಂಜಿಸಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮತ್ರಯಕ್ಕೊಳಗಾದನೆಂಬುದೀಗ ಇಮ್ಮನ ಸೊಡಗೆಯು ಮೆದ್ದು ಕರ್ಮಕ್ಕೀಡಾದವರ ಎಂಬ ಶಬ್ದಕ್ಕರ್ಥ. ಅಂತಪ್ಪ ಕರ್ಮಕಾಂಡಿಗಳ ಕೂಡಿ ತನ್ನ ಲಿಂಗಾಂಗಸಮರಸಾನಂದವ ಸುಖವ ಸುಜ್ಞಾನ ಬೋಧೆಯ ಬೋಧಿಸು ಎಂದೊಡೆ ಎನ್ನನು ಅಹಂಕಾರಿ ಎಂದಡೂ ಎನಲಿ, ಆ ಕರ್ಮಕಾಂಡಿಗಳಿಗೆ ಶರಣನು ಬೋಧಿಸನೆಂಬುದೀಗ ನುಡಿ ಎಂದಡೆ ಎನ್ನ ಹಮ್ಮಿಗನೆಂಬರು ಎಂಬ ಶಬ್ದಕ್ಕರ್ಥ. ಆ ಕರ್ಮಕಾಂಡಿಗಳೆಲ್ಲರು ಮಚ್ಚಿನ ಮೋಹವೆಂಬ ಗಾಣಕ್ಕೆ ಸಿಲುಕಿದರೆಂಬುದೀಗ ಅವರಿಗೆ ಹಾಕಿದ ಗಾಣ ಸಾಕು ನಿಲ್ಲು ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೯೮

ಹೊಲನ ಗೆಯ್ದು ಮನೆಗೆ ಬರಲಾಗಿ ನಿಲುಕಿ ನೋಡಿ ಕಂಡೆನು ಮನೆಯ ಒಡತಿಯ. ಎನ್ನ ಕಂಡು ಹಿಡಿದಿದ್ದ ಒನಕೆಯ ಮಡಗಿ ಅಡಬೇಕೆಂದು ಹೋಗ

ಲಾಗಿ, ಅಡುವ ಗಡಿಗೆಯು ಕಾಣದೆ ತಡವರಿಸಿ ನೋಡುತ್ತಿದ್ದಳಯ್ಯಾ ಎನ್ನ ಕಂಡು ಕಡುಗಲಿಗಂಜಿ. ಒರಳೊಳಗೆ ಅಕ್ಕಿ ಇಲ್ಲ. ಮಾಡುವುದಕ್ಕೆ ಮೊರ ನಿಲ್ಲ. ತೊಳೆವುದಕ್ಕೆ ನೀರಿಲ್ಲ. ಇಂತಿವಳ ಮನೆವಾರ್ತೆಯ ಕಂಡು ಒಗತನ ಗೆಟ್ಟು ಬದುಕು ಬೇಡ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೮ ॥

ಟೀಕೆ: — ಶಿವಜ್ಞಾನೋದಯವಾದ ಶರಣನು ಶ್ರೀಗುರು ಕಾರುಣ್ಯದಿಂದ ತನ ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಸಂಬಂಧವಾಗಲು ಕ್ರಿಯೆ ಜ್ಞಾನ ಭಾವಾಚರಣೆ ಯಿಂದ ಆಚರಿಸುತ್ತಿದ್ದನೆಂಬುದೀಗ ಹೊಲನ ಗೆಯ್ದು ಎಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರಿಯಾ ಭಾವನಿಡಿದಾಚರಿಸುತ್ತಿದ್ದ ಶರಣನು ತನ್ನ ನಿಜಾನುಭಾವಾಂತರದಲ್ಲಿ ಮೂರ್ತಿಗೊಂಡಿದ್ದ ಜ್ಞಾನ ಶಕ್ತಿಯನ್ನು ಜ್ಞಾನದೃಷ್ಟಿಯಿಂದ ಕಂಡನೆಂಬುದೀಗ ಮನೆಗೆ ಬರಲಾಗಿ ಸಿಲುಕಿ ನೋಡಿ ಕಂಡೆನು ಮನೆಯ ಒಡತಿಯು ಎಂಬ ಶಬ್ದ ಕ್ಕರ್ಥ, ಅಂತಪ್ಪ ಸುಜ್ಞಾನ ಸ್ವರೂಪನಾದ ಶರಣನ ಜ್ಞಾನಶಕ್ತಿಯು ಕಂಡು ಏಕಾ ಗ್ರಹಸ್ತದಲ್ಲಿ ಹಿಡಿದಿಪ್ಪ ಸದ್ಭಾವವೆಂಬ ಒನಕೆಯು ಆ ಚಿತ್ಪ್ರಕಾಶವಾದ ಭಾವಲಿಂಗ ದಲ್ಲಿ ನಿಷ್ಪತ್ತಿಯನೈದಿಸಿದಳೆಂಬುದೀಗ ಎನ್ನ ಕಂಡು ಹಿಡಿದಿದ್ದ ಒನಕೆಯು ಮುಡಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಶಕ್ತಿಯು ಆತ್ಮಮೊದಲಾದ ಸಕಲ ತತ್ವಂಗ ಳನು ಜ್ಞಾನಾಗ್ನಿಯಲ್ಲಿ ಸಮರಸಪಾಕವ ಮಾಡಿಹನೆಂದಡೆ ಶರಣನ ಚಿದ್ಬ್ರಾಂಡವಾದ ಚಿದಂಗವು ಚಿದ್ಘನಲಿಂಗದಲ್ಲಿ ಸಮರಸವಾದ ಬಳಿಕ ಜ್ಞಾನಾಗ್ನಿಯಿಂದ ದಹಿಸಿ ಲಿಂಗಾ ರ್ಪಿತವ ಮಾಡಿಹೆನೆಂಬ ಕ್ರಿ ನಷ್ಟವಾಯಿತ್ತೆಂಬುದೀಗ ಆಡಬೇಕೆಂದು ಹೋಗಿ ಆಡುವ ಗಡಿಗೆಯು ಕಾಣದೆ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ನೈಷ್ಠಿಕಾ ಭಕ್ತಿಯು ನಿರ್ಭರವನು ಜ್ಞಾನ ಶಕ್ತಿ ಕಂಡು ಅತ್ಯಂತ ಭಯ ಭೀತಿ ಭೃತ್ಯಾ ಚಾರದಿಂದ ಚಿದಂಗವು ಚಿದ್ಘನಲಿಂಗದಲ್ಲಿ ಸಮರಸವಾದ ಬಳಿಕ ಇನ್ನು ಜ್ಞಾನವು ಮುಂದುಗೊಂಡು ಅಖಂಡ ಜ್ಞಾನದೃಕ್ಕಿನಿಂದ ನಿರೀಕ್ಷಿಸುತ್ತಿದ್ದಳೆಂಬುದೀಗ ತಡವ ರಿಸಿ ನೋಡುತ್ತಿದ್ದಳಯ್ಯಾ ಎನ್ನ ಕಂಡು ಕಡುಗಲಿಗಂಜಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ, ಒರಳೆಂದಡೆ ಮನಸ್ಸು, ಅಂತಪ್ಪ ಉನ್ಮನೀಸ್ವರೂಪವಾದ ಮನಸ್ಸು ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ಸಮರಸವಾದ ಬಳಿಕ ಮನಕ್ಕಿದಿ ರಿಟ್ಟು ಲಿಂಗವಿಲ್ಲ, ಲಿಂಗಕ್ಕಿದಿರಿಟ್ಟು ಮನವಿಲ್ಲವೆಂಬುದೀಗ ಒರಳೊಳಗೆ ಅಕ್ಕಿ ಇಲ್ಲ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜ್ಞಾನ ಕ್ರಿಯಾಚಾರವು ಚಿದ್ಘನಲಿಂಗ ದಲ್ಲಿ ನಿಷ್ಪತ್ತಿಯಾದವೆಂಬುದೀಗ ಮಾಡುವುದಕ್ಕೆ ಮೊರನಿಲ್ಲ ಎಂಬ ಶಬ್ದಕ್ಕರ್ಥ. ಅಂತು ಶರಣನ ಸದ್ವಿವೇಕರೂಪವಾದ ಪರಮಾನಂದ ಜಲವು ಚಿದಗ್ನಿ ಸ್ವರೂಪವಾದ ಚಿದ್ಘನಲಿಂಗದಲ್ಲಿ ಸಮರಸವಾದವೆಂಬುದೀಗ ತೊಳೆವುದಕ್ಕೆ ನೀರಿಲ್ಲ ಎಂಬ ಶಬ್ದ ಕ್ಕರ್ಥ. ಇಂತಪ್ಪ ಜ್ಞಾನ ಶಕ್ತಿಯು ಅಭಿನ್ನಕ್ರಿಯಾಚಾರದ ಸಮರಸದ ಕೂಟವ ಕಂಡು, ಶರಣ ಸತಿ ಲಿಂಗ ಪತಿ ಭಾವವಳಿಯಿತ್ತೆಂಬುದೀಗ ಇಂತಿವಳ ಮನೆಯವಾ

ತೇರಿಯ ಕಂಡು ಒಗತನಗೆಟ್ಟ ಎಂಬ ಶಬ್ದಕ್ಕರ್ಥ. ಸತಿ ಪತಿ ಭಾವ ನಷ್ಟವಾದ ಶರಣನ ಸರ್ವಾಚಾರಸಂಪತ್ತು ಮುಖ್ಯವಾದ ಸಕಲ ಜ್ಞಾನ ಕ್ರಿಯೆಗಳು ಮಹಾಘನ ಲಿಂಗದಲ್ಲಿ ನಿಷ್ಪತ್ತಿಯಾದ ಬಳಿಕ ಆಚರಿಸಲಿಲ್ಲ, ಆ ಆಚರಣೆ ಬೀಗಿತ್ತೆಂಬುದೀಗ ಬದುಕು ಬೇಡ ಎಂದೆ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮೧೯

ಹೊಲೆಯ ಕುಲಜನಾದುದ ಕಂಡೆ. ಗುರುಶಿಷ್ಯಂಗೆ ಶಿಷ್ಯನಾದುದ ಕಂಡೆ. ಪೂಜಿಸುವ ತಮ್ಮಡಿ ಲಿಂಗವಾದುದ ಕಂಡೆ. ಅರಸು ಬಂಟನ ಕೆಳಗೆ ಹರಿದಾಡುವದ ಕಂಡೆ. ಗಂಡನ ಮುಂದೆ ಹೆಂಡತಿ ಮತ್ತೊಬ್ಬನ ಸಂಗವ ಮಾಡುವದ ಕಂಡೆ. ಇಂತಿವೆಲ್ಲವನು ನಿಂದು ನೋಡುತ್ತಿರಲಾಗಿ, ನೀರು ಬೆಂಕಿಯ ಸುಟ್ಟು ಮರದೊಳಗಡಗಿತ್ತು, ಆ ಮರದ ತೆಪ್ಪದಲ್ಲಿ ಈ ಧರೆಯುವರು ಹೋಗಿ ಆಚೆಯ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕಡನ ಕೊಡಲಾಗಿ ಕೊಂಡವ ಸತ್ತ ಕೊಟ್ಟವ ಕೆಟ್ಟ. ಆ ಭಂಡ ಎಲ್ಲಿ ಹೋಯಿತ್ತೆಂದರಿಯೆ. ಆ ಬೆಂಬಳಿಯ ಬಲ್ಲಡೆ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ॥ ೧೫೯ ॥

ಟೀಕೆ:— ಶಿವಾಂಶಿಕನಾದ ಆತ್ಮನು ಸರ್ವಸೂತಕವನೊಡನೆ ಕೂಡಿ ದೇಹ ಸಂಬಂಧಿಯಾಗಿರ್ದನೆಂಬುದೀಗ ಹೊಲೆಯನೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಸಂಸ್ಕಾರದಿಂದ ಸುಜ್ಞಾನೋದಯವಾಗಿ ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ದೀಕ್ಷಾತ್ರಯಂಗಳಿಂ ತನುತ್ರಯಂಗಳ ಪೂರ್ವಾಶ್ರಯಂಗಳ ನಿವೃತ್ತಿಯ ಮಾಡಿ ತ್ರಿವಿಧಲಿಂಗ ಸಾಹಿತ್ಯವ ಮಾಡಲು ಶಿವಸತ್ಕುಲಜನಾದನೆಂಬುದೀಗ ಹೊಲೆಯ ಕುಲಜನಾದುದ ಕಂಡೆನೆಂಬ ಶಬ್ದಕ್ಕರ್ಥ. ಅರುವೆ ಗುರು ಆಚಾರವೆ ಶಿಷ್ಯನಾದಕಾರಣ ಅಂತಪ್ಪ ಜ್ಞಾನಗುರು ಆಚಾರಸ್ವರೂಪವಾದ ಶಿಷ್ಯಂಗೆ ಚಿದಂಗ ಸ್ವರೂಪವಾದನೆಂಬುದೀಗ ಗುರು ಶಿಷ್ಯಂಗೆ ಶಿಷ್ಯನಾದುದ ಕಂಡೆನೆಂಬ ಶಬ್ದಕ್ಕರ್ಥ. ತನ್ನಾಚಾರಾಂಗದಲ್ಲಿ ಸಂಬಂಧವಾದ ಇಷ್ಟಲಿಂಗವೆ ಚೈತನ್ಯಸ್ವರೂಪವೆಂದರಿದು ಅಭಿನ್ನಜ್ಞಾನಕ್ರಿಯೆಯಿಂದಾಚರಿಸಿದ ಶರಣನೆ ಪ್ರತ್ಯಕ್ಷ ಪರಬ್ರಹ್ಮಸ್ವರೂಪ ವೆಂಬುದೀಗ ಪೂಜಿಸುವ ತಮ್ಮಡಿ ಲಿಂಗವಾದುದ ಕಂಡೆನೆಂಬ ಶಬ್ದಕ್ಕರ್ಥ. ಕರ್ತೃವಾದ ಮಹಾಘನಲಿಂಗವು ಭೃತ್ಯನಾದ ಭಕ್ತನ ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ಷಡ್ವಿಧವಿಷಯ ಪದಾರ್ಥವ ಕೈಕೊಂಡು ಹರುಷಾನಂದದಲ್ಲಿರುತ್ತಿರ್ದನೆಂಬುದೀಗ ಅರಸು ಬಂಟನ ಕೆಳಗೆ ಹರಿದಾಡುವದ ಕಂಡೆನೆಂಬ ಶಬ್ದಕ್ಕರ್ಥ. ಗುರುವೇ ಪತಿ ಶಿಷ್ಯನೇ ಸತಿಯಾದ ಕಾರಣ ಅಂತಪ್ಪ ಶಿಷ್ಯನು ಪರಶಿವಲಿಂಗದಲ್ಲಿ ಸಂಬಂಧ ಸಂಗವ ಮಾಡುತ್ತಿರ್ದನೆಂಬುದೀಗ ಗಂಡನ ಮುಂದೆ ಹೆಂಡತಿ ಮತ್ತೊಬ್ಬನ ಸಂಗವ ಮಾಡುವದ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧ ಅವಿರಳ

ಸಮರಸಾನಂದದ ಸುಖವನು ಸುಜ್ಞಾನ ದೃಷ್ಟಿಯಿಂದ ನೋಡುತ್ತಿರ್ದ ಶರಣನೆಂಬುದೀಗ ಇಂತಿವೆಲ್ಲವನು ನಿಂದು ನೋಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ನೀರೆಂದೊಡೆ ಸದ್ವಿವೇಕ ಸ್ವರೂಪವಾದ ಮನಸ್ಸು. ಅಂತಪ್ಪ ಮನಸ್ಸು ಮಹಾಜ್ಞಾನಾಗ್ನಿಯನವಗ್ರಹಿಸಿತ್ತೆಂಬುದೀಗ ನೀರು ಬೆಂಕಿಯ ಸುಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಪರಬ್ರಹ್ಮದಲ್ಲಿ ಲೀನವಾಯಿತ್ತೆಂಬುದೀಗ ಮರದೊಳಗಡಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮಸ್ವರೂಪವಾದ ಸದ್ವಿವೇಕ ವೃಕ್ಷದಲ್ಲಿ ಕೂಡಿರ್ದ ಸರ್ವಾಚಾರ ಸಂಪತ್ತೆಂಬುದೀಗ ಆ ಮರದ ತೆಪ್ಪದಲ್ಲಿ ಎಂಬ ಶಬ್ದಕ್ಕರ್ಥ. ಮಾರ್ಗಕ್ರೀಯಲ್ಲಿ ಸಂಬಂಧವಾದ ಭಕ್ತ ಮಾಹೇಶ್ವರ ಪ್ರಸಾದಿಗಳೆಂಬುದೀಗ ಈ ಧರೆಯವರು ಹೋಗಿ ಎಂಬ ಶಬ್ದಕ್ಕರ್ಥ. ಮೀರಿದ ಕ್ರಿಯಾಚಾರದಲ್ಲಿ ಸಂಬಂಧವಾದ ಪ್ರಾಣಲಿಂಗಿ ಶರಣೈಕ್ಯರೆಂಬ ತ್ರಯಾಂಗದ ಮಧ್ಯದಲ್ಲಿರ್ದ ಗುರುಲಿಂಗಜಂಗಮ ಪಾದೋದಕ ಪ್ರಸಾದ ಮುಖ್ಯವಾದ ಪಂಚಾಚಾರವನ್ನು ಬಹಿರಂಗದ ಸ್ಥೂಲತತ್ವದಲ್ಲಿ ಸಂಬಂಧವ ಮಾಡಿದ ಶರಣನೆಂಬುದೀಗ ಈ ಧರೆಯವರು ಹೋಗಿ ಆಚೆಯ ಧರೆಯ ಬೆನಹಾರವ ತಂದು ಮತ್ತೆ ಈಚೆಯಲ್ಲಿ ಕಡನ ಕೊಡಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸರ್ವಾಚಾರ ಸಂಪತ್ತು ವಿಡಿದಾಚರಿಸಿದ ಶರಣನು ಪ್ರತ್ಯಕ್ಷ ಪರಬ್ರಹ್ಮಸ್ವರೂಪನಾದನೆಂಬುದೀಗ ಕೊಂಡವ ಸತ್ತನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗಸಮರಸೈಕ್ಯವನು ಸುಜ್ಞಾನ ಬೋಧೆಯಿಂ ತೋರಿದ ಪರಿಪೂರ್ಣ ಜ್ಞಾನ ಗುರುತತ್ವವು ಶಿಷ್ಯನ ನಿಜಾಂತರಂಗದಲ್ಲಿ ನಿಷ್ಪತ್ತಿಯಾದುದೆಂಬುದೀಗ ಕೊಟ್ಟವ ಕೆಟ್ಟನೆಂಬ ಶಬ್ದಕ್ಕರ್ಥ. ಇಂತು ಇಷ್ಟಪ್ರಾಣಭಾವಲಿಂಗದಲ್ಲಿ ಕ್ರಿಯಾ ಜ್ಞಾನ ಭಾವ ನಿಷ್ಪತ್ತಿಯಾದ ಬಳಿಕ ಶರಣಂಗಾಚರಣೆ ಬೀಗಿತ್ತೆಂಬುದೀಗ ಆ ಭಂಡ ಎಲ್ಲಿ ಹೋಯಿತ್ತೆಂದರಿಯೆ ಆ ಬೆಂಬಳಿಯ ಬಲ್ಲಡೆ ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.



# ಮೋಳಿಗೆ ಮಾರಯ್ಯನ ರಾಣಿ ಮಹಾದೇವಿಯ

## ವಚನಗಳು

ಆದೇತಕೆ ಅಯ್ಯಾ ಶಿವನೊಳಗೆ ಕೂಟಸ್ಥನಾದೆಹೆನೆಂಬ ಹಲುಬಾಟ? ಇದು ಭಕ್ತಿಸತ್ವದ ಆಟವಲ್ಲ. ಇನ್ನಾರ ಕೇಳಿ ಮತ್ತಿನ್ನಾರಿಗೆ ಹೇಳುವೆ ನೀ ಮಾಡುವ ಮಾಟ? ಮುನ್ನ ನೀನಾರೆಂದಿದ್ದೆ ಹೇಳಾ. ಆ ಭಾವವನರಿದು ನಿನ್ನ ನೀನೇ ತಿಳಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧ ॥

ಅನಾಚಾರವನಳವಟ್ಟು ಗುರುವನರಿಯಬೇಕು. ಅನಾಮಿಕನಾಗಿ ಲಿಂಗವ ಗ್ರಹಿಸಬೇಕು. ಸರ್ವಪಾತಕ ಪ್ರಸನ್ನನಾಗಿ ಜಂಗಮವ ಭಾವಿಸಬೇಕು. ಇಂತೀ ತ್ರಿವಿಧ ಪಾತಕಂಗಳಲ್ಲಿ ಪವಿತ್ರಂಗಳನರಿದು, ಇರವಿನಲ್ಲಿ ಇರವ ನಿಂಬಿಟ್ಟು, ಉರಿ ಎಣ್ಣೆಯ ವೇಧಿಸಿ ಉರಿದು, ಯೋಗ ನಿಂದಲ್ಲಿ ಮಾಡುವ ಕ್ರಿ ಮಾಡಿಸಿಕೊಂಬ ವಸ್ತು ಉಭಯ ನಷ್ಟವಾಹನ್ನಕ್ಕ ನೀ ಎನ್ನಲ್ಲಿ ನಾ ನಿನ್ನಲ್ಲಿ ಎಂಬನ್ನಕ್ಕ ಅದು ಭಿನ್ನಭಾವ. ಈ ಉಭಯದ ಗನ್ನಬೇಡ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ಎನ್ನಲ್ಲಿ ತಲ್ಲೀಯವಾಗಿರು ॥ ೨ ॥

ಅಂಗದಲ್ಲಿ ಲಿಂಗ ವೇಧಿಸಿ ಪ್ರಾಣಕ್ಕೆ ಸಂಬಂಧವ ಮಾಡಬೇಕೆಂದಲ್ಲಿ ಅಂಗಕ್ಕೂ ಪ್ರಾಣಕ್ಕೂ ಲಿಂಗ ವೇಧಿಸುವುದಕ್ಕೆ ಹಾದಿಯ ಹೊಲಬು ಅದಾವ ಠಾವಿನಲ್ಲಿ ವೇಧಿಸುವುದು ಹೇಳಯ್ಯಾ ಆ ಅಂಗ ನೀರ ಬಾಗಿಲ ನೆಲನೆ? ಮೆಳೆಯ ಸಪರಿನ ಹಾದಿಯೆ? ಹೋಹ ಹೊಲಬಿನ ಪಥವೆ? ಈ ಅಪ್ರಮಾಣ ವಪ್ಪ ಲಿಂಗವ ಚಿತ್ತದ ಭೇದದಿಂದರಿತು ಆತ್ಮನ ದೃಷ್ಟದಲ್ಲಿ ಲಕ್ಷಿಸಿ ಇದಿರಿಟ್ಟು ಕರದ ಇಷ್ಟದಲ್ಲಿ ನಿರೀಕ್ಷಣೆಯಿಂದ ನಿಜವಸ್ತುವ ನಿಕ್ಷೇಪಿಸಿ ಬೈಚಿಟ್ಟಲ್ಲಿ ಅಂಗಕ್ಕೂ ಪ್ರಾಣಕ್ಕೂ ಬೇರೆಡೆ ಇಲ್ಲ. ಲಿಂಗವಿಪ್ಪುದೆರಡಿಲ್ಲ. ಇದು ಕ್ರಿಯಾಲೇಪ ಸ್ಥಲ. ಇದು ಸದ್ಭಾವ ಸಂಬಂಧ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೩ ॥

ಅಂಗದ ಲಿಂಗವ ಆತ್ಮನಲ್ಲಿ ವೇಧಿಸಬೇಕೆಂಬುದಕ್ಕೆ ವಿವರ: - ತಿಲರಾಶಿಯಲ್ಲಿ ಸುಗಂಧದ ಕುಸುಮವ ದ್ವಂದ್ವವ ಮಾಡಿ ಕೂಡಿ ಇರಿಸಲಿಕ್ಕಾಗಿ ಆ ಗಂಧ ತಿಲದಂಗವ ವೇಧಿಸಿ, ಆ ತಿಲರಸವ ಭೇದಿಸದಂತೆ ಆಗಬಲ್ಲಡೆ, ಆ ಲಿಂಗ ಆತ್ಮನಲ್ಲಿ ವೇಧಿಸಲಿಕ್ಕೆ ಕುಸುಮದ ಅಂಗ, ತಿಲದ ಪಿಪ್ಪಿ ಹೊರಗಾದುದನರಿದು ನಿಶ್ಚಯವ ಕಂಡಲ್ಲಿ ಹೊರಗಣ ಪೂಜೆ, ಒಳಗಣ ದಿವ್ಯಪ್ರಕಾಶ ವಸ್ತುಭಾವದ ಕೂಟ ಇಷ್ಟವಿಲ್ಲದಿಲ್ಲ. ಇದ ಮೀರಿ ಕಾಬ ನಿಜಲಿಂಗೈಕ್ಯರು ನೀವೇ ಬಲ್ಲಿರಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ನಾ ಮುಳುಗಿದುದೆ ಸಮುದ್ರ ॥ ೪ ॥

ಅರ್ಥಃ— ಎಳ್ಳು ಪುಷ್ಪಂಗಳು ಸಂಯೋಗವಾಗಿ ಎರಡರ ಪಿಪ್ಪೆಯು ಕಳೆದಡೆಯೂ ಪುಷ್ಪಗಂಧ ಎಳ್ಳಿನ ತೈಲವ ಕೂಡಿ ವೇಧಿಸಿ ಬಡಿಪ್ಪಂತೆ, ಇಷ್ಟಲಿಂಗದಲ್ಲಿ ಶಿವಭಾವ ಘಟಿಸಿ ಲಿಂಗಪೂಜಾಕ್ರಿಯೆಯ ಬಿಡದಿರ್ದಡೆ ಅಂತರಂಗವೆಲ್ಲ ಲಿಂಗಪ್ರಕಾಶವೇ ತುಂಬಿ, ಆತ್ಮನಲ್ಲಿ ಲಿಂಗಕಳೆ ಹಿಂಗದೆ ಬೆಳಗುತ್ತಿಹುದು. ಅಂತಪ್ಪ ಶರಣನ ಅಂಗ ಲಿಂಗ ತೋರಿಕೆಯಳಿದು ಹೋದರೆಯೂ ಲಿಂಗ ಕಳೆ ಆತ್ಮನಲ್ಲಿ ಯೋಗ್ಯವಾಗಿಪ್ಪ ಕಾರಣ, ಲಿಂಗದಲ್ಲಿ ಶರಣನು ಮುಕ್ತನು. ಅಂತಪ್ಪ ಇಷ್ಟಲಿಂಗದಲ್ಲಿ ಶಿವಭಾವ ಘಟಿಸಲಿಲ್ಲದಾತಂಗೆ ಮುಕ್ತಿ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

ಅಂಗಕ್ರಿಯೆಯನರಿವಲ್ಲಿ ಸ್ಥಾಣುವಿನ ಬಾಯ ತಿಲದಂತೆ, ಆತ್ಮನ ಕಳೆಯ ತಿಳಿದಲ್ಲಿ ಆ ಶಿಲೆಯೊಳಗಿರ್ದ ಬಿಂದು ಒಲವರದಿಂದ ಜಾರುವಂತೆ, ಆ ಅರಿವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡ ನೋಡಲಿಕ್ಕೆ ನೀರಾದಂತೆ ಇರಬೇಕು. ಕಾಯವಶದಿಂದ ಕರ್ಮವ ಮೀರಿ, ಕರ್ಮವಶದಿಂದ ಧರ್ಮವಶದಿಂದ ವರ್ಮಗತನಾದಲ್ಲಿ, ಅದೇ ಕಾಯುವೆರಸಿ ಅಯ್ದಿದ ಕೈಲಾಸ. ಆ ಭಾವವ ನಿಮ್ಮಲ್ಲಿ ನೀವೆ ತಿಳಿದುಕೊಳ್ಳಿ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫ ॥

ಅರ್ಥಃ— ಎಳ್ಳನು ಗಾಣದಲ್ಲಿಕ್ಕಿ ಕ್ರೀಯಿಂದ ಬಾಧಿಸಿದಡೆ ತಿಲದಲ್ಲಿರ್ದ ತೈಲ ಪ್ರತ್ಯಕ್ಷವಾಗಿ ಕೈ ಸಾರುವಂತೆ, ಆತ್ಮಾಂಗವ ಶಿವಕ್ರೀಯಿಂದ ಭಾಧಿಸಿದಡೆ ಆತ್ಮಾಂತರ್ಗತವಾಗಿರ್ದ ಚಿಲ್ಲಿಂಗವು ಪ್ರತ್ಯಕ್ಷವಾಗಿ ಕರಸ್ಥಲದಲ್ಲಿ ಕಾಣಬಹುದೆಂಬುದೀಗ ಅಂಗಕ್ರಿಯೆಯನರಿದಲ್ಲಿ ಸ್ಥಾಣುವಿನ ಬಾಯ ತಿಲದಂತೆ ಎಂಬ ಶಬ್ದಕ್ಕರ್ಥ. ಚಂದ್ರಕಾಂತಶಿಲೆಯಲ್ಲಿರ್ದ ಅಮೃತಬಿಂದು ಚಂದ್ರೋದಯಕ್ಕೊಸರುವಂತೆ ಆ ಇಷ್ಟಲಿಂಗ ಕಳೆಯನು ತನ್ನಾತ್ಮಕಳೆ ಎಂದು ತಿಳಿದ ಶಿವಜ್ಞಾನೋದಯವಾಗಿ ಆ ಇಷ್ಟಲಿಂಗದ ಕಳೆ ಬಲಿದು, ಸರ್ವಾಂಗವ ತುಂಬಿ ಲಿಂಗಾನಂದ ಜಲ ಉಕ್ಕುತ್ತಿಹು

ದೆಂಬುದೀಗ ಆತ್ಮನ ಕಳೆಯು ತಿ[illegible]ದಲ್ಲಿ ಶಿಲೆಯಲ್ಲಿರ್ದ ಬಿಂದು ಒಲವರದಿಂದ ಜಾರುವಂತೆ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನದಿಂದ ಲಿಂಗಾಂಗ ಸಂಬಂಧಿಯಾಗಿ ಜೀವತ್ವನಳಿದು ಶಿವೋಹಮೆಂಬ ಅಹಂಭಾವಹರಿದ ತನ್ನ ಶಿವತ್ವದಲ್ಲಿ ಭಕ್ತಿ ರತಿ ಕ್ರಿಯೆಯಲ್ಲಿ ಏಕರಸವ ಮಾಡಬೇಕೆಂಬುದೀಗ ಅರಿವು ಮಹದಲ್ಲಿ ಬೆರಸುವಾಗ ನಾರಿಶಿಲೆ ನೋಡ ನೋಡ ನೀರಾದಂತಿರಬೇಕು ಎಂಬ ಶಬ್ದಕ್ಕರ್ಥ. ಅಂತು ಶಿವ ಕ್ರೀಯಿಂದ ದೇಹವಾಸನೆಯಳಿದು ಲಿಂಗದೇಹವಾಯಿತ್ತಾಗಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಕ್ಕೆ ಹೊರಗಾದನೆಂಬುದೀಗ ಕಾಯವಶದಿಂದ ಕರ್ಮವಮೀರಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿಕ್ರೀಯಿಂದ ಲಿಂಗದಲ್ಲಿ ಏಕರಸನಾಗಿ ಲಿಂಗವೇ ತಾನಾಗಿರ್ದ ಶರಣನೆಂಬುದೀಗ ಕರ್ಮವಶದಿಂದ ಧರ್ಮವಶದಿಂದ ಮರ್ಮಗತನಾದಲ್ಲಿ ಎಂಬ ಶಬ್ದಕ್ಕರ್ಥ. ಅಂತು ಜೀವತತ್ವನಳಿದು ಲಿಂಗತತ್ವನಾದ ಶರಣಕಾಯವು ಲಿಂಗಕಾಯವಾಯಿತ್ತಾಗಿ ಶರಣಕಾಯವೇ ಕೈಲಾಸವೆಂದರಿಯಬೇಕು, ಬೇರೆ ಕೈಲಾಸಕ್ಕೆ ಹೋಗಬೇಕೆಂಬ ಸಂದೇಹವ ಬಿಟ್ಟಿರಬೇಕೆಂಬುದೀಗ ಮರ್ಮವಶಗತನಾದಲ್ಲಿ ಅದೇ ಕಾಯವೆರಸಿ ಅಯ್ದಿದ ಕೈಲಾಸ, ಆ ಭಾವವ ನಿಮ್ಮಲ್ಲಿ ನೀವು ತಿಳಿದುಕೊಳ್ಳಿ ಎಂಬ ಶಬ್ದಕ್ಕರ್ಥ.

ಆರು ಮಣಿಗೆ ದಾರವನೇರಿಸಿ, ಕುಣಿಕೆಗೆ ಮಣಿ ಇಲ್ಲದೆ ಅರಸುತ್ತಿದ್ದರಲ್ಲಾ ತತ್ವಜ್ಞರು. ಇದು ಆದಿಯ ಕ್ರಿ ಅನಾದಿಯ ಜ್ಞಾನ. ಈ ಉಭಯವ ಭೇದಿಸಿದಡೆ ಕುಣಿಕೆಯ ಮಣಿ ತಲಪಿಗೇರಿತ್ತು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಏಕವಾದಲ್ಲಿ ॥ ೬ ॥

ಆವ ಬೀಜವ ಬಿತ್ತಿದಡೂ ಪೃಥ್ವಿಗೆ ಬೇರು, ಬಯಲಿಂಗೆ ಶಾಖೆ ತಲೆದೋರಿ ಬೆಳೆವಂತೆ ಐಕ್ಯಕ್ಕೆ ಮರೆ ಕ್ರೀಗೆ ಬಾಹ್ಯ. ಉಭಯದ ಭೇದ ಉಳ್ಳನ್ನಕ್ಕ ಭಕ್ತಿಯ ಹೋರಾಟ ಬಿಡದು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ಮಣಿಉಳ್ಳನ್ನಕ್ಕ ಪವಣಿಗೆಯ ಹಂಗ ಬಿಡದು. ॥ ೭

ಇನ್ನೇವೆನಯ್ಯಾ? ನಾನು ಕೆಡೆದಿದ್ದೇನೆ. ಕಾಯ ಉಳ್ಳನ್ನಕ್ಕ ಕರ್ಮ ಬಿಡದು. ಜೀವ ಉಳ್ಳನ್ನಕ್ಕ ಪ್ರಕೃತಿ ಕೆಡದು. ಭಾವಿಸಿಹೆನೆಂಬನ್ನಕ್ಕ ವಿಶ್ವಾಸ ಬಿಡದು. ಈ ಉಭಯ ಉಳ್ಳನ್ನಕ್ಕ ನಿನ್ನ ಮನ ನೆನೆಯ ಬಿಡದು. ನೀ ನಷ್ಟವಾದಲ್ಲಿ ಎನ್ನ ಭಾವ ನಷ್ಟ. ಭಾವನಷ್ಟವಾದಲ್ಲಿ ಎನ್ನಯ್ಯನಿಲ್ಲ ನೀನು ಪ್ರಿಯನಲ್ಲ ಇಮ್ಮಡಿ ದೇವನಲ್ಲ. ನಿಃಕಳಂಕ ಮಲ್ಲಿಕಾರ್ಜುನನೆಂಬ ಭಾವ ಎಲ್ಲಿ ಅಡಗಿತ್ತೆಂದರಿಯೆ ॥ ೮ ॥

ಇಷ್ಟದಲ್ಲಿ ನೋಟ ಜ್ಞಾನದಲ್ಲಿ ಕೂಟ ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯು ಬಿಟ್ಟುದು. ಭಾವವೆಂಬ ಕುರುಹು ಮರೆದುದು. ಇಂತೀ ಉಭಯ ನಿರ್ಭಾವವಾದಲ್ಲಿ ಇಹಪರವೆಂಬ ಹೊಲಬುಗೆಟ್ಟಿತ್ತು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಒಂದೆಂದಲ್ಲಿ ॥ ೯ ।

ಇಷ್ಟಲಿಂಗ ಪ್ರಾಣಲಿಂಗವೆಂದು ವಿಭೇದಿಸುವಲ್ಲಿ ಕುಸುಮದ ಗಿಡುವಿಗೆ ವಾಸನೆ ಉಂಟೇ ಕುಸುಮಕ್ಕಲ್ಲದೆ? ಅದು ಗಿಡವಿಡಿದಾದಡೂ ಕುಸುಮವೆಂಬುದನರಿತು ಗಿಡುವಿನ ಹೆಚ್ಚುಗೆ, ಕುಸುಮದ ನಲವು, ಸುಗಂಧದ ಬೆಳೆ, ಭಕ್ತಿಗೆ ಕ್ರೀ, ಕ್ರೀಗೆ ಶ್ರದ್ಧೆ, ಶ್ರದ್ಧೆಗೆ ಪೂಜೆ, ಪೂಜೆಗೆ ವಿಶ್ವಾಸ, ವಿಶ್ವಾಸಕ್ಕೆ ವಸ್ತು ನಿಶ್ಚಯವಾಗಿಪ್ಪುದು. ಇದು ತುರೀಯ ಭಕ್ತಿಯ ಇಗವು ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಮೆಲ್ಲಮೆಲ್ಲನೆ ಕೂಡುವ ಕೂಟ ॥ ೧೦ ॥

ಎಸೆವರ ಬಲ್ಲೆ. ಎಚ್ಚಬಾಣ ತಿರಿಗಿ ಬಪ್ಪಂತೆ ಎಸೆವರ ಕಾಣೆ. ಪೂಜಿಸುವರ ಬಲ್ಲೆ. ಪೂಜಿಸಿದ ಲಿಂಗ ಅಭಿಮುಖವಾಗಿ ಸರ್ವಾಂಗದಲ್ಲಿ ವೇಧಿಸುವರ ಕಾಣೆ. ನುಡಿಗೆ ನಡೆ ಆ ನಡೆಗೆ ನುಡಿ ಉಭಯುವ ಭೇದಿಸುವರ ಕಾಣೆ. ಈ ಉಭಯವು ಸಿದ್ಧಿಯಾಗಿ ಸಿದ್ಧಾಂತವಾದಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಕ್ರೀಜ್ಞಾನ ನಿರುತವಾದವಂಗಲ್ಲದೆ ಸಾಧ್ಯವಲ್ಲ ॥ ೧೧ ॥

ಎನಗೆ ನೀನಿಂಬುಕೊಡುವಲ್ಲಿ ಸಕಲವ ಪ್ರಮಾಣಿಸುವದ ಬಿಟ್ಟು ನಿಃಕಲವಸ್ತುವಾಗು. ಶಕ್ತಿಸಮೇತವ ಬಿಟ್ಟು ನಿಶ್ಯಕ್ತಿ ನಿರ್ಲೇಪವಾಗು. ಚಿತ್ತವ ನೋಡಿಹೆನೆಂಬ ಹೆಚ್ಚು ಕುಂದ ಬಿಟ್ಟು ನಿಶ್ಚಿಂತನಾಗು. ಅಂದು ಮಿಕ್ಕಾದ ಭಕ್ತರ ಗುಣವ ನೋಡಿಹೆನೆಂದು ತೊಟ್ಟ ಠಕ್ಕು ಠವಳವ ಬಿಡು. ಸರ್ವರಾಗ ವಿರಾಗನಾಗಿ, ಸರ್ವಗುಣಸಂಪನ್ನನಾಗಿ, ಜ್ಞಾನಸಿಂಧುಸಂಪೂರ್ಣನಾಗಿ ನಿನ್ನರಿವಿನ ಗುಡಿಯ ಬಾಗಿಲ ತೆರದೊಮ್ಮೆ ತೋರಾ ಎನ್ನಡಿಗೆ ನಿನ್ನ ಗುಡಿಯ ಸಂಬಂಧವ ನೋಡಿಹೆ. ಇವಕ್ಕೆ ಗನ್ನಬೇಡ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೧೨ ॥

ಕಣ್ಣಿಗೆ [೧] ಹೋರಿ ಕಡವರವ ನೀಗಲೇತಕ್ಕೆ? ಅಲುಗಾಡಿ ತುಂಬಿದ ಕೊಡನ ಹೊಡೆಗೆಡಲೇತಕ್ಕೆ? ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುರುಹು ಇರುತಿರಲಿಕ್ಕೆ ಆ ನಿಜಲಿಂಗದ ಸಂಗವನರಿಯದೆ, ಸಂದಿಗೊಂದಿಯಲ್ಲಿ ಹೊಕ್ಕಿಹೆನೆಂಬ ಗೊಂದಣವೇತಕ್ಕೆ? ತಾನಿಂದಲ್ಲಿ ಕೆಡಹಿದ ಒಡವೆಯ ಆಚೆಯಲ್ಲಿ ನೆನೆದು ಅರಸಿದಡಿಲ್ಲ. ಅದು ಮತ್ತೆ ತನಗೆ ಸಂದಿಸುವದೇ? ಘನಲಿಂಗ ನಿನ್ನಂಗದಲ್ಲಿ ಇದ್ದಂತೆ ಕಂಡೆ ಕಾಣೆನೆಂಬ ನಿನ್ನ ನಿಜ ನಿಂದಲ್ಲಿಯೇ ಸಂದೇಹವ ತಿಳಿದುಕೋ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೧೩ ॥

ಕನಕಶಿಲೆ ಎನಿಸುವ ಪಾಷಾಣದಲ್ಲಿ ರತುನ [೨] ಪುಟ್ಟಲಿಕ್ಕಾಗಿ, ಆ ಮಧ್ಯದಲ್ಲಿ ಸೂತ್ರ ತೋರಲಿಕ್ಕೆ ಆ ಸೂತ್ರ ಪಾಷಾಣವ ಗ್ರಹಿಸಿ ಆವಕಡೆ ಮುಖವಾದಲ್ಲಿ ಸೂತ್ರ ಆವರಣಿಸುವಂತೆ, ಶಿವಲಿಂಗಪೂಜೆಯಲ್ಲಿ ಲಿಂಗವ ಮುಟ್ಟುವ ಕೈ, ನಟ್ಟ ದೃಷ್ಟಿ, ತನ್ನಂಗದಲ್ಲಿ ಸರ್ವಾಂಗದೋಷಂಗಳ ಮರೆದು, ಜಾಗ್ರದಿರವು ಸ್ವಪ್ನದಲ್ಲಿ ತೋರುವಂತೆ, ಸ್ವಪ್ನದ ಸಂಗ ಸುಷುಪ್ತಿಯನೈದಿದಂತೆ ಇಪ್ಪುದು ಶಿವಪೂಜಕನ ಶಿವಮೂರ್ತಿ ಧ್ಯಾನ. ಈ ಗುಣ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಲಿಂಗವನರಿವವರಿಗಲ್ಲದೆ ಕಾಣಬಾರದು ॥ ೧೪ ॥

ಕಪಟಕ್ಕೆ ಒಳಗು ಹೊರಗಲ್ಲದೆ, ಸ್ವಯಂಭುಗೆ ಹೇಮ [೩] ಕ್ಕುಂಟೇ ಒಳಗು ಹೊರಗು? ಕುಟಿಲದಿಂದ ಘಟವ ಹೊರೆವಂಗೆ ಪ್ರಕಟ ಪೂಜೆಯಲ್ಲದೆ ಅಘಟಿತಂಗುಂಟೇ ಅಖಿಳರ ಮೆಚ್ಚಿನ ಪೂಜೆ? ತೃಣದ ತುದಿಯ ಬಿಂದು ಉದುರಿ ಒಣಗಿದ ಕುಸುಮದಂತೆ, ತ್ರಿಕರಣ ಶುದ್ಧವಾಗಿ ತ್ರಿಗುಣಾತ್ಮನ ಏಕವ ಮಾಡಿ ತ್ರಿಶಕ್ತಿಯ ಇಚ್ಛೆಯ ಮುಚ್ಚಿ ನಿಶ್ಚಯದಿಂ ಮಾಡಿಯೂ ಮಾಡದಿರ್ದಡೂ ಮುಟ್ಟಿದಲ್ಲಿ ತೊಟ್ಟು ಬಿಟ್ಟ ಹಣ್ಣಿನಂತಿರಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಉಭಯಲೇಪವಾದ ಕಾರಣ ॥ ೧೫ ॥

೧ ಕಣೆ (ಡ)=ಆದುರು, ಹೋಳಿಯುವ ಶಿಲೆ.
೨ ರತಿ (ಬ)=ರತ್ನತೂಕ. ೩ ಹಿಮ (ಕ).

ಕರ್ಮದೊಳಗಣ ಸತ್ಕರ್ಮ, ವರ್ಮದೊಳಗಣ ನಿಜವರ್ಮ, ಅರಿವಿನೊಳಗಣ ಅರಿವ, ತೆರದೊಳಗಣ ತೆರವ, ಕುರುಹಿಟ್ಟು ಕುರುಹ, ಕುರುಹು ಅವಗವಿಸಿ ಭಿನ್ನವಿಲ್ಲದೆ ನಿರ್ವಾಹ ನಿರ್ಲೇಪವಾದುದು. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ತಾನೆ ಕುರುಹು ಅರಿವಾದನು ॥ ೧೬

ಕಲ್ಲ ಬಿತ್ತಿ ನೀರನೆರೆದಲ್ಲಿ ಪಲ್ಲವಿಸುವದೇ ದಿಟದ ಬೀಜದ ವೃಕ್ಷದಂತೆ? ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರುಭಕ್ತಿ ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತಲೆ ಉಳಯಿತ್ತು. ಮತ್ತೆ ನಿಜವಸ್ತುವಿನ ಸುದ್ದಿ ನಿಮಗೆ ತೃಣದೋ? ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ವಿಶ್ವಾಸ ಬೇಕು ॥ ೧೭ ॥

ಕಾಯದ ಭ್ರಮೆಯಿಂದ ಕೈಲಾಸ. ಜೀವದ ಭ್ರಮೆಯಿಂದ ಮಹದ ಕೂಟವೆಂಬುದು. ಕಾಯದ ಜೀವದ ಭೇದವನರಿತಲ್ಲಿ ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ. ಇದು ನಿಶ್ಚಯದ ಕೂಟ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೧೮ ॥

ಕಾಯ ಬೆರಸಿ ಕೈಲಾಸಕ್ಕೆ ಅಯ್ದಿಹೆನೆಂಬುದು ಭಕ್ತಂಗೆ ನಿಹಿತವಲ್ಲ. ದೃಷ್ಟದಲ್ಲಿ ಕೊಟ್ಟುದ ಲಕ್ಷಿಸಲರಿಯದೆ ಅಲಕ್ಷವ ಲಕ್ಷಿಸಿ ಕಾಬುದಕ್ಕೆ ಲಕ್ಷ್ಯವೇನು? ಅದು ನಿರೀಕ್ಷಣೆಯ ಲಕ್ಷದಿಂದಲ್ಲದೆ ಆತ್ಮಂಗೆ ಲಕ್ಷ್ಯವಿಲ್ಲ. ಇಂತೀ ಉಭಯದಲ್ಲಿ ಲಕ್ಷಿತವಾದವಂಗೆ ಮರ್ತ್ಯ ಕೈಲಾಸವೆಂಬುದು. ತನ್ನರಿವು ನಿಶ್ಚಯವಾದಲ್ಲಿ ಅದೇ ಲಕ್ಷ್ಯ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೇ ॥ ೧೯ ॥

ಕಾಲಿದ್ದಂತೆ ತಲೆ ನಡೆದುದುಂಟೆ ಅಯ್ಯಾ? ಕಣ್ಣಿದ್ದಂತೆ ಕರ್ಣ ನೋಡಿದುದುಂಟೇ ಅಯ್ಯಾ? ಬಾಯಿದ್ದಂತೆ ನಾಸಿಕ ಉಂಡುದುಂಟೇ ಅಯ್ಯಾ? ತಾಯಿಲ್ಲದೆ [೧] ಮಕ್ಕಳು ಬಂದ ತೆರನ ಹೇಳಯ್ಯಾ. ನಿಮ್ಮ ಸೇವೆಯ ತೊತ್ತಿನ ಭಾವವ ಕೇಳಲೇತಕ್ಕೆ? ಪಟದೊಳಗಣ ಬಾಲಸರಕ್ಕೆ ಪ್ರತಿ ಸೂತ್ರ ನೇಣುಂಟೆ? ನಿಮ್ಮಲ್ಲಿಯೇ ಎನ್ನ ಭಾವಲೇಪ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೇ ॥ ೨೦ ॥

೧ ತಾ ಇಲ್ಲದೆ=ತಾನಿಲ್ಲದೆ ( ಶ. ಪು. ೨೪೪ )

ಕಾಯವಿಹನ್ನಕ್ಕ ಕರ್ಮವ ಬಿಟ್ಟಪರಿ ಇನ್ನೆಂತೋ? ಜೀವವಿಹನ್ನಕ್ಕ ಅರ್ಪಿಸದೆ ತಾನುಂಡ ಪರಿ ಇನ್ನೆಂತೋ? ಕೊಳದೊಳಗೆ ಕಾಲಿದ್ದು ಕೋಲ ಹಿಡಿದು ಸಾಧನೆಯ ಮಾಡುವವನ ತೆರನಂತೆ ಕರ್ಮಕಾಂಡಿಯಾಗಿ ತಾನಿರುತ್ತ ಇದಿರಿಗೆ ವರ್ಮವ ಬೋಧಿಸಲೇತಕ್ಕೆ? ಇದು ತನ್ನಯ ಇರವಲ್ಲ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಅವರಿಗೆ ಅನ್ಯನಾಗಿಪ್ಪನು ॥ ೨೧ ॥

ಕಾಯವುಳ್ಳನ್ನಕ್ಕ ಲಿಂಗಪೂಜೆ. ಆತ್ಮವುಳ್ಳನ್ನಕ್ಕ ಅರುವಿನ ಭೇದ. ಪುರುಷ ನೀ ಸತಿ ನಾನೆಂಬಲ್ಲಿ ಉಭಯದ ಬೀಜ ನಾ ನೀನೆಂಬನ್ನಕ್ಕ. ಅಂಗದ ಲಿಂಗದಲ್ಲಿಯೇ ನಿರಂಗವಾಗಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೨೨ ॥

ಕಾಷ್ಠವ ಸುವರ್ಣವ ಮಾಡಿದೆನೆಂಬ ಘಾತಕತನವೆ ನಿಮ್ಮ ಭಕ್ತಿ? ಸಕಲ ದೇಶ ಕೋಶ ವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬ ಕೈ ಕೂಲಿಯೋ ನಿಮ್ಮ ಭಕ್ತಿ? ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಂತಾದ ಏಳುನೂರೆಪ್ಪತ್ತು ಅಮರಗಣಂಗಳ ಭಾವವಿದ್ದಂತೆ ನಿಮ್ಮ ಅಗಡವೇಕಯ್ಯಾ? ನಿಮ್ಮ ಅರಿವಿಂಗೆ ಇದಿರಿನಲ್ಲಿ ಕೂಡಿಹೆನೆಂಬ ಭಿನ್ನಭಾವ ಉಂಟೇ ಅಯ್ಯಾ? ಕರ್ಪುರದ ಅರಣ್ಯ ಕಿಚ್ಚು ಹತ್ತಿ ಬೆಂದಲ್ಲಿ ಭಸ್ಮ ಇದ್ದಿತ್ತೆಂದು ಲಕ್ಷಿಸಲುಂಟೆ? ನಿಮ್ಮ ಭಾವವ ನಿಮ್ಮಲ್ಲಿಗೆ ತಿಳಿದುಕೊಳ್ಳಿ. ನಿಮ್ಮ ಕೂಟಕ್ಕೆ ಎನ್ನ ನಾಚಿಕೆಯ ಬಿಡಿಸಿಕೊಳ್ಳದ ತೆರನ ತಿಳಿದುಕೊಳ್ಳಿ. ಶಕ್ತಿಯ ಮಾತೆಂದು ಧಿಕ್ಕರಿಸಬೇಡ. ಹೊರಗೆ ಕೂಡಿಹೆನೆಂಬುದು ನಿಮ್ಮ ಅರಿವಿಂಗೆ ಹಾನಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ನಿಮ್ಮ ಶರಣನ ನೆಲೆಯ ನೀವೇ ನೋಡಿಕೊಳ್ಳಿ ॥ ೨೩ ॥

ಕೂಟಕ್ಕೆ ಕುರುಹಾದುದನರಿಯದೆ, ಆತ್ಮಕ್ಕೆ ಅರಿವಾವುದನರಿಯದೆ, ಕೈಲಾಸವೆಂಬ ಸೂತ್ರದ ಒಳಗಿಗೆ ಮನಸೋತಿರಲ್ಲಾ! ಅಂಧಕನ ಕೈಯ್ಯ ರತ್ನ ದಂತೆ ಪಂಗುಳನ ಕರದ ಶಸ್ತ್ರದಂತೆ ಆದಿರಲ್ಲಾ! ಈ ನಿರಂಗವ ತಿಳಿದು ನಿಂದಲ್ಲಿ ಬೇರೆ ಅಂಗವಡಗುವದಕ್ಕೆ ಉಭಯ ಉಂಟೆಂಬ ದಂದುಗ ಬೇಡ, ತಾ ನಿಂದಲ್ಲಿಯೇ ನಿಜಕೂಟ ತಿಳಿದಲ್ಲಿಯೇ ನಿರಂಗವೆಂಬುದು ಉಭಯವಿಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೨೪ ॥

ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ? ಪರುಷರಸ ಕೈಯ್ಯಲ್ಲಿದ್ದು ಕೂಲಿಯ ಮಾಡಲೇತಕ್ಕೆ? ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋರಗದ ಹೊರೆಯ ಹೊರಲೇತಕ್ಕೆ? ನಿತ್ಯ ಅನಿತ್ಯವ ತಿಳಿದು, ಮರ್ತ್ಯ ಕೈಲಾಸವೆಂಬುದು ಭಕ್ತರಿಗೆ ಮುಕ್ತಿಯಲ್ಲ. ನಿಶ್ಚಯವ ತಾನರಿತು ಅತ್ತಣ ಇತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ ಆ ಬಚ್ಚಬಯಲ ಬೆಳಗ ನಿನ್ನ ನೀನೇ ನೋಡಿ ಕಾಯೆನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೨೫ ॥

ಕ್ರಿಯಾಪೂಜೆ ಒಡಲಾದ ಮತ್ತೆ ಪೂಜಿಸಲಿಲ್ಲ. ಜ್ಞಾನ ನೇತ್ರ ಮುಸುಕು ತೆಗೆದ ಮತ್ತೆ ಏನುವ ನೋಡಲಿಲ್ಲ. ಧ್ಯಾನ್ಯವು ನಿಧಾನಿಸಿ ನಿಂದ ಮತ್ತೆ ಏನುವನು ನೆನೆಯಲಿಲ್ಲ. ಈ ಗುಣಗ್ರಾಹಕ ಗ್ರಹಿತನ ಉಭಯ ಭಾವ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಕ್ರಿಯಾನಿರ್ವಾಹಸ್ಥಲ ॥ ೨೬ ॥

ಕ್ರಿಯಾಲಿಂಗ ಜ್ಞಾನಲಿಂಗಂಗಳೆಂಬಲ್ಲಿ ಉಭಯವನೆರಡು ಲಿಂಗವೆಂದು ಕಲ್ಪಿಸುವಲ್ಲಿ ಅದಕ್ಕೆ ಭಿನ್ನಭೇದವಾವುದು? ಕುಂಭಗಳ ಹುದುಗಿಕ್ಕಿದ ಕಿಚ್ಚು ಆ ಕುಂಭಂಗಳಿಗೆ ಒಳಗೆ ಮುಟ್ಟಿವಡೂ ಹೊರಗೆ ಮುಟ್ಟಿದಡೂ ಪಾಕಪ್ರಯತ್ನ ತಪ್ಪದಾಗಿ. ಇಂತೀ ಗುಣವಂತೆ ಹೊರಗಣ ಕ್ರಿಯಾಪದ ಒಳಗಣ ಜ್ಞಾನಸಂಭವ ಉಭಯದ ತತ್ತಿಲ್ಲ. ಸಕ್ಕರೆಯ ರಾಶಿಗೆ ಕೇಸಿಯ ಕೆಲನುಂಟೇ? ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟು ಮುಟ್ಟೆಂಬೀ ಗುಟ್ಟಿನ ಕುಲವಿಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಸ್ವಯಾನುಭಾವಸಿದ್ಧನಾದ ಕಾರಣ ॥ ೨೭ ॥

ಗುರು ಅನಾಚಾರಿ, ಲಿಂಗವು ನೇಮಸ್ಥ, ಜಂಗಮ ದುರಾಚಾರಿ ಇಂತೀ ತ್ರಿವಿಧ ಭೇದ ಸ್ಥೂಲ ಸೂಕ್ಷ್ಮ ಕಾರಣ ಇಂತೀ ತನುತ್ರಯ ಕೂಡಿದಲ್ಲಿ ತನುವಿಂಗೆ ಕುರುಹು, ಮನಕ್ಕೆ ಅರಿವು, ಅರಿವಿಂಗೆ ನಿಜದ ನೆಲೆ ಅಹನ್ನಕ್ಕ ಸೂತಕದ ಸುಳುಹು ಕೆಡದು. ಸರ್ವವನೇತಿಗಳೆವ ಮಾತು ಬಿಡದು. ಇಂತೀ ತ್ರಿವಿಧದ ಭೇದವ ಭೇದಿಸಿ ವೇಧಿಸಿ ನಿಂದಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ವಿರಳವಿಲ್ಲದ ಅವಿರಳ ಸಂಬಂಧಿ ॥ ೨೮ ॥

ಗುರುವನರಿದು ಲಿಂಗವನರಿವವರುಂಟು. ಲಿಂಗವನರಿದು ಪಂಚಾಚಾರವನರಿವವರುಂಟು. ಪಂಚಾಚಾರವನರಿದು ಜಂಗಮವನರಿವವರುಂಟು. ಆ ಜಂಗಮವನರಿವಲ್ಲಿ ಷಟ್ಸ್ಥಲ ಸಂಬಂಧವಾಯಿತ್ತು. ಆ ಸಂಬಂಧದ ಸಮಯ ನಿಂದು, ಉಭಯವಳಿದು ಏಕವಾದಲ್ಲಿ, ಹಲವು ನೆಲೆ ತನ್ನ ವಿಶ್ವಾಸದ ಹೊಲಬಿನಲ್ಲಿ ಅಡಗಿತ್ತು. ಆ ಹೊಲಬವ ಹೊಲಬಿನಲ್ಲಿ ನಿಂದವಂಗೆ ಇಹಪರವೆಂಬ ಕಲೆ ಇಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಒಂದೇ ಎಂದಲ್ಲಿ ॥ ೨೯ ॥

ಚಿತ್ರದ ಬೊಂಬೆಯ ಹಾಹೆ ಎಲ್ಲಕ್ಕೆ ಆತ್ಮನಿಂದ ಚೇತಸಿಸಿ ನಡೆವುತ್ತಿವೆ. ಅವು ಸೂತ್ರಾಧಿಕನ ಭೇದ. ಎನ್ನ ಶಕ್ತಿ ಜಾತಿಯ ಲಕ್ಷಣ. ನಿಮ್ಮ ಭಕ್ತಿ ಸೂತ್ರದಿಂದ ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡಗಿತ್ತು. ಎನಗೆ ಭಿನ್ನದ ಮಾತಿಲ್ಲ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬನರು ನೀವೇ ॥ ೩೦ ॥

ತನ್ನ ಕಣ್ಣಿನಿಂದ ಕನ್ನಡಿಯ ನೋಡಿ, ಆ ದೃಷ್ಟಿ ಕಾಣಲಿಕ್ಕೆ ಕಣ್ಣೋ ಕನ್ನಡಿಯೋ? ಆ ಉಭಯ ದೃಷ್ಟಿಯಿಂದ ಇಷ್ಟದ ದೃಷ್ಟವ ಕಂಡು ಉಭಯ ನಿಶ್ಚಯವಾದಲ್ಲಿ ಕೈವಲ್ಯವೆಂಬ ಕರ್ಕಶ ಬೇಡ. ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು. ಅದ ನಿಮ್ಮ ನೀವೇ ತಿಳಿದುಕೊಳ್ಳಿ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೧ ॥

ತನುವಿನ ಮೇಲಿಪ್ಪುದು ಇಷ್ಟಲಿಂಗವೆಂಬರು. ಆತ್ಮನ ನೆನಹಿನ ಮೇಲಿಪ್ಪುದು ಪ್ರಾಣಲಿಂಗವೆಂಬರು. ಇಂತೀ ಘಟಕ್ಕೂ ಆತ್ಮಕ್ಕೂ ಉಭಯ ಲಿಂಗ ಉಂಟೇ? ಹೊರಗಣ ಅಸ್ಥಿ, ಚರ್ಮಕ್ಕೆ ಬೇರೊಂದಸುವ ಕಲ್ಪಿಸಬಹುದೇ? ಒಳಗಣ ಕರುಳು ಮಜ್ಜೆ ಮಾಂಸಕ್ಕೆ ಬೇರೊಂದಸುವಿನ ಕಳೆಯುಂಟೇ? ಇದಕ್ಕೆ ದೃಷ್ಟವ ಕಂಡಡೆ, ಇಷ್ಟ- ಪ್ರಾಣಲಿಂಗವೆಂಬುದಕ್ಕೆ ಕಟ್ಟುಂಟು.ಅದು ಅಚೇತನವಪ್ಪ ನಿರವಯಕ್ಕೆ ಚೇತನವಪ್ಪುದೊಂದು ದೃಷ್ಟ,೧ ನಿರವಯ ಸಾವಯದಲ್ಲಿ ಸಂಬಂಧಿಸಿ ಕುರುಹಾದ ಭೇದ, ಕಾಯದ **ಒಳ** **ಹೊರಗಿನ ನೋವಿನ ಭೇದದಂತೆ. ಆ ಉಭಯವನರಿವ ಆತ್ಮ ಒಂದೇಯಾಗಿ,**

**೧ ನಿರವಯಕ್ಕೆ ಅಚೇತನವಪ್ಪುದೊಂದು ಸಾವಯಕ್ಕೆ ಚೇತನವಪ್ಪುದೊಂದು ದೃಷ್ಟ.**

ಇಂತೀ ಕಾಯದ ಇಷ್ಟವೆಂದು, ಆತ್ಮಂಗೆ ಅರುವೆಂದು ಎರಡೆನಿಸುವ ಲಿಂಗವೊಂ
ದೊಂದು ಕುರುಹಿಲ್ಲ. ಅದು ಏಕಮೇವ ಸ್ವರೂಪು. ಅದು ಚಿದ್ಘನ ಸ ರೂಪು.
ಅದು ಘಟಮಠದ ಒಳಹೊರಗಿನ ಬಯಲಿನ ಗರ್ಭದಂತೆ ಎನ್ನಯ್ಯ ಪ್ರಿಯ
ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಅತ್ಯತಿಷ್ಟದ್ದಶಾಂಗುಲನಾಗಿ
ಪ್ಪನು ॥ ೩೨ ॥

ತುಷರಸವಿದ್ದುದಕ್ಕಲ್ಲದೆ ಫಲ ಫಲಿಸಲಿಲ್ಲ. ಕ್ರಿಯಾಸದ್ಭಾವವಿದ್ದಲ್ಲದೆ
ಸತ್ಪಥಭಾವಿಯಲ್ಲ. ತ್ರಿ ಸಂಧ್ಯಾಕಾಲಂಗಳಲ್ಲಿ ಉಚಿತವೇಳೆಯನರಿತು,
ರಾಜಸತಾಮಸಂಗಳಿಲ್ಲದೆ, ಪರಸೇವೆ ನಿಶ್ಚಯಮತನಾಗಿ, ಅನಲ ಅಹಿ ವ್ಯಾಘ್ರ
ಚೋರ ರಾಜಭಯ ಮುಂತಾದವೆಲ್ಲವ ಲಿಂಗ ಕರಸ್ಥಲಕ್ಕೆ ಬಂದಿರಲಿಕ್ಕಾಗಿ,
ಆ ಲಿಂಗದ ಮೂರ್ತಿ ಮನಸ್ಥಲದಲ್ಲಿ ನಿರತಿಶಯದಿಂದ ನಿಂದಿರಲಿಕ್ಕಾಗಿ, ಇಂತೀ
ಭಾವಂಗಳೆಲ್ಲವು ಮೂರ್ಛೆಯಲ್ಲಿ ಮೂರ್ತಿಗೊಂಡು ಅಮೂರ್ತಿಯಪ್ಪ ವಸ್ತು
ಭಿನ್ನಭೇದವಿಲ್ಲದೆ, ಸ್ವಯಕ್ರಿಯಾ ಪೂಜೆ ಸರ್ವಜ್ಞಾನ ಸಂತೋಷವಿಪ್ಪಡೆ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಕ್ರಿಯಾಸಂಭವ
ಕೂಟ ॥ ೩೩ ॥

ದುಕೂಲ ಮುಂತಾದ ವಸ್ತ್ರಂಗಳಲ್ಲಿ, ಹೇಮ ಮುಂತಾದ ಆಭರಣಂಗ
ಳಲ್ಲಿ, ಮೌಕ್ತಿಕ ರತ್ನ ಮುಂತಾದ ಪಾಷಾಣಂಗಳಲ್ಲಿ, ಚಂದನಗಂಧ
ಮುಂತಾದ ಸುವಾಸನೆಯಲ್ಲಿ, ಅಂದಳ ಛತ್ರ ಚಾಮರ ಕರಿ ತುರಗಂಗಳು
ಮುಂತಾದ ತನು ಸೋಂಕುವ ವೈಭವ ಮುಂತಾದ ಸಕಲ ಸುಖಂಗಳು ಲಿಂಗ
ಕ್ಕೆಂದು ಕಲ್ಪಿಸಿ ಅಂಗೀಕರಿಸುವವನಿರವು, ವಾರಿಶಿಲೆ ನೋಡ ನೋಡಲಿಕ್ಕೆ
ನೀರಹ ತೆರದಂತೆ, ಅಂಬರದ ವರ್ಣ ನಾನಾಚಿತ್ರದಲ್ಲಿ ಸಂಭ್ರಮಿಸಿ, ಕಂಗಳು
ಮುಚ್ಚಿ ತೆರವುದಕ್ಕೆ ಮುನ್ನವೆ, ಅದರಂದದ ಕಳೆ ಅಳಿದಂತಿರಬೇಕು. ಇದು
ಲಿಂಗಭೋಗೋಪಭೋಗಿಯ ಸಂಗದ ಸುಖ, ನಿರಂಗದ ನಿಶ್ಚಯ. ಎನ್ನಯ್ಯ
ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ವಿರಳವಿಲ್ಲದವ
ಪರಮ ಸುಖಿ ॥ ೩೪ ॥

ನಿಚ್ಚಣಿಕೆಯನೇರಿ ತೆಗೆವುದಕ್ಕೆ ಮುಂದೊಂದು ಅಟ್ಟಳೆಯಲ್ಲಿ ಬಯಕೆ
ಲಕ್ಷಿಸಿದ್ದಿತ್ತು. ಬಯಕೆ ಉಳ್ಳನ್ನಕ್ಕ ನಿಚ್ಚಣಿಕೆಯನೆತ್ತುತ್ತ ಇಳುಹುತ್ತ ಈ

ಕೃತ್ಯದಲ್ಲಿ ಸಾಯಲಾರೆ. ಎನ್ನಯ್ಯ ಎನಗೊಂದು ಗೊತ್ತ ತೋರಾ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೫ ॥

ನಿನ್ನರಿವುದಕ್ಕೆ ಹೆಣ್ಣು ಹೊನ್ನು ಮಣ್ಣೆಂಬ ಸನ್ನಿಯ ತೊರೆಯ ಹಾಯ ಬೇಕು. ಆ ಮೂರರನರಿತಲ್ಲಿ ಮರೆದು ಹಿಡಿದಲ್ಲಿ ಅರಿದು ಬಿಡುವಲ್ಲಿ ಆ ಉಭಯದ ಒಡಲು ಹರಿಯಬೇಕು. ತೋರಿಕೆ ನಷ್ಟವಾಗಿ ನಿಂದವಂಗಲ್ಲದೆ ನಿನ್ನ ಚರಣದ ಬಾಗಿಲ ಬಾದಣವನೇರಬಾರದು. ಅದಕ್ಕೆ ಸನ್ನೆಗಟ್ಟಿಗೆಯೋ ಚೆನ್ನ ನಿಃಕಳಂಕ ಮಲ್ಲಿಕಾರ್ಜುನಾ ॥ ೩೬ ॥

ನಿಮಿತ್ತ ಲಗ್ನ ಮಾಯಾ ಮರವಳಿ ಬೆಳುವ ಮೂಲಿಕೆಯಿಂದ ಕಡೆಯೆ ನಿನ್ನ ಇರವು? ನೀನೇ ಗತಿ ಎಂದು ಅರ್ಚಿಸುವವರಲ್ಲಿ, ನೀನೇ ಮತಿ ಎಂದು ನೆನೆವವರಲ್ಲಿ, ನೀನಲ್ಲದೆ ಪೆರತೊಂದನರಿಯದವರಲ್ಲಿ ನೀನಿರದಿದ್ದಡೆ, ನಿನಗದೇ ವಿಶ್ವಾಸಘಾತಕ. ನಿನಗದೇ ಪಾತಕ. ನಿನ್ನ ಗುಣವ ನಾ ನಿನ್ನನರಿದು ಮುಟ್ಟದೆನಾದಡೆ ಪಂಚಮಹಾಪಾತಕ. ಇದಕ್ಕೆ ದೃಷ್ಟ 'ಯಥಾಬೀಜ ತಥಾಂಕುರ' ದಂತೆ ಅದು ನಿನ್ನ ಗುಣ. ಎನ್ನಲ್ಲಿ ಸುಳಿದ ಸುಳುವು ಅದು ಬೀಜದ ನಷ್ಟ, ಫಲಕ್ಕೆ ಮೊದಲಿಲ್ಲ. ಅದು ಎನ್ನ ನಿನ್ನ ಮಾತಿನ ಬಳಕೆ ಬೇಡ, ಎನ್ನಲ್ಲಿ ಸನ್ನದ್ಧನಾಗಿರು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೩೭ ॥

ನಿರಂಜನ ನೆರೆ ರಂಜಿಸಲುಂಟೇ? ನಿಜ ನಿಶ್ಚಯಿಸಿದಲ್ಲಿ ಸಂಗಕ್ಕೊಳಗಪ್ಪುದೇ? ಈ ಸುಗುಣದಂಗವ ತಿಳಿದು ಲಿಂಗ ಆತ್ಮನಲ್ಲಿ ಸಂಗವಾಗಿ ಆತ್ಮ ಲಿಂಗದಲ್ಲಿ ಮೂರ್ಛೆಗತನಾದ ಮತ್ತೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬ ಸೊಲ್ಲೇಕೆ ಉಡುಗದು? ॥ ೩೮ ॥

ನೀರಿನ ಮೇಲೆ ಧರೆ ಹೊರೆಯಾಗಿ ಮತ್ತಾ ನೀರನಾಶ್ರಯಿಸಿಕೊಂಡಿಪ್ಪಂತೆ, ಬೀಜದ ಸಾರ ಬಲಿದು ಬೀಜವಾಗಿ ಆ ಸಾರ ಬೀಜವನಿಂಬಿಟ್ಟುಕೊಂಡಿದ್ದಂತೆ, ದರ್ಪಣದಲ್ಲಿ ತನ್ನೊಪ್ಪವ ಕಾಣಿಸಿಕೊಂಬ ದೃಕ್ಕು ದರ್ಪಣದಿಂದೆಂದಡೆ ನಿಶ್ಚಯವಲ್ಲ. ದೃಕ್ಕಿನಿಂದೆಂದಡೆ ಇದಿರಿಟ್ಟು ಲಕ್ಷಿಸಬೇಕು. ಇದು ಭಿನ್ನವಲ್ಲ ಅಭಿ

ನ್ನವಲ್ಲ, ಕ್ರಿಯೆಯಲ್ಲ ನಿಃಕ್ರಿಯೆಯಲ್ಲ, ಭಾವವಲ್ಲ ನಿರ್ಭಾವವಲ್ಲ. ಅಹುದಲ್ಲ ನೆಂಬ ಸಂದೇಹ ಸಂದಿಸಿ ನಿಂದಲ್ಲಿ ಎನ್ನಯ ಪ್ರಿಯ 'ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನನು ಸ್ವಯವಾದ ಸಂಬಂಧಸ್ಥಲ ॥ ೩೯ ॥

ನೀರು ನೆಲಸಿಲ್ಲದೆ ಇರಬಹುದೇ? ಬೀಜ ನೆಲನಿಲ್ಲದೆ ಹುಟ್ಟಬಹುದೇ? ಜ್ಞಾನ ಕ್ರೀ ಇಲ್ಲದೆ ಅರಿಯಬಹುದೇ? ಚಿತ್ತ ಚಿತ್ತುವಿಲ್ಲದೆ ವಸ್ತುವ ಲಕ್ಷಿಸಿ ಗ್ರಹಿಸಬಲ್ಲುದೇ? ಇಂತೀ ಕ್ರೀ ಜ್ಞಾನ ಸಂಬಂಧ ಸ್ಥಲಭಾವ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಉಭಯಸ್ಥಲ ಭೇದ ॥ ೪೦ ॥

ನುಡಿದ ನುಡಿ ಎಲ್ಲವು ಮಹಾ ಪ್ರಸಂಗವಾದ ಮತ್ತೆ ಲೆಖ್ಖವಿಲ್ಲದ ವೇದ, ಸಂಖ್ಯೆ ಇಲ್ಲದ ಶಾಸ್ತ್ರ, ಕಡೆ ನಡು ಮೊದಲಿಲ್ಲದ ಪುರಾಣವನೋದಲೇ ತಕ್ಕೆ? ಅಲಗಿನ ಮರೆ ಉಳ್ಳವಂಗೆ ಶಸ್ತ್ರದ ಭಯವೇತಕ್ಕೆ? ಬಾಣದ ತೊಲ ಗುಳ್ಳವಂಗೆ ಅಂಬಿನ ಘಾಯವೇತಕ್ಕೆ? ಶಬ್ದ ಮುಗ್ಧವಾದವಂಗೆ ಇಚ್ಛೆಯ ನುಡಿದು ಕುಚಿತ್ತನಾಗಲೇತಕ್ಕೆ? ಅದು ತನ್ನ ಸ್ವಯದಿಂದವೆ ಅಲ್ಲ ಅಹುದೆಂಬು ದಕ್ಕೆ ದೃಷ್ಟವಾಯಿತ್ತು. ಬೆಳಗಿನ ಮುಖದಿಂದ ಬೆಳಗಿನ ಕಳೆಯನರಿವಂತೆ ನಿನ್ನಿಂದ ನೀನೇ ತಿಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನ ಭಿನ್ನಭಾವವಿಲ್ಲದೆ ॥ ೪೧ ॥

ಪೂಜಿಸಿ ಕಂಡಿಹೆನೆಂದಡೆ ಆ ಪೂಜೆಗೆ ತನ್ಮಯ ಮೂರ್ತಿ ನೀನು. ನೆನ ಹಿನಲ್ಲಿ ಅನುಕರಿಸಿ ಕಂಡಿಹೆನೆಂದಡೆ ಆ ನೆನಹಿಂಗೆ ಆತ್ಮಸ್ವರೂಪ ನೀನು. ಎಲ್ಲ ಎಡೆಯಲ್ಲಿ ಭಿನ್ನವ ಮಾಡಿ ಕಂಡಿಹೆನೆಂದಡೆ 'ಅಣೋರಣಿಯಾನ್ ಮಹತೋ ಮಹಿಯಾನ್' ನೀನು. ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದಿಪ್ಪೆ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ವಿಶ್ವಾಸ ಎಲ್ಲಿಪ್ಪುದೋ ಅಲ್ಲಿ ತಪ್ಪ ದಿಪ್ಪನು ॥ ೪೨ ॥

ಪೂಜಿಸುವವರ ಕಂಡವರ ಕಂಡು ಆ ಗುಣವ ತಾ ಕೈಕೊಂಡು ಪೂಜಿ ಸದೆ, ವಾಗ್‌ಬ್ರಹ್ಮವ ನುಡಿವವರ ಕಂಡು ವಿಶೇಷವನ್ನು ಈಚೆಯಲ್ಲಿ ನುಡಿ ಯದೆ, ತನ್ನ ಸ್ವಯಾನುಭಾವ ಪೂಜೆ, ತನ್ನ ಸ್ವಯಸಿದ್ಧವಾದ ನುಡಿ, ಇಂತೀ ಉಭಯಸ್ಥಲ ಒಂದು ಗೂಡಿ ಕ್ಷೀರ ನೀರಿನಂತೆ ಹೊರೆ ಇಲ್ಲದೆ ವರ್ಣ ಭೇದವಿಲ್ಲದೆ ಕೂಡಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾ ರ್ಜುನನಲ್ಲಿ ॥ ೪೩ ॥

ಪೂಜೆಯಲ್ಲಿ ಲಕ್ಷಿತವಪ್ಪವರು ಪುಣ್ಯದ ಆಗಿಗೆ ಒಡಲು. ದಾಸೋಹವೆಂಬ ಸೋಹವನರಿವಲ್ಲಿ ಚತುರ್ವಿಧ ಫಲಪದದಾಶೆಗೆ ಒಡಲು. ಇಂತೀ ಉಭಯದ ಪ್ರೀತಿಯನರಿತು ತೋರಿದ ತೋರಿಕೆ ಬಂದಂತೆ ಅವನಾರೈದು ಗುರುವಿಂಗೆ ತನು ಹೋಯಿತ್ತು, ಜಂಗಮಕ್ಕೆ ಧನ ಹೋಯಿತ್ತು, ಲಿಂಗಕ್ಕೆ ಮನ ಹೋಯಿತ್ತು. ಇಂತೀ ಎಲ್ಲ ಲಕ್ಷದಲ್ಲಿ ಲಕ್ಷಿಸಿ ನೀವು ಕೈಲಾಸಕ್ಕೆ ಹೋದಿಹೆನೆಂಬ ಕಲ್ಲೆದೆಗೆ ನಾನಂಜುವೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ || ೪೪ ||

ಬಯಲ ಹೊಲಬಿನಲ್ಲಿ ಹುಟ್ಟಿದ ಬೆಳಗು ಶಿಲೆ ಲೋಹ ಕಂಚುಗಳಲ್ಲಿ ಬೆಳಗಿನ ಕಳೆ [೧] ತೋರುವಂತೆ, ಎನ್ನ ಕರತಳದಲ್ಲಿ ಸ್ವಯಂಭುವಪ್ಪ ಲಿಂಗವೇ ನಿನ್ನ ಕಳೆ ಎನ್ನ ಕಂಗಳಿಗೆ ಹೊಲಬಾಗಿ ಏಕೆ ತೋರದು? ಅದು ಎನ್ನಯ ಜಡವೋ? ನಿನ್ನಯ ಪ್ರಕೃತಿಯೋ? ನಿನ್ನ ಬಿನ್ನಾಣದ ಗನ್ನದ ಭೇದವೋ? ಎನ್ನಲ್ಲಿ ನೀನಿಲ್ಲದ ಕಾರಣವೊ? ಎನಗೆ ಭಿನ್ನನಾದೆ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಎನ್ನಲ್ಲಿ ಸನ್ನದ್ಧನಾಗಿರು || ೪೫ ||

ಬಿಡುವುದಕ್ಕೆ ಮುನ್ನವೆ ಮೊನೆ ಮುಂಚಿದಂತಿರಬೇಕು. ಅಡಿ ಏರುವದಕ್ಕೆ ಮುನ್ನವೆ ಆ ಮೊನೆಯು ಜಾರಿ ಮತ್ತೆ ತಾನಡಿ ಏರಿ ಮೀರಿ ಮುಂಚಿದಂತಿರಬೇಕು. ನೀನೆಂಬನ್ನಕ್ಕ ಲಕ್ಷದಲ್ಲಿ ಅಲಕ್ಷವಾಗಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಮುನ್ನವೆ || ೪೬ ||

ಬಿತ್ತಿದ ಬಿತ್ತು ಪೃಥ್ವಿಯ ಕೂಟ ಅಪ್ಪುವಿನ ದ್ರವದಿಂದ ಮಸ್ತಕ ಒಡೆದುದಲ್ಲದೆ, ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ? ಲಿಂಗವು ಭಕ್ತಿಯ ಶ್ರದ್ಧೆಗೆ, ವಿಶ್ವಾಸದ ಸುಸಂಗಿಗೆ, ನಿಶ್ಚಯವಪ್ಪ ಲಿಂಗಿಗೆ ದೃಷ್ಟವಪ್ಪುದಲ್ಲದೆ ಉನ್ಮತ್ತವಪ್ಪ ವಿಶ್ವಾಸಘಾತುಕಂಗೆ, ವಂದಿಸಿ ನಿಂದಿಸುವಂಗೆ, ಹಿಂದೆ ಮುಂದೆ ಬಂದುದ ಬಾಯ್ಗೆಡುವಂಗೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಸಂದಿಸನವರಿಗೆ || ೪೭ ||

ಬೀಜದೊಳಗಣ ವೃಕ್ಷದ ಹಣ್ಣನಾರು ಮೆಲಬಲ್ಲರು? ಸಸಿಯೊಳಗಣ ಲತೆ ಪರ್ಣ ತಲೆದೋರದೆ ನಸುಗಂಪಿನ ಕುಸುಮವ ಅದಾರು ಮುಡಿವರು?

೧ ಕಂಚುಗಳ ಬೆಳಗಿನಲ್ಲಿ ಕಳೆ (ಡ)

ಇಂತೀ ಅರುವಿನ ಅರಿವ ಕುರುಹಿಟ್ಟು ಕೂಡುವನೇ ಲಿಂಗಾಂಗಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಯ ಸನ್ನದ್ಧ ಸ್ಥಲ ॥ ೪೮ ॥

ಬಯಲೆಂದಡೆ ಕೀಳು ಮೇಲನೊಳಗಾಯಿತ್ತು. ನಿರವಯವೆಂದಡೆ ಸಾವಯದಿಂದ ಕುರುಹುದೋರಿತ್ತು. ಸವಿದ ಸವಿಯ ಉಪಮಿಸಬಾರದೆಂದಡೆ ಜಿಹ್ವೆಯಿಂದ ಕುರುಹುಗೊಂಡಿತ್ತು. ಆ ಜಿಹ್ವೆ ಸಾಕಾರ ಸವಿದ ಸಪಿ ನಿರಾಕಾರವೆಂದಡೆ ನಾನಾ ಭೇದಂಗಳಿಂದ ರುಚಿಮಯವಾಗಿತ್ತು. ತಾ ಜಿಹ್ವೆಯ ಕೊನೆಯ ಮೊನೆಯಲ್ಲಿ ನಿಂದು, ಅಹುದಲ್ಲವೆಂಬುದ ತಾನೆ ಕುರುಹಿಟ್ಟುಕೊಂಡಂತೆ, ಜಿಹ್ವೆ ಬಲ್ಲುದೆಂದಡೆ ತನ್ನಡಿಗೆ ಬಾರದೆ ಅದನರಿಯಿತ್ತೆ? ಸಾರಸ್ವಾದು ಲೇಸೆಂದಡೆ ಜಿಹ್ವೆ ಹೊರತೆಯಾಗಿ ಕುರುಹುಗೊಂಡಿತ್ತೆ? ಇದು ಕ್ರಿಯಾಜ್ಞಾನ ಸಂಪುಟಸ್ಥಲ. ಈ ಉಭಯಸ್ಥಲ ಲೇಪವಾದ ಮತ್ತೆ ಸಿರುತ ನಿರ್ಯಾಣವೆಂಬುದು ನನ್ನಲ್ಲಿಯೋ ನಿನ್ನಲ್ಲಿಯೋ? ಎನ್ನಯ್ಯ ಪ್ರಿಯ ನಿಃಕಳಂಕ ಮಲ್ಲಿಕಾರ್ಜುನ ಸದಾತ್ಮರಲ್ಲಿ ನಿನ್ನ ಕುರುಹೇಕೆ ಅಡಗದು? ॥ ೪೯ ॥

ಭಕ್ತಂಗೆ ಕೃತ್ಯ. ಮಾಹೇಶ್ವರಂಗೆ ನಿಷ್ಠೆ. ಪ್ರಸಾದಿಗೆ ಅವಧಾನ ೧ ಪ್ರಾಣಲಿಂಗಿಗೆ ಯೋಗ ಮುಟ್ಟಿದಲ್ಲಿ ಅರ್ಪಿತಭೇದ. ಶರಣಂಗೆ ದೃಷ್ಟವಲ್ಲಿ ಮುನ್ನವೆ ಬಿಡುಗಡೆ, ಐಕ್ಯಂಗೆ ಕುರುಹುಗೊಂಬುವಕ್ಕೆ ಮುನ್ನವೆ ನಿರಾಳ. ಇಂತೀ ಷಟ್ಸ್ಥಲವನಂಗೀಕರಿಸಿದ ಭೇದ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಎನಗೆ ಉಮಾಮಾಹೇಶ್ವರನಾದಹನೆಂದು ॥ ೫೦ ॥

ಭಕ್ತಂಗೆ ಭಕ್ತಿಸ್ಥಲವಲ್ಲದೆ ಮಾಹೇಶ್ವರ ಸ್ಥಲದಲ್ಲಿ ನಿಲ್ಲ. ಮಾಹೇಶ್ವರ ಮಾಹೇಶ್ವರಸ್ಥಲದಲ್ಲಿ ಅಲ್ಲದೆ ಪ್ರಸಾದಿಸ್ಥಲವಲ್ಲಿ ನಿಲ್ಲ. ಪ್ರಸಾದಿ ಪ್ರಸಾದಿಸ್ಥಲವಲ್ಲಿ ಅಲ್ಲದೆ ಪ್ರಾಣಲಿಂಗಿಸ್ಥಲದಲ್ಲಿ ನಿಲ್ಲ. ಪ್ರಾಣಲಿಂಗಿಗೆ ಪ್ರಾಣಲಿಂಗಸ್ಥಲವಲ್ಲದೆ ಶರಣಸ್ಥಲದಲ್ಲಿ ನಿಲ್ಲ. ಶರಣಂಗೆ ಶರಣಸ್ಥಲವಲ್ಲದೆ ಐಕ್ಯಸ್ಥಲದಲ್ಲಿ ನಿಲ್ಲ. ಐಕ್ಯಂಗೆ ಐಕ್ಯಸ್ಥಲವಲ್ಲದೆ ಮಹಾಬೆಳಗಿನ ಕಳೆಗೆ ನಿಲುಕ. ಅದು ಪೂರ್ಣಭಾವ ಪರಿಪೂರ್ಣವಾಗಿಪ್ಪುದು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಭಕ್ತಗೆ ಕಾರಣನಾಗಿ ಸ್ಥಲಂಗಳಿಗೆ ಗೊತ್ತಾಗದ ಭೇದ ॥ ೫೧ ॥

೧ ಆಯತ (ಕ)

ಮಣ್ಣನಿತ್ತು ನಿಮ್ಮ ಕಂಡೆಹೆನೆಂದಡೆ ಜಗಭರಿತ ನೀನು. ಹೊನ್ನನಿತ್ತು ನಿಮ್ಮ ಕಂಡೆಹೆನೆಂದಡೆ ಹಿರಣ್ಯಮೂರ್ತಿ ನೀನು. ಹೆಣ್ಣನಿತ್ತು ನಿಮ್ಮ ಕಂಡಿಹೆನೆಂದಡೆ ತ್ರಿವಿಧ ಶಕ್ತಿಮೂರ್ತಿ ನೀನು. ಮನವನಿತ್ತು ನಿಮ್ಮ ಕಂಡಿಹೆನೆಂದಡೆ ಮನೋಮೂರ್ತಿ ನೀನು. ಎನಗೇನು ನಿನಗಿತ್ತು ಕಾಬ ಕಾಣಿಕೆ? ನೀನು ಸಿಕ್ಕುವುದಕ್ಕೆ ಕ್ರೀಯಲ್ಲಿ ನಿರತ,[೧] ಸದ್ಭಾವದಲ್ಲಿ ಶುದ್ಧ. ಹಿಡಿದುದ ಬಿಡದೆ, ಬಿಟ್ಟುದ ಹಿಡಿಯದೆ ನಿಶ್ಚಯವಾದ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದಡೆ ನೀನು ಅಲ್ಲಿ ತಪ್ಪದಿಪ್ಪಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೨ ॥

ಮನೆಯಲ್ಲಿ ವೀರ ಧೀರ ರಣವಲ್ಲಿ ಓಸರಿಸದ ಮತ್ತೆ ಭಾಷೆಯ ಬಂಟನಲ್ಲ. ನೀ ಬಂದ ವೇಷ ನೀ ಮಾಡುವ ಮಾಟ, ನೀ ಪ್ರಮಥರೆಲ್ಲರ ಹಂಗಿಸುವ ನಿರಂಗವ ವಾಚ್ಯನ ಕೂಡಿಹೆನೆಂಬ ಸಂದಿಯಲ್ಲಿಯೇ ನಿಂದಿತ್ತು. ಆ ನಿಜಲಿಂಗದ ಕೂಟವ ಆ ಸುಸಂಗವ ನಿಸ್ಸ ನೀನೇ ನೋಡಿಕೋ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೩ ॥

ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ. ಭಾಷೆಗೆ ತಪ್ಪಿ ಓಸರಿಸದ ಮತ್ತೆ ಆ ನಿಹಿತವ ಹೇಳಿದಲ್ಲಿ ಮತ್ತೆ ಘಾತಕತನದಿಂದ ಅಯ್ದಿಹೆನೆಂಬುದು ಭಕ್ತರಿಗೆ ವಿಹಿತವಲ್ಲ. ವೃಷ್ಟದಲ್ಲಿ ಕೊಟ್ಟುದ ಲಕ್ಷಿಸಲರಿಯದೆ ಅಲಕ್ಷವ ಲಕ್ಷಿಸಿ ಕಾಂಬುದಕ್ಕೆ ಲಕ್ಷ್ಯವೇನು? ಅದು ನಿರೀಕ್ಷಣೆಯ ಲಕ್ಷದಿಂದಲ್ಲದೆ ಅತ್ಮಂಗೆ ಲಕ್ಷವಿಲ್ಲ. ಇಂತೀ ಉಭಯದಲ್ಲಿ ಲಕ್ಷಿತವಾದವಂಗೆ ಮರ್ತ್ಯ ಕೈಲಾಸವೆಂಬುದು ತನ್ನರಿವು ನಿಶ್ಚಯವಾದಲ್ಲಿ ಅದೇ ಲಕ್ಷ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೆ ॥ ೫೪

ಮೃತ್ತಿಕೆಯ ತಿಟ್ಟದಿಂದ ಮಯಣದ ಕರುವಿಟ್ಟು, ಆ ಘಟವ ಲಕ್ಷಿಸಲಿಕ್ಕಾಗಿ ಪುನರಪಿಯಾಗಿ ಮೃತ್ತಿಕೆಯ ಬಲಿದು ಈ ಉಭಯದ ಮಧ್ಯದಲ್ಲಿ ನಿಂದ ತಿಟ್ಟದಂತೆ ಇಂತೀತ್ರಿವಿಧವು ಜಾರಿ ಉಳುಮೆ ಒಂದೇ ನಿಂದುದನರಿತು ಭಕ್ತಿಯ ಮರೆಯಲ್ಲಿದ್ದ ಸತ್ಯ, ಸತ್ಯದ ಮರೆಯಲ್ಲಿ ವಿಶ್ರಮಿಸಿದ್ದ ಜ್ಞಾನ, ಜ್ಞಾನವ ವಿಶ್ರಮಿಸಿಕೊಂಡಿಹ ಶಿವಲಿಂಗ ಮೂರ್ತಿ ಧ್ಯಾನ, ಅದು ತದ್ಧ್ಯಾನ

೧ ನಿರುತ (ಕ)

ವಾಗಲಿಕ್ಕಾಗಿ ಅದೇ ಸಿಜದ ಉಳುಮೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಅದು ಸಾವಧಾನಿಯ ಸಂಬಂಧ ॥ ೫೫ ॥

ಲಿಂಗಭೋಗೋಪಭೋಗಿ ಎಂದು ತಾ ಮುನ್ನ ಬಿಟ್ಟುದ ಮುಟ್ಟಬಹುದೇ? ತನ್ನ ಸುಖಕ್ಕೆ ತಾ ಭೋಗಿಸಿ ಲಿಂಗಮುಂತಾಗಿ ಕೂಡಿದೆನೆನಬಹುದೇ? ಲಿಂಗದಂಗವನರಿತು ತಾ ಕೂಡಬಲ್ಲಡೆ ತನ್ನ ಇಂದ್ರಿಯಂಗಳ ಇಚ್ಛೆ ಉಂಟೇ? ತಾ ಕದ್ದ ಕಳವ ಪರಿಹರಿಸಿಕೊಳಲರಿಯದೆ ಇದಿರು ನೀವು ಬನ್ನಿ ಎಂದು ಕರೆವ ಕದ್ದೆಹಕಾರನಂತೆ, ಈ ದ್ವಯ ಇದಿರಿಡಬಾರದ ಕುರುಹು. ಲಿಂಗಭೋಗೋಪಭೋಗಿ ತಾನಾವಡೆ ಉರಿಗೂಡಿ ಕರಗುವ ಕರ್ಪುರದ ಇರವಿನಂತಿರಬೇಕು. ಎನ್ನಯ್ಯ ಪ್ರಿಯ ಇದು ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನ ಸಂಗಗೂಡಿ ಸುಖಿಸುವ ಲಿಂಗಾಂಗಿಯ ಇರವು ॥ ೫೬ ॥

ಶಿವಪೂಜಾಲಂಬನಕರ್ಮ ಕ್ರೀ ದಾಸಿ ಕೊಡನ ಹೊತ್ತಂತೆ, ಶೇಷನ ಚಮತ್ಕಾರ ಭೇದದಂತೆ. ತತ್ಕಾಲದಲ್ಲಿ ಬಂದ ಗುರುವಿನಿಂದ, ಜಂಗಮದ ಲಿಂಗದಲ್ಲಿ ವಿಶ್ರಮಿಸಿ, ಮನದಲ್ಲಿ ಮೆಯ್ಯಾಂತು, ಕಂಗಳ ದೃಷ್ಟಿಯಿಂದ ವಂದಿಸಿ, ಲಿಂಗಾನುಭಾವಿಗಳ ಅವರಂಗವನಳಿದು ಮೂರ್ತಿಗೊಳಿಸಿ ಶರಣ ತತಿಗಳಿಂದ ಕರಣಂಗಳ ನಿವಾರಿಸಿ ಇಂತಪ್ಪ ಕ್ರಿಯಾ ಪೂಜೆ, ಬಾಹ್ಯದ ಶ್ರದ್ಧೆ, ಜ್ಞಾನದ ಬೆಳಗು, ಸ್ವಾನುಭಾವಸನ್ನದ್ಧ, ಇಂತೀ ಕ್ರಿಯಾ ಸಾತ್ವಿಕ ನಿರ್ಧಾರವಾದಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನನರಸಿ ತೊಳಲಿ ಬಳಲಲಿಲ್ಲ ॥ ೫೭ ॥

ಸಕಲದಲ್ಲಿ ಅಳಿದು ನಿಃಕಲದಲ್ಲಿ ಉಳಿದ ಮತ್ತೆ ಸಕಲವ ಕೂಡಿಹೆನೆಂಬ ನಿಃಕಲ ಉಂಟೇ ಅಯ್ಯಾ? ನಿಃಕಲದೊಳಗೆ ಸಕಲವಡಗಿ ಆ ಗುಣ ಉಪದೃಷ್ಟಕ್ಕೆ ಈಡಿಲ್ಲದಲ್ಲಿ ಅಖಿಳಜಗವೆಂಬುದು ಹೊರಗು. ಆ ಗುಣ ನಿನ್ನ ಸದ್ಭಾವ ನಿಜವಾದಲ್ಲಿ ನಿನ್ನಂಗವೆ ಕೈಲಾಸ. ಆ ಲಿಂಗದ ಕೂಟವೆ ನಿರ್ಯಾಣ. ಇದು ನಿಸ್ಸಂಗದ ಸಂಗ. ನಿಮ್ಮ ನೀವೇ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೫೮ ॥

ಸಕಲ ಸ್ಥಾವರ ಚರ ಘಟ ಬುಡಾದಿಗಳೆಲ್ಲಕ್ಕೆ ಪೃಥ್ವಿಯಿಂದವೇ ಜನನ. ಪೃಥ್ವಿಯ ಉತ್ಕೃಷ್ಟದಿಂದವೆ ಮರಣವೆಂಬುದನರಿತಲ್ಲಿ ಕರ್ಮ ಕ್ರೀ ವರ್ಮವ ಬಲ್ಲ. ಸರ್ವಚೇತನ ಭೌತಿಕವೆಲ್ಲ ಅಪ್ಪುವಿನಿಂದ ಉತ್ಪತ್ತಿ. ಅಪ್ಪುವಿನ

ಉತ್ಕೃಷ್ಟದಿಂದ ನಷ್ಟವೆಂಬುದನರಿತಲ್ಲಿ, ಜೀವನ ಆಗು ಚೇಗೆಯ ಬಲ್ಲವ. ಸರ್ವ ದೀಪ್ತಿ ಪ್ರಕಾಶ ತೇಜಸ್ಸು ಅಗ್ನಿಯಿಂದವೆ ಉತ್ಪತ್ತಿ. ಅಗ್ನಿಯ ಉತ್ಕೃಷ್ಟದಿಂದವೆ ನಷ್ಟವೆಂಬುವನರಿವಲ್ಲಿ, ಪರಮನ ಪ್ರಕಾಶವ ಬಲ್ಲ. ಸರ್ವಗ್ರಹಿತನಾಗಿ ಸುಳಿವ ಮಾರುತ ಸುನಾ[೧]ದ ಉತ್ಕೃಷ್ಟದಿಂದವೆ ಉತ್ಪತ್ತಿ. ಸುನಾದ ನಷ್ಟವಾವಲ್ಲಿಯೆ ಲಯವೆಂಬುದನರಿದಲ್ಲಿ ದಿವ್ಯಜ್ಞಾನವ ಬಲ್ಲವ. ಆಕಾಶ ಮಹದಾಕಾಶದಿಂದವೆ ಉತ್ಪತ್ತಿ. ಮಹದಾಕಾಶ ಮಹದೊಡಗೂಡಿದಲ್ಲಿ ಪಂಚಭೌತಿಕ ನಷ್ಟ. ಇವನರಿದು ಈ ಪಂಚಭೌತಿಕವ ತನು ಸಂಚಿತ ಪ್ರಾರಬ್ಧ ಆಗಾಮಿಗಳ ಕಂಡು ಸಂಚಿತವೇ ಉತ್ಪತ್ತಿ, ಪ್ರಾರಬ್ಧವೇ ಸ್ಥಿತಿ, ಆಗಾಮಿಯೇ ಲಯವೆಂಬುದ ತಿಳಿದು ಇಂತಿವರೊಳಗಾದ ಸಂಚದಲ್ಲಿ ಸಂಬಂಧಿಸಿಪ್ಪ ಸರ್ವೇಂದ್ರಿಯದ ಗೊಂಚಲ ಮುರಿದು ನಿಂದ ಸ್ವಯಾನುಭಾವಿಗೆ ಕಾಯಕ್ಕೆ ಕರ್ಮವೆಂಬುದಿಲ್ಲ, ಜೀವಕ್ಕೆ ಭವವೆಂಬುದಿಲ್ಲ, ಜ್ಞಾನಕ್ಕೆ ಇದಿರೆಡೆ ಎಂಬ ಕೂಟದ ಭಾವನಷ್ಟ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಕಾರ್ಲ್ಲಿಜುರ್ನನು ಕಲಿದೋರದೆ ನೆಲೆ ಅಳಿದನಾಗಿ ॥ ೫೯ ॥

ಸುಗಂಧದ ಮೂಲವ ಬೇರಿನ ಗಂಧ ಎಲೆ ಬಳ್ಳಿಯನೇತಕ್ಕೆ ವೇಧಿಸದು? ಕುಸುಮದ ಸುವಾಸನೆ ತನ್ನಯ ತೊಟ್ಟು ಎಲೆ ಕೊನರು ಬೇರುವನೇಕೆ ವೇಧಿಸದು? ಇದು ಇಷ್ಟಪ್ರಾಣಯೋಗದ ಭೇದ. ಗಿಡು ಗಿಡುವಿಗೆ ಕುರುಹಲ್ಲದೆ ಗಂಧ ಗಂಧ ಕೂಡಿ ದ್ವಂದ್ವವಾಗಿ ಬೆರದಲ್ಲಿ ಕದಂಬ ಗಂಧವಲ್ಲದೆ ಒಂದರ ಗಂಧವೆಂದು ಸಂದಿಸಿ ತೆಗೆಯಲಿಲ್ಲ. ಅವರು ನಿಂದ ನಿಂದ ಸ್ಥಲಕ್ಕೆ ಸಂಬಂಧವಾಗಿಪ್ಪರು. ಇದು ದೃಷ್ಟಾನುಭಾವಸಿದ್ಧಿ, ಸರ್ವಸ್ಥಲ ಭೇದ ವಿಶ್ವತೋಮುಖ ರೂಪು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ತತ್ವಭಿತ್ತಿಸ್ವರೂಪನು ॥ ೬೦ ॥

ಸವಾಲಕ್ಷದಲ್ಲಿ ಹುಟ್ಟಿ, ಸಕಲ ಕ್ರಮಂಗಳಲ್ಲಿದ್ದು ಭೋಗಿಸಿ, ಪುಣ್ಯಪಾಪಂಗಳನೆಂಬುದನರಿಯದೆ, ಶ್ರುತಿ ಸ್ಮೃತಿ ತತ್ವಂಗಳ ತಿಳಿಯದೆ ಅಗಮ್ಯ ಅಗೋಚರ ಲಿಂಗವನರಿಯದೆ ವೃಥಾ ವೈಭವಕ್ಕೆ ಕೆಡುತ್ತಿದ್ದೆಯಲ್ಲಾ! ಅಂದು ಬಂದ ಕಥನ, ಬಸವೇಶ್ವರನಿಂದ ಬಂದ ಮಥನ, ಶುಷ್ಕದ ಕಾಯಕದ ಯತನ,

೧ ಘೋಷ (ಕ)

ಎನ್ನ ಸತಿಭಾವದ ಜತನ, ಭಕ್ತಿವರ್ತನವ ಸೌಖ್ಯಸಂಬಂಧ, ನಿಷ್ಠೆ ದೃಷ್ಟ ಭಕ್ತಿ ಜ್ಞಾನ ವೈರಾಗ್ಯ ಇಂತಿವ ಹೊತ್ತಾದೆಯಲ್ಲಾ! ಇಂತೀ ಘಟ ಬಸವಣ್ಣನ ತಪ್ಪುಲಲ್ಲಿ ನಿಶ್ಚಯವಾಗಿ ನಿಂದಲ್ಲದೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಕಾಣಬಾರದು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೧ ॥

ಸುಮನ್ನಾನ ಸುಬುದ್ಧಿ ಭಕ್ತಿಸ್ಥಲ. ಮಲಾಮಲ ಮಹೇಶ್ವರ ಸ್ಥಲ. ಜ್ಞಾನ ಸುಜ್ಞಾನ ಪ್ರಸಾದಿಸ್ಥಲ. ಉಭಯ ಕೂಟಸ್ಥವೆಂಬುದು ಪರಿಹರಿಸಿ ದಲ್ಲಿ ಪ್ರಾಣಲಿಂಗಿ ಸ್ಥಲ. ಸ್ತುತಿ ನಿಂದ್ಯಾದಿಗಳಲ್ಲಿ ಒಡಲಳಿದುದು ಶರಣಸ್ಥಲ. ಇಂತೀ ಪಂಚಭೇದಂಗಳ ಸಂಚವನರಿತು ವಿಸಂಚವಿಲ್ಲದೆ ಪರುಷಪಾಷಾಣದಂತೆ ಭಿನ್ನಭಾವವಿಲ್ಲದೆ ಅರಿದು ಅಗುಹಿಸಿಕೊಂಬ ಕುರುಹು ಏಕವಾದಲ್ಲಿ ಐಕ್ಯಸ್ಥಲ. ಎನ್ನಯ್ಯ ಇದು ಎನ್ನ ನಿನ್ನ ಷಟ್ಸ್ಥಲ. ಇವಕ್ಕೆ ಭಿನ್ನಭಾವವಿಲ್ಲ. ಅದು ಎನ್ನ ನಿನ್ನ ಕೂಟದ ಸುಖದಂತೆ. ಇದ ಚೆನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ ಇಲ್ಲಿ ಎಂಬ ಗೆಲ್ಲಗೂಳಿತನಬೇಡ. ಹಾಗೆಂಬಲ್ಲಿ ಬಯಲಾಗಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥ ೬೨ ॥

ಸ್ಥಾಣು ನರನೆಂದು, ರಜ್ಜು ಸರ್ಪನೆಂದು, ಸ್ಫಟಿಕದ ಘಟದಲ್ಲಿ ನಿಂದ ಗಜ ದಿಟವೆಂದು, ನಿಬದ್ಧಿಸಿ ನೋಡಲಿಕ್ಕಾಗಿ ಸಂದೇಹ ನಿಂದಲ್ಲಿ ಮುನ್ನಿನಂದವೆ ಆ ನಿಜ. ಈ ಸಂದೇಹಗುಣ ನಿವೃತ್ತಿಯಾದಲ್ಲಿ ಇಷ್ಟ ಪ್ರಾಣವೆಂಬ ಉಭಯದ ದೃಷ್ಟ ಒಂದೇ ವಿಶ್ವಾಸದಿಂದ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ॥ ೬೩ ॥

ಸ್ವಯವಿದ್ದಂತೆ ಲಯವ ಕೂಡುವರೆ ಅಯ್ಯಾ? ಪರುಷವಿದ್ದಂತೆ ಹೇಮವನರಸುವರೆ ಅಯ್ಯಾ? ಸ್ವಯಂಜ್ಯೋತಿ ಇದ್ದಂತೆ ದೀಪವನರಸುವರೆ ಅಯ್ಯಾ? ನಿನ್ನಲ್ಲಿ ಇಲ್ಲಿ ಕೂಡಿಹೆನೆಂಬ ಕೂಟದ ಭಿನ್ನವ ಹೇಳಯ್ಯಾ. ಕಣ್ಣಲಿ ನೋಡಿ, ಕಣ್ಣು ಮರದು ನಿಂದು ಆ ಭಿನ್ನಭಾವದಂತೆ ಆದಿರಲ್ಲಾ. ಅದು ನಿಮ್ಮ ಗುಣವಲ್ಲ ಎನ್ನಗುಣ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೪ ॥

ಸಂಸಾರ ಸಾಗರದಿಂದಲುದಿಸಿದ ಸುಖವೇ ದುಃಖವೆಂದರಿಯದೆ, ಆ ಸುಖವನೇ ಮೆಚ್ಚಿ ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ

ವಿರಿಮು ತನಗಿಲ್ಲದ ಭ್ರಮೆಯ ತನ್ನದೆಂದು ಅಂತಪ್ಪ ಘೋರದೊಳಗೋಲಾ ಡುತ್ತಿಪ್ಪ ಮುಳುಗಾಡುತ್ತಿಪ್ಪ ಅಜ್ಞಾನಿ ಜೀವಿಗಳು ನಿಮ್ಮನೆತ್ತ ಬಲ್ಲರಯ್ಯಾ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೫ ॥

ಹೇಮದ ಬೆಂಬಳಿಯ ಸ್ವರೂಪದಂತೆ, ಗ್ರಾಮದ ಬೆಂಬಳಿಯ ಬಟ್ಟೆ ಯಂತೆ, ಹೇಮದ ರೂಪವಳಿದು ಸ್ವರೂಪವಡಗಿದಲ್ಲಿ ಕುಶಲ ಚಿತ್ರವೆಲ್ಲಿ ದ್ದಿತ್ತು? ಬಟ್ಟೆಯ ಮೆಟ್ಟಿಹೋಗಿ ಪುನರಪಿಯಾಗಿ ತಿರಿಗಿದಲ್ಲಿ ಊರಬಾಗಿಲ ಬಟ್ಟೆಯೊಂದರಲ್ಲಿಯೇ ಹೋಗಬೇಕು. ಇದು ದೃಷ್ಟಕ್ಕೆ ಕೊಟ್ಟ ಇಷ್ಟ. ಆ ಇಷ್ಟ ಚಿತ್ತದಲ್ಲಿ ಅಚ್ಚೊತ್ತಿದ ಮತ್ತೆ ಆ ನಿಶ್ಚಯದ ಉಭಯವ ತಿಳಿವಲ್ಲಿ ಕಾಯಕ್ಕೆ ಕೈಲಾಸವೆಂಬುದಿಲ್ಲ. ಭಾವಕ್ಕೆ ಬಯಲೆಂಬುದಿಲ್ಲ. ಅನಲನಲ್ಲಿ ಅರತ ದ್ರವ್ಯದಂತೆ ಅದು ಅಮೂರ್ತಿಭಾವ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸದ್ಭಾವವಂತನ ಲಕ್ಷಣ ॥ ೬೬ ॥

ಹೃತ್ಕಮಲ ಮಧ್ಯದಲ್ಲಿಪ್ಪ ಲಿಂಗವ,ಸರ್ವಾಂಗವಲ್ಲಿ ವೇಧಿಸಿ ಪರಿಪೂರ್ಣ ವಪ್ಪ ಲಿಂಗವ ಅಂತರ್ಮುಖದಿಂದ ಬಾಹ್ಯಮುಖಕ್ಕೆ ತಂದು, ಪಂಚಸ್ಥಾನದ ಲ್ಲಿಪ್ಪ ಲಿಂಗವ ಕರಸ್ಥಲವಲ್ಲಿ ಮೂರ್ತಿಗೊಳ್ಳಲಿಕ್ಕಾಗಿ, ಕಂಗಳು ತುಂಬಿ ಬಾಹ್ಯ ದೃಷ್ಟಿ ಅರತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ, ದೃಕ್ಕಿಂಗೆ ತೋರುವದೆಲ್ಲವು ಲಿಂಗಮಯವಾಗಿ, ಎನ್ನ ಮುಟ್ಟಿ ಹಿಡಿದಲ್ಲಿ ಪುಷ್ಪಮಯವಾಗಿ, ಜಿಹ್ವೆಯಲ್ಲಿ ತೋರಿದ ಅಪ್ಪು ರಸ ಮುಂತಾದುದೆಲ್ಲವು ಅರ್ಪಿತಮಯವಾಗಿ, ಇಂತಪ್ಪ ವ್ಯವಧಾನ ಸರ್ವಾಂಗಲಿಂಗಿಯ ವಿವರ ಇಷ್ಟವನರಿದು ಉಭಯದ ಗುಟ್ಟು ಕೆಟ್ಟಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಇದಿರೆಡೆ ಇಲ್ಲ ॥ ೬೭ ॥

ಷಡುರುಚಿಯನರಿವನ್ನಕ್ಕ ಬೇಟದ ಚುನ್ನ ಬಿಡದು. ಬೇಟ ಬಲಿದ ಮತ್ತೆ ಕೂಟಕ್ಕೆ ಸವಿಾಪ. ಸಂಯೋಗದ ಸುಖ ದೈಯ್ಯುಂಡವಂಗೆ ಲೋಕದ ನಚ್ಚು ಮಚ್ಚಿನ ಬಲಿದೊಡಕು ತಪ್ಪದು. ಇನಿತುಳ್ಳನ್ನಕ್ಕ ನಿರಂಗನಾನೆಂಬ ಮಾತು ಸಟೆ. ಇನಿತುಳ್ಳ ಅಂಗಸಂಗಿಗಳಿಗೆ ಭಕ್ತಿ ವಿರಕ್ತಿ ಎಲ್ಲಿಯದೋ? ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥ ೬೮ ॥

ಕಾಯವೆರಸಿ ಕೈಲಾಸಕ್ಕೆ ಹೋಹೆನೆಂಬರು. ಇದು ಕ್ರಮವಲ್ಲ. ಘನ ಲಿಂಗ ಕರಸ್ಥಲದೊಳಗಿಪ್ಪ ಅನುವನರಿಯದೆ ಇಲ್ಲಿ ಕರ್ಮ ಅಲ್ಲಿ ನಿಃಕರ್ಮವೇ? ಹೇಮದ ಮಾಟದ ಒಳ ಹೊರಗಿನಂತೆ ಮರ್ತ್ಯ ಕೈಲಾಸವೆಂಬ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ. ತತ್ವವನರಿದಲ್ಲಿಯೇ ಒಳಗು. ಈ ಗುಣ ಸದಮಲ ಭಕ್ತನ ಮುಕ್ತಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಿಕ್ಕಿದ ಗೊತ್ತು ॥ ೬೯ ॥



# ಮೋಳಿಗೆಯ ಮಾರಯ್ಯನ ವಚನಗಳ
# ಅಕಾರಾದಿ ಪಟ್ಟಿ

ಟಿಪ್ಪಣಿ : ವಚನಗಳ ಮುಂದಿನ ಅಂಕಿಗಳು ಗ್ರಂಥದಲ್ಲಿಯ ವಚನಗಳ ಸಂಖ್ಯೆಗಳು

## ಅ

## ಈ



## ಉ



## ಊ



## ಋ



## ಎ

## ದ



## ಧ



## ನ

## ಮ

ಯ



ರ



ಲ

---

# ಮಹಾದೇವಿ ರಾಣಿಯ ವಚನಗಳ
# ಅಕಾರಾದಿ ಪಟ್ಟಿ

### ದ



### ನ



### ಪ



### ಬ



### ಭ



### ಮ



### ಲ



### ಶ



### ಷ



### ಸ



### ಹ

# ಶಬ್ದಕೋಶ

ಸೂಚನೆ—ಸಂ=ಸಂಸ್ಕೃತ. ಕ=ಕನ್ನಡ ನೋ=ನೋಡು.

ಅ

ಅಕಳಂಕ= ನಿರ್ದೋಷ, ಪವಿತ್ರ
ಅಕ್ಕೆ (ಆಗು)= (೧)ಆಗಿಯೆ ತೀರು,
(೨) ದುಃಖ
ಅಕ್ಷರಜ್ಞ= ಪಂಡಿತ
ಅಗಡು= ಅಸಭ್ಯ, ಎಟ್ಟ
ಅಗ್ಗಳೆಯ= ಅಧಿಕ, ಬಲಿಷ್ಠ,
ಪರಾಕ್ರಮಿ
ಅಗ್ಘಣಿ (ಅಗ್ಗವಣಿ)= ಪವಿತ್ರವಾದ
ನೀರು, ಪಾದೋದಕ, ಲಿಂಗೋದಕ
ಅಗ್ನಿಯೊಳಗಡಗದ ಹೆಂಡತಿ= ಗಂಡ
ಸತ್ತಾಕೆ, ವಿಧವೆ
ಅಂಕಶೂನ್ಯಗಾರ= (೧) ಗಾರುಡಿಗ,
ಶೂರ, ವೀರ, (೨) ಹೆಸರಿಲ್ಲದವ,
ದೋಷರಹಿತ, (೩) ಶೂನ್ಯಶಬ್ದ
ದಿಂದ ಕರೆಯಲ್ಪಡುವವ
ಅಂಗುಲ= ಬೆರಳು
ಅಚ್ಚಿ (ಸಂ. ಅಕ್ಷಿ)= ಕಣ್ಣು
ಅಚ್ಚಿಗ (ನೋ. ಅಚ್ಚುಗ)= (೧)
ವ್ಯಥೆ, ಕಷ್ಟ (೨) ರೀತಿ, ಒಲವು
ಅಚ್ಚು= ನೇಗಿಯ ಅಣೆ
ಅಚ್ಚುಗ= ಆಶ್ಚರ್ಯ
ಅಜಗಳ (ಅಜ+ಗಳ)= ಆಡಿನ
ಕೊರಳು, ಗಂಟಲು
ಅಂಚೆ= ಕೊನೆಯಭಾಗ, ಸೆರಗು, ತುದಿ
ಅಟ್ಟಗಳೆ= ಸೀಗೆಯ ನೀರು

ಅಟ್ಟಳೆ= ಅಟ್ಟ, ಎತ್ತರವಾದ ಗೋಡೆ
ಅಡಕ= ಒಳಗಿರುವದು, ಮರ್ಮ
ಅಡಕು= ಒಟ್ಟು, ಸಂಗ್ರಹಿಸು
ಅಡಗು= ಮುದುರಿಕೊಳ್ಳು, ಕಾಣದೆ
ಹೋಗು
ಅಡವರಿಸು= ಅಡಬರಿಸು, ತ್ವರೆಪಡು
ಅಡಿ= ಕೆಳಭಾಗ, ತಳ
ಅಡಿಗ= ಅಡಿಯಾಳು, ಸೇವಕ,
ಕೀಳುಮನುಷ್ಯ
ಅಡೆ= ಮರ್ಮ, ರಹಸ್ಯ
ಅಡ್ಡಿಗೆ= ಅಡಗಲ್ಲು
ಅಣಲು= ಬಾಯಿ, ಮುಖ
ಅಣೆ= ಕೆಚ್ಚುವ ಹಲ್ಲಿನ ಕೋಲು,
ಬಿಜಗರೆ
ಅದುರು= ನಡುಗು, ನಡುಗುವ ಶಬ್ದ
ಅದ್ದಿಗ= ಮುಳುಗುವವ
ಅದ್ರಿ= ಪರ್ವತ
ಅನಲ= ಬೆಂಕಿ
ಅನಾಗತ= ತಿಳಿಯದ ವಸ್ತು, ಪರಶಿವ
ಅನಾಚಾರ= ನಿಃಕ್ರಿಯೆ, ಅನೀತಿ
ಅನಾಮಿಕ= ನೀಚ, ಪಾಪಿಷ್ಠ,
ಅಪ್ರಸಿದ್ಧ
ಅನಿಲ= ಗಾಳಿ
ಅನಿಹಿತ= ಅಯೋಗ್ಯ
ಅನುವಿನ= ಮೆಚ್ಚಿದ, ಆಶ್ರಯಿಸಿದ
ಅನುವು= ಸಿದ್ಧತೆ, ಸ್ಥಳ

ಅನುಸರಣೆ= ಹಿಂಬಾಲಿಸುವದು, ಅನುಕರಣೆ. ನಡತೆ
ಅಂತು (ಅಂತ್ಯ)= ನೆಲೆ, ನಿಜ
ಅಂತುಕ= ಸಂದೇಹ, ಆಶೆ
ಅಂದಗಾರ= ಬಣ್ಣದ ಮಾತಿನವ
ಅಂದಳ= ಪಲ್ಲಕ್ಕಿ
ಅಪ್ಪ= (ಸಂ) ನೀರು, (ಕ) ಅಗು. ಅಲಿಂಗಿಸು
ಅಪ್ಪುವರತ= ನೀರಾರಿದ
ಅಪ್ಪುವಿನ ಯೋಗದ ಕಾಷ್ಟ= ಹಸಿ ಕಟ್ಟಿಗೆ
ಅಪ್ಪುವಿನಮುಚ್ಚಿಕೆ= ನೀರಿಗೆ ನೀರು ಕೂಡಿದಂತೆ
ಅಭಿವಾರ್ತ= ಪ್ರತ್ಯಕ್ಷ. ದೃಷ್ಟಿ
ಅಮುಕೋಕ= ಕಂಠ, ಕೊರಳು, ಗಂಟಲು
ಅಂಬರ= (೧) ಆಕಾಶ, (೨) ವಸ್ತ್ರ
ಅಂಬು= ನೀರು, ಬಾಣ
ಅಂಬುಜ= ಕಮಲ
ಅಂಬಸಿ= ನೀರು
ಅಯಸ್ಕಾಂತಶಿಲೆ= ಸೂಜಿಗಲ್ಲು
ಅಯ್ದು= ಹೊಂದು
ಅರತು= ಆರಿಹೋಗಿ, ಇಲ್ಲದಾಗಿ
ಅರಿಕತ್ತರಿ= ವೈರಿಯು ಖಡ್ಗ, ಕೊಲ್ಲುವ ಕತ್ತಿ
ಅರಿಗುರಿ= ಅರುವಿಲ್ಲದವ, ಅಜ್ಞಾನಿ
ಅರುಣ= ಸೂರ್ಯ
ಅರೆ= ಕಲ್ಲು, ಭಾಗ, ತುಂಡು
ಅರೆಯಿಸಿಕೊಳ್ಳು= ಹೊಡೆಯಿಸಿ ಕೊಳ್ಳು
ಅರ್ತಿ= (೧) ಪ್ರೀತಿ, ಸುಖ, ಫಲಾ ಪೇಕ್ಷೆ, (೨) ದುಃಖ

ಅರ್ತಿಕಾರ (ಅರ್ಥಿಕಾರ)= ಆಶಾಬದ್ಧ, ಫಲಾಪೇಕ್ಷೆಯುಳ್ಳವ, ಬೇಡುವವ, ಸ್ವೇಚ್ಛಾಚಾರಿ
ಅಲಸು= ಆಲಸ್ಯಮಾಡು, ತಡಮಾಡು
ಅಲಂಕಾರ= ಕುರುಹು, ಉರಿ
ಅವಗವಿಸು= ಅವಗ್ರಹಿಸು, ಆವರಿಸು, ಹಿಡಿಸು, ತಿಳಿ, ಉಂಟಾಗು
ಅವಸಾನ= ಹಾವು ಪರಿಬಿಡುವ ಸಮಯ, ಅವಸಾನ ಕಾಲ
ಅವಿಮುಕ್ತ= ಕಾಶಿಯು ಕ್ಷೇತ್ರ
ಅವುಚಿತ= ಅಯೋಗ್ಯ, ಬೆಂದ?
ಅಸಮನಯನ= ಮುಕ್ಕಣ್ಣ, ಶಿವ
ಅಸಿ= (೧) ಕತ್ತಿ, (೨) ಕ್ಷಾತ್ರವೃತ್ತಿ
ಅಸುಗಳು= ಪಂಚವಾಯುಗಳು
ಅಳಕ= ಮುಂಗುರುಳು, ಕೂದಲ ಎಳೆ
ಅಳವಡು= ಅನುಭವಕ್ಕೆ ಬರು, ಏಕ ವಾಗು, ಜೀರ್ಣಿಸು, ತುಂಬು
ಅಳವಾಡು= (೧) ನೆಲೆತಿಳಿ, (೨) ನಷ್ಟ ಪಡಿಸು
ಅಳವು= ಅಡವಿ, ಅರಣ್ಯ
ಅಳುಮನ= ಅಂಜಿಕೆ

## ಆ

ಆಗದ= ಒಡೆದ, ಪ್ರಯೋಜಕ್ಕೆ ಬಾರದ
ಆಗರ= ಮನೆ, ಮೂಲ, ಆಶ್ರಯ
ಆಗವೆ= ಆಗಲೆ
ಆಗು= ಕಾಲಜ್ಞಾನ, ಒಳಿತು, ಜ್ಞಾನೋಪದೇಶ
ಆಗುಚೇಗೆ= (೧) ಆದಿ ಅಂತ್ಯ, (೨) ಸುಖ ದುಃಖ (೩) ಹುಟ್ಟು ಬೆಳವಣಿಗೆ

ಆಜ್ಯ= ತುಪ್ಪ
ಆಡು= ನಟಿಸು, ಚಲ್ಲಾಟವಾಡು
ಆಣಿ= ಆಣೆಕಲ್ಲು, ಶ್ರೇಷ್ಠ ಮುತ್ತು, ಮಣಿ
ಆತಯ= ಒಳಗಾದ, ದೊರೆತ
ಆತ್ಮತೇಜ= ಸ್ವಾರ್ಥ, ಅಹಂಕಾರ
ಆತ್ಮಸ್ಥಾವರ= ಸೂಕ್ಷ್ಮ ಮತ್ತು ಜಡ
ಆಧಿ= ದು:ಖ, ಮನೋವ್ಯಥೆ
ಆಪ್ಯಾಯನ= ಹಸಿವೆ, ತೃಪ್ತಿ, ಆನಂದ
ಆಭಾಸಾಂಗ= ತಲ್ಲೀನ
ಆರಕ =ಸಂತೈಸುವವ
ಆರಡಿ= ಆರು ಅಡಿಯುಳ್ಳದ್ದು, ಭ್ರಮರ
ಆರಡಿಗೊಳ್ಳು= ತೊಂದರೆ ಪಡು
ಆರದೆ= ನಾಶವಾಗದೆ
ಆರನು= ಬಿಡನು, ಶಕ್ತನಾಗನು
ಆರವೆ= ಆರಾಮು ತೆಗೆದುಕೊಳ್ಳುವ ನೆರಳಿನ ಮರ
ಆರಾಗು= ಪಟ್ಟಲ ಸಿದ್ಧಿಹೊಂದು
ಆರು= ಹೊಂದು, ಆಗು, ಸಮರ್ಥ ನಾಗು
ಆರೂಢ= ಸಿದ್ಧಿ ಹೊಂದಿದ
ಆರೈ= ಹುಡುಕು, ಪರೀಕ್ಷಿಸು, ವಿಚಾರಿಸು, ಲಕ್ಷಿಸು
ಆರೋಗಿಸು= ಊಟಮಾಡು
ಆರ್ಜವ= ಸಂಪಾದನೆ, ದೊರಕಿಸಿದ್ದು
ಆಲಿ= (೧)ಕಣ್ಣುಗುಡ್ಡೆ, (೨)ರಾಟ ಯಂತ್ರ
ಆವಾಸ= ಇರುವಿಕೆ, ಮನೆ
ಆವೆ= ಚಿಕ್ಕಾಡು
ಆಶಿಲೆ= ಚಂದ್ರಕಾಂತ ಶಿಲೆ
ಆಸುರ= ಭಾರವಾದ, ಅತಿಶಯ, ಹೆಮ್ಮೆ, ತೊಂದರೆ
ಆಹುತಿ= ಹೊಡೆತ, ಕೊಲೆ
ಆಳಿ= ಗುಂಪು, ಸಮೂಹ

## ಇ

ಇಕ್ಕು= ಬರೆ, ಚಿತ್ರತೆಗೆ, ಎರಕ ಹೊಯ್ಯು
ಇಕ್ಕೆ= ಮನೆ, ಬೀಡು, ವಾಸಸ್ಥಳ
ಇಕ್ಷುದಂಡ= ಕಬ್ಬು
ಇಂಗಳ= ಉರಿಯುವ ಕೆಂಡ
ಇದಿರು= ಭಿನ್ನ, ಬೇರೊಬ್ಬ, ಅನ್ಯ, ವೈರಿ
ಇದಿರಿಡು= ತನ್ನಿಂದ ಭಿನ್ನವಾಗಿತಿಳಿ
ಇದೆಸೆ= ಎರಡುದಿಕ್ಕು, ಎರಡುಬದಿ
ಇನ್ನೇವೆ= ಇನ್ನೇನು ಮಾಡಲಿ
ಇಪೆ = ಇರುವೆ
ಇರಹ= ಇರಿತ, ತೂತು, ಹರಕು
ಇಲ್ಲವೆ= ಇಲ್ಲದಿರುವಿಕೆ, ಬಡತನ
ಇಳೆ= ಭೂಮಿ, ಲೋಕ

## ಈ

ಈಡು= ಸರಿ, ಸಮ
ಈಷಣತ್ರಯ= ಹೆಂಡತಿ, ಮಕ್ಕಳು, ದ್ರವ್ಯ ಮುಂತಾದವುಗಳ ಆಶೆ

## ಉ

ಉಗಿ= ಹುಟ್ಟು, ಅಂಕುರಿಸು, ಪ್ರವೇಶಿಸು
ಉಚಿತ= ಯೋಗ್ಯ (ಬಿತ್ತುವ ಕಾರ್ಯ)
ಉಟ್ಟ= ಭ್ರಮರ, ಜೇನುನೊಣ
ಉಡಿ= ಸೊಂಟ, ನಡು
ಉಡುಪ= ಚಂದ್ರ, ಸುಂದರ ಸ್ತ್ರೀ
ಉತ್ತಮಾಂಗ= ತಲೆ
ಉತ್ತರದ= ದೊಡ್ಡ, ಮರಣಕರವಾದ
ಉದಕ= ನೀರು, ಸಮುದ್ರ

ಉದರದ ಹುತ್ತ= ಹೊಟ್ಟೆ
ಉದ್ಯಾಪನ= ವ್ರತ ಸಮಾಪ್ತಿ
ಉನ್ಮತ್ತ= ಸೊಕ್ಕಿನ, ಗರ್ವಿಷ್ಠ
ಉನ್ಮತ್ತದ ರಸ= ಸರಾಯಿ
ಉಪಚಾರ= ರೋಗಪರೀಕ್ಷೆ
ಉಪದೃಷ್ಟ= ಕಣ್ಣಿಗೆ ಮರೆಯಾದ
ಉಪೇಕ್ಷೆ= ಅಲಕ್ಷ್ಯ, ಸಡ್ಡಾಗಿ, ಮಂದವಾಗಿ
ಉಮ್ಮಳ= ಶಕೆ, ಕಳವಳ
ಉಮ್ಮಳದುಮ್ಮಳ= ವ್ಯಥೆ, ಚಿಂತೆ
ಉರ= ಎದೆ
ಉರವಣಿಸು= ಉದ್ವೇಗದಿಂದ ಬರು
ಉರಿನೀರು= ಕಾದ ನೀರು

## ಊ

ಊದು= ಬಾಯು, ಉಬ್ಬು

## ಎ

ಎಕ್ಕಟಿಗ= ದೊರೆ, ಸರದಾರ
ಎಕ್ಕಲ= ಕಷ್ಟ, ತೊಂದರೆ
ಎಡೆದೆರವು= ನಿರಂತರವಾದ, ತೆರವಿಲ್ಲದ
ಎಡೆಯಾಡು= ತಿರುಗಾಡು, ಎಡತಾಕು
ಎಣಿಸು= ಯೋಚಿಸು, ಲೆಕ್ಕಿಸು
ಎತ್ತಿದ ದೀಪ= ಆರತಿ
ಎಡೆಬಿಡು= ಪಶ್ಚಾತ್ತಾಪಪಡು, ಅಂಜು
ಎರಕ= ಐಕ್ಯತೆ, ಪ್ರೀತಿ, ಅನ್ಯೋನ್ಯ
ಎಲವ= ಬೂರಲುಗಿಡ
ಎಲ್ಲೆ= ತೀರ, ದಂಡೆ
ಎಸಕ= (೧) ಎಸಗಿದಕಾರ್ಯ, ಪೂಜೆ, (೨) ಅದೃಷ್ಟ, ಸಾಮರ್ಥ್ಯ, (೩) ಆಕರ್ಷಣ, (೪) ಸೌಂದರ್ಯ, ಆನಂದ
ಎಸೆ= (೧) ಹೊಳೆ, ಚಂದಕಾಣು, (೨) ಹೊಡೆ, ಹೊರಹೊಮ್ಮು
ಎಳಸು= ಬಯಸು, ಆಶಿಸು

## ಏ

ಏಕ= ಸಾಮಾನ್ಯ ಅರಸು, ಮಾಂಡಲಿಕ
ಏಣರೆ= ಚಿಗರಿ, ಎರಳೆ
ಏರಿ= ದಿನ್ನೆ, ದಂಡೆ, ಒಡ್ಡು

## ಐ

ಐಸೆ= ಅಷ್ಟೆ

## ಒ

ಒಕ್ಕು= ಸಂಗ್ರಹಿಸು, ಉಣ್ಣು, ಒಗೆ, ಚೆಲ್ಲು
ಒಕ್ಕುದು= ತೆಗೆದುಕೊಂಡ ಪ್ರಸಾದ
ಒಕ್ಕುಳ= ಒಂದು ಅಳತೆ
ಒಚ್ಚತಗೊಳ್ಳು= ಕೂಡು, ಏಕೀಕರಿಸು, (೨) ಸಂತೋಷದಿಂದ ಸ್ವೀಕರಿಸು
ಒಚ್ಚತ್ತು= ಒಮ್ಮೆ, ಒಂದು ಸಮಯ
ಒಚ್ಚೆ= ಅಪಮಾನ
ಒಟ್ಟೆ= ಮುರಕೊಳ್ಳು, ವಜಾ
ಒಡಗೂಡುವರು= ಸ್ನೇಹಿತರು, ಬಂಧುಗಳು
ಒಡಗು= ಒಡಕು, ಭೇದ, ಭಾಗ
ಒಡಲು= ಆಧಾರ, ಕಾರಣ, ದೇಹ
ಒಡವೆ =ಪದಾರ್ಥ, (ಕ್ರಯ, ಬೆಲೆ)
ಒಡೆ= ಹರಿ, ಇಬ್ಭಾಗಮಾಡು
ಒತ್ತು= ಸಮೀಪ, ಬದಿ, ಪಕ್ಕ

ಒದವು= ಪ್ರಾಪ್ತವಾಗು, ಒದಗು
ಒಪ್ಪವಿಡು= (೧) ಪ್ರೀತಿಯಿಂದಕಾಣು, ಮನ್ನಿಸು, (೨) ಸ್ವೀಕರಿಸು, (೩) ಸೈರಿಸು, (೪)ಒಪ್ಪಿಕೊಳ್ಳು .
ಒಪ್ಪ= (೧)ಚೆಂದ, (೨)ಹಿಡಿಕೆ, ಹಿಡಿಯತಕ್ಕ ಸ್ಥಳ
ಒಪ್ಪೈಸು= ಕಪಟಭಕ್ತಿತೋರಿಸು
ಒಬ್ಬಳ, ಒವಮ್ಮಾನ } = ಒಂದು ಅಳತೆ
ಒರತೆ= ನೀರು, ಹಳ್ಳ, ಬುಗ್ಗೆ
ಒರತೆಯ ಕೊಡ= ನೀರಿನ ಕೊಡ
ಒರೆಗಟ್ಟು= ಹೇಳು, ಪ್ರತಿಜ್ಞೆಮಾಡು
ಒಲವರ= (೧)ಮನಸ್ಸಿನ ಒಲವು, ಮೆಚ್ಚಿಕೆ, ಸಂತೋಷ, (೨)ಪಕ್ಷಪಾತ, ತೂಕದ ಹೆಚ್ಚು ಕಡಿಮೆ
ಒಲ್ಲಭ = ಒಡೆಯ, ಗಂಡ
ಒಳಲೆ= ಕೂಸಿಗೆ ಹಾಲು ಕುಡಿಸುವ ಪಾತ್ರೆ, ಗಿಂಡಿ
ಒಳಹು= ಮರ್ಮ, ರಹಸ್ಯ, ನಿಜ

## ಓ

ಓಡು= ಗಡಿಗೆ, ಹುರಿಯುವ ಹಂಚು
ಓದು= ವಿದ್ಯೆ
ಓಲು= ಅಂತೆ, ಸಮ, ಸಾದೃಶ್ಯ
ಓರೆ= ಬಾಗು, ಜಾರುವಸ್ಥಳ, ಕಟ್ಟೆ
ಓಲೈಸು=ಸೇವಿಸು, ಮೆಚ್ಚಿಸು
ಓಸರಿಸು= ಬಿಟ್ಟುಬಿಡು, ತ್ಯಜಿಸು, ಹಿಂಜರಿ, ಬಂಧಮುಕ್ತಮಾಡು
ಓಹರಿ= ಒಳಭಾಗ(ನಾಸಿಕದ+ಓಹರಿ)

## ಔ

ಔದುಂಬರ= ಅತ್ತಿಯ ಮರ

## ಕ

ಕಕ್ಷೆ= ಕಂಕುಳ, ಬಗಲು
ಕಂಗಳು= ಕಣ್ಣು
ಕಟ್ಟವೊಸರು= ಕೆನೆಮೊಸರು
ಕಟ್ಟರಸು= ಮುಖ್ಯಅರಸು, ಚಕ್ರಾಧಿಪತಿ
ಕಟ್ಟಿಕೆ= ಕಟ್ಟೋಣ
ಕಟ್ಟಿಗೆ= ಕೋಲು, ದಂಡ
ಕಟ್ಟುಮಟ್ಟು= ಅಂಕೆ, ಕಟ್ಟಳೆ, ನಿರ್ಬಂಧ
ಕಟ್ಟುವೊಡೆ= ಬಂಧಿಸಲ್ಪಡು
ಕಠಿಣ= ಕಲ್ಲು (ಸಂಜ್ಞಾ ಪ)
ಕಡವರ= ಬಂಗಾರ
ಕಡೆಗಾಣಿಸು= ಪೂರೈಸು, ಕರಗಿಸಿ ಒಂದುಮಾಡು
ಕಡೆಹಾಸು= ಕೊನೆಗೆ ಮುಟ್ಟಿಸು
ಕಡ್ಡಾಯ= ಬಲಾತ್ಕಾರ
ಕಣೆ= ಕಲ್ಲು
ಕಣಿಲೆ(ಕಳಿಲೆ)= ಎಳೆಯ ಕೂಸು
ಕಣ್ಣಾಲಿ= ಕಣ್ಣಿನ ಗುಡ್ಡೆ, ಗೊಂಬೆ
ಕಣ್ಣೆ= (೧)ಉಕ್ಕಡದಹಗ್ಗ,(೨)ಬೆಲ್ಲದ ತುಂಡು
ಕಂಡಪಿಳ್ಳೆ= ಗರ್ಭದೊಳಗಿನ ಕೂಸು, ಮಾಂಸದ ಪಿಂಡ
ಕತ್ತು= ಉರಿಹತ್ತು
ಕದಳಿ= ಬಾಳೆ, ಅಡವಿ, ಅರಣ್ಯ
ಕದಳಿಯ ಕರ್ಪೂರ= ಕರ್ಪೂರಬಾಳೆ, ಸುಗಂಧಿ ಬಾಳೆ
ಕದಂಬ= ಮಿಶ್ರ, ಶುದ್ಧವಲ್ಲದ
ಕದ್ದೆಹಕಾರ= ಆಶೆಬುರುಕ
ಕಪಟ= ವೇಷ, ಮೋಸ

ಕಪಿಲೆ= ಆಕಳು
ಕಪೋತ= (೧) ಪಾರಿವಾಳ, (೨) ಬೂದಿಯಬಣ್ಣ
ಕಪ್ಪಡ= ಅರಿವೆ, ತುಂಡರಿವೆ
ಕಪ್ಪರ= ಭಿಕ್ಷಾಪಾತ್ರೆ, ಬ್ರಹ್ಮಕಪಾಲ
ಕಮಠ= ಕೂರ್ಮ, ಆವೆಯ ಮರಿ
ಕಮ್ಮಟ= ಟಂಕಸಾಲೆ, ಅಕ್ಕಸಾಲೆಯ ಅಂಗಡಿ
ಕರತಳಾಮಳಕ= (೧) ಕೈಯನೆಲ್ಲಿ ಕಾಯಿ, (೨) ಪ್ರತ್ಯಕ್ಷ, ಸ್ಪಷ್ಟ
ಕರಿ= (ಸಂ) ಆನೆ, (ಕ) ಕಪ್ಪು, ಮಸಿ, ಇದ್ದಲು
ಕರಿಗೊಳ್ಳು= ( )ಪಕ್ವವಾಗು, ಪರಿಪೂರ್ಣವಾಗು, (೨)ಅನುಭವಕ್ಕೆ ಬರು, ಸಮರಸವಾಗು, (೩) ಕರಕಾಗು, ನಷ್ಟವಾಗು
ಕರಿಟಳ= ಜಿಗಟು, ಹೆಡಸು
ಕರು= ಪುತ್ಥಳಿ, ಗೊಂಬೆ
ಕರುವಿಡು= ಪಡಿಯಚ್ಚಿನಲ್ಲಿ ಹಾಕಿತೆಗೆ
ಕರ್ಕಶ= ಕಠಿಣ, ದೃಢ
ಕರ್ಮಾರ= ಅಕ್ಕಸಾಲಿಗ
ಕಲ್ಲರೆ= ಕಲ್ಲು ಬಂಡೆ
ಕಲ್ಪಿತ= ಹಣೆಯ ಬರೆಹ
ಕಲ್ಲಿ= (೧) ಹಗ್ಗದಿಂದಮಾಡಿದಚೀಲ, ಬಲೆ, (೨) ಕಮಾಸಿನ ಅಂಗಿ
ಕಲ್ಲುವಾಸ= ಕಲ್ಲು ಹೊದಿಕೆ
ಕವಲೆ= ಕೊಂಬೆ
ಕಳಂಕು= ತಪ್ಪು, ದೋಷ, ಮೈಲಿಗೆ
ಕಳಿಲೆ= ಎಳೆಯ ಬಿದಿರು
ಕಳು= ಕದಿ
ಕಳೆ= ಕಾಂತಿ, ಸೌಂದರ್ಯ, ಚಂದ್ರನ ಕಲೆ

ಕಾಕು= ಕೆಟ್ಟ
ಕಾಬು= ಕಾಣು
ಕಾರುಕ= ಕೈಗಾರಿಕೆಯವ, ಉಪ್ಪಾರ, ಶಿಲ್ಪಿ
ಕಾರ್ಪಣ್ಯ= ದಯೆ
ಕಾರ್ಪಾಸ= ಹತ್ತಿ, ಅರಳೆ
ಕಾಲುಕೆಡು= ಅಧೈರ್ಯಪಡು. ಅಂಜು
ಕಾಶ= ಹುಲ್ಲು, ದಂಟು
ಕಾಷ್ಟ= ಕಟ್ಟಿಗೆ (ಅರಣಿಯ), ದಂಟು, ಉರುವಲ
ಕಾಳಕೂಟ= ವಿಷ
ಕಾಳಿಕ= ಕತ್ತಲೆ
ಕಾಳುಬಂಟ= ಸೋತು ಹೋದವ
ಕಾಳೋದರ= ಕಪ್ಪುಶರೀರ, ಸಂಸಾರ
ಕಿಚ್ಚು= ಉರಿ, ವಿಷ
ಕಿರಣ= ಪ್ರಕಾಶ, ಉಷ್ಣತೆ
ಕಿಲ್ಲಿ= ಬೆಂಕಿ
ಕಿಸಲಯ= ಎಳೆಯ ಚಿಗುರು, ಕುಡಿ
ಕಿಸುಕುಳರು= ಅಲ್ಪರು, ಕ್ಷುಲ್ಲಕರು
ಕೀರ= ಗಿಳಿ (ಸೋ.-ನಳಿಕೆಯಕೀರ)
ಕೀಲ(ಕೀಲೆ)= ಬೆಂಕಿ, ಜ್ವಾಲೆ
ಕೀಳ= ಕಡಿಮೆಯವ, ಅಜ್ಞಾನಿ, ಮೂಢ
ಕೀಳು= ಇಳುಕಲು, ಇಳಿಜಾರು
ಕುಕ್ಕುಟ= ಕೋಳಿ
ಕುಕ್ಕುಳಗುದಿ= ಸಂಕಟಪಡು
ಕುಕ್ಷಿ= ಹೊಟ್ಟೆ
ಕುಡಿಕೆ= ಕುಡಿಯೋಣ, ಗುಟುಕು
ಕುಟಿಲ= ವಂಚನೆ, ಯುಕ್ತಿ
ಕುತ್ತ= ಬೇನೆ, ರೋಗ, ಜಾಡ್ಯ

ಕುತ್ತದ ಕೊಮ್ಮೆ = ಬೇನೆಯಕೊಳಕ
ಕುತ್ತು = ಇರಿ, ತಿವಿ, ಒದೆ, ಗುದ್ದು
ಕುರಿತಹೆ = ಸಂಬಂಧ ಜ್ಞಾನವುಳ್ಳವನಾಗು
ಕುರುಕ = ಕ್ಷುಲ್ಲಕ, ಅಲ್ಪ
ಕುರುಹಂದಿ = ಸಣ್ಣಹಂದಿ, ಮಿಕ
ಕುರುಹು = ಶಾಸನ, ಲಕ್ಷಣ, ಚಿನ್ಹ
ಕುರುಳು = ಉಂಗುರಕೂದಲು, ತುರುಬು
ಕುಲಾಲ = ಕುಂಬಾರ
ಕುಲಿಶ = ವಜ್ರಾಯುಧ, ಉಳಿ, ಚಾಣ
ಕುಸುಕಿರಿ = ತಾಗು, ಹೊಡೆ, ಹತ್ತು
ಕುಸುಮಜ = ತಾವರೆಯಲ್ಲಿಹುಟ್ಟಿದವ, ಬ್ರಹ್ಮ
ಕುಸುರೆ = ಕುದಿಸಲಿಕ್ಕೆ ಹಾಕಿದ ಕಾಳು, ಗಂಜಿ
ಕೂಟಗೆಯ ಕೂಳು = ಭಿಕ್ಷಾನ್ನ, ದಾಸೋಹ
ಕೂಡುವವ = ಗಂಡ,
ಕೂವಿ = ಕೊಡ, ಪಾತ್ರೆ
ಕೂಪ = (೧)ಬಾವಿ, (೨)ಪ್ರಿಯ
ಕೂರಲಗು = ಹದನವಾದ ಬಾಣ, ಕತ್ತಿ
ಕೂರು = ಪ್ರೀತಿಸು
ಕೂರ್ತಡೆ = ಪ್ರೀತಿಸಿದರೆ
ಕೂರ್ಮ = ಆಮೆ
ಕೂರ್ಮೆ = ಪ್ರೇಮ, ವಾತ್ಸಲ್ಯ
ಕೂಷ್ಮಾಂಡ = ಕುಂಬಳಕಾಯಿ
ಕೂಳ(ಕೂಳೆ) = ಹೇನು
ಕೃಷಿ = ಕಾರ್ಯ, ವ್ಯವಹಾರ, ಒಕ್ಕಲುತನ
ಕೆಚ್ = (೧)ಅಂಕುರಿಸು, ಚಿಗಿ, ಗೆಲ್ಲು, ಬಿಡು, (೨) ಭತ್ತದ ಹುಲ್ಲು, ಸಸಿ, (೩) ಹೊಲ

ಕೆಲ = ಬದಿ, ಮಗ್ಗುಲು
ಕೆಲವಳಿ = ಸಮೀಪ, ಬದಿಯಲ್ಲಿರುವ ಮಣೆ
ಕೆಳಗಣ = ಕಡಿಮೆಯವ, ಕೀಳ, ಅಧೀನದಲ್ಲಿರುವ
ಕೇಣಸರ = ಮತ್ಸರ
ಕೇಸು = ಅರಳೆ
ಕೈ = (೧) ಹೊಲ, (೨)ಆನೆಯ ಸೊಂಡಿಲು
ಕೈದು = ಕತ್ತಿ, ಆಯುಧ
ಕೊಪ್ಪು = ಬಿಲ್ಲಿನ ತುದಿ, ಕಚ್ಚು, ಕೊಂಬು
ಕೊಮ್ಮೆ = ಅಂಟುರೋಗ, ಮೈಲಿ ರೋಗ ಮುಂತಾದವು
ಕೊರಟು = ಕೊರಡ, ಡೊಣ್ಣೆ, ವಿಘ್ನ
ಕೊಲ್ಲಿ = ಅಗಡು, ಇರಿಕಳ
ಕೊಳ್ಳೆಯಕಾಳಗ = ಸೂರೆ, ಲೂಟಿ
ಕೋಡಗ = ಮಂಗ, ಬುದ್ಧಿಹೀನ, ಅಜ್ಞಾನಿ
ಕೋಲು = ಬಾಣ, ದಂಡ, ಡಾಣಪಟ್ಟಿ
ಕೋಳುಹೋಗು = ಸೂರೆಯಾಗು, ಕೈಸೆರೆಹಿಡಿ
ಕೌಳಿಕ = ವೇಷ ಮೋಸ, ಠಕ್ಕ, ಕೌಟಿಲ್ಯ
ಕೊಂಗ = ತುಳಿಸಿದ ಕಾಳು
ಕ್ರೂರ = ದುರ್ಜನ, ದುಷ್ಟ
ಕ್ಷೀರಗಟ್ಟಿ = ಕೆನೆಮೊಸರು
ಕ್ಷುತ್ತು = ಕ್ಷುಧೆ, ಹಸಿವು

ಖ

ಖೇಚರತ್ವ = ಆಕಾಶಗಮನ, ಬಯಲು

## ಗ

ಗಡಾವಣೆ= ಶಬ್ಧ, ನಾದ, ಅನೇಕ ವಿಡಿತ
ಗಂಟು= ಬಾಧ್ಯತೆ, ಮೋಕ್ಷ, ಸಾಮರಸ್ಯ
ಗದಕ= ಕಳ್ಳ
ಗದಕತನ= ಕಳ್ಳತನ, ಮೋಸ, ನಗೆಚಾಟಿಕೆ
ಗನ್ನತನ= ಕಳ್ಳತನ, ಮೋಸ
ಗನ್ನಗದಕ= ಮರೆಮೋಸ
ಗಂಪೆಧಾರಿ= ಕೂಲಿಕಾರ, ಬುಟ್ಟಿ ಹೊರುವವ
ಗಸಣೆ= ವಿಚಾರ, ಚಿಂತೆ, ತೊಂದರೆ
ಗಳ= ಕಂಠ, ಗಂಟಲ, ಕಂಠಾಭರಣ
ಗಾರಾಗು= ಗಾಬರಿಯಾಗು, ನಷ್ಟ ಹೊಂದು
ಗಾರುಡ= ಮಂತ್ರ
ಗಾರುಮಾಡು= ಚೆದರಿಸು, ಬೈ, ನಾಶಮಾಡು
ಗಾವಿಲ= ಮೂಢ, ಹೆಡ್ಡ
ಗುಂಗುರು= ಗುಂಗಾಡಿ, ನೊರಜು
ಗುಡಿಗಟ್ಟು= ನಿಶಾನಿ ಏರಿಸು, ಆನಂದಪಡು
ಗುಡ್ಡ= ಶಿಷ್ಯ, ಹುಡುಗ
ಗುಣಮಣಿ= ಶ್ರೇಷ್ಠರತ್ನ
ಗುಣಸಂಗಿ= ಬುದ್ಧಿವಂತ
ಗುದಿಮುಕ್ಷಕ= ಜೇನಿನಲ್ಲಿ ಸಿಕ್ಕ ನೊಣ
ಗುಮ್ಮ= ದೆವ್ವ, ಬೊವ್ವ, ಗೂಬೆ
ಗುಲುಗು= ಗಲ್ಲುಮಾಡು, ಶಬ್ದ ಮಾಡು
ಗೆಲ್ಲಾಳು= ಗೆದ್ದವ, ಶೂರ
ಗೇಹ= ಗೃಹ, ಮನೆ
ಗೈದು ಬಿಡು= ಮಾಡಿಬಿಡು, ಬಿಟ್ಟು ಬಿಡು
ಗೊಟ್ಟು= ಕರಣೆ, ತುಂಡು, ಬೀಜ
ಗೊಡ್ಡೆ= ಬಂಜೆ
ಗೋಷ್ಠಿ= ಮಾತು, ಹರಟೆ, ಅನು ಭಾವಗೋಷ್ಠಿ
ಗ್ರಾಸ= ತುತ್ತು, ಆಹಾರ

## ಘ

ಘಟ= ದೇಹ, ಕೊಡ, ಹರಿವೆ
ಘಟ್ಟವ= ಮೀರಿದ
ಘಸಣೆ= ತೊಂದರೆ, ಸಂಕಟ
ಘೃತ= ತುಪ್ಪ, ಹಾಲು, ರಸ, ಸೊನೆ

## ಚ

ಚಕ್ರ= ತಿಗುರಿ
ಚಕ್ರದಂಡ= ತಿರುಗಿಸುವ ದೊಣ್ಣೆ, ಲಾಟಿ, ದಾಂಡಪಟ್ಟಿ ಮುಂತಾದುದು
ಚಕ್ರಿ= ಕುಂಬಾರ
ಚಪ್ಪೆಗಲ್ಲು= ಸಪಾಟಾದಕಲ್ಲು, ಚಪ್ಪಟೆ ಕಲ್ಲು
ಚಳಯ= ಸೌಂದರ್ಯ, ಚೆಲುವು
ಚಾಟುತನ= ಮುಖಸ್ತುತಿ
ಚಾವಟಿ= ಬಾರಕೋಲು, ಚಬುಕು, ಹೊಡೆತ
ಚಿಕ್ಕುಳ= (೧)ಕೀಳುಕುಲದವ, ಹೊಲೆಯ, (೨) ಗೊರವ, ಭಿಕ್ಷುಕ
ಚಿಕ್ಕೆರ= ಕೇರೆಯಹಾವು
ಚಿತಿ= ಬೆಂಕಿಯಕುಂಡ
ಚಿಮ್ಮುರಿ= ಬೆನ್ನಿನಹಿಂದೆಕೈಕಟ್ಟಿ ಕೊಂಡು ತಿರುಗಾಡುವುದು
ಚಿಲುಮೆ= ಒರತೆ, ನೀರಿನಬುಗ್ಗೆ
ಚುಕ್ಕೆ= (ಚಿಕ್ಕೆ) ಮೋಸ, ಕಪಟ

ಚುನ್ನ= ಅಪಹಾಸ್ಯ
ಚೂರ್ಣ= ಪುಡಿ, ಸುಣ್ಣ
ಚೆನ್ನು= ಚೆಂದ, ಅಂದ
ಚೊಕ್ಕೆಯ= (೧) ಯುಕ್ತಿ, ಪೇಚು, (೨) ಸಂದೇಹ, (೩) ಗಾಯ ಪೆಟ್ಟು
ಜೊಲ್ಲೆಯ= ತುರುಬಿನ ಕೊನೆ
ಚೊಲ್ಲಿಸಗಾರ= ಹೂವುಮುಡಿದು ಕೊಳ್ಳುವವ
ಚೋದ್ಯ= ಅದ್ಭುತ, ಆಶ್ಚರ್ಯ, ಕೋಜಿಗದೃಶ್ಯ
ಚೋಹ(ಸಂಯೋಗ,)= ಸೋಗು, ವೇಷ

## ಜ

ಜಂಝಾನಾರುತ=ಬಿರುಗಾಳಿ
ಜರ= ಸವಕಳಿ, ಮುಪ್ಪು
ಜಲ= ಹಸಿ, ದ್ರವ
ಜಲಚರ= ಮೀನು ಮುಂತಾದ್ದು
ಜಲಮಣಿ= ನೀರಿನಹಸಿ, ತುಂತುರ ಹನಿ, ಮಂಜು
ಜಲನಡಿ= ಸೂಸಿಹರಿಯುವ ಹೊಳೆ
ಜಲ್ಲೆ= ಬಿದಿರಿನಬುಟ್ಟಿ, ಕೋಲು, ಕಬ್ಬಿನ ಗಳ
ಜಾಗಟೆ= ಗಂಟೆ
ಜಾಲಗಾರ= (೧)ಬಂಗಾರ ಸೋಸು ವವ, (೨) ಬೇಟೆಗಾರ, (೩) ಮೀನು ಗಾರ
ಜಾಳಾಗು= ಜೊಳ್ಳಾಗು, ನಿಷ್ಪ ಯೋಜನವಾಗು
ಜಾಳಿಗೆಯ ಮುದ್ರೆ= ಹಣಪಚೀಲ
ಜಾಳಿಸು= (೧) ಸೋಸು, ಕೊಡಹು, ಬಿಡಿಸು, (೨) ನೀರುಹಾಯಿಸು,

ಜೋಳವಾಳಿ= ಸ್ನೇಹಿತ, ಸಹಕಾರಿ. ಸಹಭಾಗಿ, ಸಹಭಟ

## ಟ

ಟಿಪನ= (೧) ಬರೆದಚಿತ್ರ, ಚಿತ್ರ ವರ್ಣದ ನೀರಿನಗುಳ್ಳೆ, (೩)ಕಾಮನ ಬಿಲ್ಲು
ಟೆಂಟಣಿಸು(ಟೆಂಟಣಿಸು)= (೧) ಎದ್ದು ನಿಲ್ಲು, ಆಧಾರವಾಗಿರು, (೨) ಸಿಟ್ಟಿಗೇಳು

## ಡ

ಡಾಗು= ಬರೆಹಾಕು, ಮುದ್ರೆ, ಮೈಲಿರೋಗ
ಡಾವರ= ಕಾವು, ಉಷ್ಣ. ದಾಹ, ಮೂರ್ಛೆ
ಡಾವರಿಸು= (೧)ಸುತ್ತ ಲೂಉರಿ (೨) ಬಾಯಿಗೆ ಬಂದಂತೆ ಮಾತಾಡು (೩) ಸಿಟ್ಟಿನಿಂದ ಮೈಮೇಲೆ ಬೀಳು
ಡೋಣಿ= ಬಂಗಾರ ಜಾಲಿಸುವ ಪಾತ್ರ

## ತ

ತಂಗಾಳ= ಚಳಿಗಾಲ, ಮಾಗಿಯಕಾಲ
ತಟಾಕ= ದಂಡೆ; ಕೆರೆ, ಕೊಳ
ತಟ್ಟಾರು (ನೋ. ತೊಟ್ಟಾರು)
ತಟಿಗಾರು= ದಂಡೆಗೆ ಹತ್ತು, ನೆಲೆ ತಿಳಿ
ತಟ್ಟೆ= ಬಿದಿರಿನ ಚಾಪೆ
ತಟ್ಟುಮುಟ್ಟು= (೧) ಸುಖದು:ಖಾನು ಭವ, (೨) ಸಂಕಟ, (೩) ಲಿಂಗ ಭೋಗೋಪಭೋಗ
ತಡಿ= (೧) ದಂಡೆ, (೨) ಉದ್ದವಾದ ಕೋಲು.
ತಡಿಗೂಡು= ತೀರಕ್ಕೆ ಮುಟ್ಟು

ತಂಡಿಲು (ತಂಡುಲ)= ಅಕ್ಕಿ
ತತ್ತು (ತತ್+ಅದು)= ಪೂರ್ವಾಶ್ರಯ. ನೆಲೆ
ತತ್ತುಗೊತ್ತು= ತತ್ವದ ಗೊತ್ತು, ನಿಜದ ತಿಳುವಳಿಕೆ
ತಸಿರಸ= ಸವಿರಸ, ಮಾಧುರ್ಯ
ತಪ್ಪಲು= (೧)ವಿಶಾಲಸ್ಥಳ, ಬಾಗಿಲು, ಬಯಲು, (೨)ದಂಡೆ, ಸಮಪಾತಳಿ
ತಮುಸ್ಸು= ಕತ್ತಲೆ, ಮೈಲಿಗೆ
ತಮ್ಮಡಿ= ಪೂಜಾರಿ, ಅರ್ಚಕ
ತಂಪುತುಪ್ಪ= ಹೆತ್ತುಪ್ಪ
ತರಗು= ಒಣಎಲೆ
ತರಹರಿಸು= (೧)ಸಹಿಸು, ತಾಳು, (೨) ಜಯಿಸು, ಗೆಲ್ಲು
ತರಿ= ಸವರು, ಕತ್ತರಿಸು
ತರುವಿಂಗೆ= ಕಡತರುವುದಕ್ಕೆ (ಬೆಂಕಿ ಮುಂತಾದ್ದು)
ತಲಪು= ಮುಟ್ಟು, ತುದಿ, ಅಂತ್ಯ, ನಿಲುಗಡೆ
ತಲ್ಲೀಯವಾಗು= (೧)ಅಡಗು, ಮುದುರು, (೨)ಗಟ್ಟಿಮುಟ್ಟಾಗಿರು
ತವಿಸು= ಕಡಿಮೆಮಾಡು, ನಾಶಮಾಡು
ತಳಲು= ತಿಳಲು, ತಿರುಳು, ಬೀಜ
ತಳು= ತಡ, ತಡಮಾಡು
ತಳ್ಳಿ= ಸ್ನೇಹ, ಗೊಡವೆ, ತಳಕು
ತಾಣ= ಸ್ಥಳ, ಸ್ಥಾನ
ತಾಳ್ದು= ಸಿದ್ಧವಾಗಿ
ತಿಟ್ಟ= (೧)ಗೋಡೆಯ ಮೇಲಿನ ಚಿತ್ರ, (೨) ಪಡಿಯಚ್ಚಿನ ಗೊಂಬೆ
ತಿತ್ತಿ= ತೊಗಲಿನ ಚೀಲ
ತುಡುಕು= ದುಡುಕು. ಮೈ ಮೇಲೆ ಬೀಳು
ತುಡುಗುಣಿ= ಕಳ್ಳತನದಿಂದ ತಿನ್ನುವವ, ಮೋಸಗಾರ
ತುತ್ತುಜ್ಞಾನಿ= ಹೊಟ್ಟೆಗಾಗಿ ಜ್ಞಾನ ಸಂಪಾದನೆ ಮಾಡಿದವ
ತುಷ= (೧) ನೊರಜು, (೨)ಹೊಟ್ಟು, (೩) ತುಂತುರಹನಿ
ತುಷಪರ್ಣ= ಹಸುರೆಲೆ
ತುಷರ= ಹಾಲುಗಾಳು
ತುಷಾರ= ತುಂತುರಹನಿ
ತೂತ (ನೋ. ತುತ್ತಜ್ಞಾನಿ)= ವಾಗದ್ವೈತಿ
ತೂರ್ಯ= ಪರಮಾನಂದ (ಸಮಾಧಿ ಭೇದ)
ತೂಳು= ಬೆನ್ನಟ್ಟು, ಮೈಮೇಲೆ ಬೀಳು
ತೆರಪು(ತೆರವು) = ಎಡೆ, ಅಂತರ, ಸಂದರ್ಭ
ತೊಗಲಗಡಿಗೆ= ಹೊಟ್ಟೆ
ತೊಗಲಚೀಲ= ದೇಹ, ಶರೀರ
ತೊಟ್ಟಾರು (ತೊಟ್ಟು+ಆರು)= ಹಸಿಯಾರು, ಪೂರ್ಣ ಒಣಗು
ತೊಟ್ಟು= (೧)ನೀರಿನಹನಿ, (೨) ಹಣ್ಣಿನ ತುಂಬು, ತುದಿ
ತೊಡಪು= ತೊಟ್ಟಬಾಣ, ಹೂಡಿದ ಬಾಣ
ತೊಡಹು= ಹಚ್ಚು, ಲೇಪಿಸು
ತೊಡೆ= ಒರಸು, ತಿಕ್ಕು, ಅಳಿಸು
ತೊಂಡಿಸ= ತುಂಟ, ಪುಂಡ
ತೊಳಸು(ತಳಿಸು)= ಹೊಡೆ, ಮುಷ್ಟಿಯುದ್ಧಮಾಡು
ತೋಟ= ಯುದ್ಧ, ಜಗಳ, ಕಾದಾಟ
ತೋಯು= ಸೀರು

ತೋರಗದ= ದಪ್ಪವಾದ ಬಾಗಿಲಕದ
ತೋಹು= ಬೇಹು, ಹೊಂಚಿಕೊಂಡಿರುವ ಸ್ಥಳ
ತ್ರಸ= ಸಂಸಾರದ ಕಷ್ಟ, ರೋಗ
ತ್ರಾಸ(ತ್ರಾಸಾ)= ಪಂಚ ಮಹಾವಾದ್ಯ
ತ್ರಾಸು= ಸರಿಯಾದ ತಕ್ಕಡಿ
ತ್ರಿಣಯು= ಮುಕ್ಕಣ್ಣ, ಶಿವ
ತ್ರಿಭಂಗಿ= ಈಷಣತ್ರಯ

## ದ

ದಗ್ಧಪಟಿ= ಸುಟ್ಟ ಅರಿವೆ
ದಡೆ= ಕೋಲು
ದಂಡ= ಶಿಕ್ಷೆ
ದರ್ಶನ= (೧) ತತ್ವಗ್ರಂಥ,
(೨) ಕಾವಿಯುವಸ್ತ್ರ, ಲಾಂಛನ
ದಳ್ಳುರಿ= ಕಾಳ್ಗಿಚ್ಚು, ದೊಡ್ಡ ಉರಿ
ದಾರವಟ್ಟ= ಅಗಸೆಯ ಬಾಗಿಲು
ದಾವಾನಲ= ದಳ್ಳುರಿ, ಕಾಡುಗಿಚ್ಚು
ದಿಗ್ವಳಯ= ದಿಗ್ಮಂಡಲ
ದಿಂಡು= ಹೊಟ್ಟೆ
ದಿಂಡುಕ= ಹೊಟ್ಟೆಬಾಕ, ದಪ್ಪ ಶರೀರಿ
ದಿಂಡುಗೆಡಹು= ಕಡಿ, ಕತ್ತರಿಸು, ಕೆಳಗೆ ಉರುಳಿಸು
ದಿಂಡೆ= (೧)ಗುಂಡುಕಲ್ಲು,
(೨) ಅಜ್ಞಾನಿ, ಮೂಢ
ದಿಮ್ಮು= ಹುಚ್ಚ
ದೀಪ್ತಿ= ಬೆಳಕು, ಪ್ರಕಾಶ
ದೀಹ= ಬೇಟೆಗಾಗಿ ಪ್ರಯೋಗಿಸುವ ಗಂಡೆರಳೆ
ದುಕೂಲ= ಬಟ್ಟೆ, ನಯವಾದ ವಸ್ತ್ರ
ದೃಕ್ಕು= ಕಣ್ಣು
ದೃಷ್ಟ= ಪ್ರತ್ಯಕ್ಷ, ದೃಷ್ಟಾಂತ
ದೃಷ್ಟವಂತ= ಜ್ಞಾನಿ
ದೇಗುಲ= ದೇವಸ್ಥಾನ, ಗುಡಿ
ದ್ರವ್ಯ= (೧)ಕಲ್ಲು, (೨) ಲೋಹ, ಸೂರ್ಯ ಕಾಂತಶಿಲೆ

## ಧ

ಧವಲ= ಬಿಳಿ
ಧಾತು= ಧೈರ್ಯ, ಗಟ್ಟಿಗತನ

## ನ

ನಚ್ಚು= ನಂಬು
ನನೆ= ಮೊಗ್ಗೆ, ಗರ್ಭ
ನಸ್ನಿಯ= ನಿಜವಾದ, ಸಜೀವ
ನವನೀತ= ಬೆಣ್ಣೆ
ನಳಿಕೆಯಕೀರ= ಪಂಜರದ ಗಿಳಿ
ನಾಗ= ಪುಂಗಿ, ನಾಗಸ್ವರ
ನಾಳು= ನಾಚು
ನಾಳುಗೆಡು= ನಾಚಿಕೆಗೆಡು, (ನಾಡು ಕೆಡು) ದೇಶಾಂತರಿಯಾಗು
ನಾಣ್ಮೊಗ= ನಾಚಿಕೆಯ ಮುಖ
ನಾರ(ನರ)= ಮರ್ತ್ಯ, ಮನುಷ್ಯ
ನಾರಿ= (೧)ಸ್ತ್ರೀ, (೨)ಬಿಲ್ಲಿನಹೆದೆ, ದಾರ
ನಿಟಿಲಲೋಚನ= ಹಣೆಗಣ್ಣವ, ಶಿವ
ನಿತ್ತರಿಸು(ಸಂ)ನಿಸ್ತರಿಸು= (೧)ಪಾರಾಗು, ದಾಟು, (೨)ತಡಕೊಳ್ಳು, ತಾಳು
ನಿಂದ= ಪ್ರತಿಬಿಂಬಿಸುವ
ನಿಯತ= ನಿಶ್ಚಯ
ನಿರವಯ= ಅಖಂಡ
ನಿರಾಳ= ಶಾಂತ. ಸಂದೇಹವಿಲ್ಲದ
ನಿರಿಗುರುಳು= ಚೆಂದವಾಗಿ ಬಾಚಿದ ಕೂದಲು

ನಿರಿಗೆ= ಪದರು, ಮಡಿಕೆ, ಸೌಂದರ್ಯ
ನಿರೋಧ=ವೈರಾಗ್ಯ
ನಿರ್ಮಲಶಿಲೆ= ಸ್ಫಟಿಕ
ನಿರ್ಯಾಣನಾಗು= ಮುಕ್ತನಾಗು
ನಿರ್ವಿಕಳತೆ= ಕೊರತೆಯಿಲ್ಲದ, ಪರಿಪೂರ್ಣ, ಘನ
ನಿಲವು= ನಿಲುಗಡೆ, ಸ್ಥಿತಿ
ನಿವಾಳಿ= ಆರತಿ
ನಿಶಿತ= ಸೂಕ್ಷ್ಮವಾದ ಮೊನೆಯುಳ್ಳ
ನಿಸ್ಚಟ (ನಿಚ್ಚಟ, ನಿಃಶಠ) = ನಿಜದ, ಯಥಾರ್ಥವಾದ
ನಿಷ್ಪತ್ತಿ= ಪರಿಪೂರ್ಣತೆ, ತಿಳುವಿಕೆ, ಜ್ಞಾನ
ನಿಹಿತ= (೧) ನಿಯಮಿತವಾದ, (೨) ಯೋಗ್ಯವಾದ
ನಿಳಯ= ಮನೆ
ನಿಃಕರಿಸು= ಧಿಕ್ಕರಿಸು, ತಾತ್ಸಾರ ಮಾಡು, ನಷ್ಟಪಡಿಸು
ನೀತಿ= ನಡತೆ
ನುಗ್ಗು= ಪುಡಿಕಟ್ಟಿಗೆ, ಕ್ಷುಲ್ಲಕ ಮನುಷ್ಯ
ನುಸುಳು= ಜಾರು, ಮೋಸಮಾಡು
ನೆಗಳು= ಮೊಸಳೆ
ನೆಗೆ= ಹಾರು, ಜಿಗಿ
ನೆನೆ= ಹಸಿಯಾಗು
ನೆಪ್ಪು= ನೆನಪು, ಚಿನ್ಹ, ಗ್ರಹಿಕೆ
ನೆಮ್ಮು= ನಂಬು, ನೆಚ್ಚು
ನೆಮ್ಮುಗೆ= ಆಧಾರ, ನಂಬಿಕೆ
ನೆರಕೆ= ತಟ್ಟಿ, ಮರೆ, ಆಧಾರ
ನೆರೆ= ಕೂಡು, ವಿಶಾಲವಾಗು
ನೆಲೆ= ಬುಡ, ಬೇರು, ಆಧಾರ
ನೆಲೆಗಳೆ= ಬುಡಸಮೇತ ನಾಶಮಾಡು
ನೆಲೆಮನೆ= ವಾಸಗೃಹ, ಉಪ್ಪರಿಗೆ
ನೈಣು= ದಾರ, ಹಗ್ಗ, ನೂಲು
ನೇತಿಗಳೆ= ಅಲ್ಲಗಳೆ, ತಿರಸ್ಕರಿಸು
ನೇವಳ= ಕಂಠೀಸರ (ಹಾವಿನ ಸುತ್ತುವಿಕೆ)
ನೋಂತು= (ನೋನು = ಆಚರಿಸು) ಆಚರಿಸಿ
ನೋಂಪಿ= ಪುಣ್ಯಸಂಪಾದನೆಗಾಗಿ ಕೈಕೊಂಡ ವ್ರತ (ದೇಹದಂಡನೆ ಮುಂತಾದದ್ದು)

## ಪ

ಪಂಗುಳ= ಕುಂಟ, ಹೆಳವ, ಅಂಗಹೀನ
ಪಟುಭಟ= ಪರಾಕ್ರಮಿ, ಶೂರ
ಪಡಿ= ಅಳತೆ (ಪಡಿಗಣಿಸು)
ಪಡಿಪುಚ್ಚ= (೧)ಕೀಳು, ತಿರಸ್ಕಾರ, (೨) ಅಳತೆ, ದಾಸ
ಪಡಿಪುಚ್ಚಮಾಡು= ವ್ಯತ್ಯಾಸಮಾಡು
ಪಣ್ಯಾಂಗನೆ= ವೇಶ್ಯಾಸ್ತ್ರೀ
ಪತ್ರ= ಎಲೆ, ಖಡ್ಗ
ಪದ್ಯ= ಆಹಾರ ವಿಹಾರ ಕ್ರಮ, ಅನುಪಾನ
ಪದಾಂತ= ಪಾದಚಾರಿ
ಪನ್ನಗ= ಸರ್ಪ
ಪಯ= ಹಾಲು
ಪರ= ಪರಶಿವ
ಪರಿಣತ= ಕುಶಲ, ಪರಿಪೂರ್ಣವಾದ
ಪರಿಣಾಮ= ಆನಂದ, ಸಂತೋಷ
ಪರಿಣಾಮಿ= ಲಿಂಗಾನಂದಾನುಭಾವಿ

ಪರಿಭವ= ಅಪಮಾನ, ತಿರಸ್ಕಾರ, ಜನ್ಮಾಂತರ
ಪರಿಭ್ರಮಣೆ= ದೆವ್ವ, ಹುಚ್ಚು (ಹಿಡಿದವ)
ಪರಿವೇಷ್ಟಿಸು= ಸುತ್ತು, ಸುತ್ತಾಡು
ಪಲ್ಲಟ= ವ್ಯತ್ಯಾಸ, ಅಸತ್ಯ
ಪಲ್ಲವಿಸು= ಕವಲೊಡೆ, ವಿಸ್ತರಿಸು, ಹುಟ್ಟು
ಪವನ= ಗಾಳಿ, ವಾಯು
ಪಸಲೆ= ಹಸರು ಪಲ್ಯ
ಪಹರಿ= ಕಾವಲು
ಪಳುಕು= ಸ್ಫಟಿಕ
ಪಾಕ= ಸುಡುವುದು
ಪಾಡಿತನ= ಊಳಿಗ
ಪಾತೆ= (ತೋಟದ) ಮಡಿ
ಪಾದರಿ= ಪಾಟಲಿ (ದೊಡ್ಡ ಮರ)
ಪಾರದಾರ= ಹಾದರ, ವ್ಯಭಿಚಾರ
ಪಾವಕ= ಬೆಂಕಿ
ಪಾವಸೆ= ಹಾವಸೆ, ಜೊಂಡು
ಪಾವುಡ= ವಸ್ತ್ರ, ಅರಿವೆ
ಪಾಶ= (೧)ಹಗ್ಗ, (೨) ಜಡೆಗೂದಲು, (೩)ಸಂಬಂಧ, ಲೇಪ, ಮೈಲಿಗೆ
ಪಾಷಾಂಡಿ= ನಾಸ್ತಿಕ, ಶ್ರದ್ಧಾಹೀನ
ಪಿಟ್ಟವೆ (ಸಂ)ಪಿಷ್ಟ= ಹಿಟ್ಟು
ಪಿಪೀಲಿಕ= ಇರುವೆ
ಪಿಸಿತ= ಭ್ರಾಂತ, ಹುಚ್ಚು, ದುರ್ಗುಣ
ಪಿಳ್ಳೆ= ಕೂಸು
ಪುಂಗವ= ಶ್ರೇಷ್ಠ
ಪುಂಜ= ಗುಂಪು
ಪುದಿ= ತುಂಬು, ಪ್ರವೇಶಿಸು
ಪುನರಪಿ= ಜನ್ಮಾಂತರ
ಪುಷ್ಕರದಕಲ್ಲು= ಚಂದ್ರಕಾಂತಶಿಲೆ
ಪುಷ್ಪೋದ್ಭವ= ಬ್ರಹ್ಮ
ಪೂಜೆಗೆ ಸಿಗು= ಕೀರ್ತಿಹೊಂದು
ಪೂರ್ವತತ್ತು= ಪೂರ್ವಾಶ್ರಯ
ಪೊಂಗಲ= ರಾಜಾನ್ನ, ರಸಾನ್ನ, ಪಕ್ವಾನ್ನ
ಪೋಲಿಗಾರ= ಪೋಕರಿ, ತುಂಟ
ಪ್ರಕಾಶ= (ಹಸರು) ಬಣ್ಣ
ಪ್ರಕೃತಿ= ಜಗತ್ತು, ಮೇಲ್ಭಾಗ, ಸ್ವಭಾವ
ಪ್ರತಿರೂಪು= ಇಂದ್ರಿಯಕ್ಕೆ ಹೊರಗಾದ ವಸ್ತು ವಿಷಯಗಳು
ಪ್ರಮಾಣಿಸು= ತಿಳಿ
ಪ್ರಸಂಗ= ಸ್ನೇಹ, ಸಂಭಾಷಣೆ
ಪ್ರಳಯ= ಹೊಡೆತ, ನಾಶನ

## ಫ

ಫಲರಸ ವರ್ಣಕೊಂಡಂತೆ= ಒಳಗೆ ಹಣ್ಣಾದರೆ ಮೇಲೆ ಬಣ್ಣ ಬರುವಂತೆ
ಫಲಕ್ಕೆ= ಜನ್ಮಕ್ಕೆ

## ಬ

ಬಚ್ಚಣೆ (ವತ್ಸಲೆ)= ಬಾಲಕ, ಅಜ್ಞಾನಿ
ಬಜೆ= ಬಜೆ, ನಾರುವ ಬೇರು
ಬಡಬಾನಲ= ಬಡಬಾಗ್ನಿ, ಕಡಲ್ಕಿಚ್ಚು
ಬಡಿಹೋರಿ= ತುಡುಗುದನ, ಬಿಡಿಸಿ ಕೊಳ್ಳುವವ
ಬಣಬೆ= ಗುಂಪು, ರಾಶಿ
ಬಣ್ಣಗಾರಿಕೆ= ಉಪಚಾರದ ಮಾತು
ಬಣ್ಣದ ಬಚ್ಚಣೆ= (೧)ಬಣ್ಣದ ಮಾತಾಡುವವ, (೨)ಅಜ್ಞಾನಿ, ತಿಳಿಗೇಡಿ
ಬಂಟ= ಸೈನಿಕ

ಬಂಜೆ= ವಸ್ತು, ಜೀನಸು, ಗಿಡ ಮೂಲಿಕೆ
ಬಂಡಾಗು= ತೊಂದರೆಗೊಳಗಾಗು
ಬಂಡುಗೆಲೆ= ಬಂಡು ಮಾತಾಡು
ಬಧಿರ= ಕೆಪ್ಪ, ಕಿವುಡ
ಬದ್ಧ= ಯೋಗ್ಯ
ಬದ್ಧಕ= ಸಂಸಾರಿ, ಲೋಭಿ
ಬದ್ಧಕತನ= ಬಂಧನ, ಸಂಬಂಧ
ಬದ್ಧಕ್ಕೆ= ಸತ್ಯಕ್ಕೆ
ಬರ= ಪೂರ್ಣ. ಪರಿಗೆ
ಬರ= ಬರೆಹ. ಬರುವಿಕೆ
ಬರಡಿ= ಬಂಜೆ
ಬರಿ= ಒಣ, ವ್ಯರ್ಥವಾದ
ಬರಿವಾಯಿ= ನಿಷ್ಪ್ರಯೋಜನವಾದ, ಭೂಭಾರವಾದ
ಬರಿ ಹಂಡ= ಒಣ ಹೊಗಳಿಕೆ, ಮುಖಸ್ತುತಿ
ಬರುದೊರೆ= ಒಣಗಿದ ಹಳ್ಳ
ಬರುಬ= (೧)ಏನಿಲ್ಲದವ, (೨)ಜ್ಞಾನಶೂನ್ಯ, (೩)ವ್ಯರ್ಥಮನುಷ್ಯ
ಬರೆ= ಅಂಗೈಯೊಳಗಿನ ಗೆರೆ
ಬಲ್ಲಹ= ಜ್ಞಾನಿ, ಪಂಡಿತ
ಬಲ್ಲಂದಟ್ಟು (ಬಲ್ಲಂದ+ಅಟ್ಟು)= ಬಲ್ಲತನವೆಂಬ ಆಂಟ, ವಿದ್ಯಾಚಾತುರ್ಯ, ಪಾಂಡಿತ್ಯ
ಬಲಾತ್ಕಾರ= ತ್ರಾಣ, ಕಡ್ಡಾಯ
ಬಲಿ= (೧)ದೊಡ್ಡದಾಗು, (೨)ಕರಗು
ಬಲುಗೈಯ್ಯ= ಪರಾಕ್ರಮಿ
ಬಲುಮೆ= ಬಲಾತ್ಕಾರ, ಶಕ್ತಿ
ಬಲುಹು= ಶಕ್ತಿ, ತ್ರಾಣ
ಬಲ್ಲೆಹಕಾರ= ಪಂಡಿತ, ವಿದ್ವಾಂಸ
ಬಸಿರು= (ದೊಡ್ಡ) ಹೊಟ್ಟೆ
ಬಹಿಷ್ಕರಿಸು= ಬಹಿರಂಗಪಡಿಸು, ಹೊರಗೆಹಾಕು, ತರು, ಪ್ರಕಟಿಸು
ಬಳಸು= ಸುತ್ತು
ಬಾಕೆ (ಬರು)= (೧) ಬರುವುದು (೨) ವ್ಯರ್ಥಮಾಡು
ಬಾದಣ (ಬಾದಳ)= ಕಿಡಿಕೆ, ಕಿಂಡಿ
ಬಾರಿಕ= ತಳವಾರ
ಬಾರಿಸಲಾಗು= ಗರ್ವಿಸಿಕೊಳ್ಳು, ಹೆಮ್ಮೆಪಡು
ಬಾಲಸ= ಪಟಕ್ಕೆ ಕಟ್ಟುವ ಬಾಲಾಗಸಿ
ಬಾಳ= ಹಣೆ
ಬಾಳಲೋಚನ= ಶಿವ
ಬಾಳಾಂಬಕ= ಶಿವ
ಬಿಗಡು= ವಿಭಾಗವಾಗು, ಬಡೆ
ಬಿಡುಮುಡಿ= (೧)ಬಿಚ್ಚಿದ ಮುಡಿ, ಜೋಲುಜಡೆ, (೨)ವಿರಕ್ತ (೩)ಮೋಕ್ಷ, ಮೋಕ್ಷಾನಂದ
ಬಿತ್ತವಟ್ಟ= ಬಿತ್ತಣೆ
ಬಿತ್ತಿಳಿದ= ಬೀಜತೆಗೆದ, ಸ್ವಚ್ಛಮಾಡಿದ
ಬಿತ್ತು= ಬೀಜ
ಬಿನ್ನಾಣ (ವಿಜ್ಞಾನ)= ತಿಳುವಿಕೆ, ರಹಸ್ಯ, ಪ್ರತ್ಯಕ್ಷ
ಬಿಸುಗ= ಕ್ಷುಲ್ಲಕ, ಪಾಮರ
ಬಿಸರುಹ= ತಾವರೆ
ಬಿಸರುಹಕುಸುಮಜ= ತಾವರೆಯ ಹೂವಿನಲ್ಲಿ ಹುಟ್ಟಿದವ, ಬ್ರಹ್ಮ
ಬೀಗು= ಉಬ್ಬು
ಬೀಳಿದ್ದಡೆ= ಬಿದ್ದರೆ
ಬುದ್ಬುದ= ನೀರಗುಳ್ಳೆ
ಬುಲ್ಲ= ಗೂಳಿ, ಮಾನವ

ಬೆಡಗು= ಆಶ್ಚರ್ಯ, ಸೌಂದರ್ಯ, ಚತುರತೆ, ಒಡಪು
ಬೆಚ್ಚಂತೆ= ಬೆಸೆದಂತೆ, ಏಕರೂಪವಾಗಿ, ಸಮರಸವಾಗಿ
ಬೆಟ್ಟಬಂಗಾರ= ಕೊಂಬು ಹಿತ್ತಾಳಿ
ಬೆಟ್ಟಿ= ಬಿರುಸು
ಬೆವಹಾರ(ವ್ಯವಹಾರ)= ವ್ಯಾಪಾರ
ಬೆಸುಗೆ= ಐಕ್ಯ
ಬೆಳಕುವ= ಪ್ರಕಾಶಿಸುವ, ಹೊಳೆಯುವ
ಬೆಳ್ಳ= ಬೋಳೆಯ ಮನುಷ್ಯ, ಬದ್ಧಿಹೀನ, ಮೂರ್ಖ,
ಬೇಡುಗ= ಭಿಕ್ಷುಕ
ಬೊಂಬೆ= ಕಣ್ಣಿನಲ್ಲಿ ಮೂಡಿದ ಚಿತ್ರ

## ಭ

ಭಗ= ಯೋನಿ, ಜನನೇಂದ್ರಿಯ
ಭಂಗಿಸು= ಕೆಡಿಸು
ಭಟ್ಟತನ= ಶ್ರೇಷ್ಠತನ, ಗೆಲವು
ಭರಿ= ಸೊಂಡಿಲು
ಭವಗೆಡು= ಹಾಳುಮಾಡು, ಜನ್ಮಾಂತರದಿಂದ ಪಾರಾಗು
ಭವನ= ಮನೆ
ಭವರಾಟಾಳ= ಪುನರ್ಜನ್ಮ, ಚಕ್ರ
ಭಾಜನ= ಕಾರಣ
ಭಾರಣೆ= ಭಾರವಾದ
ಭಾವಜ್ಞ= ಅನುಭಾವಿ
ಭಾವಿಸು= ಕೂಡಿಸು, ಗ್ರಹಿಸು
ಭಾಷಾಂಗ= ರಾಗ, ಗೀತ
ಭಾಳಲೋಚನ= ಹಣೆಗಣ್ಣ, ಶಿವ
ಭಿತ್ತಿ= ಗೋಡೆ, ನಿಲುಗಡೆ, ಭೇದ
ಭೀಷ್ಮಿಸು= ಗರ್ವಿಸು
ಭೀಷೆ= ಪರಾಕ್ರಮ
ಭುಂಜಕ= ಹೊಟ್ಟೆಬಾಕ

## ಮ

ಮಕರ= ಮೊಸಳೆ
ಮಕ್ಷಕ= ನೊಣ
ಮಚ್ಚರ (ಮತ್ಸರ) =ದ್ವೇಷ
ಮಚ್ಚಿಕೆ= ಪ್ರೇಮ
ಮಚ್ಚುನೆಚ್ಚು= ಮೆಚ್ಚು
ಮಂಜರಿ= ಚಿಕ್ಕು
ಮಡಿಕೆ= ಗಡಿಗೆ, ನೀರಿನ ಪಾತ್ರೆ
ಮಣಿಮಾಡ= ಅಂತಸ್ತಿನ ಮನೆ
ಮಣಿಹ= ಕರ್ತವ್ಯ, ಉದ್ಯೋಗ
ಮಣ್ಣು= ಕರಗಿಸುವ ಮುಸಿ
ಮತ್ತ= ಅಮಲೇರಿದ, ಭ್ರಾಂತ
ಮತ್ತತ್ವ= ಗುಂಗು, ಕುಡಿಕತನ
ಮಥನ= ಕಡೆಯುವಿಕೆ (ಮಜ್ಜಿಗೆ ಮುಂತಾದ್ದು)
ಮಧುರ= ರಸಕಬ್ಬು
ಮಂತ, ಮಂಥ, ಮಂಥನ= ಕಡಗೋಲು
ಮಂದ= ಹುಚ್ಚ, ಅಜ್ಞಾನಿ
ಮಂದಲಿಗೆ= ಹುಲ್ಲಿನ ಚಾಪೆ
ಮಂದಾರ= ಪಾರಿಜಾತ ಹೂವು
ಮಮತತ್ವ= ಅಹಂಕಾರ, ಮಮಕಾರ
ಮಯಣ= ಮೇಣ
ಮರೀಚಿಕೆ= ಬಿಸಿಲುಕುದುರೆ
ಮರುಜವಣೆ= (೧) ಸಂಜೀವಿನಿ ಮೂಲಿಕೆ, (೨) ಶಾಶ್ವತ
ಮರೆದೊರಗು= ಅಡಗಿಕೊಳ್ಳು, ನಿದ್ರಿಸು
ಮರ್ದನ= ನಾಶನ

ಮಂಕ= ಇಂದ್ರಿಯ ವಿಕಾರ
ಮಸಿ= ಕಪ್ಪು, ಮಸಿಜೀವಿ, ಬ್ರಾಹ್ಮಣ
ಮಹಾಜ್ಞಾನಿ= ಆನೆ ಭಾವಿ
ಮಹಾಹೇತು= ಮೂಲಪ್ರಕೃತಿ
ಮಹಿಷ= ಕೋಣ
ಮಾಟ= ಚೆನ್ನಾಗಿಮಾಡಿದ್ದು, ಚೆಂದ
ಮಾಣು= ಬಿಡು (ಛಲ), ಸೋಲು
ಮಾತಂಗ= ಆನೆ
ಮಾಯಿಕ= ಮಾಯಾಸಂಬಂಧಿ, ಮೋಸಗಾರ
ಮಾರಾರಿ= ಶಿವ
ಮಾರು= ವಿರೋಧಿಸು, ವಿರೋಧ ಭಾವ ತೋರಿಸು
ಮಾರ್ಜಾಲ= ಬೆಕ್ಕು
ಮಿಟ್ಟ= ದೊಡ್ಡ
ಮಿಡಿ= ಹಿಮ್ಮಡ
ಮೀರು= ಪ್ರಯೋಜನ ಹೊಂದು
ಮುಕುರ= ಕನ್ನಡಿ
ಮುಗಿಲತೆರೆ= ಮೋಡ
ಮುಗ್ಗು= ಎಡವು
ಮುಚ್ಚಳ (ಮುಚ್ಚು)= ವಂಚನೆ
ಮುಟ್ಟು= ನಮಸ್ಕರಿಸು
ಮುಡುಬ= ಹೆಳವ
ಮುಡುಬು= ರಟ್ಟೆ, ಭುಜ, ಪಕ್ಕ
ಮುತ್ತರ= ಬಹಳದೊಡ್ಡ
ಮುಮ್ಮಾರು= ವಿಕ್ರಯ, ಪರಾಧೀನ, ಪರವಶ
ಮುಯ್ಯ= ಪ್ರತಿಯಾಗಿ ಕೊಟ್ಟದ್ದು
ಮುಯ್ಯಾಂತು (ಮೈಯಾನು)= ನಮಸ್ಕರಿಸಿ
ಮುಹುರಿ= ಸಪ್ತಸ್ವರಗಳನ್ನು ಬಾರಿಸುವ ಕೊಳಲಿನ ತೂತುಗಳು

ಮೂಕೊರೆಯ= ತಪ್ಪುಮಾಡಿ ಮೂಗು ಕೊಯಿಸಿಕೊಂಡವ
ಮೂಗಳ= ಒಂದು ಅಳತೆ (ಮೂರು ಸೇರು)
ಮೂಲಿಕ= ಮುಖ್ಯವಾದ
ಮೂಲೆಯ ಬಿದ್ದ (ಮೂಲೆಗೆಬೀಳು)= ಪ್ರಯೋಜನಕ್ಕೆ ಬಾರದ
ಮೂಷಕ=ಹೆಗ್ಗಣ
ಮೂಳ= ಮೊಂಡ, ಕ್ಷುಲ್ಲಕ, ಅಲ್ಪ
ಮೃಗ= (೧)ಬೇಟೆಯಾಡುವ ಮೃಗ, (೨)ಕೊಲೆಗಾರ
ಮೃತ್ತಿಕೆ= ಮಣ್ಣು
ಮೃತ್ತಿಕೆಯ ಚಕ್ರ= ಕುಂಬಾರನ ತಿಗುರಿ
ಮೆತ್ತನೆ ತಮದ ಧೂಮ= ಸಣ್ಣಾಗಿ ಬರುವ ಕಪ್ಪುಹೊಗೆ
ಮೆತ್ತಿಗೆ= ಹತ್ತುವಿಕೆ, ಲೇಪ
ಮೇಳ= ಪರಿಚಾರಕರ ಗುಂಪು
ಮೊಗೆ= ಮೈ ಮೇಲೆ ಬೀಳು
ಮೊಂಡ= ಮೂರ್ಖ, ಹಟಮಾರಿ
ಮೊತ್ತ= ಸಮೂಹ
ಮೊತ್ತದ= ದೊಡ್ಡ
ಮೊತ್ತದ ಅದ್ರಿ= ದೊಡ್ಡಬೆಟ್ಟ, ಕುಲಗಿರಿ
ಮೊದಲು= ಆರಂಭ, ಬುಡ
ಮೊದಲುಗೆಡು= ಪ್ರಾರಂಭದಲ್ಲಿಯೇ ಹಾನಿಹೊಂದು
ಮೊನೆ= ಮುಳ್ಳು, ಸೂಜಿ
ಮೊಳಗು= ಗುಡುಗು

## ಯ

ಯೋಗಿ= ಶಿವಯೋಗಿ, ಅನುಭಾವಿ, ಶರಣ

ಯೋನಿ= ಜನ್ಮ

## ರ

ರಚ್ಚೆ= ಕೀಳುನುಡಿ, ಗುಲ್ಲು, ಗಲಾಟೆ

ರಚ್ಚೆಕಚ್ಚು= ಬೈದಾಟ, ಕಚ್ಚಾಟ

ರಜ= ಕೆಂಪು

ರಜ್ಜು= (೧)ತಂತಿ, ದಾರ, ನೂಲಿನ ಎಳೆ, (೨)ಆರತಿಯ ಬತ್ತಿ

ರಟ್ಟೆ= ಪಕ್ಕ

ರತಿ= (೧)ರತ್ನ, (೨)ರತ್ನ ಪ್ರಕಾಶ

ರಮಣ= ಪ್ರಿಯ, ಗಂಡ

ರವಸ(ರಭಸ)= ದೊಡ್ಡ ಧ್ವನಿ

ರಸ= (೧)ಪಾದರಸ, (೨)ಬಂಗಾರ

ರಸಿಕ= ಮರ್ಮ, ರಹಸ್ಯ

ರಾಗ= (೧)ಪ್ರೀತಿ, (೨)ಸಿಟ್ಟು

ರಾಗಿ=ಪ್ರೀತಿಯುಳ್ಳವ, ಆಸಕ್ತ

ರಾಟಾಳ= ತಿರುಗುವ ಯಂತ್ರ, ರಾಟಿ

ರಾಣುವೆ= ಸೇನೆ

ರಾವ= ಪಶುಗಳ ಕೂಗು, ಕೋಲಾಹಲ

ರುಚಿ=ಪಕ್ವ

ರುಜ= ಬೇನೆ, ಕಷ್ಟ, ನೋವು

ರುಧಿರ= ರಕ್ತ

ರೂಢಗಪಂತ= ಕ್ರಮುಕ್ತನುಸರಿಸಿ ಹೋರಾಡುವವ

ರೂಢಿ= ಭೂಮಿ

ರೂಹು= ರೂಪು

ರೋಚಕ= ರುಚಿಕರ

ರೋಹಿತ= ರಕ್ತ

## ಲ

ಲಂಘಿಸು= ಹಾರು

ಲಲಾಟ= ಹಣೆ

ಲಹರಿ= ತೂಗಾಟ, ಆನಂದ, ಗುಂಗು

ಲಾಗಿನಿ= ಜಿಗಿಯುವ, ಹಾರುವ, ಅಹಂಕಾರದ

ಲಾಗಿಸು= ಪೊಡೆ

ಲಾಗು= ಚಿನ್ನಾಟವಾಡು, ಸಂತೋಷಪಡು

ಲಾಂಛನ= ವೇಷ, ಗುರುತು, ಕಾವಿಯ ವಸ್ತ್ರ

ಲೀಯ (ಲೀನ)= ಮನಸ್ಸು ಒಲೆ, ಮೆಚ್ಚಿಕೆ

ಲೀಲಾಂಗ= ವಿಷ್ಣು

ಲೆಕ್ಕ= ಗಣಿತ, ಸಂಸಾರ, ಜನ್ಮಾಂತರ

ಲೆಂಕ= ಸೇವಕ, ಚಾಕರ

ಲೆಪ್ಪ(ಲೇಪ)= (೧)ಗಾರೆಯ ಕೆಲಸ, ಗಚ್ಚಿನ ಗೋಡೆ (೨)ಗೊಂಬೆ

ಲೇಪಿತ= ದುರ್ಗಡತೆಯುಳ್ಳ

ಲೋಗರು (ಲೋಕ)= ಜನರು

ಲೋಲುಪೆ= ಅತ್ಯಾಶೆ

## ವ

ವಂಕ= ಬಾಗಿಲು

ವಂಗ= ಸೀಸ

ವಕ್ತ್ರ= (೧)ಬಾಯಿ, (೨)ಗ್ರಹಿಸಿಕೊಂಡ ಅಂಕೆ (ಷ್ಟ)

ವಚ್ಚೆ= ಅಪಮಾನ

ವರದ= ದಾನಿ

ವರ್ತನದ= ತಿರುಗುವ

ವರ್ತಿಸು= ತಿರುಗಿಸು

ವರ್ಮ= ಮರ್ಮ

ವಸಿ= ಸ್ಥಲ

ವಸ್ತು= ಜೀನಸು (ಸರ್ಪ)
ವಂಶ= (೧)ಬಿದಿರು, (೨)ಹೆಬ್ಬಾಗಿಲು
ವಳಯ (ವಲಯ)= (೧) ಮಂಡಲ, ಸುತ್ತುಗಟ್ಟಿದ (೨) ಗುಂಪು
ವಳಿ= ಬಳಿ, ತೆರೆ
ವಾಗೆ= ಲಗಾಮು
ವಾಣಿಜ್ಯ= ವ್ಯಾಪಾರ
ವಾದಿ= ವಾದ್ಯ, ಸಂಗೀತ
ವಾಮುಕ್ಷೇಮ= ಯೋಗಕ್ಷೇಮ, ಸುಖದುಃಖ
ವಾಯ= (೧)ಸುಳ್ಳು, ಕಪಟ, (೨)ವಾಣಿಜ್ಯ, (೩) ವಾತ
ವಾರಣ= ಆನೆ, ಗಜ
ವಾರಿ= ನೀರು
ವಾರಿವಾಯುವಸಂಗಪ ಕಲ್ಲು= ಅಗ್ನಿ ಕಲ್ಲು
ವಾರುವ= ಕುದುರೆ
ವಾಲುಕ= ಮಳಲು, ಉಸುಬು
ವಾಸ= ನುಣುಪಾದ ವಸ್ತ್ರ
ವಾಸಿಗೆ= ಒಳ್ಳೆಯದಾಗುವಂತೆ, ಹಿತಕ್ಕಾಗಿ
ವಾಸಿವಟ್ಟ= ಕೀರ್ತಿ, ಲಾಭ, ಗೌರವ
ವಾಳಿಯಾವು= ಗೊಡ್ಡಾಕಳು, ಇರಿಕಳ
ವಿಕಳತೆ= ಕೊರತೆ
ವಿಧಾತೃ= ಬ್ರಹ್ಮಜ್ಞ, ಗುರು
ವಿನಿಯೋಗ= ಉದ್ಯೋಗ
ವಿಪಿನ= ಅರಣ್ಯ
ವಿರಹಿತ= ಹೊರಗಾದ, ಇಲ್ಲದ
ವಿರಾಳ= ಅಶಾಂತತೆ, ದುಃಖ, ಸಂಸಾರ
ವಿವರ= (೧)ಹೆಜ್ಜ. ತೂತು, (೨)ಕೂಲಂಕಷವಾಗಿ, ಸಂಪೂರ್ಣ
ವಿಶೇಷ= ಕಬ್ಬಿನ ರಸ, ಹಾಲು
ವಿಹಂಗ= ಪಕ್ಷಿ
ವೆಜ್ಜ= ತೂತು, ರಂಧ್ರ
ವೆಣ= ಹೆಣ
ವೇಣು= ಕೊಳಲು
ವೇಣುವಿನೊಳಗಿನ ಕಿಚ್ಚು= ಬಿದಿರಿನ ಘರ್ಷಣದಿಂದ ಹೊರಡುವ ಬೆಂಕಿ
ವೇದನೆ= ವಿದ್ಯೆ, ಬಲತನ
ವೈಸಿಕ= ಕಪಟ, ವೇಷ
ವ್ಯಕ್ತೀಕರಿಸು= ಸ್ನೇಹಿಸು, ಸಂಬಂಧ ವಿಡು
ವ್ಯಾಧ= ಬೇಡ, ಕಿರಾತ
ವ್ಯಾಪಾರ= ಕಾರ್ಯ, ಕೆಲಸ

## ಷ

ಷಡುವರ್ಣದ ಟಿಪ್ಪಣ= (೧)ಚಿತ್ರ, (೨)ನುಳಿಬಿಲ್ಲು
ಷುಷ್ಕದ ಅಪ್ಪು= ಕಾದನೀರು, ಉಗಿ

## ಶ

ಶತವೇಧಿ= (೧) ಚುಚ್ಚುವ ಬೇನೆ, (೨) ನಸುಗುನ್ನಿ
ಶಬರ= ಬೇಡ
ಶರಧಿ= ನದಿ, ಹೊಳೆ, ಸರೋವರ
ಶಶಕ= ಮೊಲ
ಶಾಬರ= ಮಂತ್ರ, ಮಾಟ, ದೃಷ್ಟಿ (ತೆಗೆ)
ಶಿಲೆ= ಮಣ್ಣು
ಶುಕ= ಗಿಳಿ, ಶಿವ
ಶುಕ್ತಿ= ಮುತ್ತಿನ ಚಿಪ್ಪು
ಶುಕ್ಲ= ಪುನುಗು, ಬೆಕ್ಕಿನಿಂದ ಹೊರಡುವ ಮಜ್ಜಾಸ್ರಾವ
ಶುಭ್ರ= ಬಿಳಿ

ಶುಷ್ಕ=(೧)ಆರಿದ, ಒಣಗಿದ,
(೨)ನಿಷ್ಪ್ರಯೋಜನವಾದ
ಶೂಲಪಾಣಿ=ಶಿವ
ಶೈಲಾಂಗನೆ=ಪಾರ್ವತಿ
ಶ್ರಮಣ (ಶ್ರಮ)=(ಪಾರಾಗುವ)
ಪ್ರಯತ್ನ
ಶ್ರೋಣಿತ=ಕೆಂಪು, ರಕ್ತ
ಶೋತ್ರನಾಶ=ಕಿವುಡ, ಕೆಪ್ಪ
ಶ್ವಾನಜ್ಞಾನಿ=ಅಜ್ಞಾನಿ, ಕುನ್ನಿ

## ಸ

ಸಕಲೇಶ=ಶಿವ
ಸಂಕದೋಲೆ=ಚಿಪ್ಪಿನ ಆಭರಣ
ಸಂಗಿಸು=ಕೂಡು, ಮುಟ್ಟು,
ಸಂಭವಿಸು
ಸಜ್ಜೆ=ಚೌಕ, ಲಿಂಗದ ಭರಣಿ
ಸಂಚಲ=ಚಂಚಲ, ಚಾಪಲ್ಯ
ಸಡಗರಿಸು=ಸುಖದಿಂದಿರು
ಸತ್ವ=ಶಕ್ತಿ, ತ್ರಾಣ
ಸನ್ನದ್ಧ=ಸಿದ್ಧವಾದ, ಸಂಪೂರ್ಣ
ವಾದ
ಸನ್ನೆ=ಸಂಜ್ಞೆ
ಸನ್ಮತ=ಸಮ್ಯಕ್‌ಜ್ಞಾನ; ಸದಾಚಾರ
ಸಂದು=ತೊಡಕು
ಸಪುರಿನ=ಸುಲಭವಾದ (ಹಾದಿ)
ಸಮರ=ಕಾಳಗ, ಯುದ್ಧ
ಸಮ್ಮೋಹ=ನಿಬ್ಬೆರಗು
ಸಂಭಾವಿಸು=ಜೋಡಿಸಿ ಹೊಲಿ,
ಕೂಡಿಸು
ಸಂಭೇದ=ಸಮುದ್ರಕ್ಕೆ ಕೂಡಿದ
(ಹೊಳೆ)
ಸಂಭ್ರಮ=(೧)ಸಡಗರ, (೨)ಗಡುಗು

ಸರ=(೧)ಸ್ವರ, (೨)ಬತ್ತಿ
ಸರಟ=(೧)ಊಸರವಳ್ಳಿ, ಓತಿಕಾಟ,
(೨)ಬಣ್ಣ ಬದಲಿಸುವವ, ಸುಳ್ಳು
ಗಾರ
ಸರಬು=ಹೊರೆ
ಸರಳ=ಕಬ್ಬಿನದ ಮೊಳೆ, ಕಂಬಿ
ಸರಿತ(ಸರಿತ್)=ಹೊಳೆ
ಸರಿಹುದುಗು=ಸರಿಪಾಲು
ಸರ್ಪದಷ್ಟ=ಹಾವು ಕಚ್ಚಿದ್ದೋಣ
ಸಲಿಲ=ನೀರು
ಸಲಿಸಂದ ಹೊನ್ನು=ಚೊಕ್ಕಬಂಗಾರ
ಸಲ್ಲಲಿತ=ಯೋಗ್ಯವಾದ
ಸವರಿಸು=(೧)ಸಿದ್ಧಪಡಿಸು. (೨)ಸರಿ
ಪಡಿಸು
ಸವರು=ಹರಿ, ಕಡಿ, ಕತ್ತರಿಸು
ಸವಿತ=ಊಟ
ಸಾಕಾರ=(೧) ಆಕಾರವುಳ್ಳ,
(೨)ಪ್ರಮಾಣವುಳ್ಳ
ಸಾಗಿಸು=ಕೆಚ್ಚು, ಸರಿಪಡಿಸು
ಸಾಗು=ಮುಂದರಿ, ಬೆಳೆಹೆಚ್ಚಾಗು
ಸಾಂದ್ರ=ಅಧಿಕ
ಸಾಯಾಸ=ಆಯಾಸ, ತೊಂದರೆ
ಸಾರ=(೧)ನೀರು, ರಸ, (೨)ಮೀನು,
(೩) ರುಚಿ
ಸಾರಂಡಗಾರಿಕೆ=ಡಂಭಗಾರಿಕೆ
ಸಾರಾಯ=ನಿಜ, ಮರ್ಮ, ಗೊತ್ತು,
ಮೋಕ್ಷ
ಸಾಲು=ಸಲುವಳಿ
ಸಾವರ=ಸಾವಿರ (ಹೊನ್ನು)
ಸಿಕ್ಕು=ಗಂಟುಕೂದಲು
ಸಿಗ್ಗು=ನಾಚಿಕೆ
ಸೀಳು=(೧)ಸಿಟ್ಟಿಗೇಳು, (೨)ಸಾರಿ
ಹೇಳು

ಸುಕ್ಷೇತ್ರ = ನದಿಯುಬಳಿಯುಲ್ಲಿರುವ ಹೊಲ
ಸುಗುಡ = ವೈನೆರೆಯುದವ, ನಪುಂಸಕ
ಸುಧೆ = ಅಮೃತ
ಸುಭಕ್ಷ = ಜಗಿದು ತಿನ್ನತಕ್ಕ, ರುಚಿಕರವಾದ, ಪಕ್ವಾನ್ನ
ಸುಮ್ಮನ(ಸನ್ಮನ) = ಶಾಂತಮನಸ್ಸು
ಸುಮ್ಮಾನಿ = ಅನುಭಾವಿ, ಜ್ಞಾನಿ, ಪಂಡಿತ
ಸುಯಿಧಾನ = ಏಕಾಗ್ರತೆ, ಶಾಂತಿ
ಸುರಧನು = ಕಾಮನ ಬಿಲ್ಲು, ಮಳೆಬಿಲ್ಲು
ಸುಲಲಿತ = ಅನುಕೂಲ, ಯೋಗ್ಯ, ಸುಲಭ
ಸುರೆ = ಹೆಂಡ
ಸೂನಿಗೆ = ಚೂರಿ, ಕತ್ತಿ
ಸೂನೆ = ಶೂಲ, ಪಾಶಿಯು ಕಂಬ
ಸೂನೆಗಾರ = ಘಾತಕಿ, ಮೋಸಗಾರ, ಕಟುಗ
ಸೂಪದಾಸಿ = ಅಡಿಗೆಯವಳು, ತೊತ್ತು
ಸ್ವೆವೆರಗು = ಅಶ್ಚರ್ಯ, ನಿಬ್ಬೆರಗು
ಸೊಡಗೆ = ಕಾಯಿ
ಸೊಡೆ = ಜ್ವಾಲೆ, ಬೆಂಕಿ
ಸೊಡೆಗೆ = ಸುಡುವಿಕೆ
ಸೊಪ್ಪು = (೧)ತೊಗಟೆ, ಮೇಲಿನ ಹೊದಿಕೆ, (೨)ಹೆಮ್ಮೆ, ಅಮಲು
ಸೊಮ್ಮು = ಸೊತ್ತು, ಒಡವೆ, ದ್ರವ್ಯ, ಆಸ್ತಿ
ಸ್ಫಟಿಕ = (೧)ಅಸ್ತ್ರ, ಡಾಲು, (೨)ಚಂದ್ರಕಾಂತಶಿಲೆ
ಸ್ವಯಸಂಪರ್ಕ = ಸ್ವಾನುಭಾವ
ಸ್ವಯಾಹ್ವೃತ = ಅನುಭಾವ, ಸಾಮರಸ್ಯ
ಸ್ವಸ್ಥ = (೧)ಸ್ವಂತವಾದ, ಶಾಂತ, (೨)ಹದವಾದ
ಸ್ಥಾಣು = (೧)ಮೋಟಮರ, (೨)ಸ್ಥಿರವಾದ, ಶಾಶ್ವತವಾದ (೩) ಪರಮಾತ್ಮ
ಸ್ತೋಮ = ಗುಂಪು, ಜಲಾಶಯ

## ಹ

ಹಕ್ಕು = ಬಾಧ್ಯ, ಅಧಿಕಾರ
ಹಗರಣ = ವೈಯಾರ
ಹಗುರದಿಂದ = ಸುಲಭವಾಗಿ
ಹಡಕಿ = ಹೊಲಸುನಾತ
ಹಡಿ = (ಪಡೆ) (ಕ್ರಿ) (೧)ಹೊಂದು, ಪ್ರಾಪ್ತವಾಗು, (ನಾ) ಬಾಗಿಲು, ಹೊಸ್ತಿಲು
ಹಣೆಗಿಚ್ಚು = ಶಿವನ ಹಣೆಗಣ್ಣಿನ ಉರಿ
ಹಂದೆ = ಹೇಡಿ, ಅಂಜುಬುರುಕ
ಹರದಿಗ = ವ್ಯಾಪಾರಿ, ಅಂಗಡಿಕಾರ
ಹರವರಿ = (೧)ವಿಕಾಸ, (೨)ಪರಿವಾರ (ನಿವಾಸ)
ಹರಳು = ಕಾಯಿ, ಮಿಡಿ, ಬೀಜ
ಹರಿ = ತೇಲಿಹೋಗು
ಹರಿಗೆ = ಡಾಲು
ಹರಿಸು = ಮುಂದರಿದು ಹೋಗು
ಹರೆ = ನಗಾರಿ, ಹಲಿಗೆ
ಹಲವಂಗ = ಬೇರೆ ಬೇರೆ ರೀತಿ
ಹಸೆ = ಚಾಪೆ
ಹಳಚು = ತಿಕ್ಕು, ಮಸೆ, ಯುದ್ಧಕ್ಕೆ ಸಿದ್ಧವಾಗು

ಹಳಿ (ಹಣಿ)= ಹೊಡೆ, ತಳಿಸು
ಹಳು= ಅರಣ್ಯ, ಅಡವಿ
ಹಳುಹಾಯಿ= ಅಡವಿಬೀಳು
ಹಾನಿ= ಕೇಡು, ವ್ಯರ್ಥ
ಹಾಯುಬಾರದೆ= ಪ್ರಕಟವಾಗದೆ
ಹಾಯಿ= ಸುಖ, ಸೌಖ್ಯ
ಹಾರ= ಒಯ್ಯುವ ಸಾಧನ, ಬಂಡಿ
ಹಾವಸೆ= ಹಸುರುಬೂಜು, ಜಾರಿಕೆ
ಹಾಹೆ= ಕಣ್ಣುಗೊಂಬೆ, ಹಸುಳೆ, ನಿರ್ಬಲ
ಹಿಕ್ಕುಗೊಡು= ಭೇದಿಸು, ಬೇರೆಬೇರೆ ಮಾಡು
ಹಿಂಗು= ಪರಿಹರಿಸು, ಬಿಡಿಸು, ಬಿಡುಗಡೆಯಾಗು
ಹಿಡಿತೆ= ಹಿಡಿಕೆ
ಹಿಸ್ಸಿ= ಬಾಣದ ಹಿಂಭಾಗ
ಹಿಮ= ಬರ್ಫ, ಉದಕ, ಜಲ
ಹಿಸಿ= ಕುಸಿದುಬೀಳು, ಹರಿ
ಹಿಳಿ= ಹಿಂಡು, ಹಿಸುಕು
ಹುದುಗು= ಸಮಪಾಲು
ಹುಯ್ಯಲು= ಕೂಗಾಟ
ಹುರಿಯುಳಿ= ಹುರಿಬಿಚ್ಚು, ನಾಶವಾಗು
ಹುಳ್ಳಿ (ಪುಳ್ಳಿ)= (೧) ಉರುವಲ, ಕಟ್ಟಿಗೆ (೨) ಅಜ್ಞಾನ
ಹೂಸು= ಹಚ್ಚು, ಲೇಪಿಸು
ಹೆಡಗಟ್ಟು= ಹೆಡಮುರಿಗೆಕಟ್ಟು
ಹೆಡಗೈಕಟ್ಟು= ಕೈ ಬೆನ್ನಹಿಂದೆ ಕಟ್ಟು
ಹೆರೆಹಿಂಗು= ಕಡಿಮೆಯಾಗು, ಅಳಿ, ನಾಶವಾಗು
ಹೇಮ= ಬಂಗಾರ, ದ್ರವ್ಯ
ಹೇರಂಡ= ಔಡಲ
ಹೇಳಿಗೆ= ಹಾವಿನಬುಟ್ಟಿ, ಕರಂಡ

ಹೊಡೆಗೆಡೆ= ಸಾಷ್ಟಾಂಗಹಾಕು
ಹೊತ್ತ (ಹೊತ್ತಿದ)= ಉರಿಯುವ
ಹೊತ್ತು (ಹೊರು)= ಲಾಂಛನ ಧರಿಸು, ನಿಂತುಕೊಂಡು
ಹೊತ್ತುಹೊತ್ತನಾಗಿ= (೧) ಅವರವರ ತೆರದಂತೆ, (೨) ವ್ಯರ್ಥವಾಗಿ
ಹೊದ್ದಿಗೆ (ಹೊಂದಿದ್ದು)= ಮುಕ್ತಿ
ಹೊದ್ದು= (೧) ಹೊಂದು, ೨ ಸರಿಯಾಗು
ಹೊಮ್ಮಿದ= ಹೊರಬಿದ್ದ, ಬೆಳೆದ
ಹೊಯಿಗಲ= ದೋಸೆಯಹಂಚು, ತವೆ
ಹೊಯ್ಗಿಲ (ಹೊಯಿದದ್ದು)= ಹೊಡೆತ
ಹೊಯ್ಲು= ಪೆಟ್ಟು
ಹೊರತೆ= ಹೊರಗು. ಇಲ್ಲದೆ
ಹೊರೆ= ೧ ಮೂಲಕಾರಣ ೨ ಮೊನೆ, ತುದಿ, (೩) ಭಾರ, ಗಂಟು (ಶರೀರ), (೪) ಸಮೀಪ, ಹತ್ತರ, (೫) ಹೊಟ್ಟೆತುಂಬಿ ಕೊಳ್ಳು, ಬೇವಿಸು
ಹೊಲಬು= (೧) ಮಾರ್ಗ, ರೀತಿ, (೨) ಮರ್ಮ, ತಿಳುವಳಿಕೆ, ಜ್ಞಾನ
ಹೊಲ್ಲಹ= ಕೆಡುಕು, ಅಯೋಗ್ಯ
ಹೊಳಹು= ತಿರುಗುಣಿ (ಬಾಗಿಲ)
ಹೊಳೆ= ಮಾತಿಗೆತಪ್ಪು
ಹೊಳ್ಳು= ಜೊಳ್ಳು
ಹೊಳ್ಳಗ= ಕ್ಷುಲ್ಲಕ, ದುರ್ಬಲ, ನಿಷ್ಪ್ರಯೋಜಕ
ಹೋಗಿನ= ನಾಶವಾಗುವ
ಹೋಗುಳಿ (ಹೊಯ್ಗಳ)= ಬೊಬ್ಬೆ
ಹೋಟಾರ= ಗಿಡದ ಹೊದರು
ಹೋರಟೆ (ಹೊರಟೆ)= ಹೋರಾಟ, ಯುದ್ಧ, ವಾಗ್ಯುದ್ಧ, ವಾದ
ಹೋರು= ಹೋರಾಡು, ವಾದಿಸು

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೧[illegible] | ಮಾಯುನು | ಮಯುನು |
| ೧೧ | ೨೩ | ಮಲ್ಲಿಕಾರ್ಜುನನ | ಮಲ್ಲಿಕಾರ್ಜುನ |
| ೨೦ | ೨೨ | ‘ಕೊಂದಿಕನೆಂದು’ ಇದರ ಮುಂದೆ ‘ಬಕಾರನಾಗಿ’ ಎಂದು ಸೇರಿಸಬೇಕು. | |
| ೩೫ | ೨೨ | ಮೂಲೆಯಲ್ಲಿ | ಮಾಲೆಯಲ್ಲಿ |
| ೬೦ | ೨೨ | ಮವನ | ಮನದ |
| ೮೫ | ೧೪ | ಗೂಡಢಿರ್ಪುದೇ | ಗೂಡಿರ್ಪುದೇ |
| ೯೦ | ೨೦ | ಉದಕಲ್ಲಿ | ಉದಕದಲ್ಲಿ |
| ೧೦೨ | ೧೦ | ಈ ಜಲರಿ | ಈಜಲರಿ |
| ೧೦೬ | ೨೫ | ಸರ್ಪವ ನಾ ಧರಿಸಿ | ಸರ್ಪವನಾ ಧರಿಸಿ |
| ೧೧೫ | ೧೪ | ನರಿದಪ | ನರಿಯುದವ |
| ೧೩೦ | ೨೨ | ಹೂಡಿ | ಹುಡಿ |
| ೧೭೦ | ೧೯ | ತಾ ನಾಶಕನಾಗಿ | ತಾನಾಶಕನಾಗಿ |
| ೧೬೦ | ೨೨ | ಹೆಣ ನೆತ್ತಿ | ಹೆಣನೆತ್ತಿ |
| ೧೬೨ | ೧೦ | ನಿರತನಾಗಿ | ವಿರತನಾಗಿ |
| ೨೦೨ | ೪ | ಸಿಪಿ ಇತ್ತು | ಹಿಸಿಯಿತ್ತು |
| ೨೮೭ | ೧೨ | ಮಧ್ಯದಲ್ಲಿಪ್ಪ, ಲಿಂಗನ | ಮಧ್ಯದಲ್ಲಿಪ್ಪ ಲಿಂಗವ, |

---